ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ

(ಕನ್ನಡ ಅನುವಾದ ಸಹಿತ)

ದ್ವಿತೀಯಖಂಡೇ

ಭಾಗ ೩

ಅನುವಾದಕ :

ಆಸ್ಥಾನ ಮಹಾವಿದ್ವಾನ್ ಸಂಕೀಘಟ್ಟಂ ವೆಂಕಟಾಚಾರ್ಯಃ



ಶ್ರೀ ಶಾರದಾ ಪ್ರೆಸ್, ಮೈಸೂರು.

೧೯೫೨

# ಅವತರಣಿಕೆ.

ಪುರಾಣಗಳೆಲ್ಲವೂ ಪ್ರಾಯಕವಾಗಿ ವೇದವೇದ್ಯಗಳಾದ ತತ್ವ ಹಿತ ಪುರುಷಾರ್ಥಗಳಿಗೆ (ಉಪಬೃಂಹಣರೂಪದಿಂದ) ಪ್ರಕಾಶವಾಗಿವೆ ಎಂಬುದು ಎಲ್ಲರಿಗೂ ತಿಳಿದ ವಿಷಯ. ಉಪನಿಷದ್ಭಾಗದಲ್ಲಿ ಪ್ರಾತಿಪಾದ್ಯವಾಗಿರುವ ಪರಮಾತ್ಮನ ಸ್ವರೂಪವನ್ನೂ ಅವನ ಆರಾಧನರೂಪಗಳಾದ ಕರ್ಮಕಾಂಡದ ಕರ್ಮವಿಶೇಷಗಳನ್ನೂ ಸಹ ಪುರಾಣಗಳಲ್ಲಿ ಉಪಾಖ್ಯಾನರೂಪದಿಂದ ವಿವರಿಸುವ ಪದ್ಧತಿಯುಂಟು. ಸರ್ವವೂ ಪರಮಾತ್ಮನ ಸಂಕಲ್ಪಮೂಲಕವೆಂದು ತೋರಿಸುವ ಉದ್ದೇಶದಿಂದ ಸೃಷ್ಟಿ, ಸ್ಥಿತ್ಯಾದಿಗಳನ್ನೂ ಇವುಗಳಿಗೆ ಅನುಬಂಧಿಸುವ ಇತರ ವಿಷಯಗಳನ್ನೂ ಸಹ ನಿರೂಪಿಸುವ ವಾಡಿಕೆಯೂ ಉಂಟು.

ವೇದಗಳು ಕೆಲವುವರ್ಣದವರಿಗೇ ವಿಹಿತವಾಗಿರುವುದರಿಂದಲೂ, ಅವುಗಳ ಅರ್ಥವು ಸಾಮಾನ್ಯ ಜನರಿಗೆ ತಿಳಿಯಲಶಕ್ಯವಾಗಿರುವುದರಿಂದಲೂ, ಎಲ್ಲರಿಗೂ (ಸ್ತ್ರೀ ಶೂದ್ರಾದಿಗಳಿಗೂ) ತತ್ವ-ಹಿತ ಪುರುಷಾರ್ಥಗಳ ಅರಿವು ಉಂಟಾಗಲು ಇವು ಸಾಧಕವಾಗುವುವೆಂದೇ ಮಹಾತ್ಮರಾದ ವೇದವ್ಯಾಸಮುನಿಗಳು, ಈ ಗ್ರಂಥಗಳನ್ನು ಲೋಕೋಪಕಾರಕ್ಕಾಗಿ ಪ್ರಕಾಶಪಡಿಸಿದರು.

ಪ್ರಕೃತ ಈ ವಿಷ್ಣುಧರ್ಮೋತ್ತರ ಮಹಾಪುರಾಣವೂ ಈ ಪಂಗಡಕ್ಕೆ ಸೇರಿದ ಉತ್ತಮವಾದ ಪುರಾಣಗ್ರಂಥ, ಇದು ಮಹಾಪುರಾಣವೆಂಬುದನ್ನು ದೇವೀ ಭಾಗವತವೂ ಒಪ್ಪಿದೆ. ಇದು ವಿಷ್ಣುಪುರಾಣದ ಉತ್ತರ ಭಾಗವೆಂದೂ ಹೇಳುವ ವಾಡಿಕೆಯುಂಟು. ಗ್ರಂಥದ ಉಪಸಂಹಾರದಲ್ಲಿ ಉಪಕ್ರಮಕ್ಕೆ ತಕ್ಕಂತೆ ಪಾಂಚರಾತ್ರೋಕ್ತಕ್ರಮದಿಂದ ಮಹಾವಿಷ್ಣುವಿನ ಆರಾಧನವನ್ನು ವಿಸ್ತಾರವಾಗಿ ನಿರೂಪಿಸಿರುವುದರಿಂದ ಈ ವಾದವೂ ತಕ್ಕಮಟ್ಟಿಗೆ ಸಕಾರಣವೆಂದು ಹೇಳಲು ಅವಕಾಶವಿದೆ.

ಈ ಗ್ರಂಥವು ಮೂರು ಖಂಡಗಳಾಗಿ ವಿಭಾಗಹೊಂದಿದೆ. ಎರಡನೆಯ ಖಂಡದ ಎಪ್ಪತ್ತೆರಡನೆಯ ಅಧ್ಯಾಯ ಪೂರ್ತಿಯಾಗಿ ಯಶೋವಶೇಷರಾಗಿರುವ ಚಾಮರಾಜನಗರದ ವೆಂಕಟರಮಣಶಾಸ್ತ್ರೀ ಎಂಬ ಪಂಡಿತರು ಅನುವಾದಮಾಡಿರುತ್ತಾರೆ. ಆ ಭಾಗದ ಗುಣದೋಷಗಳೆಲ್ಲವೂ ಅವರಿಗೇ ಸೇರಿದ್ದೆಂದು ವಾಠಕಮಹಾಶಯರು ತಿಳಿಯಬೇಕು.

ಎಪ್ಪತ್ತಮೂರನೆಯ ಅಧ್ಯಾಯದಿಂದ ನಾನು ಯಥಾಶಕ್ತಿ ಅನುವಾದ ಮಾಡಿದ್ದೇನೆ. ಈ ಭಾಗದಲ್ಲಿ 'ಕೇವಲ ಉಪಾಖ್ಯಾನವೆಂದು ಕರೆಯಲಾಗುವ ಯಾವ ಕಥೆಯೂ ಇಲ್ಲ. ಪ್ರಾಯಶಃ ಎಲ್ಲವೂ ಪ್ರಾಯೋಗಿಕವಾದ ವಿಷಯಗಳೇ ಆಗಿವೆ.

ಧರ್ಮಶಾಸ್ತ್ರಕಾರರು ನಿರ್ಣಯಮಾಡಿರುವ ಪ್ರಾಯಶ್ಚಿತ್ತಕಾಂಡ, ಆಚಾರಕಾಂಡ ಆಶೌಚಕಾಂಡ ಇತ್ಯಾದಿ ನಿರ್ಣಯಗಳಿಗೆ ಮೂಲಭೂತಗಳಾದ ಪ್ರಮಾಣವಚನಗಳೂ, ವರ್ಣಾಶ್ರಮಧರ್ಮಗಳಿಗೆ ನಿಯಾಮಕಗಳಾದ ವಚನಗಳೂ ಇವೆ. ಶಾಂತಿಕ ಪೌಷ್ಟಿಕ ಗಳಾದ ಅನೇಕಾನೇಕ ಕಾಮ್ಯಕರ್ಮಗಳನ್ನೂ ಸಹ ವಿಸ್ತಾರವಾಗಿ ನಿರೂಪಿಸಲಾಗಿದೆ.

ಇಲ್ಲಿ ವಿವರಿಸಲಾಗಿರುವ ಕಾಮ್ಯಸ್ನಾನಗಳಲ್ಲಿ ಉಪಯೋಗಿಸಿರುವ ಕೆಲವು ಮೂಲಿಕೆಗಳಿಗೂ ಇತರ ಗಂದಿಗರಪಸಿಗಿಗೂ ಸಹ ಸರಿಯಾದ ಕನ್ನಡ ಪದವು ದುರ್ಲಭವಾಗಿದೆ. ಈ ಕಾರಣದಿಂದ ಕೆಲವು ಪದಾರ್ಥಗಳ ಅರ್ಥಗಳನ್ನು ಕೋಶ ದಲ್ಲಿರುವ ಪರ್ಯಾಯ ಸಂಸ್ಕೃತ ಪದಗಳನ್ನೇ ಉಪಯೋಗಿಸಿ, ನಿರ್ವಾಹವಿಲ್ಲದೆ ಅರ್ಥವನ್ನು ಬರೆಯಲಾಗಿದೆ.

ಮತ್ತು ಮಣಿಧಾರಣವೆಂಬ ಅಥರ್ವವೇದಪ್ರಸಿದ್ಧವಾದ ಕಾಮ್ಯಕರ್ಮವನ್ನು ನೂರ ಒಂಭತ್ತನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ. ಈ ಪ್ರಕರಣವೆಲ್ಲವೂ ಅಥರ್ವವೇದದಮಂತ್ರ ಮತ್ತು ಪ್ರಯೋಗಕ್ರಮಕ್ಕೆ ಸೇರಿರುವುದರಿಂದಲೂ, ಮೂಲದ ಅಶುದ್ಧಿಯಿಂದಲೂ ಸಹ ಸ್ಪಷ್ಟವಾಗಿ ಅರ್ಥ ತೋರುವಂತಿಲ್ಲ. ಇದನ್ನು ತಿದ್ದಿ ಸರಿಪಡಿಸಲು, ಬೇರೆ ಮಾತೃಕೆಯೂ ಲಭಿಸಲಿಲ್ಲ. ಆದುದರಿಂದ ಆ ಭಾಗಕ್ಕೆ ಸೇರಿರುವ ನನ್ನ ಅನುವಾದವೂ ಸಹ ಶಬ್ದಕ್ಕೆ ತಕ್ಕ ಶಬ್ದಾರ್ಥವಾಗಿ ನಿಂತಿದೆ. ಪ್ರಯೋಗಕ್ಕೆ ಅರ್ಹವಾಗುವ ಇವುಗಳ ವಿಶದ ಸ್ವರೂಪವು ಇದರಿಂದ ತಿಳಿಯಲು ಸಾಧ್ಯವಾಗಿಲ್ಲ. ಈ ವಿಷಯದಲ್ಲಿ ಪಾಠಕಮಹಾಶಯರಲ್ಲಿ ಕ್ಷಮೆ ಕೋರದೆ ನಿರ್ವಾಹವಿಲ್ಲ.

ಮತ್ತು ದ್ವಿತೀಯಖಂಡದ ನೂರ ಅರವತ್ತಾರನೆಯ ಅಧ್ಯಾಯ ಮೊದಲು ನೂರ ಎಪ್ಪತ್ತನಾಲ್ಕನೆಯ ಅಧ್ಯಾಯದವರಿಗೆ ಪೈತಾಮಹಸಿದ್ಧಾಂವೆಂಬ ಜ್ಯೋತಿ ಶಾಸ್ತ್ರದ ಮುಖ್ಯ ವಿಷಯಗಳು ಸಂಗ್ರಹವಾಗಿ ನಿರೂಪಿಸಲ್ಪಟ್ಟಿವೆ. ಇದರಲ್ಲಿ ಜಾತಕ ಭಾಗಕ್ಕೆ ಅನುಬಂಧಿಸುವ ವಿಷಯಗಳು ಪ್ರಾಯಶಃ ಬೃಹಜ್ಜಾತಕಾದಿಗ್ರಂಥಗಳಿಗೆ ಸರಿಹೋಗುತ್ತವೆ. ಉಳಿದ ಗಣಿತಾದಿವಿಷಯಗಳಲ್ಲಿ ಪಂಚಸಿದ್ಧಾಂತಿಕಾ ಮೊದಲಾದ ಗ್ರಂಥಗಳಿಗಿಂತಲೂ ಕೆಲವುಕಡೆ ಬೇರೆಯಾಗಿ ನಿರೂಪಿಸಲಾಗಿಧೆ. ಜ್ಯೋತಿಶ್ಶಾಸ್ತ್ರದಲ್ಲಿ ನಿಶಿತವಾದ ಪಾಂಡಿತ್ಯ ಹೊಂದಿರುವ ಪಂಡಿತೋತ್ತಮರು ಇದರ ಸಾಮರಸ್ಯವನ್ನೂ ಸಿದ್ಧಾಂತ·ತತ್ವವನ್ನೂ ನಿರ್ಧರಿಸಬೇಕಾಗಿದೆ. ಕೆಲಕೆಲವು ಗ್ರನ್ಥಾವಲೋಕನದಿಂದ ನಾನು ಹೊಂದಿರುವ ಸಾಮಾನ್ಯ ಜ್ಞಾನಕ್ಕೆ ತಕ್ಕಂತೆ ಅನುವಾದವನ್ನು ಬರೆದಿದ್ದೇನೆ. ಮತ್ತು ದೇಹದ ಅವಯವಗಳ ಸಂಖ್ಯಾಪರಿಮಿತಿಯನ್ನು ನೂರ ಹದಿನೈದನೆಯ ಅಧ್ಯಾಯದಲ್ಲಿ ನಿರೂಪಿಸುವಾಗ ಪ್ರಸಿದ್ಧ ವೈದ್ಯಗ್ರಂಥವಾದ ಚರಕದ ಸಿದ್ಧಾಂತ ಕ್ಕಿಂತಲೂ ಕೆಲವು ಕಡೆಯಲ್ಲಿ ವ್ಯತ್ಯಾಸಕಂಡುಬರುತ್ತಿದೆ. ಆದರೂ ಮತಭೇದವೆಂಬ

ದೃಷ್ಟಿಯಿಂದ ಮೂಲಕ್ಕೆ ತಕ್ಕಂತೆಯೇ ಈ ಸ್ಥಳದಲ್ಲಿ ಅನುವಾದ ಮಾಡಲಾಗಿದೆ. ಗಂಭೀರವಾದ ಮಹಾಶಾಸ್ತ್ರಗಳ ವಿಷಯದಲ್ಲಿ ನಹಿ ಸರ್ವಃ ಸರ್ವಂ ಜಾನಾತಿ ಎಂಬ ವಾಕ್ಯವನ್ನು ಪಂಡಿತೋತ್ತಮರು ತಿಳಿಯದಿರಲಾರರು. ಈ ವಿಷಯದಲ್ಲಿ ನನ್ನ ಅನುವಾದದಲ್ಲಿರುವ ದೋಷಗಳನ್ನು ಪಂಡಿತೋತ್ತಮರು ಕ್ಷಮೆಯಿಂದ ಸರಿಪಡಿಸಿ ಕೊಳ್ಳಬೇಕೆಂದು ನನ್ನ ಕೋರಿಕೆ.

ಈ ಗ್ರಂಥದ ಕಾಮ್ಯಸ್ನಾನಪ್ರಕರಣದಲ್ಲಿ ಹೇಳಲಾಗಿರುವ ಸ್ನಾನಗಳೆಂಬ ವೈದ್ಯಕ ಚಿಕಿತ್ಸೆಗಳೆಲ್ಲವೂ, ಈಗ ಲೋಕದಲ್ಲಿ ಪ್ರಸಿದ್ಧಿ ಹೊಂದಿರುವ ಪಾಶ್ಚಾತ್ಯ ಪೌರಸ್ತ್ಯ ಚಿಕಿತ್ಸೆಗಳಂತೆ ಕೇವಲ ದೃಷ್ಟಪ್ರತೀಕಾರರೂಪದಲ್ಲಿಲ್ಲ. ದೃಷ್ಟಾದೃಷ್ಟ ರೂಪದಲ್ಲೇ ಎಲ್ಲವೂ ಪರ್ಯವಸಾನಹೊಂದಿವೆ ರೋಗನಿವೃತ್ತಿಗಾಗಿ ಹೇಳುವ ಸ್ನಾನ ಗಳೆಲ್ಲವೂ ದೃಷ್ಟವಾದ ಓಷಧಿವಿಶೇಷಣಗಳ ಮಿಶ್ರಣಮಾತ್ರವಲ್ಲದೆ ಅದೃಷ್ಟ ಸಂಸ್ಕಾರ ರೂಪಗಳಾದ ಮಂತ್ರಗಳ ಅಪೇಕ್ಷೆಯನ್ನೂ ಹೊಂದಿವೆ. ಮಂತ್ರಸಂಸ್ಕಾರವಿಲ್ಲದ ಮೂಲಿಕಾ ಸಂಗ್ರಹವಾಗಲಿ ವೈದ್ಯವಿಧಾನವಾಗಲಿ ಯಾವುದೂ ಇಲ್ಲಿ ಹೇಳಲ್ಪಟ್ಟಿಲ್ಲ. ಇಂತಹ ಚಿಕಿತ್ಸೆಗಳ ಪ್ರಚಾರವೂ ಒಂದಾನೊಂದು ಕಾಲದಲ್ಲಿ ಇದ್ದಿರಬಹುದೆಂದು ಇದರಿಂದ ಭಾಸವಾಗುತ್ತಿದೆ.

ಈ ಮಹಾಪುರಾಣದಲ್ಲಿ ಗ್ರಂಥಕಾರರ ಆಶಯವನ್ನು ಒಟ್ಟಿನಲ್ಲಿ ಈ ರೀತಿ ರೂಪಿಸಬಹುದಾಗಿದೆ—ಎಲ್ಲಾ ದೇವತೆಗಳನ್ನೂ ಪೂಜಿಸಬೇಕು. ಪೂಜ್ಯರಾದ ಆ ದೇವತೆಗಳೆಲ್ಲರೂ ಪ್ರಭುವಾದ ವಾಸುದೇವನ ಶರೀರಭೂತರು. ವಾಸುದೇವನ ಅನುಗ್ರಹದಿಂದಲೇ ಆಯಾಯ ದೇವತೆಗಳು ಫಲವನ್ನು ಕೊಡುತ್ತಾರೆ. ಇಂತಹ ಸರ್ವಶರೀರಿಯಾದ ವಾಸುದೇವನನ್ನು ಪಾಂಚರಾತ್ರೋಕ್ತವಿಧಿಯಿಂದ ಪೂಜಿಸಲು ಉಚಿತವಾದ ಆಲಯ ನಿರ್ಮಾಣವನ್ನು ವಾಸ್ತುಶಾಸ್ತ್ರೋಕ್ತಕ್ರಮದಿಂದ ತಿಳಿದು ವಿಹಿತವಾದ ವರ್ಣಾಶ್ರಮಧರ್ಮಗಳ ಆಚರಣೆಯಿಂದಲೂ, ಕೃಚ್ಛ್ರಾದಿಗಳ ಆಚರಣೆ ಯಿಂದಲೂ, ದೇಹಶುದ್ಧಿಯನ್ನೂ ಸಾತ್ತ್ವಿಕಬುದ್ಧಿಯನ್ನೂ ಹೊಂದಿದವನು, ಶಿಲ್ಪ ಶಾಸ್ತ್ರಜ್ಞಾನದಿಂದ ಯಥಾವಿಧಿಯಾಗಿ ಅರ್ಚಾಮೂರ್ತಿಯನ್ನು ನಿರ್ಮಿಸಿ, ಜ್ಯೋತಿ ಶ್ಶಾಸ್ತ್ರೋಕ್ತ ತಿಥಿ, ವಾರ, ನಕ್ಷತ್ರ, ಮುಹೂರ್ತಾದಿ ವಿಮರ್ಶೆಯಿಂದ ಶುಭಕಾಲದಲ್ಲಿ ಆ ಮೂರ್ತಿಯನ್ನು ಪ್ರತಿಷ್ಠಿಸಿ ಪಾಂಚರಾತ್ರೋಕ್ತವಾದ ಬಹುವಿಧವಾದ ಪೂಜೆ ಗಳಿಂದಲೂ, ಉತ್ಸವಾದಿಗಳಿಂದಲೂ ಪ್ರಭುವಾದ ವಾಸುದೇವನನ್ನು ಪ್ರೀತಿಗೊಳಿಸ ಬೇಕು. ನಿತ್ಯಕಾಮ್ಯಾದಿ ಎಲ್ಲಾ ಕರ್ಮಗಳೂ, ಅವುಗಳ ಆಚರಣೆಗೆ ತಕ್ಕ ಇತರ ಸಾಧನಗಳೂ, ಆ ಸಾಧನಗಳ ನಿಷ್ಪತ್ತಿಗೆ ತಕ್ಕ ದೇಶಕಾಲಾದಿಗಳ ಸೌಮ್ಯತೆಯೂ, ಪೂಜಕನಿಗೆ ಅವಶ್ಯಾಪೇಕ್ಷಿತವಾದ, ದೇಹಾರೋಗ್ಯ, ದೇಹಶುದ್ಧಿ, ಸಾತ್ವಿಕವಾದ ಚಿತ್ತವೃತ್ತಿ, ಇವೆಲ್ಲವೂ ಅವನ ಅನುಗ್ರಹದಿಂದಲೇ ಉಂಟಾಗುತ್ತವೆ.

ಈ ದೃಷ್ಟಿಯಿಂದಲೇ ಈ ಗ್ರಂಥಕಾರರು ವಾಸ್ತುಶಾಸ್ತ್ರ ಶಿಲ್ಪಶಾಸ್ತ್ರ, ಸಂಗೀತವೇ ಮೊದಲಾದ ಕಲೆಗಳು, ಚಿತ್ರರಚನೆ, ಜ್ಯೋತಿಷ, ವ್ಯಾಕರಣವೇ ಮೊದಲಾದ ವೇದಾಂಗಗಳು, ಧರ್ಮಶಾಸ್ತ್ರದಲ್ಲಿ ವಿಹಿತವಾಗಿರುವ ಪಾಂಚಕಾಲಿಕವಿಧಿಯೇ ಮೊದಲಾದ ಎಲ್ಲಾ ವಿಜ್ಞಾನಗಳನ್ನೂ, ಸಾಕ್ಷಾತ್ತಾಗಿಯೂ, ಪರಂಪರೆಯಾಗಿಯೂ ಆ ವಾಸುದೇವನ ಆರಾಧನೆಯ ಉಪಕರಣಗಳನ್ನಾಗಿಯೇ ಪರ್ಯವಸಾನ ಗೊಳಿಸಿರುವರೆಂದು ತಿಳಿಯಬಹುದಾಗಿದೆ.

ಮತ್ತು ಮಹಾವಿಷ್ಣುವಿನ ಅಂಶದಿಂದಲೇ ಉದ್ಭವಿಸುವ ರಾಜರ ಮಾಹಾತ್ಮ್ಯ ಮತ್ತು ಅವರ ಕರ್ತವ್ಯವಿಶೇಷಗಳು, ಅವರಿಂದ ಉಂಟಾಗಬಹುದಾದ ರಾಷ್ಟ್ರದ ಪ್ರಗತಿ ಹಾಗೂ ಸದ್ಧರ್ಮಪಾಲನ ಮೊದಲಾದ ಅನೇಕ ವಿಷಯಗಳನ್ನೂ ಇಲ್ಲಿ ನಿರೂಪಿಸಿರುತ್ತಾರೆ. ರಾಜರಿಗಾಗಿ ನಡೆಸಬಹುದಾದ ಶಾಂತಿಕ ಪೌಷ್ಟಿಕಕರ್ಮಗಳನ್ನು ಅಥರ್ವವೇದವನ್ನು ತಿಳಿದಿರುವ ಪುರೋಹಿತನು ಅಥರ್ವವೇದದ ಪ್ರಕ್ರಿಯೆಯಿಂದಲೇ ನಡೆಸಬೇಕೆಂಬುದು ಈ ಗ್ರಂಥಕಾರರ ಅಭಿಪ್ರಾಯ. ಶಾಂತಿಸಾರವೇ ಮೊದಲಾದ ಗ್ರಂಥಗಳಲ್ಲಿ ವೇದತ್ರಯದ ಮಂತ್ರಗಳಿಂದಲೇ ಆಯಾಯ ಶಾಖೆಗೆ ತಕ್ಕಂತೆ ಶಾಂತಿ ಕರ್ಮಗಳನ್ನು ನಿರೂಪಿಸಿರುತ್ತಾರೆ. ರಾಷ್ಟ್ರಾಭ್ಯುದಯಕ್ಕಾಗಿ ರಾಜರು ನಡೆಸಬಹುದಾದ ಇಂದ್ರಧ್ವಜೋತ್ಸವವೇ ಮೊದಲಾದ ಉತ್ಸವಗಳೂ, ಪುಷ್ಪಾಭಿಷೇಕ, ನೀರಾಜನಾವಿಧಿ ಮೊದಲಾದ ಪೌಷ್ಟಿಕಕರ್ಮಗಳೂ ವಿಶೇಷರೀತಿಯಲ್ಲಿ ನಿರೂಪಿಸಲ್ಪಟ್ಟಿವೆ.

ಈ ಗ್ರಂಥದಲ್ಲಿರುವ ಎಲ್ಲಾ ವಿಷಯಗಳನ್ನೂ ಪ್ರಾಯೋಗಿಕವಾಗಿ ವಿಶದ ಪಡಿಸಲು, ವೇದಗಳು, ವೇದಾಂಗಗಳು, ಧರ್ಮಶಾಸ್ತ್ರ, ವೇದಾಂತ, ಜ್ಯೋತಿಷ, ವೈದ್ಯ, ವಾಸ್ತುಶಾಸ್ತ್ರ, ಶಿಲ್ಪವಿಧಾನ, ಪಾಂಚರಾತ್ರ, ಸಂಗೀತವೇ ಮೊದಲಾದ ಎಲ್ಲಾ ಕಲೆಗಳು ಇವುಗಳಲ್ಲಿ ಪರಿಪೂರ್ಣವಿಜ್ಞಾನವನ್ನು ಹೊಂದಿರುವ ಪಂಡಿತೋತ್ತಮನೇ ಮುಖ್ಯಾಧಿಕಾರಿಯಾಗಿ ಸಮರ್ಥನಾಗುತ್ತಾನೆ. ಒಂದೆರಡು ಶಾಸ್ತ್ರಗಳ ಪರಿಚಯ ವಿರುವವರು ಅನರ್ಹರೆಂದೇ ಹೇಳಬೇಕು. ಆದರೂ ಇಂತಹ ಗ್ರಂಥರತ್ನಗಳನ್ನು ದೇಶಭಾಷೆಯಲ್ಲಿ ಪ್ರಕಾಶಪಡಿಸಿ ಎಲ್ಲರಿಗೂ ಇದರ ಪ್ರಯೋಜನವು ಲಭಿಸುವಂತೆ ವಿಶಾಲವಾದ ಔದಾರ್ಯದಿಂದ ಉದ್ಯಮಗೊಂಡು ನಡೆಸಿಕ್ಕೊಂಡು ಬರುತ್ತಿರುವ ಪ್ರಭುವರ್ಯರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಐ.** ರವರ ದಿವ್ಯಕೃಪೆಯ ಆಶ್ರಯದಿಂದ ಅಲ್ಪಜ್ಞನಾದ ನಾನು ಈ ಗ್ರಂಥವನ್ನು ಯಥಾಶಕ್ತಿ ಅನುವಾದಮಾಡಿದ್ದೇನೆ.

ದೇವನಾಗರಿಲಿಪಿಯಲ್ಲಿರುವ ಮೂಲಪುಸ್ತಕದಲ್ಲಿ ಅಲ್ಲಲ್ಲಿ ಕಂಡುಬಂದ ಅಶುದ್ಧಿ ಯನ್ನು ಇತರ ಗ್ರಂಥಗಳಲ್ಲಿ ಪ್ರಮಾಣಭೂತವಾಗಿ ಉದಹರಿಸಿರುವ ಈ ಗ್ರಂಥದ ವಾಕ್ಯಗಳನ್ನೂ, ಶ್ಲೋಕಗಳನ್ನೂ ನೋಡಿ ತಿದ್ದಲಾಗಿದೆ. ಇದು ಪ್ರಾಯಶ್ಚಿತ್ತ

ಪ್ರಕರಣದಲ್ಲಿ ಹೆಚ್ಚಾಗಿ ನಡೆದಿದೆ. ಇತರ ಕಡೆಗಳಲ್ಲಿಯೂ, ಮುದ್ರಣ ದೋಷ ದಿಂದುಂಟಾದ ಅಶುದ್ಧಿಯನ್ನು ಸರಿಪಡಿಸಿ ಅನುವಾದಮಾಡಲಾಗಿದೆ. ಅರ್ಥದ ಅಸಾಂಗತ್ಯವು ತೋರಿಬಂದ ಸ್ಥಳಗಳಲ್ಲಿ (ಮೂಲಪಾಠವನ್ನು ಹಾಗೆಯೇ ಇಟ್ಟು) ಅನುವಾದಕ್ಕಾಗಿ ಊಹಿಸಿದ ಬೇರೆ ಪಾಠವನ್ನು ಕೆಳಭಾಗದಲ್ಲಿ ಸಣ್ಣ ಅಕ್ಷರದಲ್ಲಿ ನಿರ್ದೇಶಿಸಲಾಗಿದೆ.

ಸಂಸ್ಕೃತ ಭಾಷೆಯಲ್ಲಿರುವ ಈ ಗ್ರಂಥರತ್ನವನ್ನು ದೇಶಭಾಷೆಯ ಅನುವಾದ ದೊಡನೆ ಮುದ್ರಿಸಿ ಪ್ರಕಟಿಸಲು ಉದ್ಯಮಗೊಂಡಿರುವ ಪ್ರಭುವರ್ಯರಾದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ರವರ ಉದಾರಕೃಪೆಯು ಜನತೆಗೆ ಪುರಾತನವಾದ ಜ್ಞಾನಜ್ಯೋತಿಯನ್ನು ಒದಗಿಸಲು ಸಿದ್ಧವಾದುದು ಪ್ರಜೆಗಳ ಭಾಗ್ಯೋದಯವೇಸರಿ, ಇದರ ಅರ್ಥಾನುಸಂಧಾನದಿಂದ ಪ್ರಜೆಗಳು ವಿವೇಕಿಗಳಾಗಿ ಆತ್ಮಗುಣಗಳಿಂದಕೂಡಿ ಶಾಂತಿಸುಖಗಳಿಂದಮೆರೆಯಲಿ ; ಕೃತಯುಗವನ್ನೇ ಅನುಭವಿಸಲಿ ! ಕರ್ಣಾಟಭೂಮಿಯು ಜ್ಞಾನಜ್ಯೋತಿಯಿಂದ ಬೆಳಗಲಿ !

ಪುರಾತನವಾದ ಜ್ಞಾನಭಂಡಾರವನ್ನು ವಿಸ್ತರಿಸುವುದಲ್ಲದೆ ಸ್ವಾನುಷ್ಠಾನ ದಿಂದಲೂ ಸಫಲಗೊಳಿಸುತ್ತಿರುವ ಪ್ರಭುವರ್ಯರಾದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ರವರಿಗೆ ಪುರುಷೋತ್ತಮ ನಾದ ವಾಸುದೇವನು, ಅಸದೃಶವಾದ ಆಸ್ತಿಕ್ಯವನ್ನೂ ಆಯುರಾರೋಗ್ಯ ಐಶ್ವರ್ಯ ಸತ್ಸಂತಾನಾದಿಗಳನ್ನೂ ದಯಪಾಲಿಸಿ ಕಾಪಾಡುತ್ತಿರಲೆಂದು ಅನನ್ಯಮನಸ್ಕತೆಯಿಂದ ಆ ವಾಸುದೇವನನ್ನು ಪ್ರಾರ್ಥಿಸುತ್ತೇನೆ.

**ಕೀರ್ತಿಸ್ತ್ವಾಜ್ಜಯಚಾಮರಾಜನೃಪತೇಃ ದಿಙ್ಮಂಡಲೀಮಂಡನ**
**ಪ್ರೌಢಾ ಸೂಕ್ತಿಸಹಸ್ರಶುಕ್ತಿಪಟಲೀ ಮುಕ್ತಾಧುರಂ ಬಿಭ್ರತೀ ।**
**ಸದ್ಧರ್ಮಾಭಿರತಿಃ ಪ್ರಜಾಸು ವಿತತಂ ವಾತ್ಸಲ್ಯಮಾಯುಶ್ಚಿರಂ**
**ಗಾತ್ರೇ ದಾರ್ಢ್ಯಮರೋಗತಾ ಸುಮಧುರಾ ಸಂಪಚ್ಚ ಸಾಂತಾನಿಕೀ ॥**

ಅನುವಾದಕ,
**ಆಸ್ಥಾನ ಮಹಾವಿದ್ವಾನ್**
**ಸಂಕೀಘಟ್ಟಂ ವೆಂಕಟಾಚಾರ್ಯಃ.**

ಮೈಸೂರು,
15—6—1952



# ವಿಷಯಾನುಕ್ರಮಣಿಕೆ

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ತ್ರಿಸಪ್ತತಿತಮೋಽಧ್ಯಾಯಃ

**ಪಾಪಿನಃ ಪಾಪನಿಸ್ತಾರಪ್ರಾಯಶ್ಚಿತ್ತಮಕುರ್ವತಃ ।**
**ದಂಡಪ್ರಣಯನಾದ್ರಕ್ಷನ್ ಭಾರ್ಯಾದ್ರಾಜಾತ್ಮಕೋ ಹರಿಃ ॥**

**ಪಾಣಿಪಲ್ಲವಲಸನ್ನವನೀತಂ ಕುಂಚಿತಾಲಕವಿರಾಜಿತವಕ್ತ್ರಂ ।**
**ಮನ್ದಮನ್ದಹಸಿತಸ್ಫುರದೋಷ್ಠಂ ವನ್ದಿಷೀಯಯದುನಂದನಮಾದ್ಯಂ ॥**

### ಎಪ್ಪತ್ತಮೂರನೇ ಅಧ್ಯಾಯ.

ಹಿಂದಿನ ಅಧ್ಯಾಯದಲ್ಲಿ ರಾಜಧರ್ಮನಿರೂಪಣ ಪ್ರಸಂಗಕ್ಕೆ ತಕ್ಕಂತೆ ರಾಜನಿಂದ ಆಚರಿಸಲ್ಪಡಬೇಕಾದ ದಂಡಪ್ರಣಯನವೆಂಬ ಮುಖ್ಯ ಧರ್ಮವನ್ನು ನಿರೂಪಿಸಲಾಗಿದೆ. ಈ ಅಧ್ಯಾಯದಲ್ಲಿ ಆ ದಂಡವಿಧಾನಕ್ಕೆ ಕಾರಣವನ್ನೂ ಅದರ ವೈವಿಧ್ಯವನ್ನೂ ತಿಳಿಯಲು ಕುತೂಹಲಿಯಾದ ಪರಶುರಾಮನು ಪುಷ್ಕರನನ್ನು ಪ್ರಶ್ನೆಮಾಡುತ್ತಾನೆ. (ಇಲ್ಲಿ ನಾವಿಷ್ಣುಃ ಪೃಥಿವೀಪತಿಃ ಎಂಬ ಶಾಸ್ತ್ರದೃಷ್ಟಿಯಿಂದ ಧೊರೆಯಾದವನು ಪರಮಾತ್ಮನಾದ ಮಹಾವಿಷ್ಣುವಿನ ಅಂಶವಾದುದರಿಂದ ಪರಮಾತ್ಮನಂತೆ ರಾಜನಿಗೂ ಪ್ರಜೆಗಳ ವಿಷಯದಲ್ಲಿ ಹಿತೈಷಿತ್ವವು ಆವಶ್ಯಕವಾದುದರಿಂದ ರಾಜನಿಂದ ಆಚರಿಸಲ್ಪಡುವ ಈ ದಂಡವಿಧಾನವೂ ಪ್ರಜೆಗಳ ಪಾಪಕ್ಕೆ ನಾಶಕವಾಗಿ ಅವರ ಹಿತದಲ್ಲಿಯೇ ಪರ್ಯವಸಾನ ಹೊಂದುತ್ತದೆಯಾದುದರಿಂದ ಇದೂ ಸಹ ಪ್ರಜೆಗಳ ಹಿತಕ್ಕಾಗಿಯೇ ಇಲ್ಲಿ ಉಪದೇಶಿಸಲ್ಪಟ್ಟಿದೆ ಮತ್ತು ದಂಡವೆಂಬ ಶಿಕ್ಷಾವಿಧಾನವು ಅನುಭವಕಾಲದಲ್ಲಿ ಪ್ರಜೆಗಳಿಗೆ ದುಃಖಪ್ರದವಾದರೂ ಚಿಕಿತ್ಸಕನ ವ್ಯಾಪಾರದಂತೆ ಚೇತನರ ಪಾಪನಿವೃತ್ತಿ ಎಂಬ ಹಿತದಲ್ಲಿ ಪರ್ಯವಸಾನ ಹೊಂದುತ್ತದೆ ಎಂದು ಭಾವಿಸಬೇಕು.)

|| ರಾಮ ಉವಾಚ ||

ಕುರ್ಯಾದ್ದಂಡಪ್ರಣಯನಂ ಪ್ರಾಯಶ್ಚಿತ್ತಮಕುರ್ವತಾಂ |
ನೃಣಾಂ ರಾಜಾ ತತೋ ಬ್ರೂಹಿ ಪ್ರಾಯಶ್ಚಿತ್ತವಿಧಿಂ ಮಮ || ೧ ||

|| ಪುಷ್ಕರ ಉವಾಚ ||

ಅಕಾಮತಃ ಕೃತೇ ಪಾಪೇ ಪ್ರಾಯಶ್ಚಿತ್ತಂ ವಿದುರ್ಬುಧಾಃ |
ಕಾಮಚಾರಕೃತೆಪ್ಯೇತನ್ಮತಂ ಮೇ ಶ್ರುತಿದರ್ಶನಾತ್ || ೨ ||

ಪ್ರಾಯಶ್ಚಿತ್ತೈಃ ಶಮಂ ಯಾತಿ ಪಾಪಂ ಕೃತಮಸಂಶಯಂ |
ರಾಜದಂಡಾಚ್ಛಮಂ ಯಾತಿ ಪ್ರಾಯಶ್ಚಿತ್ತಮಕುರ್ವತಾಂ || ೩ ||

---

೧. ಓ ರಾಜಕುಮಾರನೇ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಹೊಂದದಿರುವ ಪ್ರಜೆಗಳ ವಿಷಯದಲ್ಲಿ ರಾಜನು ದಂಡವಿಧಾನವನ್ನು ಮಾಡಬೇಕೆಂಬುದು ಸರಿ— ಆ ಪ್ರಾಯಶ್ಚಿತ್ತ ವಿಧಿಯನ್ನು ದಯವಿಟ್ಟು ವಿವರಿಸು. (ಇಲ್ಲಿ ಶಾಸ್ತ್ರದಲ್ಲಿ ವಿಹಿತ ವಾಗಿರುವ ಪ್ರಾಯಶ್ಚಿತ್ತವನ್ನು ಆಯಾಯ ಪಾಪಕ್ಕೆ ಅನುಗುಣವಾಗಿ ಆಚರಿಸಿದವರು ನಿಷ್ಪಾಪರಾಗಿ ನರಕವೇ ಮೊದಲಾದ ಅನರ್ಥಗಳಿಗೆ ಗುರಿಯಾಗುವುದಿಲ್ಲ. ಯಾರು ಅನಾದರದಿಂದ ಪ್ರಾಯಶ್ಚಿತ್ತ ಹೊಂದದೆ ಪಾಪಿಗಳಾಗಿಯೇ ಇದ್ದು ನರಕಕ್ಕೆ ಗುರಿಯಾಗಬೇಕಾಗಬಹುದೋ ಅಂತಹವರ ವಿಷಯದಲ್ಲಿ ನರಕ ಪಾತವನ್ನು ತಪ್ಪಿಸಿ ಅವರನ್ನು ಪವಿತ್ರಗೊಳಿಸಲು ರಾಜನಾದವನು ವಿಧಿಸಬಹುದಾದ ಪಾಪಾನುಗುಣವಾದ ದಂಡವು ಹೇಳಲ್ಪಟ್ಟಿದೆ. ಆ ಪ್ರಾಯಶ್ಚಿತ್ತವೂ ಎಂತಹುದು ಎಂಬು ಅದರ ವಿವೇಚನೆಯನ್ನು ತಿಳಿಯಲು ಭಾರ್ಗವರಾಮನ ಈ ಪ್ರಶ್ನೆಯು ಇಲ್ಲಿ ನಿಬದ್ಧವಾಗಿದೆ ಎಂದು ತಿಳಿಯಬೇಕು.)

೨–೩. ಪುಷ್ಕರನು ಹೇಳುತ್ತಾನೆ:—ಯಾವ ಪಾಪಾಚಾರವು ಬುದ್ಧಿಪೂರ್ವಕ ವಾಗಿ ನಡೆಯದೆ ಅಜ್ಞಾನದಿಂದ ಉಂಟಾಗುತ್ತದೆಯೋ ಅಂತಹ ದುಷ್ಕರ್ಮದಿಂದ ಉಂಟಾದ ಪಾಪವು ಪ್ರಾಯಶ್ಚಿತ್ತಾಚರಣೆಯಿಂದ ನಾಶಹೊಂದುತ್ತದೆ ಎಂದು ಶಾಸ್ತ್ರಜ್ಞರು ಹೇಳುತ್ತಾರೆ. ಆದರೆ ಆ ಕೆಲಸವು ಪಾಪಕರವೆಂದು ತಿಳಿದಿದ್ದರೂ ತನ್ನ ಸ್ವಚ್ಛಂದತೆಗೆ ತಕ್ಕಂತೆ ಆಕಸ್ಮಿಕವಾಗಿ ಅಂತಹ ಪಾಪವು ನಡೆದಲ್ಲಿ ಅದೂ ಸಹ ಪ್ರಾಯಶ್ಚಿತ್ತದಿಂದ ನಿವೃತ್ತಿಹೊಂದುತ್ತದೆ ಎಂದು ವೇದದಲ್ಲಿ ಕಂಡ ಪ್ರಮಾಣ ಬಲದಿಂದ ನಾನು ನಿಶ್ಚಯಿಸಬೇಕಾಗುತ್ತದೆ. ಇಂತಹ ಪಾಪಗಳೆಲ್ಲವೂ ಪ್ರಾಯಶ್ಚಿತ್ತ ಗಳಿಂದ ಶಾಂತವಾಗುತ್ತವೆ. ಪ್ರಾಯಶ್ಚಿತ್ತವನ್ನು ಆಚರಿಸದಿರುವವರ ಪಾಪಗಳು ರಾಜದಂಡದಿಂದಲೇ ಶಾಂತಿಯನ್ನು ಹೊಂದುತ್ತವೆ. ಇದು ನಿಶ್ಚಯ.

ಪ್ರಾಯಶ್ಚಿತ್ತವಿಹೀನಾ ಯೇ ರಾಜಭಿಶ್ಚಾಪ್ಯವಾಸಿತಾಃ ।
ನರಕಂ ಪ್ರತಿಪದ್ಯಂತೇ ತಿರ್ಯಗ್ಯೋನಿಂ ತಥೈವ ಚ ॥ ೪ ॥

ಮಾನುಷ್ಯಮಪಿ ಚಾಸಾದ್ಯ ಭವಂತೀಹ ತಥಾಂಕಿತಾಃ ॥
ಪ್ರಾಯಶ್ಚಿತ್ತಮತಃ ಕಾರ್ಯಂ ಕಲ್ಮಷಸ್ಯಾಪನುತ್ತಯೇ ॥ ೫ ॥

ರಾಜಕ್ರುದ್ಧಾತುರಾನ್ನಂ ಚ ನ ಭುಂಜೀತ ಕದಾಚನ ।
ತಥೈವಾಹ್ವಾಯಕಸ್ಯಾನ್ನಂ ಪದಾಸ್ಪೃಷ್ಟಂ ಚ ಕಾಮತಃ ॥ ೬ ॥

ಮಹಾಪಾತಕಿನಾ ಸ್ಪೃಷ್ಟಮವಲೀಢಂ ಪತತ್ರಿಣಾ ।
ತ್ರ್ಯೃಬೀಮಪಕ್ವಂ ಯಚ್ಚಾಪಿ ಸ್ಪೃಷ್ಟಂ ಯಚ್ಚಾಪ್ಯುದಕ್ಯಯಾ ॥ ೭ ॥

೪–೫. ಪಾಪಿಗಳಾದವರು ಉಚಿತವಾದ ಪ್ರಾಯಶ್ಚಿತ್ತವನ್ನೂ ಹೊಂದದೆ ರಾಜರಿಂದಲೂ ತಿರಸ್ಕರಿಸಲ್ಪಟ್ಟು ಶಿಕ್ಷಾವಿಧಾನದಿಂದ ನಿಷ್ಪಾಪರಾಗಿ ಆಗುವುದಿಲ್ಲವೋ ಅಂತಹ ಪಾಪಿಗಳು ನರಕವನ್ನು ಹೊಂದುತ್ತಾರೆ. ಹಾಗೆಯೇ ಪಶುಪಕ್ಷಿಗಳೇ ಮೊದಲಾದ ತಿರ್ಯಗ್ಜನ್ಮವನ್ನು ಹೊಂದುತ್ತಾರೆ. ಒಂದುವೇಳೆ ಮನುಷ್ಯಜನ್ಮವನ್ನು ಹೊಂದಿದರೂ ಹೆಸರಿಗೆ ಮಾತ್ರ ಕೇವಲ ಮನುಷ್ಯರಾಗಿದ್ದು ದೋಷಗಳಿಂದ ದೂಷಿತರಾಗಿಯೇ ಆ ಜನ್ಮವನ್ನು ಕಳೆಯಬೇಕಾದೀತು. ಆದುದರಿಂದ ಅಂತಹ ಅನರ್ಥಕಾರಿಯಾದ ಪಾಪವನ್ನು ಹೋಗಲಾಡಿಸಿಕೊಳ್ಳಲು ಪ್ರಾಯಶ್ಚಿತ್ತವನ್ನು ಹೊಂದಿಯೇ ಹೊಂದಬೇಕು.

೬–೭. ರಾಜನ ಮತ್ತು ಬಹಳ ಕೋಪಿಯಾದವನ ಮತ್ತು ವ್ಯಾಧಿಗ್ರಸ್ತನ ಅನ್ನವನ್ನು ಯಾವಾಗಲೂ ಭುಂಜಿಸಬಾರದು. ಹಾಗೆಯೇ ಸಾರಿಕೊಂಡು ಕೂಗುತ್ತಾ ಆಹ್ವಾನವನ್ನು ಕೊಡುವವನ ಅನ್ನವನ್ನೂ ಬುದ್ಧಿಪೂರ್ವಕವಾಗಿ ಕಾಲಿನಿಂದ ಸ್ಪರ್ಶಹೊಂದಿದ ಅನ್ನವನ್ನೂ ಭುಂಜಿಸಬಾರದು. ಹಾಗೆಯೇ ಮಹಾಪಾತಕಿಗಳಿಂದ ಸ್ಪರ್ಶಹೊಂದಿದ ಮತ್ತು ಪಕ್ಷಿಗಳಿಂದ ಮುಟ್ಟಲ್ಪಟ್ಟ ಅನ್ನವನ್ನೂ ಭುಂಜಿಸಬಾರದು. ಅಶುದ್ಧವಾದ ಪಾತ್ರೆಯಲ್ಲಿ ಪಾಕಮಾಡಲ್ಪಟ್ಟ ಮತ್ತು ಋತುವಾಗಿರುವ ಸ್ತ್ರೀಯಿಂದ ಮುಟ್ಟಲ್ಪಟ್ಟ ಅನ್ನವೂ ಅಭಕ್ಷ್ಯವಾದುದು.

ಗಣಾನ್ನಂ ಗಣಿಕಾನ್ನಂ ಚ ವಿದ್ವಿಷಾಂ ಯಜ್ಜುಗುಪ್ಸಿತಂ ।
ಸ್ತೇನಸ್ಯ ಚೈವ ತೀಕ್ಷ್ಣಸ್ಯ ವಾರ್ಧುಷೇಃ ಗಾಯನಸ್ಯ ಚ ॥ ೮ ॥

ದೀಕ್ಷಿತಸ್ಯ ಕದರ್ಯಸ್ಯ ಬದ್ಧಸ್ಯ ನಿಗಡೈರಪಿ ।
ಅಭಿಶಸ್ತಸ್ಯ ಷಂಡಸ್ಯ ಪುಂಶ್ಚಲ್ಯಾ ದಾಂಭಿಕಸ್ಯ ಚ ॥ ೯ ॥

ಚಿಕಿತ್ಸಕಸ್ಯ ಮೃಗಯೋಃ ಕ್ರೂರಸ್ಯೋಚ್ಛಿಷ್ಟಭೋಜಿನಃ ।
ಅನರ್ಚಿತಂ ವೃಥಾ ಮಾಂಸಮವೀರಾಯಾಶ್ಚ ಯೋಷಿತಃ ॥ ೧೦ ॥

ದ್ವಿಷದನ್ನಂ ಚ ದಾಸಾನ್ನಮುಗ್ರಾನ್ನಂ ಚಾಪ್ಯಚಾಕ್ಷುಷಂ ।
ಪಿಶುನಾನೃತಿನೋಶ್ಚಾನ್ನಮಸ್ತ್ರವಿಕ್ರಯಿಣಸ್ತಥಾ ॥ ೧೧ ॥

---

೮-೧೦. ಮತ್ತು ಸಂಘಾನ್ನವನ್ನೂ, ವೇಶ್ಯಾನ್ನವನ್ನೂ, ಶತ್ರುವಿನಿಂದ ಕೊಡಲ್ಪಟ್ಟ ಜುಗುಪ್ಸಿತವಾದ ಅನ್ನವನ್ನೂ, ಕಳ್ಳತನದಿಂದ ಜೀವಿಸುವವನ, ಮತ್ತು ಬಹಳ ಕ್ರೂರಿಯಾಗಿರುವವನ, ಮತ್ತು ಬಡ್ಡಿಯಿಂದ ಜೀವಿಸುವವನ, ಹಾಗೂ ಗಾಯಕನ ಅನ್ನವನ್ನೂ ಸಹ ಭುಂಜಿಸಬಾರದು. ಹೀಗೆಯೇ ದೀಕ್ಷಿತನಾಗಿರುವವನ ಮತ್ತು ಕೃಪಣನ, ಮತ್ತು ಕಾರಾಗೃಹದಲ್ಲಿ ಬಂಧನವನ್ನು ಅನುಭವಿಸುತ್ತಿರುವವನ, ಮತ್ತು ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾತಕಗಳಿಂದ ನಿಂದಿತನಾಗಿರುವವನ ಹಾಗೂ ನಪುಂಸಕನ, ಮತ್ತು ಜಾರಿಣಿಯಾದ ವನಿತೆಯ, ಮತ್ತು ಡಂಭಾಚಾರಿಯಾಗಿರುವವನ, ಮತ್ತು ಚಿಕಿತ್ಸಾ (ವೈದ್ಯ) ವೃತ್ತಿಯಿಂದ ಜೀವಿಸುವವನ, ಬೇಡನ, ಕ್ರೂರಿಯಾಗಿರುವವನ ಅನ್ನವೂ ಅಭೋಜ್ಯವಾದುದು. ಹೀಗೆಯೇ ಎಂಜಲನ್ನು ತಿಂದು ಜೀವಿಸುವವನ ಅನ್ನವೂ ಮತ್ತು ದೇವತೆಗಳಿಗೆ ಅರ್ಪಣ ಮಾಡದೆ ತನ್ನ ಭೋಗಕ್ಕಾಗಿಯೇ ಸಿದ್ಧಮಾಡಿದ ಮಾಂಸವೂ, ಮತ್ತು ಪತಿಪುತ್ರಾದಿಗಳಾರು ಇಲ್ಲದ ಅನಾಥಳಾದ ಸ್ತ್ರೀಯ ಅನ್ನವೂ ಸಹ ನಿಂದ್ಯವಾದುದು.

೧೧-೧೩. ಹಾಗೆಯೇ ಶತ್ರುವಿನ ಅನ್ನವೂ, ದಾಸನಾಗಿರುವ ಸೇವಕನ ಮತ್ತು ಉಗ್ರಸ್ವಭಾವವುಳ್ಳವನ ಅನ್ನವೂ ನಿಂದ್ಯವಾದುದು. ಹಾಗೆಯೇ ಕಣ್ಣಿದುರಿಗೆ ಪಕ್ವವಾಗದ (ಅಂದರೆ) ಬೇರೆ ಸ್ಥಲದಿಂದ ತರಲ್ಪಟ್ಟ ಅನ್ನವೂ, ಮತ್ತು ಚಾಡಿಕೋರ, ಸುಳ್ಳುಗಾರ ಇವರ ಅನ್ನವೂ, ಹಾಗೆಯೇ ಶಸ್ತ್ರಾಸ್ತ್ರಗಳ ವಿಕ್ರಯದಿಂದ ಜೀವಿಸು

**ರಜಕಸ್ಯ ನೃಶಂಸಸ್ಯ ಯಸ್ಯ ಚೋಪಪತಿರ್ಗೃಹೇ ।**
**ಶೈಲೂಷತುನ್ನವಾಯಾನ್ನಂ ಕೃತಘ್ನಸ್ಯಾನ್ನಮೇವ ಚ ॥ ೧೨ ॥**

**ಪರಿವಿತ್ತೇಶ್ಚ ದುಷ್ಟಸ್ಯ ಬಂದಿನಃ ಕಿತವಸ್ಯ ಚ ।**
**ಕುಂಡಗೋಲಕಯೋಶ್ಚೈವ ಸ್ತ್ರೀಜಿತಸ್ಯ ತಥೈವ ಚ ॥ ೧೩ ॥**

**ಕರ್ಮಾರಸ್ಯ ನಿಷಾದಸ್ಯ ರಂಗಾವತರಕಸ್ಯ ಚ ।**
**ಸುವರ್ಣಕರ್ತುರ್ವೇಣಸ್ಯ ಚೈಲನಿರ್ಣೇಜಕಸ್ಯ ಚ ॥ ೧೪ ॥**

---

ವವನ, ಮತ್ತು ಅಗಸ, ಘಾತುಕ ಇವರ ಅನ್ನವೂ ಅಭೋಜ್ಯವಾದುದು. ಜಾರನನ್ನು ಮನೆಯಲ್ಲಿಯೇ ಇಟ್ಟುಕೊಂಡಿರುವವಳ ಅನ್ನವೂ, ನರ್ತನದಿಂದ ಜೀವಿಸುವವನ, ಮತ್ತು ಬಟ್ಟೆಗಳನ್ನು ಹೊಲಿಯುವವನ, ಹಾಗೆಯೇ ಕೃತಘ್ನನ ಅನ್ನವೂ ತ್ಯಾಜ್ಯವಾದುದು. ಪರಿವಿತ್ತಿಯ ಅನ್ನವೂ ತ್ಯಾಜ್ಯವಾದುದು. (ಅಣ್ಣಸಿಗೆ ಮದುವೆಯಾಗದಿರುವಾಗ ವಿವಾಹ ಹೊಂದಿದ ತಮ್ಮನು ಪರಿವೇತ್ತಾ ಎಂದು ಕರೆಯಲ್ಪಡುತ್ತಾನೆ; ಅವನ ಅಣ್ಣಸಿಗೆ ಪರಿವಿತ್ತಿ ಎಂದು ಹೆಸರು. ಅಂತಹವನ ಅನ್ನವು ಅಭೋಜ್ಯವೆಂದು ಇಲ್ಲಿ ಉದಾಹರಿಸಲಾಗಿದೆ) ಮತ್ತು ದುಷ್ಟಸ್ವಭಾವವುಳ್ಳವನ, ಸ್ತುತಿಪಾಠಕನಾಗಿರುವವನ, ಜೂಜುಗಾರನ ಅನ್ನವೂ ಸಿಂದ್ಯವಾದುದು. ಯಾವ ಸ್ತ್ರೀಯು ಪತಿಯು ಬದುಕಿರುವಾಗಲೇ ಜಾರತನದಿಂದ ಉಪಪತಿಯಲ್ಲಿ ವರ್ತಿಸಿ, ಅವನ ಸಂಬಂಧದಿಂದಲೇ ಮಗನನ್ನು ಹೊಂದುತ್ತಾಳೆಯೋ, ಅಂತಹ ಮಗನಿಗೆ ಕುಂಡನೆಂದು ಧರ್ಮಶಾಸ್ತ್ರಕಾರರ ವ್ಯವಹಾರವಿದೆ. ಮತ್ತು ಪತಿಯು ಮೃತನಾದ ನಂತರ ಜಾರತನದಿಂದ ಹುಟ್ಟಿದ ಮಗನಿಗೆ ಗೋಲಕನೆಂದೂ ವ್ಯವಹಾರವಿದೆ. ಇಂತಹ ಕುಂಡಗೋಲಕರ ಅನ್ನವೂ ಅಭೋಜ್ಯವಾದುದು. ಹಾಗೆಯೇ ಸ್ತ್ರೀಯಿಂದ ಪರಾಭವ ಹೊಂದಿರುವ ಹೇಡಿಯ ಅನ್ನವೂ ಅಭೋಜ್ಯವಾದುದು. (ಪ್ರಾಯಶಃ ಈ ನಿಷೇಧಗಳೆಲ್ಲವೂ ಸಂಸರ್ಗದೋಷದಿಂದ ದುಷ್ಟವಾದ ಅನ್ನವನ್ನೇ ಅಧಿಕರಿಸಿ ಹೇಳಲ್ಪಟ್ಟಿವೆ; ಇವುಗಳಲ್ಲಿ ಕೆಲವು ಪುನಃ ಪುನಃ ಹೇಳಲ್ಪಟ್ಟಿವೆ. ಇದಕ್ಕೆ ಅತ್ಯಂತ ನಿಷೇಧದಲ್ಲಿ ತಾತ್ಪರ್ಯ).

೧೪-೧೬. ಕಮ್ಮಾರ ಮತ್ತು ಚಂಡಾಲ, ಚಿತ್ರಕಾರ, ರಸವಾದದ ಬಲದಿಂದ ಸುವರ್ಣವನ್ನು ಮಾಡುವವನು, ಮತ್ತು ವರ್ಣಸಂಕರವುಳ್ಳವನು, ವಸ್ತ್ರಗಳನ್ನು ಒಗೆಯುವವನು, (ಅಗಸ) ಇವರೂ ಸಹ ಅಭೋಜ್ಯಾನ್ನರು ಮತ್ತು ವೈರಾಗ್ಯವೆಂಬ ನ್ಯಾಯವಾದ ಕಾರಣವಿಲ್ಲದೆ ಡಂಭಾಚಾರಕ್ಕಾಗಿ ಯಾವನು ಸನ್ಯಾಸ ಹೊಂದು

ಮಿಥ್ಯಾಪ್ರವ್ರಜಿತಸ್ಯಾನ್ನಂ ತೈಲಿಕಸ್ಯ ತಥೈವ ಚ ।
ತಥೈವ ವೃಷಲಸ್ಯಾನ್ನಂ ಬ್ರಾಹ್ಮಣೇನಾನಿಮಂತ್ರಿತಂ ॥ ೧೫ ॥

ಏಷಾಮನ್ಯತಮಸ್ಯಾನ್ನಮಮತ್ಯಾತ್ವಾ ತ್ರ್ಯಹಂ ಕ್ಷಿಪೇತ್ ।
ಮತ್ಯಾ ಭುಕ್ತ್ವಾ ಚರೇತ್ಕೃಚ್ಛ್ರಂ ರೇತೋವಿಣ್ಮೂತ್ರಮೇವ ಚ ॥ ೧೬ ॥

ಮಹಾಪಾತಕಯುಕ್ತಸ್ಯ ಸೂತಿಕಸ್ಯ ತಥೈವ ಚ ।
ಭುಕ್ತ್ವಾನ್ನಂ ಚರ್ಮಕಾರಸ್ಯ ಮತ್ಯಾ ಕೃಚ್ಛ್ರಂ ಚರೇದ್ದ್ವಿಜಃ ॥ ೧೭ ॥

ಚಂಡಾಲಶ್ವಪಚಾನ್ನಂ ಚ ಭುಕ್ತ್ವಾ ಚಾಂದ್ರಾಯಣಂ ಚರೇತ್ ।
ಅಂತಶ್ಚತುರ್ಥೇ ಪ್ರೇತಾನ್ನಂ ಗವಾಘ್ರಾತಂ ತಥೈವ ಚ ॥ ೧೮ ॥

ಶೂದ್ರೋಚ್ಛಿಷ್ಟಂ ಲಘೂಚ್ಛಿಷ್ಟಂ ಸೂತಿಕಾನ್ನಂ ತಥೈವ ಚ ।
ತಪ್ತಕೃಚ್ಛ್ರಂ ತು ಕುರ್ವೀತ ತಸ್ಯ ಪಾಪಸ್ಯ ಶಾಂತಯೇ ॥ ೧೯ ॥

---

ವನೋ ಅಂತಹವನ ಅನ್ನವೂ, ತೈಲಕಾರನ (ಗಾಣಿಗನ) ಅನ್ನವೂ, ಶೂದ್ರನ ಅನ್ನವೂ, ಬ್ರಾಹ್ಮಣನಲ್ಲದೆ ಇತರನಿಂದ ಭೋಜನಕ್ಕೆ ಆಹ್ವಾನ ಮಾಡುವವನ ಅನ್ನವೂ ನಿಂದ್ಯವಾದುದು. (ಇಂತಹ ಅನ್ನವನ್ನು ಭುಂಜಿಸುವವರು ಅಭಕ್ಷ್ಯ ಭಕ್ಷಣದೋಷಕ್ಕೆ ಗುರಿಯಾಗುವರೆಂದು ತಾತ್ಪರ್ಯ). ಈ ವಿಧವಾದ ಅಭೋಜ್ಯಾನ್ನ ದಲ್ಲಿ ಯಾವುದನ್ನಾದರೂ ಅಬುದ್ಧಿಪೂರ್ವಕವಾಗಿ (ತಿಳಿಯದೆ) ಸೇವಿಸಿದರೂ ಮೂರುದಿನ ಉಪವಾಸದಲ್ಲಿರಬೇಕು. ಬುದ್ಧಿಪೂರ್ವಕವಾಗಿ ಸೇವಿಸಿದರೂ, ಭೋಜ್ಯವಸ್ತುಗಳಲ್ಲಿ ವೀರ್ಯ, ಮಲ, ಮೂತ್ರಾದಿಗಳ ಸಂಪರ್ಕವಿದ್ದರೂ, ಸಹ ಪ್ರಾಯಶ್ಚಿತ್ತರೂಪವಾಗಿ ಕೃಚ್ಛ್ರವನ್ನಾಚರಿಸಬೇಕು.

೧೭-೧೯. ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾತಕವನ್ನು ಹೊಂದಿರುವವನ ಮತ್ತು ಆಶೌಚವನ್ನು ಹೊಂದಿರುವವನ ಮತ್ತು ಚರ್ಮಕಾರನ ಅನ್ನವನ್ನೂ ಬುದ್ಧಿಪೂರ್ವಕವಾಗಿ ಭುಂಜಿಸಿದ ಬ್ರಾಹ್ಮಣನು ಆ ಪಾಪಶಾಂತಿಗಾಗಿ ಕೃಚ್ಛ್ರವನ್ನಾಚರಿಸಬೇಕು. ಚಂಡಾಲ ಮತ್ತು ಅವನಿಗಿಂತ ಹೀನನಾದ ಶ್ವಪಚನ ಅನ್ನವನ್ನು ಭುಂಜಿಸಿದ್ದೇ ಆದರೆ ಚಾಂದ್ರಾಯಣವನ್ನು ಆಚರಿಸಬೇಕು. ಮೃತಿಹೊಂದಿ ನಾಲ್ಕು ದಿನ ತುಂಬದಿರುವವನ ಪ್ರೇತಾನ್ನವನ್ನೂ ದನಗಳಿಂದ ಮೂಸಿನೋಡಲ್ಪಟ್ಟ ಅಶುದ್ಧ

ಭುಕ್ತ್ವಾ ತು ಬ್ರಾಹ್ಮಣಾಶೌಚೇ ಚರೇತ್ಸಾಂತಪನಂ ದ್ವಿಜಃ |
ಭುಕ್ತ್ವಾ ತು ಕ್ಷತ್ರಿಯಾಶೌಚೇ ತಥಾ ಕೃಚ್ಛ್ರಂ ವಿಧೀಯತೇ || ೨೦ ||

ವೈಶ್ಯಾಶೌಚೇ ತಥಾ ಭುಕ್ತ್ವಾ ತಪ್ತಕೃಚ್ಛ್ರಂ ಸಮಾಚರೇತ್ |
ಶೂದ್ರಾಶೌಚೇ ದ್ವಿಜೋ ಭುಕ್ತ್ವಾ ತಥಾ ಚಾಂದ್ರಾಯಣಂ ಚರೇತ್ || ೨೧ ||

ಆಶೌಚೇ ಯಸ್ಯ ಯೋ ಭುಕ್ತ್ವಾ ಸೋಽಪ್ಯಶುದ್ಧಸ್ತಥಾ ಭವೇತ್ |
ತಾವದ್ಯಾವದಶೌಚಂ ತು ತಸ್ಯ ರಾಮ ಪ್ರಕೀರ್ತಿತಂ || ೨೨ ||

ತಸ್ಯಾಶೌಚವ್ಯಪಗಮೇ ಪ್ರಾಯಶ್ಚಿತ್ತಂ ಸಮಾಚರೇತ್ |
ಭುಕ್ತ್ವೋತ್ತಮಸ್ಯಚಾಶೌಚೇ ಕ್ಷಪೇತ ದಿವಸಂ ತಥಾ || ೨೩ ||

---

ವಾದ ಮತ್ತು ಶೂದ್ರನ ಎಂಜಲಾದ ಅವನಿಗಿಂತಲೂ ಹೀನನ ಎಂಜಲಾದ ಮತ್ತು ಸೂತಕಿಯಾದವನ ಅನ್ನವನ್ನು ಭುಂಜಿಸಿದಲ್ಲಿ ಆ ಪಾಪಶಾಂತಿಗಾಗಿ ತಪ್ತಕೃಚ್ಛ್ರವೆಂಬ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೨೦–೨೨. ಆಶೌಚದಲ್ಲಿರುವ ಬ್ರಾಹ್ಮಣನ ಅನ್ನವನ್ನು ದ್ವಿಜನಾದವನು ಭುಂಜಿಸಿದಲ್ಲಿ ಸಾಂತಪನವನ್ನು ಆಚರಿಸಬೇಕು ಕ್ಷತ್ರಿಯನ ಆ ಶೌಚಾನ್ನವನ್ನು ಊಟಮಾಡಿದಲ್ಲಿ ಕೃಚ್ಛ್ರವನ್ನು ಆಚರಿಸಬೇಕು. ವೈಶ್ಯನ ಅಶೌಚದಲ್ಲಿ ಭುಂಜಿಸಿದ್ದೇ ಆದರೆ ತಪ್ತಕೃಚ್ಛ್ರವನ್ನು ಮಾಡಿಕೊಳ್ಳಬೇಕು. ಶೂದ್ರನ ಆಶೌಚಾನ್ನವನ್ನು ದ್ವಿಜನು ಊಟಮಾಡಿದುದೇ ಆದರೆ ಚಾಂದ್ರಾಯಣವನ್ನೇ ಆಚರಿಸಬೇಕು. ಈ ಆಶೌಚಾನ್ನ ಭಕ್ಷಣಪ್ರಕರಣದಲ್ಲಿ ಯಾವ ಆಶೌಚಿಯ ಅನ್ನವನ್ನು ಭುಂಜಿಸಿದರೂ ಅಂತಹವನ ಆಶೌಚನಿವೃತ್ತಿಯಾಗುವವರಿಗೂ ಭುಂಜಿಸಿದವನೂ ಅಶುದ್ಧನಾಗಿರುತ್ತಾನೆಂದು ತಿಳಿಯಬೇಕು.

೨೩–೨೪. ಅಂತಹ ಆಶೌಚಿಗೆ ಆಶೌಚವು ಹೋದನಂತರ ತಾನೂ ಶುದ್ಧನಾಗಿ ಪಾಪನಿವೃತ್ತಿಗಾಗಿ ಮೇಲೆ ಹೇಳಿರುವ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ಆದರೆ ಉತ್ತಮವರ್ಣದ ಆಶೌಚಿಯ ಅನ್ನವನ್ನು ಅಧಮವರ್ಣದವನು ಭುಂಜಿಸಿದ್ದಲ್ಲಿ (ಅಂದರೆ ಬ್ರಾಹ್ಮಣಾಶೌಚಿಯ ಅನ್ನವನ್ನು ಕ್ಷತ್ರಿಯಾದಿಗಳು ಕ್ಷತ್ರಿಯನ ಆಶೌಚಾನ್ನವನ್ನು ವೈಶ್ಯಾದಿಗಳು ವೈಶ್ಯನ ಆಶೌಚಾನ್ನವನ್ನು ಶೂದ್ರನೂ ಭುಂಜಿಸಿದಲ್ಲಿ ಎಂದು ತಾತ್ಪರ್ಯ) ಒಂದುದಿನ ವಿಲಂಬದಿಂದಿದ್ದು ಪ್ರಾಯಶ್ಚಿತ್ತವನ್ನಾಚರಿಸಬೇಕು. ಪಂಚನಖಗಳೆಂದರೆ ಐದು ಉಗುರುಗಳುಳ್ಳ ಆಮೆ, ಉಡು ಮುಂತಾದ ಪ್ರಾಣಿಗಳು

ಮೃತಪಂಚನಖಾತ್ಕೂಪಾದಮೇಧ್ಯೇನ ಸಕೃದ್ಯುತಾತ್ ।
ಅಪಃ ಪೀತ್ವಾ ತ್ರ್ಯಹಂ ತಿಷ್ಠೇತ್ ಸೋಪವಾಸೋ ದ್ವಿಜೋತ್ತಮಃ ॥ ೨೪ ॥

ದ್ವಿದಿನಂ ಕ್ಷತ್ರಿಯಸ್ತಿಷ್ಠೇತ್ ಏಕಾಹಂ ವೈಶ್ಯ ಏವ ಚ ।
ನಕ್ತಾಶೀ ಚ ತಥಾ ಶೂದ್ರಃ ಪಂಚಗವ್ಯೇನ ಶುಧ್ಯತಿ ॥ ೨೫ ॥

ಭುಕ್ತ್ವಾಪ್ಯಥ ಕಷಾಯಾಂಶ್ಚ ಪೀತ್ವಾ ಮೇಧ್ಯಾನ್ಯಪಿ ದ್ವಿಜಃ ।
ತಾವದ್ಭವತ್ಯಪ್ರಯತಃ ಯಾವದನ್ನಂ ವ್ರಜತ್ಯಧಃ ॥ ೨೬ ॥

ವಿಡ್ವರಾಹಖರೋಷ್ಟ್ರಾಣಾಂ ಗೋಮಾಯೋಃ ಕಪಿಕಾಕಯೋಃ ।
ಪ್ರಾಶ್ಯ ಮೂತ್ರಪುರೀಷಾಣಿ ದ್ವಿಜಶ್ಚಾಂದ್ರಾಯಣಂ ಚರೇತ್ ॥ ೨೭ ॥

ಶುಷ್ಕಾಣಿ ಜಗ್ಧ್ವಾ ಮಾಂಸಾನಿ ಭೌಮಾನಿ ಕವಕಾನಿ ಚ ।
ಅಜ್ಞಾತಂ ಚೈವ ಸೂನಾಸ್ಥಂ ಚೈತದೇವ ವ್ರತಂ ಚರೇತ್ ॥ ೨೮ ॥

ಅಂತಹ ಪಂಚನಖಗಳು ಯಾವ ಭಾವಿಯಲ್ಲಿ ಬಿದ್ದು ಸಾಯುವುವೋ ಅಂತಹ ಭಾವಿಯ ಮತ್ತು ಅಮೇಧ್ಯ ಸಂಬಂಧವುಳ್ಳ ಭಾವಿಯ ನೀರನ್ನು ಪಾನಮಾಡಿದ್ದೇ ಆದರೆ ಅಂತಹ ಬ್ರಾಹ್ಮಣನು ಮೂರು ದಿವಸ ಉಪವಾಸವಿರಬೇಕು.

೨೫-೨೬. ಅಂತಹ ಭಾವಿಯ ನೀರನ್ನು ಉಪಯೋಗಿಸಿದ ಕ್ಷತ್ರಿಯನು ಎರಡು ದಿನ ಉಪವಾಸವಿರಬೇಕು. ಶೂದ್ರನಾದವನು ಒಂದುದಿನ ಉಪವಾಸವಿರಬೇಕು. ಶೂದ್ರನಾದವನು ರಾತ್ರಿಯಲ್ಲಿ ಮಾತ್ರ ಊಟಮಾಡಿ ಪಂಚಗವ್ಯದಿಂದ ಶುದ್ಧಿಹೊಂದ ಬೇಕು. ದ್ವಿಜನಾದವನು (ಬ್ರಾಹ್ಮಣ ಕ್ಷತ್ರಿಯ ವೈಶ್ಯರು) ನಿಷಿದ್ಧವಾದ ಕಷಾಯ ಗಳನ್ನೂ ಅಮೇಧ್ಯಸಂಸರ್ಗವುಳ್ಳ ಪದಾರ್ಥವನ್ನೂ ಸೇವಿಸಿದ್ದೇ ಆದರೆ ಆ ಭೋಗ್ಯ ವಸ್ತುವು ಜೀರ್ಣವಾಗಿ ಕೆಳಮುಖವಾಗುವವರಿಗೂ ಅಶುದ್ಧನಾಗಿಯೇ ಆಗಿರುವನು.

೨೭-೨೮. ಊರುಹಂದಿ, ಕತ್ತೆ, ಒಂಟೆ, ನರಿ, ಮತ್ತು ಕಪಿ, ಕಾಗೆ ಇವುಗಳ ಮಲಮೂತ್ರಗಳನ್ನು ಸೇವಿಸಿದ ದ್ವಿಜನು ಚಾಂದ್ರಯಣವನ್ನೇ ಆಚರಿಸಬೇಕು. ಒಣಗಿದ ಮಾಂಸವನ್ನು ಭಕ್ಷಣಮಾಡಿದವನೂ, ಭೂಮಿಯಲ್ಲಿ ಹುಟ್ಟಿದ ಬಿದಿರುಕಳಲೆ ಮುಂತಾದ ಮೊಳಕೆಗಳನ್ನು ಭಕ್ಷಣಮಾಡಿದವನೂ, ಮತ್ತು ವಧಗೃಹದಲ್ಲಿದ್ದ ಮಾಂಸ ವನ್ನು ತಿಳಿಯದೆ ಭಕ್ಷಣಮಾಡಿದವನೂ ಸಹ ಪಾಪಶಾಂತಿಗಾಗಿ ಇದೇ ವ್ರತವನ್ನೇ (ಚಾಂದ್ರಾಯಣ) ಆಚರಿಸಬೇಕು. (ಸೂನಾ ಎಂದರೆ ಪ್ರಾಣಿಗಳ ವಧಸ್ಥಾನ.)

ಕ್ರವ್ಯಾದಸೂಕರೋಷ್ಟ್ರಾಣಾಂ ಗೋಮಾಯೋಃ ಕಪಿಕಾಕಯೋಃ |
ಗೋನರಾಶ್ವಖರೋಷ್ಟ್ರಾಣಾಂ ಭೋಕ್ತಾ ಪಂಚನಖಾಂಶ್ಚ ಯೇ || ೨೯ ||

ಮಾಂಸಂ ಚ ಕೌಂಜರಂ ಭುಕ್ತ್ವಾ ತಪ್ತಕೃಚ್ಛ್ರೇಣ ಶುಧ್ಯತಿ |
ಗ್ರಾಮಕುಕ್ಕುಟಛತ್ರಾಕೌ ಭುಕ್ತ್ವಾ ಚಾಂದ್ರಾಯಣಂ ಚರೇತ್ || ೩೦ ||

ಕೇಶಕೀಟಾವಪನ್ನೇಪಿ ಪಿಬೇದ್ಬ್ರಹ್ಮಸುವರ್ಚಲಾಂ |
ಆಮಶ್ರಾದ್ಧೇ ತಥಾ ಭುಕ್ತ್ವಾ ತಪ್ತಕೃಚ್ಛ್ರೇಣ ಶುಧ್ಯತಿ || ೩೧ ||

ಸಂಕಲ್ಪಿತೇ ತಥಾ ಭುಕ್ತ್ವಾ ತ್ರಿರಾತ್ರೋಪೋಷಣಂ ಭವೇತ್ |
ವ್ರತಚಾರೀ ತಥಾ ಭುಕ್ತ್ವಾ ಮಧುಮಾಂಸಂ ಚ ಭಾರ್ಗವ || ೩೨ ||

ಲಶುನಂ ಗೃಂಜನಂ ಚೈವ ಪಲಾಂಡುಂ ಮದ್ಯಮೇವ ಚ |
ಲಶುನಾದಿಸಮಂ ಯಚ್ಚ ಗಂಧೇನ ಮನುಜೋತ್ತಮ || ೩೩ ||

---

೨೯–೩೦. ಮಾಂಸಾಹಾರಿಯಾದ ಕಾಡುಮೃಗ, ಮತ್ತು ಹಂದಿ, ಒಂಟೆ, ನರಿ, ಕಪಿ, ಕಾಗೆ, ಗೋವುಗಳು, ಮನುಷ್ಯರು, ಕುದುರೆಗಳು ಇವುಗಳ ಮಾಂಸವನ್ನೂ, ಮತ್ತು (ಐದು ಉಗುರುಗಳುಳ್ಳ) ಪಂಚನಖ ಪ್ರಾಣಿಗಳಲ್ಲಿ ನಿಷಿದ್ಧವಾದ ಪ್ರಾಣಿಗಳ ಮಾಂಸವನ್ನೂ, ಆನೆಯ ಮಾಂಸವನ್ನೂ ಭುಂಜಿಸಿದವನು ತಪ್ತಕೃಚ್ಛ್ರದಿಂದ ಶುದ್ಧಿಹೊಂದಬೇಕು, ಮತ್ತು ಊರುಕೋಳಿ, ಅಣಬೆ ಇವುಗಳನ್ನು ಭಕ್ಷಿಸಿದವರು ಚಾಂದ್ರಾಯಣದಿಂದ ಶುದ್ಧಿಹೊಂದಬೇಕು.

೩೧–೩೩. ಕೂದಲು ಮತ್ತು ಕ್ರಿಮಿಕೀಟಾದಿಗಳಿಂದ ದೂಷಿತವಾದ ಆಹಾರವನ್ನು ಸೇವಿಸಿದಲ್ಲಿ ಆ ಪಾಪ ನಿವೃತ್ತಿಗಾಗಿ ಅಗಸೆಯ ಅಥವಾ ಮತ್ಸ್ಯಾಕ್ಷಿಯ ರಸವನ್ನು (ಹೊನಗೊನ್ನೆ) ಪಾನಮಾಡಬೇಕು. ಆಮಶ್ರಾದ್ಧದಲ್ಲಿ ನಿಮಂತ್ರಣಮಾಡಿದವನು ತಪ್ತಕೃಚ್ಛ್ರದಿಂದ ಶುದ್ಧಿಹೊಂದಬೇಕು. ಸಂಕಲ್ಪರೂಪವಾದ ಆ ಮಶ್ರಾದ್ಧದಲ್ಲಿ ನಿಮಂತ್ರಣಹೊಂದಿದಲ್ಲಿ ಮೂರುರಾತ್ರಿ ಉಪವಾಸವ್ರತವನ್ನಾಚರಿಸಬೇಕು. ಯಾವುದಾದರೊಂದು ವ್ರತನಿಯಮದಲ್ಲಿ ಇರತಕ್ಕವನು ಮಧುಮಾಂಸಗಳನ್ನೂ ಮತ್ತು ಬೆಳ್ಳುಳ್ಳಿ, ಬಂಗಿಸೊಪ್ಪು, ಈರುಳ್ಳಿ ಮದ್ಯವೇ ಮೊದಲಾದ ನಿಷಿದ್ಧವಸ್ತುಗಳನ್ನೂ ಬೆಳ್ಳುಳ್ಳಿಗೆ ಸಮಾನವಾದ ಗಂಧವುಳ್ಳ ಇತರ ಪದಾರ್ಥಗಳನ್ನೂ ಭುಂಜಿಸಿದ್ದೇ ಆದರೆ ಮತ್ತು ಮಾಂಸಾಹಾರಿಯಾದ ಪ್ರಾಣಿಯ ಮಾಂಸವನ್ನೂ ಭುಂಜಿಸಿದಲ್ಲಿ ಆ ಪಾಪ ನಿವೃತ್ತಿಗಾಗಿ ಚಾಂದ್ರಾಯಣವನ್ನಾಚರಿಸಬೇಕು.

ಭುಕ್ತ್ವಾ ಚಾಂದ್ರಾಯಣಂ ಕುರ್ಯಾನ್ಮಾಂಸಂ ಕ್ರವ್ಯಭುಜಸ್ತಥಾ ।
ಲೋಹಿತಾನ್ ವೃಕ್ಷನಿರ್ಯಾಸಾನ್ ಕುಸ್ಥಾನಪ್ರಭವಾಂಸ್ತಥಾ ॥ ೩೪ ॥

ಶೇಲುಂ ಗವ್ಯಂ ಚ ಪೇಯೂಷಂ ವಿಷಂ ಶ್ಲೇಷ್ಮಾತಕಂ ಮೃದಂ ।
ವೃಥಾ ಕೃಸರಸಂಯಾವಪಾಯಸಾಪೂಪಶಷ್ಕುಲೀಃ ॥ ೩೫ ॥

ಗವಾಂ ಚ ಮಹಿಷೀಣಾಂ ಚ ವರ್ಜಯಿತ್ವಾ ತಥಾಪ್ಯಜಾಂ ।
ಸರ್ವಕ್ಷೀರಾಣಿ ವರ್ಜ್ಯಾನಿ ತೇಷಾಂ ಚೈವಾಪ್ಯನಿರ್ದಶಂ ॥ ೩೬ ॥

1 ಸ್ಯಂದನೀಽಮೇಧ್ಯಭಕ್ಷ್ಯಾಯಾ ವಿವತ್ಸಾಯಾಶ್ಚ ವರ್ಜಯೇತ್ ।
ದಧಿವರ್ಜಂ ಚ ಶುಕ್ತಾನಿ ಸರ್ವಾಣ್ಯೇವ ವಿವರ್ಜಯೇತ್ ॥ ೩೭ ॥

---

೩೪-೩೬. ಮರಗಳಿಂದ ತೆಗೆದ ಕೆಂಪಾದ ರಸಗಳನ್ನೂ ಮತ್ತು ಅಶುದ್ಧವಾದ ಪ್ರದೇಶದಲ್ಲಿ ಹುಟ್ಟಿಬೆಳೆದ ಇತರ ಶಾಕಗಳನ್ನೂ ಮತ್ತು ಚಳ್ಳೆಯ ಹಣ್ಣನ್ನೂ ಗೋವಿನ ಸಂಬಂಧಿಯಾದ ಇತರ ನಿಷಿದ್ಧ ಪದಾರ್ಥಗಳನ್ನೂ, ಬಟ್ಟಿ ಇಳಿಸಿದ ರಸವನ್ನೂ, ವಿಷವನ್ನೂ ಮಣ್ಣನ್ನೂ ಸಹ ವರ್ಜಿಸಬೇಕು ಮತ್ತು ಚಿಗಳಿ, ಒಬ್ಬಟ್ಟು, ಪಾಯಸ, ತೊವ್ವೆ, ಚಕ್ಕುಲಿ ಮೊದಲಾದ ಭಕ್ಷ್ಯಗಳನ್ನೂ ಕಾರಣವಿಲ್ಲದೆ ವ್ಯರ್ಥವಾಗಿ (ತನಗೋಸ್ಕರ) ಮಾಡಿ ಭಕ್ಷಿಸಬಾರದು. ಮತ್ತು ಹಸು, ಎಮ್ಮೆ, ಆಡು, ಇವು ಹೊರತು ಇತರ ಪ್ರಾಣಿಗಳ ಹಾಲನ್ನು ತ್ಯಜಿಸಬೇಕು. ಹಸು, ಎಮ್ಮೆ ಮೊದಲಾದವುಗಳ ಹಾಲನ್ನೂ ಸಹ ಅವು ಕರು ಹಾಕಿದ ಹತ್ತು ದಿನಗಳವರಿಗೂ ವರ್ಜಿಸಬೇಕು.

೩೭-೩೮. ಗರ್ಭಧಾರಣೆಗಾಗಿ ಗೂಳಿಕಟ್ಟಿದ ಮತ್ತು ಅಮೇಧ್ಯಭಕ್ಷಣೆ ಮಾಡುವ, ಮತ್ತು ಕರುವಿಲ್ಲದೆ ಇರುವ ಹಸುವಿನ ಹಾಲನ್ನು ತ್ಯಜಿಸಬೇಕು. ಮೊಸರು ಒಂದನ್ನು ಬಿಟ್ಟು ಉಳಿದ ಹುಳಿಯಾದ ಹಾಲಿನ ಪರಿಣಾಮವನ್ನೆಲ್ಲಾ ಅವು ಸುಗಂಧಿಗಳಾದ ಪುಷ್ಪಫಲಗಳಿಂದಲೂ ಅನ್ನದಿಂದಲೂ ಮಿಶ್ರಮಾಡಲ್ಪಟ್ಟು ಭೋಗ್ಯಗಳಾಗಿದ್ದರೂ ಪರಿತ್ಯಜಿಸಬೇಕು. ಪಕ್ಷಿಗಳಲ್ಲಿ ಅಗಲವಾದ ಅಥವಾ ಜೋಲಾಡುವ ಕಾಲಿನ ಅಗ್ರಭಾಗವುಳ್ಳವುಗಳನ್ನೂ ಮತ್ತು ಕೆಂಪಾದ ಪಾದಗಳುಳ್ಳ ಪಕ್ಷಿಗಳನ್ನೂ ಬಹಳ ಬಿಳುಪಾಗಿಯೂ ಮತ್ತು ತಲೆಯ ಮೇಲೆ ಎತ್ತರವಾದ

---

1 ಇಲ್ಲಿ ಸಂಧಿನ್ಯಾ ಎಂದು ಪಾಠವಿರಬೇಕೆಂದು ತೋರುತ್ತದೆ.

ಶುಭೈಃ ಪುಷ್ಪಫಲೈರ್ಯಾನಿ ಭಕ್ತೈರಭಿಯುತಾನಿ ಚ ।
ವಿಷ್ಕಿರಾನ್ ಜಾಲಪಾದಾಂಶ್ಚ ರಕ್ತಪಾದಾಂಸ್ತಥೈವ ಚ || ೩೮ ||

ಸರ್ವಶುಕ್ಲಾಂಶ್ಚ ಚೂಡಾಲಾನ್ ಪ್ರತೋದಾಂಶ್ಚ ವಿವರ್ಜಯೇತ್ ।
ವರ್ತಿಕೋ ವರ್ತಿಕಾಚೇತಿ ತಿತ್ತಿರಿಶ್ಚ ಕಪಿಂಜಲಃ || ೩೯ ||

ಭಕ್ಷ್ಯೋ ಮಯೂರಶ್ಚ ತಥಾ ಪಕ್ಷಿಣಾಂ ಯೇ ವಿವರ್ಜಿತಾಃ ।
ಶಶಕಃ ಶಲ್ಯಕೋ ಗೋಧಾ ಖಡ್ಗಃ ಕೂರ್ಮಸ್ತಥೈವ ಚ || ೪೦ ||

ಭಕ್ಷ್ಯಾಃ ಪಂಚನಖಾಃ ಪ್ರೋಕ್ತಾಃ ಪರಿಶೇಷಾಶ್ಚ ವರ್ಜಿತಾಃ ।
ಪಾಠೀನಾನ್ರೋಹಿತಾನ್ ಮತ್ಸ್ಯಾನ್ ಲೋಹತುಂಡಾಂಶ್ಚ ಭಕ್ಷಯೇತ್ ||೪೧||

ರಾಜೀವಾಂಶ್ಚ ಸಶಲ್ಕಾಂಶ್ಚ ಭಕ್ಷ್ಯಾನಾಹುರ್ಮನೀಷಿಣಃ ।
ಅತೋಽನ್ಯಾನ್ವರ್ಜಯೇತ್ಸರ್ವಾನ್ ತಥಾ ವೈ ಜಲಚಾರಿಣಃ || ೪೨ ||

---

ಶಿಖೆಯುಳ್ಳವುಗಳನ್ನೂ ಉದ್ದವಾದ ಕುತ್ತಿಗೆಯುಳ್ಳ ಹದ್ದಿನ ಜಾತಿಗೆ ಸೇರಿದ ಪಕ್ಷಿಗಳನ್ನೂ ತ್ಯಜಿಸಬೇಕು.

೩೯-೪೦. ನಿಷಿದ್ಧಗಳಾದ ಈ ಪಕ್ಷಿಗಳನ್ನು ಬಿಟ್ಟು ವರ್ತಿಕಾ, ವರ್ತಿಕ, ತಿತ್ತಿರಿ, ಕಪಿಂಜಲ, ನವಿಲು, ಈ ಪಕ್ಷಿಗಳನ್ನು ಭಕ್ಷಣಕ್ಕೆ ಉಪಯೋಗಿಸಬಹುದು. ಮೃಗಗಳಲ್ಲಿ ಮೊಲ, ಮುಳ್ಳುಹಂದಿ, ಉಡು, ಖಡ್ಗಮೃಗ, ಆಮೆ. ಇವುಗಳನ್ನು ಉಪಯೋಗಿಸಬಹುದು.

೪೧-೪೨. ಐದು ಉಗುರುಗಳುಳ್ಳ ಪ್ರಾಣಿಗಳಲ್ಲಿ ಮೇಲೆ ಹೇಳಲಾಗಿರುವ ಐದು ಪ್ರಾಣಿಗಳೇ ಭಕ್ಷ್ಯಗಳೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿವೆ. ಉಳಿದವೆಲ್ಲವೂ ತ್ಯಾಜ್ಯಗಳು. ಜಲಚರಗಳಾದ ಪ್ರಾಣಿಗಳಲ್ಲಿ ಸಾವಿರ ಕೋರೆಯುಳ್ಳ ತುರಿಮೀನು ಮತ್ತು ಕೆಂಪುಮೀನು ಲೋಹದಂತೆ ದೃಢವಾದ ಮೂತಿಯುಳ್ಳ ಒಂದು ಬಗೆಯ ಮೀನು ಇವನ್ನು ಭಕ್ಷಿಸಬಹುದು ರಾಜಮೀನು ಮತ್ತು ಎರಡು ಪಕ್ಕಗಳಲ್ಲಿಯೂ ಪೊರೆಗಳಿಂದ ಕೂಡಿರುವ ಮೀನು ಇವನ್ನೂ ಭಕ್ಷಿಸಬಹುದೆಂದು ಪಂಡಿತರು ಹೇಳುತ್ತಾರೆ. ಉಳಿದಜಲಚರ ಪ್ರಾಣಿಗಳೆಲ್ಲವನ್ನೂ ತ್ಯಜಿಸಬೇಕು.

ಏತೇಷಾಂ ಭಕ್ಷಣಾದ್ರಾವು ತ್ರಿರಾತ್ರಂ ಕ್ಷಪಣಂ ಭವೇತ್ ।
ಚಕ್ರವಾಕಂ ಪ್ಲವಂ ಹಂಸಂ ಟಿಟ್ಟಿಭಂ ಮದ್ಗುಮೇವ ಚ ॥ ೪೩ ॥

ಕಾಕೋಲಂ ಚ ಶುಕಂ ಭಾಸಂ ದಾತ್ಯೂಹಂ ಸಾರಿಕಾಂ ತಥಾ ॥
ಬಕಶ್ಯೇನ ಬಲಾಕಾಂಶ್ಚ ಭುಕ್ತ್ವಾ ಷಡ್ರಾತ್ರಮಾಚರೇತ್ ॥ ೪೪ ॥

ಉಪವಾಸಸ್ತಥಾಕಾರ್ಯಃ ಸೂನಾಮಾಂಸಾಶನೇ ಭವೇತ್ ।
ಅಜಾವಿಕಾನುರೋಹಾಂಶ್ಚ ಪೃಷತಾರ್ನ ಮಹಿಷಾಂಸ್ತಥಾ ॥ ೪೫ ॥

ರಂಕುನ್ಯಂಕೂಂಸ್ತಥೈಣಾಂಶ್ಚ ಗವಯೂಂಶ್ಚೈವ ಭಕ್ಷಯೇತ್ ।
ಭುಕ್ತ್ವಾ ಮಾಂಸಂ ತತೋಽನ್ಯಸ್ಯ ತ್ರ್ಯಹಂ ತಿಷ್ಠೇದ್ಪುಭುಕ್ಷಿತಃ ॥ ೪೬ ॥

ಯವಗೋಧೂಮಜಂ ಸರ್ವಂ ಪಯಸಶ್ಚೈವ ವಿಕ್ರಿಯಾಃ ।
ರಾಗಷಾಡವಚುಕ್ರಾದೀನ್ ಸಸ್ನೇಹಂ ಯಚ್ಚ ಕಿಂಚನ ॥ ೪೭ ॥

---

೪೩-೪೫. ಎಲೈ ಭಾಗವತನೇ ಈ ಪ್ರಾಣಿಗಳ ಮಾಂಸವನ್ನು ಭಕ್ಷಣ ಮಾಡಿದವನು ಮೂರು ದಿವಸಗಳ ಪರ್ಯಂತ ಇತರ ಯಾವ ಮಾಂಸವನ್ನೂ ಭಕ್ಷಿಸಕೂಡದು. ಆದರೆ ಚಕ್ರವಾಕ, ಪ್ಲವ, ಹಂಸ, ಟಿಟ್ಟಿಭ, (ಸೋರೆಹಕ್ಕಿ) ಮದ್ಗುವೆಂಬ ಜಲಚರಪಕ್ಷಿ, ನೀರುಕಾಗೆ, ಗಿಣಿ, ಭಾಸಪಕ್ಷಿ, ಮರಕುಟಿಕಪಕ್ಷಿ, ಮೈನಾಪಕ್ಷಿ, ಕೊಕ್ಕರೆ, ಗಿಡಗ, ಬಲಾಕಾ ಇವುಗಳನ್ನು ಭಕ್ಷಿಸಿದ್ದೇ ಆದರೆ ಆರು ರಾತ್ರಿ ಬೇರೆ ಮಾಂಸವನ್ನು ಭಕ್ಷಿಸದೇ ಇರಬೇಕು. ವಧಗೃಹದಲ್ಲಿದ್ದ ಮಾಂಸವನ್ನು ಭಕ್ಷಿಸಿದುದೇ ಆದರೆ ಮಾರನೇ ದಿನ ಉಪವಾಸವಿರಬೇಕು. ಆಡು, ಕುರಿ ಮತ್ತು ಅವುಗಳ ಸಂತತಿಗೆ ಸೇರಿದ ಪ್ರಾಣಿಗಳನ್ನೂ ಸಾರಗ ಕಾಡೆಮ್ಮೆ ಮೊದಲಾದ ಪ್ರಾಣಿಗಳನ್ನೂ,

೪೬. ಮತ್ತು ರಂಕುವೇ ಮೊದಲಾದ ಜಿಂಕೆಯ ಪ್ರಭೇದಗಳನ್ನೂ ಮೊಲವನ್ನೂ ಭಕ್ಷಿಸಬಹುದು. ಇವುಗಳನ್ನು ಬಿಟ್ಟು ಬೇರೆ ಮಾಂಸವನ್ನು ಭುಂಜಿಸಿದ್ದೇ ಆದರೆ ಮೂರು ದಿನಗಳ ಪರ್ಯಂತ ಉಪವಾಸದಲ್ಲಿರಬೇಕು.

೪೭-೪೯. ಯವಧಾನ್ಯ ಮತ್ತು ಗೋಧಿ ಇವುಗಳಿಂದ ಮಾಡಲ್ಪಟ್ಟ ಪದಾರ್ಥಗಳನ್ನೂ ಹಾಲಿನಿಂದ ಮಾಡಲ್ಪಟ್ಟ ಎಲ್ಲಾ ಪದಾರ್ಥಗಳನ್ನೂ ದಾಳಿಂಬೆ ಮತ್ತು ದ್ರಾಕ್ಷಾರಸ ಮಿಶ್ರಣಮಾಡಿ ಉದ್ದಿನಿಂದ ಮಾಡಲ್ಪಟ್ಟ ಪದಾರ್ಥ ಮತ್ತು ಹುಳಿಯಿಂದ

ಏತದ್ವಿನಾ ಪರ್ಯುಷಿತಂ ಭುಕ್ತ್ವಾ ಚೋಪವಸೇದ್ದಿನಂ ।
ಮದ್ಯಭಾಂಡಗತಾ ನೋಹಾತ್ಪೀತ್ವಾವಾ ಪೋ ದ್ವಿಜೋತ್ತಮಃ  ॥ ೪೮ ॥

ಶಂಖಪುಷ್ಪಾಶ್ರಿತಂ ಕ್ಷೀರಂ ಪಿಬೇತ್ತು ದಿವಸತ್ರಯಂ ।
ಸುರಾಭಾಂಡಗತಾಃ ಪೀತ್ವಾ ಸಪ್ತರಾತ್ರಂ ತಥಾ ಪಿಬೇತ್  ॥ ೪೯ ॥

ಶೂದ್ರೋಚ್ಛಿಷ್ಟಾಃ ತಥಾ ಪೀತ್ವಾ ಪಂಚರಾತ್ರಂ ತಥಾ ಪಿಬೇತ್ ।
ಸ್ವಪ್ನೇ ಸಿಕ್ತ್ವಾ ಬ್ರಹ್ಮಚಾರೀ ದ್ವಿಜಃ ಶುಕ್ರಮಕಾಮತಃ  ॥ ೫೦ ॥

ಸ್ನಾತ್ವಾರ್ಕಮರ್ಚಯಿತ್ವಾ ತ್ರಿಃ ಪುನರ್ಮಾಮಿತ್ಯೃಚಂ ಜಪೇತ್ ।
ಅಗ್ನಿಹೋತ್ರಾಪವಿದ್ಧಾಗ್ನಿಃ ಬ್ರಾಹ್ಮಣಃ ಕಾಮಚಾರತಃ  ॥ ೫೧ ॥

---

ಕೂಡಿದ ಪದಾರ್ಥ ಜಿಡ್ಡಿನಿಂದ ಕೂಡಿರುವ ಇತರ ಭಕ್ಷ್ಯವಸ್ತುಗಳನ್ನೂ ಹೊರತು ಇತರವಾದ ಪರ್ಯುಷಿತವನ್ನು (ಕಾಲಪಾಕದಿಂದ ಬೇರೆ ರೂಪರಸಗಳನ್ನು ಹೊಂದಿದುದು) ಭುಂಜಿಸಿದ್ದೇ ಆದರೆ ಒಂದುದಿನ ಉಪವಾಸದಿಂದಿರಬೇಕು. ದ್ವಿಜನಾದವನು ಮದ್ಯ ಪಾತ್ರೆಯಲ್ಲಿದ್ದ ನೀರನ್ನು ಅಜ್ಞಾನದಿಂದ ಪಾನಮಾಡಿದ್ದೇ ಆದರೆ ಶಂಖಪುಷ್ಪವೆಂಬ ಮರದ ಹಾಲನ್ನು ಮೂರು ದಿನಗಳವರಿಗೂ ಪಾನಮಾಡಬೇಕು. ಹಾಗೆಯೇ ಸುರಾಭಾಂಡದಲ್ಲಿದ್ದ ನೀರನ್ನು ಪಾನಮಾಡಿದುದೇ ಆದರೆ ಅಂತಹ ಹಾಲನ್ನು ಏಳು ರಾತ್ರಿಯವರಿಗೂ ಕುಡಿಯಬೇಕು.

೫೦–೫೧. ಶೂದ್ರನ ಉಚ್ಛಿಷ್ಟರೂಪವಾದ ಅಂತಹ ನೀರನ್ನು ಪಾನಮಾಡಿದುದೇ ಆದರೆ ಮೇಲೆ ಹೇಳಿರುವ ಹಾಲನ್ನು ಐದುರಾತ್ರಿ ಕುಡಿಯಬೇಕು. ಬ್ರಹ್ಮಚರ್ಯವ್ರತದಲ್ಲಿರುವ ದ್ವಿಜನು ಅಬುದ್ಧಿಪೂರ್ವಕವಾಗಿ ಸ್ವಪ್ನದಲ್ಲಿ ಶುಕ್ರದ ಸ್ಖಲನವನ್ನು ಹೊಂದಿದಲ್ಲಿ ಅಂತಹ ವ್ರತಭಂಗ ದೋಷನಿವಾರಣೆಗಾಗಿ ಅವನು ಸ್ನಾನಮಾಡಿ ಸೂರ್ಯನನ್ನು ಪೂಜಿಸಿ "ಪುನರ್ಮಾಮೇತ್ವಿಂದ್ರಿಯಂ" ಎಂಬ ಋಕ್ಕನ್ನು ಮೂರಾವರ್ತಿ ಜಪಿಸಬೇಕು. ಅಗ್ನಿಹೋತ್ರನಿರತನಾಗಿದ್ದ ಬ್ರಾಹ್ಮಣನು ಬುದ್ಧಿಪೂರ್ವಕವಾಗಿ ಅಗ್ನಿಯನ್ನು ತ್ಯಜಿಸಿದುದೇ ಆದರೆ ಅಂತಹವನು ವೀರಾಸನದಲ್ಲಿ ನಿರತನಾಗಿ ಒಂದು ತಿಂಗಳವರಿಗೂ ಚಾಂದ್ರಾಯಣವನ್ನಾಚರಿಸಬೇಕು.

ಚಾಂದ್ರಾಯಣಂ ಚರೇನ್ಮಾಸಂ ವೀರಮುಷ್ಯಾಸನಂ ಹಿತಂ ।
ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ॥ ೫೨ ॥

ಮಹಾಂತಿ ಪಾತಕಾನ್ಯಾಹುಃ ಸಂಯೋಗಶ್ಚೈವ ತೈಃ ಸಹ ।
ಅನೃತಂ ಚ ಸಮುತ್ಕರ್ಷೇ ರಾಜಗಾಮಿ ಚ ಪೈಶುನಂ ॥ ೫೩ ॥

ಗುರೋಶ್ಚಾಲೀಕನಿರ್ಬಂಧಃ ಸಮಾನಿ ಬ್ರಹ್ಮಹತ್ಯಯಾ ।
ಬ್ರಹ್ಮೋಜ್ಝತಾ ವೇದನಿಂದಾ ಕೌಟಸಾಕ್ಷ್ಯಂ ಸುಹೃದ್ವಧಃ ॥ ೫೪ ॥

ವರ್ಜಿತಾನ್ನಾದ್ಯಯೋರ್ಜಗ್ಧಿಃ ಸುರಾಪಾನಸಮಾನಿ ಷಟ್ ।
ನಿಕ್ಷೇಪಸ್ಯಾಪಹರಣಂ ನರಾಶ್ವರಜತಸ್ಯ ಚ ॥ ೫೫ ॥

---

೫೨-೫೩. ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ, ಗುರುಪತ್ನೀಗಮನ ಇವು ಮಹಾ ಪಾತಕಗಳೆಂದೂ, ಇಂತಹ ಪಾತಕವುಳ್ಳವರೊಡನೆ ಸಂಪರ್ಕವೂ ಮಹಾ ಪಾತಕಗಳೆಂದೂ ಪ್ರಾಜ್ಞರು ಹೇಳಿರುವರು (ಈ ಸಂದರ್ಭದಲ್ಲೆಲ್ಲಾ ದುಃಖಕ್ಕೆ ಕಾರಣವಾದ ಪಾಪವೆಂಬ ದುರದೃಷ್ಟಕ್ಕೆ ಇವೆಲ್ಲಾ ಕಾರಣವಾಗುತ್ತವೆ ಎಂದು ತಾತ್ಪರ್ಯವನ್ನು ಗ್ರಹಿಸಬೇಕು) ಮತ್ತೊಬ್ಬರಿಗೆ ಉತ್ಕರ್ಷವುಂಟಾಗುವ ಸಂದರ್ಭದಲ್ಲಿ ಅಸಹನತೆಯಿಂದ ಅದಕ್ಕೆ ಭಂಗ ತರುವ ಅನೃತಭಾಷಣ (ಕುಲಗೇಡಿತನವೆಂದರ್ಥ), ಮತ್ತು ರಾಜನವರಿಗೂ ವ್ಯಾಪಿಸಿ ದೇಶಕ್ಕೂ ಪ್ರಜೆಗಳಿಗೂ ಅನರ್ಥವನ್ನುಂಟುಮಾಡುವಂತಹ ಚಾಡಿಕೋರತನ, ಮತ್ತು ಗುರುವಿಗೆ ಅಪ್ರಿಯವಾದ ಅಥವಾ ಅನೃತದ ವಿಷಯದಲ್ಲಿ ನಿರ್ಬಂಧ ಉಂಟುಮಾಡುವಿಕೆ ಇವೂ ಸಹ ಬ್ರಹ್ಮಹತ್ಯೆಗೆ ಸಮಾನವೆಂದೇ ಭಾವಿಸಬೇಕು.

೫೪-೫೫. ತನ್ನ ಶಾಖೆಗೆ ಸೇರಿದ ವೇದವನ್ನು ಪರಿತ್ಯಾಗಮಾಡುವುದು, ವೇದದ ನಿಂದೆ, ಸುಳ್ಳು ಸಾಕ್ಷಿ ಹೇಳುವುದು, ಸ್ನೇಹಿತನನ್ನು ವಧೆಗೆ ಈಡುಮಾಡುವುದು, ಶಾಸ್ತ್ರದಲ್ಲಿ ನಿಷಿದ್ಧಗಳಾಗಿರುವ ಅನ್ನ ಮತ್ತು ಇತರ ಪದಾರ್ಥಗಳ ಭಕ್ಷಣ, ಈ ಆರೂ ಸುರಾಪಾನಕ್ಕೆ ಸಮಾನವಾದುದು (ಸುರಾಪಾನಕ್ಕೆ ವಿಹಿತವಾದ ಪ್ರಾಯಶ್ಚಿತ್ತವೇ ಇವುಗಳಿಗೂ ಅನುಬಂಧಿಸುತ್ತದೆ ಎಂದು ತಾತ್ಪರ್ಯ). ನಿಕ್ಷೇಪವೆಂದರೆ, ಭೂಮಿಯೇ ಮೊದಲಾದ ರಹಸ್ಯ ಪ್ರದೇಶದಲ್ಲಿ ಇಟ್ಟು ರಕ್ಷಿಸಲ್ಪಟ್ಟ ಧನ ಕನಕಾದಿಗಳು, ಅಂತಹ ನಿಕ್ಷೇಪವನ್ನು ಅಪಹರಿಸುವಿಕೆ, ಮನುಷ್ಯರು ಮತ್ತು ಕುದುರೆಗಳು ಇವುಗಳನ್ನೂ, ಬೆಳ್ಳಿಯನ್ನೂ ಮತ್ತು ಭೂಮಿ, ವಜ್ರ, ರತ್ನಗಳು ಇವುಗಳನ್ನೂ ಮತ್ತೊಬ್ಬನಿಂದ ಅಪಹರಿಸೋಣವು ಸ್ವರ್ಣ (ಚಿನ್ನ) ಸ್ತೇಯಕ್ಕೆ ಸಮಾನವಾಗುತ್ತದೆ.

ಭೂಮಿವಜ್ರಮಣೀನಾಂ ಚ ರುಕ್ಮಸ್ತೇಯಸಮಂ ಸ್ಮೃತಂ ।
ರೇತಸ್ಸೇಕಸ್ತ್ವಯೋನೀಷು ಕುಮಾರೀಷ್ವಂತ್ಯಜಾಸು ಚ || ೫೬ ||

ಸಖ್ಯುಃ ಪುತ್ರಸ್ಯ ಚ ಸ್ತ್ರೀಷು ಗುರುತಲ್ಪಸಮಂ ವಿದುಃ ।
ಗೋವಧೋಽಯಾಜ್ಯಸಂಯಾಜ್ಯ ಪಾರದಾರ್ಯಾತ್ಮವಿಕ್ರಯಃ || ೫೭ ||

ಗುರುಮಾತೃಪಿತೃತ್ಯಾಗಃ ಸ್ವಾಧ್ಯಾಯಾಗ್ನ್ಯೋಃ ಸುತಸ್ಯ ಚ ।
ಪರಿವಿತ್ತಿತಾನುಜೇನ ಪರಿವೇದನಮೇವ ಚ || ೫೮ ||

ತಯೋರ್ದಾನಂ ಚ ಕನ್ಯಾಯಾಃ ತಯೋರೇವ ಚ ಯಾಜನಂ ।
ಕನ್ಯಾಯಾದೂಷಣಂ ಚೈವ ವಾರ್ಧುಷ್ಯಂ ವ್ರತಲೋಪನಂ || ೫೯ ||

---

೫೬–೫೮. ನಿಷಿದ್ಧ ಸ್ಥಳದಲ್ಲಿ ವೀರ್ಯಸೇಚನೆಯನ್ನು ಮಾಡುವಿಕೆ (ಇದರಿಂದ ಕಾಮುಚಾಪಲದಿಂದುಂಟಾಗಬಹುದಾದ ಎಲ್ಲಾ ದುರ್ವ್ಯಾಪಾರಗಳೂ ಸಂಗ್ರಹಿಸಲ್ಪಟ್ಟಿವೆ) ಮತ್ತು ಮದುವೆಯಾಗದಿರುವ ಯುವತಿಗಳಲ್ಲಿಯೂ ಚಂಡಾಲಾದಿ ನಿಕೃಷ್ಟ ಸ್ತ್ರೀಯರುಗಳಲ್ಲಿಯೂ ಸ್ನೇಹಿತನ ಮತ್ತು ಮಗನ ಸ್ತ್ರೀಯಲ್ಲಿಯೂ ಉಂಟಾಗಬಹುದಾದ ವೀರ್ಯಸೇಕವೂ ಗುರುತಲ್ಪದೋಷಕ್ಕೆ ಸಮವೆಂದೇ ಹೇಳಿರುವರು, ಗೋವಿನವಧ, ಯಾಗಕ್ಕೆ ಅನಧಿಕಾರಿಯಾದವನಿಂದ ಯಾಗಮಾಡಿಸುವಿಕೆ ಪರಸ್ತ್ರೀನಿರತನಾಗಿರುವಿಕೆ ತನ್ನನ್ನೇ ಅರ್ಥಕ್ಕಾಗಿ ಮಾರಿಕೊಳ್ಳುವಿಕೆ, ಗುರು, ತಾಯಿ, ತಂದೆ, ಇವರನ್ನು ಮತ್ತು ವೇದ, ತನ್ನ ಅಗ್ನಿ, ಮಗ ಇವರನ್ನೂ ಸಹ ನಿಷ್ಕಾರಣವಾಗಿ ತ್ಯಜಿಸುವಿಕೆ ಅಣ್ಣನಿಗೆ ವಿವಾಹವಾಗದಿರುವಾಗ ತಮ್ಮನು ವಿವಾಹಮಾಡಿಕೊಳ್ಳುವುದು, ಅಣ್ಣನೂ ಸಹ ಅಂತಹ ತಮ್ಮನನ್ನು ಹೊಂದಿರುವಿಕೆ— ಇವೆಲ್ಲವೂ ಉಪಪಾತಕಗಳಾಗುತ್ತವೆ. ಮತ್ತು,

೫೯–೬೦. ಅಂತಹ ಪರಿವೇತ್ತಾ ಮತ್ತು ಪರಿವಿತ್ತಿಗಳೊಡನೆ ಕನ್ಯಾಸಂಬಂಧದಿಂದ ಆದರ ಹೊಂದುವಿಕೆ. ಮತ್ತು ಅಂತಹವರಿಂದ ಯಜ್ಞಯಾಗಾದಿಗಳನ್ನು ಮಾಡಿಸುವಿಕೆ ಮತ್ತು ಅವಿವಾಹಿತಳಾದ ಕನ್ಯೆಯನ್ನು ಕೆಡಿಸುವಿಕೆ, ಬಡ್ಡಿಯಿಂದ ಜೀವಿಸುವಿಕೆ, ಮತ್ತೊಬ್ಬನ ವ್ರತನಿಯಮಗಳಿಗೆ ಭಂಗತರುವ ಪ್ರಯತ್ನ, ಕೆರೆ ಮತ್ತು ತೋಪು ಮೊದಲಾದ ಸಾರ್ವಜನಿಕ ಪದಾರ್ಥಗಳ, ಮತ್ತು ಪತ್ನಿ ಪುತ್ರರ ವಿಕ್ರಯ

**ತಡಾಗಾರಾಮದಾರಾಣಾಮಪತ್ಯಸ್ಯ ಚ ವಿಕ್ರಯಃ ।**
**ವ್ರಾತ್ಯತಾ ಬಾಂಧವತ್ಯಾಗಃ ಭೃತಾಧ್ಯಾಪನಮೇವ ಚ ॥ ೬೦ ॥**

**ಭೃತಾದಧ್ಯಯನಾದಾನಮವಿಕ್ರೇಯಸ್ಯ ವಿಕ್ರಯಂ ।**
**ಸರ್ವಾಕರೇಷ್ವಧೀಕಾರೋ ಮಹಾಯಂತ್ರಪ್ರವರ್ತನಂ ॥ ೬೧ ॥**

**ಹಿಂಸ್ರೌಷಧಿಸ್ತ್ರಿಯಾಜೀವೀ ಕ್ರಿಯಾಯಾಚನಕರ್ಮ ಚ ।**
**ಇಂಧನಾರ್ಥಮಶುಷ್ಕಾಣಾಂ ದ್ರುಮಾಣಾಂ ಚೈವ ಪಾತನಂ ॥ ೬೨ ॥**

**ಆತ್ಮಾರ್ಥಂ ಚ ಕ್ರಿಯಾರಂಭೋ ನಿಂದಿತಾನ್ನಾದನಂ ತಥಾ ।**
**ಅನಾಹಿತಾಗ್ನಿತಾ ಸ್ತೇಯಮಗಮ್ಯಾಸ್ತ್ರೀನಿಷೇವಣಂ ॥ ೬೩ ॥**

---

ಜುಗುಪ್ಸಿತವಾದ ವ್ರಾತ್ಯವೃತ್ತಿಯಿಂದಿರುವಿಕೆ, ಬಂಧುಗಳನ್ನು ನಿಷ್ಕಾರಣವಾಗಿ ಪರಿತ್ಯಾಗಮಾಡುವಿಕೆ, ಭೃತಾಧ್ಯಾಪನ (ಅಂದರೆ ಇಷ್ಟು ದ್ರವ್ಯವನ್ನು ಕೊಟ್ಟಲ್ಲಿಯೇ ಪಾಠ ಹೇಳುವೆನೆಂಬ ನಿಯಮದಿಂದ ಅಧ್ಯಯನಮಾಡಿಸುವಿಕೆ ಎಂದರ್ಥ) ಇವೂ ಸಹ ಉಪಪಾತಕಗಳಲ್ಲಿ ಸೇರುತ್ತವೆ.

೬೧–೬೨. ಅಂತಹ ಭೃತಕಾಧ್ಯಾಪಕನಿಂದ ಅಧ್ಯಯನವನ್ನು ಹೊಂದುವಿಕೆ ವಿಕ್ರಯಿಸಲು ಅನರ್ಹವಾದ ಪದಾರ್ಥಗಳನ್ನು ವಿಕ್ರಯಿಸುವುದು, ಚಿನ್ನದಗಣಿಯೇ ಮೊದಲಾದ ಎಲ್ಲಾ ನಿಧಿಸ್ಥಾನಗಳಲ್ಲಿಯೂ ಅಧಿಕಾರವಹಿಸುವಿಕೆ, ಹಿಂಸಾಕರವಾದ ಮಹಾಯಂತ್ರಗಳನ್ನು ಸಾಹಸದಿಂದ ನಿರ್ಮಾಣಮಾಡುವುದು, ಹಿಂಸೆಮಾಡುವ ದುಷ್ಟಪ್ರಾಣಿಗಳಿಂದಲೂ ಔಷಧಿಗಳಿಂದಲೂ, ಸ್ತ್ರೀಯಿಂದಲೂ ಜೀವನವನ್ನು ನಡೆಯಿಸುವಿಕೆ, ಯಾಚನದಿಂದಲೇ ಇರುವಿಕೆ, ಸೌದೆಗಾಗಿ ಹಸಿಯಮರವನ್ನು ಕಡಿದುಹಾಕುವುದು, ತನ್ನ ಸೌಕರ್ಯಕ್ಕಾಗಿಯೇ (ಸ್ವಾರ್ಥಕ್ಕಾಗಿಯೇ) ಕಾರ್ಯಗಳನ್ನು ನಡೆಸುವಿಕೆ, ಹಾಗೆಯೇ ಶಾಸ್ತ್ರನಿಷಿದ್ಧವಾದ ಅನ್ನವೇ ಮೊದಲಾದ ಪದಾರ್ಥಗಳ ಭಕ್ಷಣ, ಅನಾಹಿತಾಗ್ನಿಯಾಗಿರುವಿಕೆ,(ಅಗ್ನಿಯ ಆಧಾನಸಂಸ್ಕಾರದಿಂದ ಆಹಿತಾಗ್ನಿಯೇ ಆಗಿ ಜೀವಿಸಬೇಕೆಂದು ಶಾಸ್ತ್ರವಿದೆ. ಅದಿಲ್ಲದೆ ಇರುವಿಕೆ ಎಂದರ್ಥ.) ಮತ್ತು ಅನರ್ಹವಾದ ಅಗಮ್ಯಸ್ತ್ರೀ ಸೇವನ ಇವೂ ಸಹ ಉಪಪಾತಕಗಳು.

ಸ್ತ್ರೀಶೂದ್ರವಿಟ್‌ಕ್ಷತ್ರವಧೋ ನಾಸ್ತಿಕ್ಯಂ ಚೋಪಪಾತಕಂ ।
ಬ್ರಾಹ್ಮಣಸ್ಯ ರುಜಾಕೃತ್ಯಂ ಘ್ರಾತಿರಘ್ರೇಯಮದ್ಯಯೋಃ ॥ ೬೪ ॥

ಜೈಹ್ಮಂ ಚ ಪುಂಸಿ ಮೈಥುನ್ಯಂ ಜಾತಿಭ್ರಂಶಕರಂ ಸ್ಮೃತಂ ।
ಶ್ವಖರೋಷ್ಟ್ರಮೃಗೇಭಾನಾಮಜಾವ್ಯೋಶ್ಚೈವ ಮಾರಣಂ ॥ ೬೫ ॥

ಸಂಕೀರ್ಣಕರಣಂ ಜ್ಞೇಯಂ ಮೀನಾಹಿನಕುಲಸ್ಯ ಚ ।
ನಿಂದಿತೇಭ್ಯೋ ಧನಾದಾನಂ ವಾಣಿಜ್ಯಂ ಶೂದ್ರಸೇವನಂ ॥ ೬೬ ॥

ಅಪಾತ್ರೀಕರಣಂ ಜ್ಞೇಯಂ ಅಸತ್ಯಸ್ಯಚ ಭಾಷಣಂ ।
ಕ್ರಿಮಿಕೀಟವಯೋಹತ್ಯಾ ಮದ್ಯಾನುಗತಭೋಜನಂ ॥ ೬೭ ॥

---

೬೩-೬೪. ಮತ್ತು ಸ್ತ್ರೀಶೂದ್ರರನ್ನೂ ವೈಶ್ಯಕ್ಷತ್ರಿಯರನ್ನೂ ವಧಿಸುವ ವ್ಯಾಪಾರ, ಆಸ್ತಿಕ್ಯ ಬುದ್ಧಿಯನ್ನು ಬಿಟ್ಟು ಕೇವಲ ನಾಸ್ತಿಕನಾಗಿರುವಿಕೆ, (ಶಾಸ್ತ್ರ ಸಿದ್ಧವಾದ ಅದೃಷ್ಟ, ದೈವ ಲೋಕಾಂತರ ಇತ್ಯಾದಿಗಳನ್ನು ಒಪ್ಪದಿರುವವನಿಗೆ ನಾಸ್ತಿಕನೆಂದು ವ್ಯವಹಾರ) ಇವೂ ಸಹ ಉಪಪಾತಕದಲ್ಲಿ ಸೇರುತ್ತವೆ. ಮತ್ತು ಬ್ರಾಹ್ಮಣನಾದವನಿಗೆ ವೈದ್ಯವೃತ್ತಿ, ಆಘ್ರಾಣಿಸಲು ಅನರ್ಹವಾದ ಮದ್ಯಾದಿಗಳನ್ನು ಆಘ್ರಾಣಿಸುವಿಕೆ, ಕುಟಿಲಸ್ವಭಾವದಿಂದಿರುವಿಕೆ, ಪುರುಷನಲ್ಲಿಯೇ ಮೈಥುನವನ್ನು ನಡೆಸುವಿಕೆ ಇವೆಲ್ಲವೂ ಜಾತಿಭ್ರಂಶಕ್ಕೆ ಕಾರಣವಾದ ದುರಾಚಾರಗಳು.

೬೫-೬೭. ನಾಯಿ, ಕತ್ತೆ, ಒಂಟೆ, ಜಿಂಕೆ, ಆನೆ, ಆಡು, ಕುರಿ ಮುಂತಾದ ಪ್ರಾಣಿಗಳನ್ನು ನಿಷ್ಕಾರಣವಾಗಿ ಕೊಲ್ಲುವಿಕೆ, ಮತ್ತು ಮೀನು, ಸರ್ಪ, ಮುಂಗುಸಿ ಇವುಗಳನ್ನು ಕೊಲ್ಲುವಿಕೆಯೂ ಸಹ ಸಂಕೀರ್ಣಕರಣವೆಂಬ ಉಪಪಾತಕ—ಇತರ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಇದನ್ನು ಸಂಕರೀಕರಣವೆಂದು ವ್ಯವಹರಿಸಿರುವರು. ಜಾತ್ಯಾದಿಗಳಿಂದ ನಿಂದಿತರಾಗಿರುವವರು ಧನಾದಿಗಳನ್ನು ಕೊಟ್ಟಲ್ಲಿ ಅದನ್ನು ಸ್ವೀಕರಿಸುವಿಕೆ, ವಾಣಿಜ್ಯವೃತ್ತಿ, ಶೂದ್ರಸೇವಾ, ಇವುಗಳು ಅಪಾತ್ರೀಕರಣವೆಂಬ ಉಪಪಾತಕಗಳು. ಅಸತ್ಯವನ್ನು ನುಡಿಯುವುದು, ಕ್ರಿಮಿಕೀಟಗಳು ಮತ್ತು ಪಕ್ಷಿಗಳು ಇವನ್ನು ನಿಷ್ಕಾರಣವಾಗಿ ಕೊಲ್ಲುವುದು, ಮದ್ಯದೊಡನೆ ಭೋಜನ ಮಾಡುವಿಕೆ ಮತ್ತು,

ಫಲೈಧಕುಸುಮಸ್ತೇಯಮಧೈರ್ಯಂ ಚಪಲಾತ್ಮತಾ ।
ಏತಾನ್ಯೇನಾಂಸಿ ಸರ್ವಾಣಿ ಯಥೋಕ್ತಾನಿ ಪೃಥಕ್ಪೃಥಕ್ ॥ ೬೮ ॥

ಯೈರ್ಯೈಃ ವ್ರತೈರಪೋಹೇತ ತಾನಿ ಸಮ್ಯಜ್ನಿಬೋಧತ ।
ಬ್ರಹ್ಮಹಾ ದ್ವಾದಶಾಬ್ದಾನಿ ಕುಟಿಂ ಕೃತ್ವಾ ವನೇ ವಸೇತ್ ॥ ೬೯ ॥

ಭಿಕ್ಷೇತಾಥ ವಿಶುದ್ಧ್ಯರ್ಥಮುಪಾಸೀನೋ ವೃಷಧ್ವಜಂ ।
ಲಕ್ಷಂ ಶಸ್ತ್ರಭೃತಾಂ ವಾ ಸ್ಯಾದ್ವಿದ್ವಿಷಾಮಿಚ್ಛಯಾತ್ಮನಃ ॥ ೭೦ ॥

ಪ್ರಾಸ್ಯೇದಾತ್ಮಾನಮಗ್ನೌವಾ ಸಮಿದ್ಧೇ ತ್ರಿರವಾಚ್ಛಿರಾಃ ।
ಯಜೇತವಾಶ್ವಮೇಧೇನ ಸ್ವರ್ಜಿತಾ ಗೋಸವೇನ ಚ ॥ ೭೧ ॥

---

೬೮. ಫಲಗಳು, ಸೌದೆ, ಹೂವುಗಳು, ಇವುಗಳ ಅಪಹರಣ, (ಕದಿಯುವಿಕೆ) ಧೈರ್ಯವಿಲ್ಲದೆ ಯಾವಾಗಲೂ ಭಯದಿಂದಿರುವಿಕೆ, ಚಪಲಸ್ವಭಾವ. ಇವುಗಳೂ ಸಹ ಬೇರೆಬೇರೆ ಉಪಪಾತಕಗಳಾಗುತ್ತವೆ. ಈ ಪಾಪಗಳೆಲ್ಲವೂ ಪ್ರಾಯಶ್ಚಿತ್ತ ರೂಪಗಳಾದ ಯಾವ ಯಾವ ವ್ರತಗಳಿಂದ ಹೋಗಲಾಡಿಸಲ್ಪಡುವುವೋ ಅಂತಹ ವ್ರತಗಳನ್ನು ಹೇಳುತ್ತೇನೆ ಇದನ್ನು ಸರಿಯಾಗಿ ತಿಳಿದುಕೊ.

೬೯-೭೧. ಬ್ರಹ್ಮಹತ್ಯೆಯನ್ನು ಮಾಡಿದವನು ಆ ಪಾಪನಿವೃತ್ತಿಗಾಗಿ ಈ ರೀತಿ ವ್ರತವನ್ನಾಚರಿಸಬೇಕು. ಹನ್ನೆರಡು ವರ್ಷಪರ್ಯಂತ ಅರಣ್ಯದಲ್ಲಿ ಗುಡಿಸಲಿನಲ್ಲಿ ವಾಸಮಾಡಬೇಕು. ಶಂಕರನನ್ನು ಉಪಾಸನೆ ಮಾಡುತ್ತಾ ಆತ್ಮಶುದ್ಧಿಗಾಗಿ ಭಿಕ್ಷಾಟನದಿಂದ ಜೀವಿಸಬೇಕು. ಅಥವಾ ಶಸ್ತ್ರಧಾರಿಗಳಾದ ಭಟರೂ, ಹಾಗೂ ಶತ್ರುಗಳೂ ತೊಂದರೆ ಪಡಿಸಲು ಸಿದ್ಧರಾಗಿದ್ದರೂ, ಅವರನ್ನು ಲಕ್ಷ್ಯದಲ್ಲಿಡದೆ, ಆತ್ಮೇಚ್ಛೆಯಿಂದ ಜ್ವಲಿಸುತ್ತಿರುವ ಅಗ್ನಿಯಲ್ಲಿ ತನ್ನ ಶರೀರವನ್ನು ತಲೆಕೆಳಗಾಗಿ ಮೂರು ಆವರ್ತಿ ಹಾಕಬೇಕು. (ಮೂರಾವರ್ತಿ ಅಗ್ನಿಪ್ರವೇಶ ಮಾಡಬೇಕೆಂದು ತಾತ್ಪರ್ಯ) ಅಥವಾ ಅಶ್ವಮೇಧದಿಂದಾಗಲಿ, ಸ್ವರ್ಗಸಾಧಕವಾದ ಗವಾಲಂಭನ ಯಜ್ಞದಿಂದಾಗಲಿ ಆ ಪಾಪವನ್ನು ಹೋಗಲಾಡಿಸಿಕೊಳ್ಳಬೇಕು.

ಅಭಿಜಿದ್ವಿಶ್ವಜಿದ್ಭ್ಯಾಂವಾ ತ್ರಿವೃತಾಗ್ನಿಷ್ಟುತಾಪಿ ವಾ ।
ಜಪನ್ನನ್ಯತಮಂ ವೇದಂ ಯೋಜನಾನಾಂ ಶತಂ ವ್ರಜೇತ್ ॥ ೭೨ ॥

ಬ್ರಹ್ಮಹತ್ಯಾಪನುತ್ತ್ಯರ್ಥಂ ಮಿತಭುಙ್ನಿಯತೇಂದ್ರಿಯಃ ।
ಸರ್ವಸ್ವಂ ವಾ ವೇದವಿದೇ ಬ್ರಾಹ್ಮಣಾಯೋಪಪಾದಯೇತ್ ॥ ೭೩ ॥

ಧನಂ ವಾ ಜೀವನಾಯಾಲಂ ಗೃಹಂ ವಾ ಸಪರಿಚ್ಛದಂ ।
ವ್ರತೈರೇತೈರಪೋಹೇತ ಮಹಾಪಾತಕಿನಾಂ ದ್ವಿಜ ॥ ೭೪ ॥

ಉಪಪಾತಕಸಂಯುಕ್ತೋ ಗೋಘ್ನೋ ಮಾಸಂ ಯವಾನದೇತ್ ।
ಕೃತವಾಪೋವಾ ನಿವಸೇಚ್ಚರ್ಮಣಾ ತೇನ ಸಂವೃತಃ ॥ ೭೫ ॥

ಚತುರ್ಥಕಾಲಮಶ್ನೀಯಾದಕ್ಷಾರಲವಣಂ ಮಿತಂ ।
ಗೋಮೂತ್ರೇಣ ಚರೇತ್ಸ್ನಾನಂ ದ್ವೌ ಮಾಸೌ ನಿಯತೇಂದ್ರಿಯಃ ॥ ೭೬ ॥

---

೭೨-೭೪. ಅಥವಾ ಅಭಿಜಿತ್ ವಿಶ್ವಜಿತ್ ಎಂಬ ಯಾಗಗಳಿಂದಲಾಗಲಿ, ತ್ರಿವೃತ್ ಅಗ್ನಿಷ್ಟುತ್ ಎಂಬ ಯಾಗಗಳಿಂದಲಾಗಲಿ, ಆ ಪಾಪವನ್ನು ನೀಗಿಕೊಳ್ಳಬೇಕು. ಅಥವಾ ತನಗೆ ವಿಹಿತವಾದ ಯಾವುದಾದರೊಂದು ವೇದವನ್ನು ಜಪಿಸುತ್ತಾ ನೂರುಯೋಜನ ದೂರ ಸಂಚರಿಸಬೇಕು. ಈ ವ್ರತಗಳನ್ನಾಚರಿಸುವಾಗ ಜಿತೇಂದ್ರಿಯನಾಗಿಯೂ, ಮಿತಾಹಾರವುಳ್ಳವನಾಗಿಯೂ ಇರಬೇಕು. ಈ ವ್ರತಾಚರಣದಲ್ಲಿ ಸಾಮರ್ಥ್ಯವಿಲ್ಲದವನು ತನ್ನ ಸರ್ವಸ್ವವನ್ನೂ ವೇದಜ್ಞನಾದ ಬ್ರಾಹ್ಮಣನಿಗೆ ದಾನಮಾಡಬೇಕು. ಅಥವಾ ಅಂತಹ ಬ್ರಾಹ್ಮಣನಿಗೆ ಜೀವನಕ್ಕೆ ಸಾಗುವಷ್ಟು ಧನವನ್ನಾಗಲಿ, ಸರ್ವೋಪಕರಣಗಳಿಂದ ಕೂಡಿರುವ ಮನೆಯನ್ನಾಗಲಿ ದಾನ ಮಾಡಬೇಕು ಇಂತಹ ವ್ರತಗಳಿಂದ ಮಹಾ ಪಾತಕವನ್ನು ಹೋಗಲಾಡಿಸಬೇಕು.

೭೫-೭೬. ಉಪಪಾತಕಗಳನ್ನು ಮಾಡಿದವರಲ್ಲಿ ಗೋವಿನ ಹನನಕ್ಕೆ ಕಾರಣನಾದವನು (ನಿಮಿತ್ತ ಭೂತನೆಂದು ತಾತ್ಪರ್ಯ) ಒಂದು ತಿಂಗಳವರಿಗೂ ಯವಧಾನ್ಯಭಕ್ಷಣದಿಂದ ವ್ರತಶಾಲಿಯಾಗಿರಬೇಕು. ಗೋವನ್ನು ಸಾಕ್ಷಾತ್ತಾಗಿ ಕೊಂದು ಪಾಪಹೊಂದಿದವನು ಆ ಗೋವಿನ ಚರ್ಮವನ್ನೇ ಹೊದ್ದು ವಾಸಿಸಬೇಕು ನಾಲ್ಕನೆಯ ಯಾಮದಲ್ಲಿ ಊಟಮಾಡಬೇಕು. ಹಾಗೂ ಕಾರ, ಉಪ್ಪು ಇವನ್ನು ಬಿಟ್ಟು ಮಿತವಾದ ಭಕ್ಷಣನಿಯಮದಲ್ಲಿರಬೇಕು. ಗೋಮೂತ್ರದಿಂದಲೇ ಸ್ನಾನ ಮಾಡುತ್ತಾ ಎರಡುತಿಂಗಳವರಿಗೂ ಜಿತೇಂದ್ರಿಯನಾಗಿರಬೇಕು.

ದಿವಾನುಗಚ್ಛೇತ್ತಾಗಾಶ್ಚ ತಿಷ್ಠನ್ನೂರ್ಧ್ವಮಪಃಪಿಬೇತ್ |
ಶುಶ್ರೂಷಿತ್ವಾ ನಮಸ್ಕೃತ್ಯ ರಾತ್ರೌ ವೀರಾಸನಂ ಚರೇತ್ || ೭೭ ||

ತಿಷ್ಠಂತೀಷ್ವನುತಿಷ್ಠೇತ್ತು ವ್ರಜಂತೀಷ್ವಪ್ಯನುವ್ರಜೇತ್ |
ಆಸೀನಾಸು ತಥಾಸೀನೋ ನಿಯತೋ ವೀತಮತ್ಸರಃ || ೭೮ ||

ಆತುರಾಮಭಿಷಿಕ್ತಾಂಚ ಚೋರವ್ಯಾಘ್ರಾದಿಭಿರ್ಭಯೈಃ |
ಪತಿತಾಂ ಪಂಕಲೀನಾಂ ವಾ ಸರ್ವಪ್ರಾಣೈರ್ವಿಮೋಕ್ಷಯೇತ್ || ೭೯ ||

ಉಷ್ಣೈಃ ವರ್ಷಾತಿಶೀತೈರ್ವಾ ಮಾರುತೇ ವಾತಿ ವಾ ಭೃಶಂ |
ನಕುರ್ವೀತಾತ್ಮನಃ ತ್ರಾಣಂ ಗೋರಕೃತ್ವಾತು ಶಕ್ತಿತಃ || ೮೦ ||

ಆತ್ಮನೋ ಯದಿವಾನ್ಯೇಷಾಂ ಗೃಹೇ ಕ್ಷೇತ್ರೇऽಥವಾ ಖಲೇ |
ಖಾದಮಾನಾಂ ನ ಶಂಸೇತ ಪಿಬಂತಂ ಚೈವ ವತ್ಸಕಂ || ೮೧ ||

೭೭-೭೮ ಹಗಲಿನಲ್ಲಿ ಗೋವುಗಳು ಹೊರಕ್ಕೆ ಮೇಯುವುದಕ್ಕೆ ಹೊರಟಾಗ ತಾನೂ ಅವುಗಳನ್ನು ಅನುಸರಿಸಿ ಹೋಗುತ್ತ ಅವನ್ನು ಸೇವಿಸಬೇಕು. ನಿಂತುಕೊಂಡು ಮೇಲ್ಮುಖನಾಗಿ ಜಲಪಾನಮಾಡಬೇಕು. ರಾತ್ರಿಯಲ್ಲಿ ಅವುಗಳ ಶುಶ್ರೂಷೆಯನ್ನು ಮಾಡಿ ನಮಸ್ಕರಿಸಿ ವೀರಾಸನದಿಂದಲೇ ರಾತ್ರಿಯನ್ನು ಕಳೆಯಬೇಕು. ಆ ಗೋವುಗಳು ನಿಂತಿರುವಾಗ ತಾನೂ ನಿಂತಿರಬೇಕು. ಅವು ನಡೆಯುತ್ತಿರುವಾಗ ತಾನೂ ಅನುಸರಿಸಿ ನಡೆಯಬೇಕು. ಮಲಗಿದ ಕಾಲದಲ್ಲಿ ತಾನೂ ಕುಳಿತುಕೊಳ್ಳಬೇಕು. ಈ ರೀತಿಯಾದ ನಿಯಮದಿಂದ ಮತ್ಸರವಿಲ್ಲದೆ ವರ್ತಿಸಬೇಕು

೭೯-೮೦. ಗೋವುಗಳ ಶುಶ್ರೂಷೆಯಲ್ಲಿರುವಾಗ ಅವು ವ್ಯಾಧಿಯಿಂದ ಪೀಡಿತಗಳಾಗಿರಲಿ ಅಥವ ಮಳೆ ಮೊದಲಾದ ನೀರಿನಿಂದ ತೊಯ್ದಿರಲಿ ಆ ಸಮಯದಲ್ಲೂ ಅಂತಹವುಗಳನ್ನು ಯಥಾಶಕ್ತಿ ಶುಶ್ರೂಷಿಸಬೇಕು.

೮೧-೮೨. ತನ್ನ ಅಥವಾ ಇತರರ ಮನೆಯಲ್ಲಾಗಲಿ, ಹೊಲಗದ್ದೆಗಳಲ್ಲಾಗಲಿ, ಕಣವಲ್ಲಾಗಲಿ ಮೇಯುತ್ತಿರುವ ಗೋವನ್ನು ಅದನ್ನು ಓಡಿಸುವಂತಹ ಇತರ ಜನಗಳಿಗೆ ಹೇಳಬಾರದು ತಾಯಿಯ ಹಾಲನ್ನು ಕುಡಿಯುತ್ತಿರುವ ಕರುವನ್ನು ತಿಳಿಯದಿರುವ ಇತರರಿಗೆ ಹೇಳಬಾರದು. ಈ ರೀತಿಯಾದ ವ್ರತವನ್ನಾಚರಿಸಿ

ವೃಷಭೈಕಾದಶಾಗಾಸ್ತು ದದ್ಯಾದ್ಧಿ ಚರಿತವ್ರತಃ ।
ಅವಿದ್ಯಮಾನೇ ಸರ್ವಸ್ವಂ ವೇದವಿದ್ಭ್ಯೋ ನಿವೇದಯೇತ್ || ೮೨ ||

ಬಂಧನೇ ರೋಧನೇ ವಾಪಿ ಯೋಜನೇ ಚ ಗವಾಂ ರುಜಾ ।
ಭವೇದ್ವಾ ಮರಣಂ ಯತ್ರ ನಿಮಿತ್ತೀ ತತ್ರ ಲಿಪ್ಯತೇ || ೮೩ ||

ಪಾದಮೇಕಂ ಚರೇದ್ರೋಷ್ಠೇ ದ್ವೌ ಪಾದೌ ಬಂಧನೇ ಚರೇತ್ ।
ಯೋಜನೇ ಪಾದಹೀನಂ ಸ್ಯಾತ್ ಚರೇತ್ಸರ್ವಂ ನಿಪಾತನೇ || ೮೪ ||

ಕಾಂತಾರೇಷ್ವಥ ದುರ್ಗೇಷು ವಿಷಮೇಷು ಗುಹಾಸು ಚ ।
ಯದಿ ತತ್ರ ವಿಪತ್ತಿಸ್ಸ್ಯಾತ್ ಏಕಃ ಪಾದೋ ವಿಧೀಯತೇ || ೮೫ ||

---

ಒಂದು ಎತ್ತಿನಿಂದ ಕೂಡಿದ ಹನ್ನೊಂದು ಗೋವುಗಳನ್ನು ದಾನಮಾಡಬೇಕು (ಹತ್ತು ಹಸುಗಳು ಒಂದು ಹೋರಿ ಒಟ್ಟು ಹನ್ನೊಂದೆಂದು ತಾತ್ಪರ್ಯ) ಅಷ್ಟನ್ನು ದಾನವ..ಡಲು ಅನುಕೂಲವಿಲ್ಲದಿದ್ದಲ್ಲಿ ತನ್ನ ಸರ್ವಸ್ವವನ್ನೂ ವೇದಜ್ಞನಾದ ಬ್ರಾಹ್ಮಣನಿಗೆ ದಾನಮಾಡಬೇಕು.

೮೩-೮೪. ಅಂತಹ ಗೋವುಗಳಿಗೆ ಬಂಧನ (ಕಟ್ಟಿ ನಿರ್ಬಂಧಿಸುವುದು) ರೋಧನ (ತಡೆಯುವುದು) ಮತ್ತು ಇತರ ಗೋವುಗಳೊಡನೆ ಕಲಹದಿಂದ ಗಾಯವೇ ಮೊದಲಾದುದೂ ಅಥವಾ ಮರಣವೇ ಆದರೂ ಸಂಭವಿಸಿದಲ್ಲಿ ಇವುಗಳಿಗೆ ಕಾರಣನಾದವನು ಆ ಪಾಪಕ್ಕೆ ಭಾಗಿಯಾಗುತ್ತಾನೆ. ಇಂತಹ ಸಂದರ್ಭದಲ್ಲಿ ಹಸುವಿನ ಕೊಟ್ಟಿಗೆಯಲ್ಲೇ ತಡೆದು ರೋಧನ ಮಾಡಿದಲ್ಲಿ ಅದಕ್ಕೆ ಕಾರಣನಾದವನು ಮೇಲೆಹೇಳಿರುವ ಪ್ರಾಯಶ್ಚಿತ್ತ ರೂಪವಾದ ವ್ರತದಲ್ಲಿ ನಾಲ್ಕನೇ ಒಂದುಭಾಗ (15 ದಿವಸ) ಆಚರಿಸಬೇಕು. ಹೊರಗೆ ಕಟ್ಟಿ ಬಂಧನ ಮಾಡಿದಲ್ಲಿ ಅದರಿಂದ ಉಂಟಾಗುವ ಪಾಪ ನಿವೃತ್ತಿಗಾಗಿ ಮೇಲೆ ಹೇಳಿರುವ ವ್ರತದಲ್ಲಿ ಅರ್ಧಭಾಗವನ್ನಾಚರಿಸಬೇಕು. ಇತರ ಗೋವುಗಳ ಸಂಬಂಧದಿಂದ ಗಾಯವೇ ಮೊದಲಾದ ವ್ಯಾಧಿಯುಂಟಾದಲ್ಲಿ ಅದಕ್ಕೆ ಕಾರಣನಾದವನು ಮೇಲಿನ ವ್ರತದಲ್ಲಿ ಮೂರು ಭಾಗವನ್ನಾಚರಿಸಬೇಕು. ಮರಣವೇ ಸಂಭವಿಸಿದಲ್ಲಿ ಪೂರ್ಣವಾದ ವ್ರತವನ್ನೇ ಆಚರಿಸಬೇಕು.

೮೫-೮೬. ಅಂತಹ ಗೋವುಗಳಿಗೆ ಕಾಡಿನಲ್ಲಾಗಲಿ ದುರ್ಗಸ್ಥಾನದಲ್ಲಾಗಲಿ, ಕೊರಕಲೇ ಮೊದಲಾದ ಸಂಕಟಸ್ಥಾನಗಳಲ್ಲಾಗಲೀ, ಗುಹೆಗಳಲ್ಲಾಗಲೀ, ಸಾಮಾನ್ಯವಾದ ತೊಂದರೆಯುಂಟಾದಲ್ಲಿ ಮೇಲೆಹೇಳಿರುವ ವ್ರತದಲ್ಲಿ ನಾಲ್ಕನೇ ಒಂದು ಭಾಗ

ಬಾಧಾಮರಣದೋಷೇಷು ತಥೈವಾರ್ಧ ವಿನಿರ್ದಿಶೇತ್ ।
ದಮನೇ ವಾಹನೇ ರೋಧೇ ಶಕಟಸ್ಯ ಚ ಯೋಕ್ತ್ರಣೇ ॥ ೮೬ ॥

ನದ್ಯಾಂ ಶಕಲಪಾಶೇಷು ಮೃತೇ ಪಾದೌ ಸಮಾಚರೇತ್ ।
ವ್ಯಾಪನ್ನಾನಾಂ ಬಹೂನಾಂ ತು ಬಂಧನೇ ರೋಧನೇಪಿ ವಾ ॥ ೮೭ ॥

ಭಿಷಙ್ಮಿಥ್ಯಾಚರಂಶ್ಚೇಹ ದ್ವಿಗುಣಂ ಗೋವ್ರತಂ ಚರೇತ್ ।
ಶೃಂಗಭಂಗೇಽಸ್ಥಿಭಂಗೆ ವಾ ಲಾಂಗೂಲಚ್ಛೇದನೇಽಥವಾ ॥ ೮೮ ॥

ಯಾವಕಂ ತು ಪಿಬೇತ್ತಾವತ್ ಯಾವತ್ಸ್ವಸ್ಥಾ ತು ಗೌರ್ಭವೇತ್ ।
ಏಕಾಚೇದ್ಬಹುಭಿರ್ದೈವಾದ್ಯತ್ರ ವ್ಯಾಪಾದಿತಾ ಭವೇತ್ ॥ ೮೯ ॥

---

ವನ್ನಾಚರಿಸಬೇಕು ಅಂತಹ ಸ್ಥಾನಗಳಲ್ಲಿ ಪ್ರಬಲವಾದ ಬಾಧಕ ಮತ್ತು ಮರಣ ಮೊದಲಾದ ದೋಷಗಳು ಗೋವಿಗೆ ಸಂಭವಿಸಿದಲ್ಲಿ ಅಂತಹವನಿಗೆ ಅರ್ಧಭಾಗ ಪ್ರಾಯಶ್ಚಿತ್ತವನ್ನು ವಿಧಿಸಬೇಕು. ಮತ್ತು ಗೋವನ್ನು ಶಿಕ್ಷಿಸುವುದರಿಂದಲೂ, ತಡೆದು ತೊಂದರೆ ಕೊಡುವುದರಿಂದಲೂ, ವಾಹನವನ್ನಾಗಿ ಮಾಡಿಕೊಳ್ಳುವುರಿಂದಲೂ, ಗಾಡಿಗೆ ಕಟ್ಟುವ ಸಂದರ್ಭದಲ್ಲಿಯೂ, ನದಿಯಲ್ಲಿ ಬೀಳುವುದರಿಂದಲೂ, ಕಲ್ಲು, ಹೆಂಟೆ ಇತ್ಯಾದಿಗಳಿಂದ ಪ್ರಹರಿಸುವುದರಿಂದಲೂ, ಪಾಶದಿಂದ ಬಿಗಿಯುವುದರಿಂದಲೂ ಅದಕ್ಕೆ ಮರಣವುಂಟಾದಲ್ಲಿ ಮೇಲಿನ ವ್ರತದಲ್ಲಿ ಅರ್ಧವನ್ನು ಪ್ರಾಯಶ್ಚಿತ್ತರೂಪವಾಗಿ ಆಚರಿಸಬೇಕು.

೮೭-೮೮. ವ್ಯಾಧಿಗ್ರಸ್ತವಾದ ಅನೇಕ ಗೋವುಗಳು ಬಂಧನಕ್ಕಾಗಲಿ, ರೋಧನ (ತಡೆಯುವಿಕೆ) ಕ್ಕಾಗಲಿ ಗುರಿಯಾಗಿ ಮೃತಿಹೊಂದಿದಲ್ಲಿ ಅಂತಹ ಗೋವಿನ ವಿಷಯದಲ್ಲಿ ಸರಿಯಾದ ಚಿಕಿತ್ಸೆಕೊಡದೆ ವಂಚನೆಮಾಡಿದ ವೈದ್ಯನು ದ್ವಿಗುಣವಾದ ಗೋವ್ರತವನ್ನಾಚರಿಸಬೇಕು. ಆದರೆ ಅಂತಹ ಸಂದರ್ಭದಲ್ಲಿ ಮರಣವುಂಟಾಗದೆ ಕೊಂಬು, ಮೂಳೆ, ಬಾಲ, ಮೊದಲಾದ ಅವಯವಗಳಿಗೆ ಭಂಗವುಂಟಾದಲ್ಲಿ ಆ ಗೋವಿಗೆ ಗುಣವಾಗುವವರಿಗೂ ಅದಕ್ಕೆ ಕಾರಣರಾದ ವೈದ್ಯ ಮೊದಲಾದವರು ಅರಗಿನ ರಸವನ್ನು ಕುಡಿಯಬೇಕು.

೮೯-೯೦. ಅನೇಕರು ಸೇರಿ ಒಂದು ಗೋವಿನ ಹನನಕ್ಕೆ ಆಕಸ್ಮಿಕವಾಗಿ ಕಾರಣರಾದಲ್ಲಿ ಅವರೆಲ್ಲರೂ ವಿಹಿತವಾಗಿರುವ ಗೋವ್ರತದಲ್ಲಿ ನಾಲ್ಕನೇ ಒಂದು ಭಾಗವನ್ನು ಬೇರೆಬೇರೆ ಆಚರಿಸಬೇಕು, ಯಂತ್ರದಿಂದ ಗೋವಿಗೆ ಚಿಕಿತ್ಸೆಮಾಡುವ

ಪಾದಂ ಪಾದಂ ತು ಹತ್ಯಾಯಾಂ ಚರೇಯುಸ್ತೇ ಪೃಥಕ್ಪೃಥಕ್ ।
ಯಂತ್ರೇಣ ಗೋಶ್ಚಿಕಿತ್ಸಾರ್ಥೇ ಮೂಢಗರ್ಭವಿಮೋಕ್ಷಣೇ ॥ ೯೦ ॥

ಯದಿ ತತ್ರ ವಿಪತ್ತಿಸ್ಸ್ಯಾತ್ ದೋಷಸ್ತತ್ರ ನ ವಿದ್ಯತೇ ।
ಔಷಧಂ ಸ್ನೇಹಮಾಹಾರಂ ದದ್ಯಾಚ್ಚ ಬ್ರಾಹ್ಮಣಾದಿಷು ॥ ೯೧ ॥

ದೀಯಮಾನೇ ವಿಪತ್ತಿಸ್ಸ್ಯಾತ್ ದಾತುರ್ದೋಷೋ ನವಿದ್ಯತೇ ।
ಏತದೇವವ್ರತಂ ಕುರ್ಯುರುಪಪಾತಕಿನಸ್ತಥಾ ॥ ೯೨ ॥

ಅವಕೀರ್ಣೀ ವಿಶುದ್ಧ್ಯರ್ಥಂ ಚಾಂದ್ರಾಯಣಮಥಾಪಿ ವಾ ।
ಅವಕೀರ್ಣೀ ತು ಕಾಲೇನ ಸಪ್ತಮೇನ ಚತುಷ್ಪಥೇ ॥ ೯೩ ॥

ಪಾಕಯಜ್ಞವಿಧಾನೇನ ಯಜತೇ ನಿಭೃತಂ ನಿಶಿ ।
ಹುತ್ವಾಗ್ನೌ ವಿಧಿವದ್ಧೋಮಾಂಸ್ತತಸ್ತು ಸಮಿತಿತ್ಯೃಚಂ ॥ ೯೪ ॥

---

ಸಂದರ್ಭದಲ್ಲಿ ಗರ್ಭಿಣಿಯಾಗಿದ್ದ ಆ ಗೋವಿಗೆ ಆಕಸ್ಮಿಕವಾಗಿ ಗರ್ಭಕ್ಕೆ ತೊಂದರೆಯುಂಟಾದಲ್ಲಿ ಅಥವಾ ಆ ಚಿಕಿತ್ಸೆಯಿಂದ ಗೋವಿಗೇ ವಿಪತ್ತು ಸಂಭವಿಸಿದಲ್ಲಿ ಅಂತಹ ಆ ದೋಷವು ಯಾರಿಗೂ ಅನುಬಂಧಿಸುವುದಿಲ್ಲ.

೯೧-೯೨. ಹೀಗೆಯೇ ಬ್ರಾಹ್ಮಣಾದಿಗಳಿಗೆ ವ್ಯಾಧಿಕಾಲದಲ್ಲಿ ಔಷಧವನ್ನಾಗಲಿ ಹಿತವಾದ ಆಹಾರವನ್ನಾಗಲಿ ಕೊಡತಕ್ಕ ಸಂಭವದಲ್ಲಿ ಔಷಧಾದಿಗಳನ್ನು ಕೊಡುವ ಕಾಲದಲ್ಲೇ ಅವರಿಗೆ ವಿಪತ್ತುಂಟಾದಲ್ಲಿ ಅಂತಹ ಬ್ರಹ್ಮಹತ್ಯಾದಿದೋಷಗಳು ಔಷಧಾದಿಗಳನ್ನು ಕೊಡುವವನಿಗೆ ಉಂಟಾಗುವುದಿಲ್ಲ. ಉಪಪಾತಕವನ್ನು ಹೊಂದಿರುವ ಇತರರೂ ಈ ವ್ರತವನ್ನೇ ಆಚರಿಸಬೇಕು. ಕೆಲವು ಪಾಪಿಗಳಿಗೆ ಮುಂದೆ ಹೇಳಲಾಗುತ್ತದೆ.

೯೩-೯೪. ವ್ರತಭ್ರಂಶವನ್ನು ಹೊಂದಿದವನು, ಆ ಪಾಪನಿವೃತ್ತಿಯಿಂದ ಶುದ್ಧಿಹೊಂದಲು ಚಾಂದ್ರಾಯಣವನ್ನಾಚರಿಸಬೇಕು. ಅಥವಾ ಅಂತಹ ವ್ರತಭಂಗ ಹೊಂದಿದವನು ದಿವಸದ ಏಳನೇ ಯಾಮದಲ್ಲಿ ನಾಲ್ಕು ದಾರಿಗಳು ಸೇರುವ ಸ್ಥಳದಲ್ಲಿ ರಾತ್ರಿಯಲ್ಲಿ ಗುಟ್ಟಾಗಿ ಪಾಕಯಜ್ಞವಿಧಾನವನ್ನನುಸರಿಸಿ ಯಾಗಮಾಡಬೇಕು. ಅಗ್ನಿಯಲ್ಲಿ ಹೋಮಮಾಡಿದ ನಂತರ ಸಮಿತಿ—ಎಂಬ ಋಕ್ಕನ್ನುಚ್ಚರಿಸಿ ವಾಯು, ಇಂದ್ರ, ಬೃಹಸ್ಪತಿ ಅಗ್ನಿ ಇವರನ್ನುದ್ದೇಶಿಸಿ ಆಜ್ಯಾಹುತಿಗಳನ್ನು ಮಾಡಬೇಕು.

ವಾತೇಂದ್ರಗುರುವಹ್ನೀನಾಂ ಜುಹುಯಾತ್ಸರ್ಪಿಷಾಹುತೀಃ ।
ಕಾಮತೋ ರೇತಸಸ್ಸೇಕೇ ವ್ರತಸ್ಥಸ್ಯ ದ್ವಿಜನ್ಮನಃ ॥ ೯೫ ॥

ಅಕ್ರಮಂ ಚ ವ್ರತಸ್ಯಾಹುರ್ಧರ್ಮಜ್ಞಾ ಸ್ಸತ್ಯವಾದಿನಃ ।
ಏತಸ್ಮಿನ್ನೇವ ಸಿದ್ಧ್ಯಾರ್ಥೇ ವಸಿತ್ವಾ ಗರ್ದಭಾಜಿನಂ ॥ ೯೬ ॥

ಸಪ್ತಾಗಾರಂ ಚರೇದ್ಭೈಕ್ಷ್ಯಂ ಸ್ವಕರ್ಮ ಪರಿದೇವಯನ್ ।
ತೇಭ್ಯೋ ಲಬ್ಧೇನ ಭೈಕ್ಷ್ಯೇಣ ವರ್ತಯನ್ನೇವ ಕಾಲಿಕಂ ॥ ೯೭ ॥

ಉಪಸ್ಪೃಶಂಸ್ತ್ರಿಷವಣಮಬ್ದೇನ ಸ ವಿಶುಧ್ಯತಿ ।
ಹತ್ವಾ ಗರ್ಭಮವಿಜ್ಞಾತಂ ಬ್ರಹ್ಮಹತ್ಯಾವ್ರತಂ ಚರೇತ್ ॥ ೯೮ ॥

ರಾಜನ್ಯವೈಶ್ಯೌ ಚೇಜಾನಾವಾತ್ರೇಯೀಮೇವ ಚ ಸ್ತ್ರಿಯಂ ।
ಉಕ್ತ್ವಾ ಚೈವಾನೃತಂ ಸಾಕ್ಷ್ಯೇ ಪ್ರತಿವದ್ಯ ಗುರೂಂಸ್ತಥಾ ॥ ೯೯ ॥

---

೯೫-೯೬. ವ್ರತನಿಯಮದಲ್ಲಿ ಆಸಕ್ತನಾಗಿರುವ ದ್ವಿಜನಿಗೆ ಕಾಮಪರವಶತೆಯಿಂದ ವೀರ್ಯಸೇಕವುಂಟಾದಲ್ಲಿ ಅದು ಅವನ ವ್ರತಕ್ಕೇ ಭಂಗ ತರತಕ್ಕದ್ದೆಂದು ಧರ್ಮಜ್ಞರಾದ ಸತ್ಯಸಂಧರು ಹೇಳುತ್ತಾರೆ. ಅಂತಹ ವ್ರತಭಂಗ ಹೊಂದಿದವನು ಪಾಪನಿವೃತ್ತಿಯಿಂದ ವ್ರತಸಿದ್ಧಿಗಾಗಿ ಕತ್ತೆಯ ಚರ್ಮವನ್ನು ಧರಿಸಿ ತನ್ನ ದುಷ್ಕರ್ಮವನ್ನು ಹೇಳಿಕೊಂಡು ರೋದನ ಮಾಡುತ್ತಾ ಏಳು ಮನೆಗಳಲ್ಲಿ ಭಿಕ್ಷಬೇಡಿ ಸಂಚರಿಸಬೇಕು.

೯೭-೯೮. ಆ ಮನೆಗಳಿಂದ ಭಿಕ್ಷಾಟನದಲ್ಲಿ ಬಂದ ಅಹಾರದಿಂದಲೇ ಆಯಾಯ ಕಾಲದ ಭೋಜನವನ್ನು ನೆರವೇರಿಸಿಕೊಳ್ಳುತ್ತಾ ಮೂರು ಕಾಲದಲ್ಲೂ (ಪ್ರಾತಃ, ಮಧ್ಯಾಹ್ನ, ಸಾಯಂ) ಸ್ನಾನಮಾಡುವ ನಿಯಮದಿಂದಿದ್ದಲ್ಲಿ ಅಂತಹವನು ಒಂದು ವರ್ಷ ಈ ವ್ರತವನ್ನಾಚರಿಸಿ ಶುದ್ಧನಾಗುತ್ತಾನೆ. ತಿಳಿಯದೆ ಗರ್ಭಘಾತಕ್ಕೆ ಕಾರಣನಾದಲ್ಲಿ, ಅಂತಹ ಗರ್ಭಹತ್ಯೆಯನ್ನು ಮಾಡಿದವನು ಬ್ರಹ್ಮಹತ್ಯಾವ್ರತವನ್ನಾಚರಿಸಿ ಶುದ್ಧಿಹೊಂದಬೇಕು. ಯಜ್ಞದೀಕ್ಷೆಯನ್ನು ಹೊಂದಿರುವ ಕ್ಷತ್ರಿಯ ವೈಶ್ಯರನ್ನೂ ಪುಷ್ಪವತಿಯಾಗಿರುವ ಮತ್ತು ಆತ್ರೇಯ ಗೋತ್ರದ ಸ್ತ್ರೀಯನ್ನೂ ಹನನಮಾಡಿದವನೂ ಸಹ ಬ್ರಹ್ಮಹತ್ಯಾವ್ರತವನ್ನೇ ಆಚರಿಸಬೇಕು.

೯೯-೧೦೦. ಸುಳ್ಳು ಸಾಕ್ಷ್ಯವನ್ನು ಹೇಳಿದವನೂ, ಗುರುವಿನೊಡನೆ ನಿಂದಾವಚನದಿಂದ ಪ್ರತಿವಾದ ಮಾಡಿದವನೂ, ಮತ್ತೊಬ್ಬರಿಂದ ಇಡಲ್ಪಟ್ಟಿದ್ದ

**ಅಪಹೃತ್ಯ ಚ ನಿಕ್ಷೇಪಂ ಕೃತ್ವಾಚ ಸ್ತ್ರೀ ಸುಹೃದ್ವಧಂ ।**
**ಸುರಾಂ ಪೀತ್ವಾ ದ್ವಿಜೋ ಮೋಹಾದಗ್ನಿವರ್ಣಾಂ ಸುರಾಂ ಪಿಬೇತ್ ॥೧೦೦॥**

**ತಯಾ ಸಕಾಯೇ ನಿರ್ದಗ್ಧೇ ಮುಚ್ಯತೇ ಕಿಲ್ಬಿಷಾತ್ತತಃ ।**
**ಗೋಮೂತ್ರಮಗ್ನಿವರ್ಣಂ ವಾ ಪಿಬೇದುದಕಮೇವ ವಾ ॥ ೧೦೧ ॥**

**ಪಯೋ ಘೃತಂ ವಾ ಮರಣಾದ್ಗೋಶಕೃದ್ರಸಮೇವ ವಾ ।**
**ಕಣಾನ್ವಾ ಭಕ್ಷಯೇದಬ್ದಂ ಪಿಣ್ಯಾಕಂ ವಾ ಸಕೃನ್ನಿಶಿ ॥ ೧೦೨ ॥**

**ಸುರಾಪಾನಾಪನುತ್ತ್ಯರ್ಥಂ ಚೀರವಾಸಾ ಜಟೀ ಧ್ವಜೀ ।**
**ಸುರಾವೈಮಲಮನ್ನಾನಾಂ ಪಾಪ್ಮಾ ಚ ಮಲಮುಚ್ಯತೇ ॥ ೧೦೩ ॥**

---

ಧನಕನಕಾದಿನಿಕ್ಷೇಪಗಳನ್ನು ಅಪಹರಿಸಿದವನೂ, ಸ್ತ್ರೀಯರ ಮತ್ತು ಸ್ನೇಹಿತರ ವಧವನ್ನಾಚರಿಸಿದವನೂ ದ್ವಿಜನಾಗಿದ್ದು ಸುರಾಪಾನಮಾಡಿ ಪಾತಕಿಯಾದವನೂ ಸಹ ಅಗ್ನಿಯಂತೆ ಜ್ವಲಿಸುವ ಸುರೆಯನ್ನೇ ಪಾನಮಾಡಬೇಕು.

೧೦೧-೧೦೨. ಆ ಸುರಾಪಾನದಿಂದ ದೇಹವೆಲ್ಲವೂ ಚನ್ನಾಗಿ ಸುಟ್ಟು ಹೋದಲ್ಲಿ ಅಂತಹ ಪಾತಕದಿಂದ ನಿವೃತ್ತಿಹೊಂದುತ್ತಾನೆ ಅಥವಾ ಗೋಮೂತ್ರವನ್ನಾಗಲಿ, ಅಗ್ನಿವರ್ಣದ ಜಲವನ್ನಾಗಲಿ, ಹಾಲನ್ನಾಗಲಿ, ತುಪ್ಪವನ್ನಾಗಲಿ, ಹಸುವಿನ ಸಗಣಿಯ ರಸವನ್ನಾಗಲಿ ದೇಹವಿರುವಪರ್ಯಂತ ಕುಡಿಯಬೇಕು. ಅಥವಾ ಧಾನ್ಯದ ಕಾಳುಗಳನ್ನೇ ವರ್ಷಪರ್ಯಂತ ಭಕ್ಷಿಸಬೇಕು ಅಥವಾ ರಾತ್ರಿಯಲ್ಲಿ ಒಂದೇ ಆವರ್ತಿ ಹಿಂಡಿಯನ್ನು ತಿಂದು ಪ್ರಾಣಧಾರಣೆಮಾಡಬೇಕು.

೧೦೩-೧೦೪. ಸುರಾಪಾನಮಾಡಿದವನು ನಾರುಮಡಿಯನ್ನುಟ್ಟು ಜಟಾಧಾರಿಯಾಗಿ ಧ್ವಜವನ್ನು ಧರಿಸಿ ಮೇಲೆ ಹೇಳಿರುವ ವ್ರತದಿಂದ ಶುದ್ಧಿಹೊಂದಬೇಕು ಇಂತಹ ಸುರಾಪಾನ ನಿಷೇಧವನ್ನೇ ಯುಕ್ತಿಯಿಂದಲೂ ಸಮರ್ಥಿಸುತ್ತಾರೆ. ಭಕ್ಷ್ಯವಸ್ತುಗಳಲ್ಲೆಲ್ಲಾ ಮಲವು ನಿಕೃಷ್ಟವಾದದು. ಆ ಮಲವೇ ಸಾಕ್ಷಾತ್ಪಾಪವೆಂದು ಹೇಳಲ್ಪಡುತ್ತದೆ. ಸುರೆಯು ಅನ್ನದಿಂದ ಬೇರೆ ಮಾಡಲ್ಪಟ್ಟ ನಿಸ್ಸಾರವಾದ ಭಾಗವಾದುದರಿಂದ ಅದೇ ಮಲರೂಪವೆಂದು ತಿಳಿಯಬೇಕು, ಆದುದರಿಂದ ಬ್ರಾಹ್ಮಣ ಕ್ಷತ್ರಿಯವೈಶ್ಯರು ಮಲರೂಪವಾದ ಆ ಸುರೆಯನ್ನು ಪಾನಮಾಡಬಾರದು ಅಂತಹ ಸುರೆಯು ಮೂರು ವಿಧವಾಗಿದೆ ಗೌಡೀ, ಪೈಷ್ಟೀ, ಮಾಧ್ವೀ ಎಂದು ಗೌಡೀ ಎಂದರೆ

ತಸ್ಮಾದ್ಬ್ರಾಹ್ಮಣರಾಜನ್ಯೌ ವೈಶ್ಯಶ್ಚ ನ ಸುರಾಂ ಪಿಬೇತ್ ।
ಗೌಡೀ ಪೈಷ್ಟೀ ಚ ಮಾಧ್ವೀ ಚ ವಿಜ್ಞೇಯಾ ತ್ರಿವಿಧಾ ಸುರಾ ॥ ೧೦೪ ॥

ಯಥೈವೇಕಾ ತಥಾ ಸರ್ವಾ ನ ಪಾತವ್ಯಾ ದ್ವಿಜೋತ್ತಮೈಃ ।
ಯಕ್ಷರಕ್ಷಃಪಿಶಾಚಾನಾಂ ಮದ್ಯಂ ಮಾಂಸಂ ಸುರಾಶನಂ ॥ ೧೦೫ ॥

ತದ್ಬ್ರಾಹ್ಮಣೇನ ನಾತ್ತವ್ಯಂ ದೇವಾನಾಮಶ್ನತಾ ಹವಿಃ ।
ಮಾಧ್ವೀಕಮೈಕ್ಷವಂ ಟಾಕಂ ಕೌಲಂ ಖಾರ್ಜೂರಪಾನಸಂ ॥ ೧೦೬ ॥

ಮೃದ್ವೀಕಾರಸಮಾರ್ದ್ವೀಕೇ ಮೈರೇಯಂ ನಾರಿಕೇಲಜಂ ।
ಅಸೇವ್ಯಾನಿ ದಶೈತಾನಿ ಮದ್ಯಾನಿ ಬ್ರಾಹ್ಮಣಸ್ಯ ಚ ॥ ೧೦೭ ॥

---

ಬೆಲ್ಲದಿಂದ ಪಾಕರೂಪವಾಗಿ ಮಾಡಲ್ಪಟ್ಟ ಮದಕಾರಿಯಾದ ದ್ರವವಸ್ತು. ಪೈಷ್ಟೀ ಎಂದರೆ ಹಿಟ್ಟಿನಿಂದ ತಯಾರಿಸಿದ ಅಂತಹ ದ್ರವದ್ರವ್ಯ. ಮಾಧ್ವೀ ಎಂದರೆ ಜೇನು ಮೊದಲಾದ ಸಿಹಿವಸ್ತುಗಳಿಂದ ಮಾಡಲ್ಪಟ್ಟ ಅಂತಹ ದ್ರವವಸ್ತು. ಈ ಮೂರು ವಿಧವಾದ ಸುರೆಯಲ್ಲಿ ಯಾವುದೊಂದೂ ದ್ವಿಜರಿಗೆ ಪಾನಯೋಗ್ಯವಲ್ಲ (ಮೂರೂ ತ್ಯಾಜ್ಯಗಳೆಂದು ತಾತ್ಪರ್ಯ) (ಇಲ್ಲಿ ಶಾಸ್ತ್ರೀಯವಾದ ಸಾತ್ವಿಕಾಹಾರ ಸೇವನೆಯೇ ವಿಹಿತವಾಗಿರುವುದರಿಂದ ರಜಸ್ತಮೋಗುಣಗಳಿಗೆ ಅಭಿವೃದ್ಧಿಯನ್ನುಂಟುಮಾಡುವ ರಾಜಸ ತಾಮಸಾಹಾರಗಳನ್ನು ಶಾಸ್ತ್ರಕಾರರು ನಿಷೇಧಿಸುತ್ತಾರೆ. ಇಲ್ಲಿ ನಿಷಿದ್ಧವೆಂದು ಹೇಳಿರುವ ಸುರೆಯು ರಜಸ್ತಮೋಗುಣಗಳಿಗೆ ಕಾರಣವಾದುದರಿಂದ ಅದು ಅನ್ನದಲ್ಲಿರುವ ಸಾತ್ವಿಕಾಂಶಕ್ಕಿಂತ ಬೇರೆಯಾದ ವಸ್ತುಗಳಿಂದಲೇ ಉಂಟಾಗುತ್ತದೆ ಆದುದರಿಂದ ಅದು ಅನಿಷಿದ್ಧ ವಸ್ತುಗಳಿಂದ ಮಾಡಲ್ಪಟ್ಟಿದ್ದರೂ ತ್ಯಜಿಸಲ್ಪಡತಕ್ಕು ದೆಂದು ತಾತ್ಪರ್ಯವನ್ನು ಗ್ರಹಿಸಬೇಕು. ಆದುದರಿಂದಲೇ ಅದನ್ನು ನಿಸ್ಸಾರವಾದ ಮಲಕ್ಕೆ ಸದೃಶವೆಂದು ಭಾವಿಸಿ ಮಲಶಬ್ದದಿಂದಲೇ ಕರೆದಿರುವರು ಅದು ಸಾಕ್ಷಾತ್ಪಾಪವೆಂದರೆ ನಿಯತವಾಗಿಯೂ ಪಾಪವನ್ನುಂಟುಮಾಡತಕ್ಕದ್ದೆಂದು ತಾತ್ಪರ್ಯ.

೧೦೫-೧೦೭. ಮದ್ಯ, ಮಾಂಸ, ಸುರಾ ಇವುಗಳ ಸೇವನೆಯು ತಾಮಸರಾದ ಯಕ್ಷರಾಕ್ಷಸಪಿಶಾಚಾದಿಗಳಿಗೆ ಸೇರಿದುದು. ಸಾತ್ವಿಕನಾಗಿ ದೇವತಾಯೋಗ್ಯವಾದ ಹವಿಸ್ಸನ್ನು ಸೇವಿಸುವ ಬ್ರಾಹ್ಮಣನು ಅವನ್ನು ಯಾವಾಗಲೂ ಸೇವಿಸಬಾರದು ಹೀಗೆ, ನಿಷೇಧಿಸಲ್ಪಡುವ ಮದ್ಯವು ಹತ್ತುವಿಧವಾಗಿದೆ ಮಾಧ್ವೀಕ(ಹಿಪ್ಪೆಯ ಹೂವಿನಿಂದ ತಯಾರಿಸಿದುದು) ಐಕ್ಷವ, (ಕಬ್ಬಿನ ರಸದಿಂದ ತಯಾರಿಸಿದುದು) ಟಾಕಂ, ಕಾಲಂ, ಖಾರ್ಜೂರ, (ಖರ್ಜೂರದ ಬಟ್ಟೆಯಿಂದ ತಯಾರಿಸಿದುದು) ಪಾನಸಂ (ಹಲಸಿನ ಹಣ್ಣಿನಿಂದ ತಯಾರಿಸಿದುದು) ಮೃದ್ವೀಕಾರಸ, ದ್ರಾಕ್ಷಾರಸ, ಮಾರ್ದ್ವೀಕ (ದ್ರಾಕ್ಷೆಯ

**ಯಸ್ಯ ಕಾಯಗತಂ ಬ್ರಹ್ಮ ಮದ್ಯೇನಾಪ್ಲಾವ್ಯತೇ ಸಕೃತ್ ।**
**ತಸ್ಯ ವ್ಯಪೈತಿ ಬ್ರಾಹ್ಮಣ್ಯಂ ಶೂದ್ರತ್ವಂ ಚ ಸ ಗಚ್ಛತಿ　　　॥ ೧೦೮ ॥**

---

ಬಟ್ಟೆಯಿಂದ ತಯಾರಿಸಿದುದು) ಮೈರೇಯಂ, (ಈಚಲಮರದಿಂದ ತೆಗೆದುದು) ನಾರಿಕೇಲಂ (ತೆಂಗಿನಮರದಿಂದ ತೆಗೆದುದು) ಈ ಹತ್ತುವಿಧವಾದ ಮದ್ಯವೂ ಬ್ರಾಹ್ಮಣನಿಗೆ ಸೇವ್ಯವಲ್ಲ.

(ಈ ಸಂದರ್ಭದಲ್ಲಿ ಸುರೆಯನ್ನು ನಿಷೇಧಿಸುವಾಗ ದ್ವಿಜನೆಂದು ಹೇಳಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರನ್ನೂ ಸೇರಿಸಿ ನಿಷೇಧಿಸಲಾಗಿದೆ. ಮದ್ಯವನ್ನು ನಿಷೇಧಿಸುವ ಸಂದರ್ಭದಲ್ಲಿ ಮಾತ್ರ "ಬ್ರಾಹ್ಮಣೇನ, ಬ್ರಾಹ್ಮಣಸ್ಯ" ಎಂದು ಬ್ರಾಹ್ಮಣನಿಗೇ ನಿಷೇಧಿಸಿರುವುದರಿಂದ ಮದ್ಯದ ವಿಷಯದಲ್ಲಿ ಕ್ಷತ್ರಿಯವೈಶ್ಯರಿಗೆ ನಿಷೇಧವಿಲ್ಲವೆಂದು ಶಂಕಿಸಬಾರದು. "ಯಕ್ಷರಕ್ಷಃ ಪಿಶಾಚಾನಾಂ" ಎಂದು ಹೇಳಲಾಗಿರುವ ಸಾಮಾನ್ಯಾನುವಾದದಲ್ಲಿ ಮದ್ಯದಂತೆ ಸುರೆಯೂ ತಾಮಸಪ್ರಕೃತಿಗಳಿಗೆ ಆಹಾರವೆಂದು ಹೇಳಿರುವುದರಿಂದ ಅಂತಹ ತಾಮಸಾಹಾರವು ಕ್ಷತ್ರಿಯವೈಶ್ಯರಿಗೂ ನಿಷಿದ್ಧವೆಂದೇ ಗ್ರಹಿಸಬೇಕು. ಈ ವಿಷಯದಲ್ಲಿ ಮದ್ಯಕ್ಕೂ, ಸುರೆಗೂ ತಾರತಮ್ಯವನ್ನು ವಿವರಿಸಿಲ್ಲ. ಆದುದರಿಂದ ಸುರೆಯಂತೆ ಮದ್ಯನಿಷೇಧವೂ ವರ್ಣತ್ರಯ ಸಾಮಾನ್ಯವೆಂದೇ ತಾತ್ಪರ್ಯ. "ಬ್ರಾಹ್ಮಣೇನ ಬ್ರಾಹ್ಮಣಸ್ಯ" ಎಂಬ ವಿಶೇಷ ನಿಷೇಧವು ಸಾತ್ವಿಕನಾದ ಬ್ರಾಹ್ಮಣನಿಗೆ ಅವುಗಳ ಸೇವನೆಯು ಇತರರಿಗಿಂತಲೂ ಹೆಚ್ಚಾದ ಪಾತಕಕ್ಕೆ ಕಾರಣವಾಗುತ್ತದೆಯೆಂದು ಪಾಪಾತಿಶಯವನ್ನು ಹೇಳುವ ತಾತ್ಪರ್ಯದಿಂದ ಸಮಂಜಸಪಡಿಸತಕ್ಕದ್ದಾಗಿದೆ.)

೧೦೮. ಬ್ರಾಹ್ಮಣನಾಗಿರುವವನ ಬ್ರಾಹ್ಮಣ್ಯವು ಇಂದ್ರಿಯಚಾಪಲ್ಯದಿಂದ ಎಂದಾದರೊಂದುದಿನ ಮದ್ಯದಿಂದ ತೋಯಲ್ಪಟ್ಟಿದ್ದಾದರೆ ಆದರಿಂದ ಅವನ ಬ್ರಾಹ್ಮಣ್ಯವೇ ಹೊರಟುಹೋಗುತ್ತದೆ. ಅವನು ವರ್ಣತ್ರಯಬಹಿಷ್ಕೃತನಾಗಿ ಶೂದ್ರತ್ವವನ್ನೇ ಹೊಂದುತ್ತಾನೆ. (ಇಲ್ಲಿಯೂ ವಿಶೇಷನಿಷೇಧವು ಹಿಂದೆ ಉಪಪಾದಿಸಿರುವ ನ್ಯಾಯದಿಂದ ಕ್ಷತ್ರಿಯವೈಶ್ಯರಿಗೂ ಅನ್ವಯಿಸುತ್ತದೆ ಎಂದೇ ತಿಳಿಯಬೇಕು. ಉಪನಯನ ಮತ್ತು ವೇದಸಂಬಂಧ ಇವು ಮೂರು ವರ್ಣದವರಿಗೂ ಸಮಾನವಾಗಿರುವುದರಿಂದಲೂ ಶೂದ್ರತ್ವವು ಅನಿಷ್ಟವಾದುದರಿಂದಲೂ ಈ ವಿಧವಾದ ನಿರ್ಣಯಕ್ಕೆ ಬಾಧಕವಿಲ್ಲ. ಬ್ರಾಹ್ಮಣ್ಯಂ ಎಂಬ ಪದವು ಮೇಲಿನಂತೆಯೇ ಪಾಪಾಧಿಕ್ಯವನ್ನು ಹೇಳುವುದರಲ್ಲಿ ತಾತ್ಪರ್ಯ.)

ಅತ ಊರ್ಧ್ವಂ ಪ್ರವಕ್ಷ್ಯಾಮಿ ಸುವರ್ಣಸ್ತೇಯನಿರ್ಣಯಂ ।
ಸುವರ್ಣಸ್ತೇಯಕೃದ್ವಿಪ್ರೋ ರಾಜಾನಮಭಿಶಸ್ಯ ತು ॥ ೧೦೯ ॥

ಸ್ವಕರ್ಮ ಖ್ಯಾಪಯನ್ಬ್ರೂಯಾನ್ಮಾಂ ಭವಾನಪಿ ಶಾಸ್ತ್ವಿತಿ ।
ಗೃಹೀತ್ವಾ ಮುಸಲಂ ರಾಜಾ ಸಕೃದ್ವಧ್ಯಾತ್ತು ತಂ ಸ್ವಯಂ ॥ ೧೧೦ ॥

ವಧೇನ ಶುಧ್ಯತೇ ಸ್ತೇನೋ ಬ್ರಾಹ್ಮಣಸ್ತಪಸೈವ ವಾ ।
ತಪಸಾತ್ವಪನುತ್ಸುಸ್ತು ಸುವರ್ಣಸ್ತೇಯಜಂ ಮಲಂ ॥ ೧೧೧ ॥

ಚೀರವಾಸಾ ದ್ವಿಜೋಽರಣ್ಯೇ ಚರೇದ್ಬ್ರಹ್ಮಹಣೋವ್ರತಂ ।
ಗುರುತಲ್ಪೋಽಭಿಭಾಷ್ಯೈನಂ ತಲ್ಪೇಸ್ವಪ್ಯಾದಯೋಮಯೇ ॥ ೧೧೨ ॥

ಸೂರ್ಮೀಂ ಜ್ವಲಂತೀಮಾಶ್ಲಿಷ್ಯ ಮೃತ್ಯುನಾ ತು ವಿಶುಧ್ಯತಿ ।
ಸ್ವಯಂ ವಾ ಶಿಶ್ನವೃಷಣಾವುತ್ಕೃತ್ಯಾಧಾಯ ಸ್ವಾಂಜಲೌ ॥ ೧೧೩ ॥

---

೧೦೯-೧೧೦ ಇನ್ನು ಮುಂದೆ ಸುವರ್ಣವನ್ನು ಅಪಹರಿಸಿದವನಿಗೆ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ. ಚಿನ್ನವನ್ನು ಅಪಹರಿಸಿದ ಬ್ರಾಹ್ಮಣನು ರಾಜನ ಸಮೀಪಕ್ಕೆ ಹೋಗಿ ತಾನು ಮಾಡಿರುವ ಪಾಪಕಾರ್ಯವನ್ನು ಹೇಳಿ ನನ್ನನ್ನು ನೀನು ಶಿಕ್ಷಿಸಬೇಕು ಎಂದು ಪ್ರಾರ್ಥಿಸಬೇಕು. ರಾಜನು ಒನಕೆಯಿಂದ ಅವನನ್ನು ತಾನಾಗಿ ಒಂದೇ ಏಟಿನಿಂದ ಕೊಲ್ಲಬೇಕು.

೧೧೧-೧೧೨. ಈ ರೀತಿಯಾದ ವಧದಿಂದ ಸುವರ್ಣಸ್ತೇಯದ ಪಾಪದಿಂದ ಶುದ್ಧಿಹೊಂದುತ್ತಾನೆ. ಅಂತಹವನು ಬ್ರಾಹ್ಮಣನಾಗಿದ್ದು ತಪಸ್ಸಿನಿಂದ ಶುದ್ಧಿಹೊಂದಲು ಇಷ್ಟಪಟ್ಟಲ್ಲಿ ನಾರುಮುಡಿಯನ್ನುಟ್ಟು ಅರಣ್ಯವಲ್ಲಿ ವಾಸಿಸುತ್ತಾ ಬ್ರಹ್ಮಹತ್ಯೆಗೆ ಹೇಳಿರುವ ವ್ರತವನ್ನೇ ಆಚರಿಸಬೇಕು. ಗುರುತಲ್ಪಗಮನಮಾಡಿದವನು ತಾನು ಮಾಡಿದ ಪಾಪವನ್ನು ಪ್ರಕಾಶವಾಗಿ ಹೇಳಿಕೊಂಡು ಕಬ್ಬಿಣದ ಮುಳ್ಳುಗಳಿಂದ ಕೂಡಿದ ಹಾಸಿಗೆಯಲ್ಲಿ ಮಲಗಬೇಕು.

೧೧೩-೧೧೪. ಹಾಗೆ ಮಲಗಿದ್ದು ಬೆಂಕಿಯಿಂದ ಕಾದು ಜ್ವಲಿಸುತ್ತಿರುವ ಕಬ್ಬಿಣದ ಬೊಂಬೆಯನ್ನು ಆಲಿಂಗನಮಾಡಿ ಮರಣ ಹೊಂದಿದ್ದೇ ಆದರೆ ಆಗ ಆ ಪಾಪದಿಂದ ಅವನು ಶುದ್ಧನಾಗುತ್ತಾನೆ. ಅಥವಾ ತಾನಾಗಿಯೇ ತನ್ನ ಲಿಂಗವನ್ನೂ ವೃಷಣಗಳನ್ನೂ ಕತ್ತರಿಸಿ ತನ್ನ ಬೊಗಸೆಯಲ್ಲಿಟ್ಟುಕೊಂಡು ನೈಋತ್ಯದಿಕ್ಕಿನ ಕಡೆಗೆ

ನೈಋತೀಂ ದಿಶಮಾತಿಷ್ಠೇದಾನಿಪಾತಾದಜಿಹ್ಮಗಃ ।
ಖಟ್ವಾಂಗೀ ಚೀರವಾಸಾ ವಾ ಶ್ಮಶ್ರುಲೋ ವಿಜನೇ ವನೇ || ೧೧೪ ||

ಪ್ರಾಜಾಪತ್ಯಂ ಚರೇತ್ಕೃಚ್ಛ್ರಂ ತ್ವಬ್ದಮೇಕಂ ಸಮಾಹಿತಃ ।
ಚಾಂದ್ರಾಯಣಂ ತು ತ್ರೀನ್ಮಾಸಾನಭ್ಯಸೇನ್ನಿಯತೇಂದ್ರಿಯಃ || ೧೧೫ ||

ಹವಿಷ್ಯೇಣ ಯವಾಗ್ವಾ ಚ ಗುರುತಲ್ಪಾಪನುತ್ತಯೇ ।
ಜಾತಿಭ್ರಂಶಕರಂ ಕರ್ಮ ಕೃತ್ವಾನ್ಯತರಮಿಚ್ಛಯಾ || ೧೧೬ ||

ಚರೇತ್ಸಾಂತಪನಂ ಕೃಚ್ಛ್ರಂ ಪ್ರಾಜಾಪತ್ಯಮನಿಚ್ಛಯಾ ।
ಸಂಕರಾಪಾತ್ರಕೃತ್ಯಾಸು ಮಾಸಂ ಶೋಧನಮೈಂದವಂ || ೧೧೭ ||

---

ಮೃತನಾಗಿ ಬೀಳುವವರೆಗೂ ನೆಟ್ಟಗೆ ಓಡಬೇಕು. ಅಥವಾ ನಿರ್ಜನವಾದ ಕಾಡಿನಲ್ಲಿ ನಾರುಮಡಿಯನ್ನುಟ್ಟು ಯೋಗದಂಡವನ್ನು ಧರಿಸಿ ಗಡ್ಡಮೀಸೆಗಳನ್ನು ಬೆಳಿಸಿಕೊಂಡು ಒಂದು ವರ್ಷದವರಿಗೂ ಜಿತೇಂದ್ರಿಯನಾಗಿದ್ದುಕೊಂಡು ಪ್ರಾಜಾಪತ್ಯ ಕೃಚ್ಛ್ರವನ್ನಾಚರಿಸಬೇಕು.

೧೧೫-೧೧೬. ಮತ್ತು ಮೂರು ತಿಂಗಳವರಿಗೆ ಹೋಮಾರ್ಹವಾದ ಶುದ್ಧ ವಸ್ತುವಿನಿಂದಲಾಗಲಿ, ಗಂಜಿಯಿಂದಲಾಗಲಿ ಕಾಲಯಾಪನೆಮಾಡುತ್ತಾ ಜಿತೇಂದ್ರಿಯನಾಗಿ ಚಾಂದ್ರಾಯಣವನ್ನಾಚರಿಸಿ ಈ ಗುರುತಲ್ಪಗಮನಪಾತಕವನ್ನು ಹೋಗಲಾಡಿಸಿಕೊಳ್ಳಬೇಕು. ಬ್ರಾಹ್ಮಣಪರುಜಾಕೃತ್ಯಂ ಎಂದು ೬೪ ನೆಯ ಶ್ಲೋಕದಲ್ಲಿ ಹೇಳಿರುವ ಜಾತಿಭ್ರಂಶಕ್ಕೆ ಕಾರಣವಾದ ಯಾವುದಾದರೊಂದು ಕಾರ್ಯವನ್ನು ಬುದ್ಧಿಪೂರ್ವಕವಾಗಿ ಆಚರಿಸಿದಲ್ಲಿ ಸಾಂತಪನವೆಂಬ ಏಳು ದಿನಗಳಲ್ಲಿ ಮಾಡಬೇಕಾದ ಕೃಚ್ಛ್ರವನ್ನು ಆಚರಿಸಬೇಕು. ಅಬುದ್ಧಿಪೂರ್ವಕವಾಗಿ ಅದು ನಡೆದಿದ್ದಲ್ಲಿ ಪ್ರಾಜಾಪತ್ಯಕೃಚ್ಛ್ರದಿಂದ ಶುದ್ಧನಾಗಬೇಕು.

೧೧೭-೧೧೮ ಖರೋಷ್ಟ್ರ ಎಂದು ೬೫ ನೆಯ ಶ್ಲೋಕದಲ್ಲಿ ಹೇಳಿರುವ ಸಂಕರೀಕರಣವೆಂಬ ದೋಷನಿವೃತ್ತಿಯನ್ನಾಗಲಿ, ನಿಂದಿತೇಭ್ಯೋಧನಾದಾನಂ ಎಂದು ೬೬ ನೆಯ ಶ್ಲೋಕದಲ್ಲಿ ಹೇಳಿರುವ ಅಪಾತ್ರೀಕರಣವೆಂಬ ಪಾತಕಗಳ ನಿವೃತ್ತಿಯನ್ನಾಗಲಿ ಅಥವಾ ಇವುಗಳಲ್ಲಿ ಯಾವುದಾದರೊಂದು ಪಾಪದ ನಿವೃತ್ತಿಯನ್ನಾದರೂ ಅಪೇಕ್ಷಿಸುವವನು ಒಂದು ತಿಂಗಳವರಿಗೂ ಚಾಂದ್ರಾಯಣವನ್ನಾಚರಿಸಬೇಕು.

**ಮಲಿನೀಕರಣೀಯೇಷು ತಪ್ತಃ ಸ್ಯಾದ್ಯಾವಕಂ ತ್ರ್ಯಹಂ ।**
**ತುರೀಯಂ ಬ್ರಹ್ಮಹತ್ಯಾಯಾಃ ಕ್ಷತ್ರಿಯಸ್ಯ ವಧೇ ಸ್ಮೃತಂ ॥ ೧೧೮ ॥**

**ವೈಶ್ಯೇಽಷ್ಟಮೋಂಶೋ ವೃತ್ತಸ್ಥೇ ಶೂದ್ರೇ ಜ್ಞೇಯಸ್ತು ಷೋಡಶಃ ।**
**ಅಕಾಮತಸ್ತು ರಾಜನ್ಯಂ ವಿನಿಪಾತ್ಯ ದ್ವಿಜೋತ್ತಮಃ ॥ ೧೧೯ ॥**

**ವೃಷಭೈಕಸಹಸ್ರಂ ಗಾ ದದ್ಯಾಚ್ಛುದ್ಧ್ಯರ್ಥಮಾತ್ಮನಃ ।**
**ತ್ರ್ಯಬ್ದಂ ಚರೇದ್ವಾ ನಿಯತೋ ಜಟೀ ಬ್ರಹ್ಮಹಣೋ ವ್ರತಂ ॥ ೧೨೦ ॥**

**ವಸೇದ್ದೂರತರೇ ಗ್ರಾಮಾದ್ವೃಕ್ಷಮೂಲನಿಕೇತನಃ ।**
**ಏತದೇವಾಚರೇದಬ್ದಂ ಪ್ರಾಯಶ್ಚಿತ್ತಂ ದ್ವಿಜೋತ್ತಮಃ ॥ ೧೨೧ ॥**

---

ಕೃಮಿಕೀಟವಯೋಹತ್ಯಾ ಎಂಬ ೬೭ ನೆಯ ಶ್ಲೋಕದಲ್ಲಿ ಹೇಳಿರುವ ಮಲಿನೀಕರಣೀಯವೆಂಬ ಪಾಪವನ್ನು ಇಚ್ಛೆಯಿಂದ ಮಾಡಿದ್ದಲ್ಲಿ ಮೂರು ದಿನಗಳು ಕುದಿದ ಗಂಜಿಯನ್ನು ಪಾನಮಾಡುತ್ತಾ ಜೀವಿಸಬೇಕು. ಕ್ಷತ್ರಿಯನ ವಧವನ್ನು ಮಾಡಿದುದೇ ಆದರೆ ಬ್ರಹ್ಮಹತ್ಯೆಯ ವ್ರತದ ನಾಲ್ಕನೇಯೊಂದು ಭಾಗವನ್ನಾಚರಿಸಬೇಕು. ವೈಶ್ಯನ ವಿಷಯದಲ್ಲಿ ಎಂಟನೇ ಒಂದು ಭಾಗ, ಶೂದ್ರನನ್ನು ವಧಿಸಿದ್ದೇ ಆದರೆ ಹದಿನಾರನೆಯ ಒಂದು ಭಾಗ ಆಚರಿಸಬೇಕು.

೧೧೯–೧೨೦ ದ್ವಿಜನಾದವನು ಅಬುದ್ಧಿಪೂರ್ವಕವಾಗಿ (ತಿಳಿಯದೆ) ಕ್ಷತ್ರಿಯನನ್ನು ಕೊಂದದ್ದೇ ಆದರೆ ಅಂತಹ ವಧಕಾರಿಯು ಒಂದು ಹೋರಿಯೊಡಗೂಡಿರುವ ಸಾವಿರ ಗೋವುಗಳನ್ನು ಆ ಪಾತಕ ನಿವೃತ್ತಿಗಾಗಿ ದಾನಮಾಡಬೇಕು. ಹಾಗೆ ಕೊಡಲು ಶಕ್ತಿ ಇಲ್ಲದಿದ್ದಲ್ಲಿ ಜಟಾಧಾರಿಯಾಗಿ ಮೂರುವರ್ಷಪರ್ಯಂತ ಜಿತೇಂದ್ರಿಯತೆಯಿಂದ ಬ್ರಹ್ಮಹತ್ಯೆಯ ವ್ರತವನ್ನೇ ಆಚರಿಸಬೇಕು. ಗ್ರಾಮಕ್ಕೆ ದೂರದಲ್ಲಿ ಮರದ ಬುಡದಲ್ಲಿ ವಾಸಮಾಡಬೇಕು.

೧೨೧–೧೨೨ ಸ್ವಧರ್ಮದಲ್ಲಿ ಸದ್ವೃತ್ತಿಯಿಂದಿರುವ ವೈಶ್ಯನನ್ನು ಕೊಂದಲ್ಲಿ ಅಂತಹ ಪಾತಕಿಯಾದ ದ್ವಿಜನು ಈ ಪ್ರಾಯಶ್ಚಿತ್ತವನ್ನೇ ಒಂದು ವರ್ಷದವರೆಗೆ ಆಚರಿಸಬೇಕು. ನೂರೊಂದು ಗೋವುಗಳನ್ನು ದಾನಮಾಡಬೇಕು. ಒಂದು ಹೋರಿ

ಪ್ರಮಾಪ್ಯ ವೈಶ್ಯಂ ವೃತ್ತಿಸ್ಥಂ ದದ್ಯಾಚ್ಚೈಕಶತಂ ಗವಾಂ ।
ಏತದೇವವ್ರತಂ ಕೃತ್ಸ್ನಂ ಷಣ್ಮಾಸಾನ್ ಶೂದ್ರಹಾ ಚರೇತ್ || ೧೨೨ ||

ವೃಷಭೈಕಾದಶಾವಾಪಿ ದದ್ಯಾದ್ವಿ ಪ್ರಾಯಗಾಃ ಸಿತಾಃ ।
ಮಾರ್ಜಾರನಕುಲೌ ಹತ್ವಾ ಚಾಷಂ ಮಂಡೂಕಮೇವ ವಾ || ೧೨೩ ||

ಶ್ವಗೋಧೋಲೂಕಕಾಕಾಂಶ್ಚ ಶೂದ್ರಹತ್ಯಾವ್ರತಂ ಚರೇತ್ ।
ಪಯಃಪಿಬೇತ್ತ್ರಿರಾತ್ರಂ ವಾ ಯೋಜನಂ ವಾಧ್ವನೋ ವ್ರಜೇತ್ || ೧೨೪ ||

ಉಪಸ್ಪೃಶೇತ್ಸ್ರವಂತ್ಯಾಂ ವಾ ಸೂಕ್ತಂ ವಾ ತ್ರಿವೃತಂ ಜಪೇತ್ ।
ಅಭ್ರೀಂ ಕಾಲಾಯಸೀಂ ದದ್ಯಾತ್ಸರ್ಪಂ ಹತ್ವಾ ದ್ವಿಜೋತ್ತಮಃ || ೧೨೫ ||

ಪಲಾಲಭಾರಕಂ ಷಂಡಂ ಸೋಮಕಂ ಚೈವ ಮಾಷಕಂ ।
ಘೃತಕುಂಭಂ ವರಾಹೇತು ತಿಲದ್ರೋಣಂ ತು ತಿತ್ತಿರೇ || ೧೨೬ ||

---

ನೂರುಗೋವುಗಳು) ಅಂತಹ ಸ್ವಧರ್ಮದಲ್ಲಿರುವ ಶೂದ್ರನನ್ನು ವಧಿಸಿದ್ದೇ ಆದರೆ ಮೇಲಿನ ವ್ರತವನ್ನೇ ಆರು ತಿಂಗಳು ಆಚರಿಸಬೇಕು. ಹೋರಿಯೊಡಗೂಡಿದ ಹತ್ತು ಬಿಳಿಯ ಗೋವುಗಳನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೧೨೩-೧೨೫. ಬೆಕ್ಕು, ಮುಂಗಸಿ, ಚಾಷವೆಂಬ (ಹಂಗನಹಕ್ಕಿ) ಕಪ್ಪಾದ ಪಕ್ಷಿ, ಕಪ್ಪೆ: ಇವುಗಳನ್ನಾಗಲಿ ನಾಯಿ, ಉಡು, ಗೂಬೆ, ಕಾಗೆ, ಇವುಗಳನ್ನಾಗಲಿ ಕೊಂದಲ್ಲಿ ಹಾಗೆ ಕೊಂದವನು ಪಾಪನಿವೃತ್ತಿಗಾಗಿ ಶೂದ್ರಹತ್ಯೆಗೆ ಹೇಳಿರುವ ಪ್ರಾಯಶ್ಚಿತ್ತವನ್ನೇ ಆಚರಿಸಬೇಕು. ಅಥವಾ ಮೂರುರಾತ್ರಿ ಹಾಲನ್ನೇ ಕುಡಿದು ಕೊಂಡಿರಬೇಕು. ಅಥವಾ ಒಂದು ಯೋಜನದ ಮಾರ್ಗವನ್ನು ನಡೆಯಬೇಕು. ಅಥವಾ ಮಹಾನದಿಯಲ್ಲಿ ಸ್ನಾನಮಾಡಬೇಕು. ತ್ರಿವೃತ್ ಸೂಕ್ತವನ್ನಾದರೂ ಜಪಿಸಬೇಕು. ದ್ವಿಜನಾದವನು ಸರ್ಪವನ್ನು ಕೊಂದದ್ದೇ ಆದರೆ ಕಬ್ಬಿಣದ ಗುದ್ದಲಿಯನ್ನು ದಾನಮಾಡಬೇಕು.

೧೨೬-೧೨೭. ಮಾಂಸ ಭಾರವನ್ನು ಹೊತ್ತಿರುವವನನ್ನೂ ಷಂಡ(ನಪುಂಸಕ)ನನ್ನೂ ಸೋಮವಿಕ್ರಯಿಯನ್ನೂ ವಧಮಾಡಿದಲ್ಲಿ ಉದ್ದನ್ನು ದಾನಮಾಡಬೇಕು. ಹಂದಿಯನ್ನು ವಧಮಾಡಿದಲ್ಲಿ ತುಪ್ಪದಿಂದ ತುಂಬಿದ ಕುಂಭವನ್ನೂ ತಿತ್ತಿರಿಪಕ್ಷಿಯನ್ನು ವಧಮಾಡಿದಲ್ಲಿ ಒಂದುಕೊಳಗ ತುಂಬಿದ ಎಳ್ಳನ್ನೂ ದಾನಮಾಡಬೇಕು.

ಶುಕೇ ದ್ವಿಹಾಯನಂ ವತ್ಸಂ ಕ್ರೌಂಚಂ ಹತ್ವಾ ದ್ವಿಹಾಯನಂ ।
ಹತ್ವಾ ಹಂಸಂ ಬಲಾಕಾಂಚ ಬಕಂ ಬರ್ಹಿಣಮೇವ ಚ ॥ ೧೨೭ ॥

ವಾನರಂ ಶ್ಯೇನಭಾಸೌ ವಾ ಸ್ಪರ್ಶಯೇದ್ಬ್ರಾಹ್ಮಣಾಯ ಗಾಂ ।
ವಾಸೋ ದದ್ಯಾದ್ಧಯಂ ಹತ್ವಾ ಪಂಚ ನೀಲಾನ್ವೃಷಾನ್ ಗಜಂ ॥ ೧೨೮ ॥

ಅಜಂ ಮೇಷಮನಡ್ವಾಹಂ ಖರಂ ಹತ್ವೈಕಹಾಯನಂ ।
ಕ್ರವ್ಯಾದಾಂಸ್ತರುಣಾನ್ ಹತ್ವಾ ಧೇನುಂ ದದ್ಯಾತ್ಪಯಸ್ವಿನೀಂ ॥ ೧೨೯ ॥

ಅಕ್ರವ್ಯಾದಂ ವತ್ಸತರೀ ಉಷ್ಟ್ರಂ ಹತ್ವಾ ತು ಕೃಷ್ಣಲಂ ।
ಜೀವಕಾರ್ಮುಕವತ್ಸಾದೀನ್ ಪೃಥಗ್ದದ್ಯಾದ್ವಿಶುದ್ಧಯೇ ॥ ೧೩೦ ॥

ಚತುರ್ಣಾಮಪಿ ವರ್ಣಾನಾಂ ನಾರೀಂ ಹತ್ವಾ ನ ರಾಗತಃ ।
ವರ್ಣಾನಾಮಾನುಪೂರ್ವ್ಯೇಣ ತ್ರಯಾಣಾಮವಿಶೇಷತಃ ॥ ೧೩೧ ॥

---

ಗಿಣಿಯನ್ನು ಕೊಂದಲ್ಲಿ ಎರಡುವರ್ಷದ ಕರುವನ್ನೂ ಎರಡು ವರ್ಷದ ಕ್ರೌಂಚಪಕ್ಷಿಯನ್ನೂ, ಹಂಸ, ಹೆಣ್ಣುಕೊಕ್ಕರೆ, ಗಂಡುಕೊಕ್ಕರೆ, ನವಿಲು, ಕಪಿ, ಗಿಡುಗ. ಭಾಸಪಕ್ಷಿ ಇವುಗಳನ್ನೂ ಕೊಂದರೂ ಸಹ ಬ್ರಾಹ್ಮಣನಿಗೆ ಗೋದಾನವನ್ನು ಮಾಡಬೇಕು.

೧೨೮–೧೩೦ ಕುದುರೆಯನ್ನು ಕೊಂದದ್ದೇ ಆದರೆ ವಸ್ತ್ರದಾನವನ್ನು ಮಾಡಬೇಕು. ಆನೆಯನ್ನು ಕೊಂದದ್ದೇ ಆದರೆ (ಐದು ಅವಯವಗಳಲ್ಲಿ ಕಪ್ಪಾಗಿರುವ ಅಥವಾ) ಕಪ್ಪಾಗಿರುವ ಐದು ಎತ್ತುಗಳನ್ನು ದಾನಮಾಡಬೇಕು. ಆಡು, ಕುರಿ, ಹೊರೆ ಹೊರುವ ಎತ್ತು, ಒಂದು ವರ್ಷದ ಕತ್ತೆ, ಪ್ರಾಯಸಮರ್ಥವಾದ ಮಾಂಸಾಹಾರಿ ಪ್ರಾಣಿಗಳು, ಇವುಗಳನ್ನು ಕೊಂದಲ್ಲಿ ಕರೆಯುವ ಹಸುವನ್ನು ದಾನಮಾಡಬೇಕು. ಇತರ ಪ್ರಾಣಿಗಳನ್ನೂ, ಕಡಸನ್ನೂ, ಒಂಟೆಯನ್ನೂ ವಧೆಮಾಡಿದಲ್ಲಿ ಗುಲಗಂಜಿಯನ್ನು ದಾನಮಾಡಬೇಕು ಧನುಸ್ಸಿನ ಮೌರ್ವೀ, ಧನುಸ್ಸು, ಸಣ್ಣಕರು, ಇವನ್ನೂ ಸಹ ಆತ್ಮಶುದ್ಧಿಗಾಗಿ ಬೇರೆಬೇರೆ ದಾನಮಾಡಬೇಕು.

೧೩೧. ಬ್ರಾಹ್ಮಣಾದಿ ನಾಲ್ಕುವರ್ಣಗಳ ಸ್ತ್ರೀಯರನ್ನು ಅಬುದ್ಧಿಪೂರ್ವಕವಾಗಿ ಹನನಮಾಡಿದಲ್ಲಿ ಮೊದಲನೆಯ ಮೂರು ವರ್ಣಗಳ ಸ್ತ್ರೀಯನ್ನು ಯಾವ ವಿಶೇಷವೂ ಇಲ್ಲದೆ ಕ್ರಮವಾಗಿ (ಬ್ರಾಹ್ಮಣಸ್ತ್ರೀಯನ್ನು ಬ್ರಾಹ್ಮಣ ಈ ರೀತಿ) ವಧಮಾಡಿದ್ದರೂ,

ಪ್ರಮಾಪ್ಯ ಚಾಪ್ರಮಾಪ್ಯ ಸ್ತ್ರೀಂ ಶೂದ್ರಹತ್ಯಾವ್ರತಂ ಚರೇತ್ ।
ಧನೇನ ವಧನಿರ್ಣೇಕಂ ಸರ್ಪಾದೀನಾಮಶಕ್ನುವನ್ ॥ ೧೩೨ ॥

ಏಕೈಕಶಃ ಚರೇತ್ಕೃಚ್ಛ್ರಂ ದ್ವಿಜಃ ಪಾಪಾಪನುತ್ತಯೇ ।
ಫಲದಾನಾಂ ತು ವೃಕ್ಷಾಣಾಂ ಛೇದನೇ ಜಪ್ಯಮೃಕ್ಶತಂ ॥ ೧೩೩ ॥

ಗುಲ್ಮವಲ್ಲೀಲತಾನಾಂ ಚ ಪುಷ್ಪಿತಾನಾಂ ಚ ವೀರುಧಾಂ ।
ಅಸ್ಥನ್ವತಾಂ ತು ಸತ್ವಾನಾಂ ಸಹಸ್ರಸ್ಯ ಪ್ರಮಾಪಣೇ ॥ ೧೩೪ ॥

ಪೂರ್ಣೇ ವಾ ತದನಸ್ಥ್ನಾಂ ತು ಶೂದ್ರಹತ್ಯಾವ್ರತಂ ಚರೇತ್ ।
ಕಿಂಚಿದೇವ ತು ವಿಪ್ರಾಯ ದದ್ಯಾದಸ್ಥಿಮತಾಂ ವಧೇ ॥ ೧೩೫ ॥

---

ಹಾಗೆ ಮಾಡದಿದ್ದರೂ (ಅಂದರೆ ಕ್ರಮ ನಿಯಮವಿಲ್ಲದೆ ಕ್ಷತ್ರಿಯ ಸ್ತ್ರೀಯನ್ನು ಬ್ರಾಹ್ಮಣ, ವೈಶ್ಯಸ್ತ್ರೀಯನ್ನು ಕ್ಷತ್ರಿಯ ಈ ರೀತಿ ವ್ಯತ್ಯಾಸದಿಂದ ಎಂದರ್ಥ) ಅಂತಹ ವಧಮಾಡಿದವರೆಲ್ಲರೂ ಶೂದ್ರಹತ್ಯೆಯ ವ್ರತವನ್ನೇ ಆಚರಿಸಬೇಕು.

೧೩೨–೧೩೫. ಮೇಲೆ ಹೇಳಿರುವ ಸರ್ಪಾದಿಗಳ ವಧಕಾರಿಯು ವಿಹಿತವಾಗಿರುವ ದ್ರವ್ಯದಿಂದ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಅಶಕ್ತನಾಗಿದ್ದಲ್ಲಿ ಅಂತಹ ದ್ವಿಜನು ಆ ಪಾಪದ ಶಾಂತಿಗಾಗಿ ಪ್ರತಿಯೊಂದು ವಧಕ್ಕೂ ಬೇರೆಬೇರೆಯಾಗಿ ಕೃಚ್ಛ್ರವನ್ನು ಆಚರಿಸಬೇಕು. ಫಲಗಳನ್ನು ಕೊಡುತ್ತಿರುವ ಮರಗಳನ್ನು ಕಡಿದದ್ದೇ ಆದರೆ ಆ ಪಾಪಶಾಂತಿಗಾಗಿ ನೂರು ಋಕ್ಕುಗಳನ್ನು ಜಪಿಸಬೇಕು. ಹಸುರಾದ ಗಿಡಗಳ ಪೊದರು ಬಳ್ಳಿಗಳು, ಮತ್ತು ಹೂಗಳನ್ನು ಬಿಟ್ಟಿರುವ ಲತೆಗಳು ಮೂಳೆಗಳುಳ್ಳ ಸಾವಿರ ಪ್ರಾಣಿಗಳು ಇವುಗಳನ್ನೂ ಮತ್ತು ಮೂಳೆಗಳಿಲ್ಲದ ಪ್ರಾಣಿಗಳನ್ನೂ ಹನನ ಮಾಡಿದರೂ ಸಹ ಶೂದ್ರಹತ್ಯಾ ಪ್ರಾಯಶ್ಚಿತ್ತವನ್ನೇ ಮಾಡಿಕೊಳ್ಳಬೇಕು.

೧೩೫. ಇವುಗಳಲ್ಲಿ ಮೂಳೆಯುಳ್ಳ ಪ್ರಾಣಿಗಳ ಅಲ್ಪಸ್ವಲ್ಪ ವಧವುಂಟಾದಲ್ಲಿ (ಅಂದರೆ ಸಹಸ್ರಸಂಖ್ಯೆಯು ಪೂರ್ಣವಾಗದೆ ಇದ್ದಲ್ಲಿ ಎಂದರ್ಥ). ಬ್ರಾಹ್ಮಣನಿಗೆ ಯಥಾಶಕ್ತಿ ದಾನವನ್ನು ಮಾತ್ರ ಮಾಡಬೇಕು. ಮೂಳೆ ಇಲ್ಲದಿರುವ ಪ್ರಾಣಿಗಳ ವಧವಿಷಯದಲ್ಲಿ ಪ್ರಾಣಾಯಾಮ ಮಾತ್ರದಿಂದಲೇ ಶುದ್ಧಿಹೊಂದಬಹುದು.

ಅನಸ್ಥ್ನಾಂ ಚೈವ ಹಿಂಸಾಯಾಂ ಪ್ರಾಣಾಯಾಮೇನ ಶುಧ್ಯತಿ ।
ಅನ್ನಾದ್ಯಜಾನಾಂ ಸತ್ವಾನಾಂ ರಸಜಾನಾಂ ಚ ಸರ್ವಶಃ ॥ ೧೩೬ ॥

ಫಲಪುಷ್ಪೋದ್ಭವಾನಾಂ ಚ ಘೃತಪ್ರಾಶೋ ವಿಶೋಧನಂ ।
ಕೃಷ್ಟಜಾನಾಮೌಷಧೀನಾಂ ಜಾತಾನಾಂ ಚ ಸ್ವಯಂ ವನೇ ॥ ೧೩೭ ॥

ವೃಥಾರಂಭೇಣ ಗಚ್ಛೇದ್ಗಾಂ ದಿನಮೇಕಂ ಪಯೋವ್ರತಃ ।
ಏತೈರ್ವ್ರತೈರಪೋಹ್ಯಂ ಸ್ಯಾದೇನೋ ಹಿಂಸಾಸಮುದ್ಭವಂ ॥ ೧೩೮ ॥

ಸ್ತೇಯದೋಷಾಪಹರ್ತ್ರೄಣಾಂ ವ್ರತಾನಾಂ ಶ್ರೂಯತಾಂ ವಿಧಿಃ ।
ಧಾನ್ಯಾನಿ ಧನಚೌರ್ಯಾಣಿ ಕೃತ್ವಾ ಕಾಮಾದ್ವಿಜೋತ್ತಮಃ ॥ ೧೩೯ ॥

---

೧೩೬-೧೩೮. ಅನ್ನಾದಿ ವಸ್ತುಗಳೇ ಆಹಾರವಾಗಿ ಉಳ್ಳ ಪ್ರಾಣಿಗಳಿಂದ ಉದ್ಭವಿಸಿದ ಜಂತುಗಳನ್ನೂ ಮತ್ತು ಜಲದಲ್ಲಿ ಉದ್ಭವಿಸಿದ ಜಂತುಗಳನ್ನೂ, ಹಣ್ಣು ಹೂವು ಮೊದಲಾದವುಗಳಿಂದ ಹುಟ್ಟಿದ ಕ್ರಿಮಿಕೀಟಾದಿಗಳನ್ನೂ ವಧಮಾಡಿದ ಪಾಪವು ತುಪ್ಪದ ಪ್ರಾಶನದಿಂದ ಹೋಗಲಾಡಿಸಲ್ಪಡುತ್ತದೆ. ಭೂಮಿಯನ್ನು ಉತ್ತು ಅಲ್ಲಿ ಬೆಳೆಸಿದ ಭತ್ತವೇ ಮೊದಲಾದ ಓಷಧಿ ವಿಶೇಷಗಳನ್ನೂ (ಫಲಪಾಕದಿಂದಲೇ ಒಣಗಿ ಕಟಾವಿಗೆ ಬರುವ ಭತ್ತ ರಾಗಿ ಮುಂತಾದ ಸಸ್ಯಗಳಿಗೆ ಓಷಧಿಗಳೆಂದು ವ್ಯವಹಾರ) ಅರಣ್ಯದಲ್ಲಿ (ವ್ಯವಸಾಯವಿಲ್ಲದೆ) ತಾನಾಗಿ ಬೆಳೆದ ಅಂತಹ ಓಷಧಿಗಳನ್ನೂ ಅಕಾಲದಲ್ಲಿ ನಾಶಮಾಡಿದಲ್ಲಿ ಒಂದುದಿನ ಮಾತ್ರ ಬೇರೆ ಯಾವ ಕೆಲಸವನ್ನೂ ಮಾಡದೆ ಹಾಲಿನಿಂದಲೇ ಆಹಾರಹೊಂದಿ ಗೋವನ್ನು ಅನುವರ್ತಿಸಿ ಅದನ್ನು ಸೇವಿಸಬೇಕು. ಹಿಂಸೆಗಳಿಂದುಂಟಾದ ಪಾಪಗಳನ್ನು ಈ ವ್ರತಗಳಿಂದ ಹೋಗಲಾಡಿಸಿ ಕೊಳ್ಳಬೇಕು.

೧೩೯-೧೪೦. ಕಳ್ಳತನದಿಂದ ಉಂಟಾಗುವ ಪಾಪಗಳನ್ನು ಹೋಗಲಾಡಿಸುವ ವ್ರತಗಳನ್ನು ಹೇಳುತ್ತೇನೆ ಕೇಳು. ದ್ವಿಜಶ್ರೇಷ್ಠನಾದವನು ಸ್ವಜಾತೀಯವರ ಮನೆಯಲ್ಲಿಯೇ ಧಾನ್ಯಧನಾದಿಗಳನ್ನು ಬುದ್ಧಿಪೂರ್ವಕವಾಗಿ ಅಪಹರಿಸುದುದೇ ಆದರೆ, ಒಂದು ವರ್ಷಪರ್ಯಂತ ಕೃಚ್ಛ್ರಾಚರಣೆಯಿಂದ ಶುದ್ಧನಾಗುತ್ತಾನೆ.

ಸ್ವಜಾತೀಯಗೃಹಾದೇವ ಕೃಚ್ಛ್ರಾಬ್ದೇನ ವಿಶುಧ್ಯತಿ |
ಮನುಷ್ಯಾಣಾಂ ತು ಹರಣೇ ಸ್ತ್ರೀಣಾಂ ಕ್ಷೇತ್ರಗೃಹಸ್ಯ ಚ || ೧೪೦ ||

ಕೂಪವಾಪೀಜಲಾನಾಂ ತು ಶುದ್ಧಿಶ್ಚಾಂದ್ರಾಯಣಂ ಸ್ಮೃತಂ |
ದ್ರವ್ಯಾಣಾಮಲ್ಪಸಾರಾಣಾಂ ಸ್ತೇಯಂ ಕೃತ್ವಾಽನ್ಯವೇಶ್ಮತಃ || ೧೪೧ ||

ಚರೇತ್ಸಾಂತಪನಂ ಕೃಚ್ಛ್ರಂ ತನ್ನಿರ್ಯಾತ್ಯಾತ್ಮಶುದ್ಧಯೇ |
ಭಕ್ಷ್ಯಭೋಜ್ಯಾಪಹರಣೇ ಯಾನಶಯ್ಯಾಸನಸ್ಯ ಚ || ೧೪೨ ||

ಪುಷ್ಪಮೂಲಫಲಾನಾಂ ಚ ಪಂಚಗವ್ಯಂ ವಿಶೋಧನಂ |
ತೃಣಕಾಷ್ಠದ್ರುಮಾಣಾಂ ತು ಶುಷ್ಕಾನ್ನಸ್ಯ ಗುಡಸ್ಯ ಚ || ೧೪೩ ||

ಚೈಲಚರ್ಮಾಮಿಷಾಣಾಂ ಚ ತ್ರಿರಾತ್ರಂ ಸ್ಯಾದಭೋಜನಂ |
ಮಣಿಮುಕ್ತಾಪ್ರವಾಲಾನಾಂ ತಾಮ್ರಸ್ಯ ರಜತಸ್ಯ ಚ || ೧೪೪ ||

---

ಮನುಷ್ಯರನ್ನೂ, ಸ್ತ್ರೀಯರನ್ನೂ, ಹೊಲ, ಮನೆ, ಮುಂತಾದುವುಗಳ ನೀರನ್ನೂ ಅಪಹರಿಸುದುದೇ ಆದರೆ ಅಂತಹ ಪಾಪದಿಂದ ಅವನು ಚಾಂದ್ರಾಯಣವನ್ನಾಚರಿಸಿಯೇ ಶುದ್ಧಿ ಹೊಂದಬೇಕು.

೧೪೧-೧೪೨. ಅಲ್ಪ ಬೆಲೆಯುಳ್ಳ ಸಾಮಾನ್ಯ ಪದಾರ್ಥಗಳನ್ನು ಮತ್ತೊಬ್ಬರ ಮನೆಯಿಂದ ಅಪಹರಿಸುದುದೇ ಆದರೆ ಆ ಪಾಪನಿವೃತ್ತಿಯಿಂದ ಆತ್ಮಶುದ್ಧಿಯನ್ನು ಹೊಂದಬೇಕಾದಲ್ಲಿ ಸಾಂತಪನವೆಂಬ ಕೃಚ್ಛ್ರವನ್ನಾಚರಿಸಬೇಕು. ಮತ್ತೊಬ್ಬನ ಭಕ್ಷ್ಯಭೋಜ್ಯವಸ್ತುಗಳನ್ನೂ, ವಾಹನ, ಹಾಸಿಗೆ, ಆಸನ ಮೊದಲಾದುವನ್ನೂ ಫಲ, ಪುಷ್ಪ, ಮೂಲ ಮೊದಲಾದುವುಗಳನ್ನೂ ಅಪಹರಿಸಿದಲ್ಲಿ ಅಂತಹ ಪಾಪ ನಿವೃತ್ತಿಯಿಂದ ಪರಿಶುದ್ಧನಾಗಲು ಪಂಚಗವ್ಯಪ್ರಾಶನ ಮಾಡಬೇಕು.

೧೪೩-೧೪೪. ಮತ್ತೊಬ್ಬನ ಹುಲ್ಲು, ಸೌದೆ, ಮರಗಳು, ಒಣಗಿದ ಆಹಾರ ವಸ್ತುಗಳು, ಬೆಲ್ಲ, ಬಟ್ಟೆಗಳು, ಚರ್ಮ, ಮಾಂಸ ಮುಂತಾದುವನ್ನು ಅಪಹರಿಸಿದಲ್ಲಿ ಆ ಪಾತಕದಿಂದ ಶುದ್ಧನಾಗಲು ಮೂರು ರಾತ್ರಿ ಉಪವಾಸವಿರಬೇಕು. ರತ್ನಗಳು, ಮುತ್ತುಗಳು, ಹವಳ, ತಾಮ್ರ, ಬೆಳ್ಳಿ, ಕಬ್ಬಿಣ, ಕಂಚು, ಕಲ್ಲಿನ ಪದಾರ್ಥಗಳು ಇವನ್ನು ಅಪಹರಿಸಿದಲ್ಲಿ ಹನ್ನೆರಡು ದಿನಗಳವರೆಗೂ ಕಣಾನ್ನ ಭಕ್ಷಣದಿಂದ ನಿಯಮದಲ್ಲಿರಬೇಕು.

ಅಯಸ್ಕಾಂಸ್ಯೋಪಲಾನಾಂ ಚ ದ್ವಾದಶಾಹಂ ಕಣಾನ್ನಭುಕ್ |
ಕಾರ್ಪಾಸಕೀಟಕೋರ್ಣಾನಾಂ ದ್ವಿಶಫೈಕಶಫಸ್ಯ ಚ ॥ ೧೪೫ ॥

ಪಕ್ಷಿಗಂಧೌಷಧೀನಾಂ ಚ ರಜ್ವಾಶ್ಚೈವ ತ್ರ್ಯಹಂ ಪಯಃ |
ಏತೈರ್ವ್ರತೈರಪೋಹೇತ ಪಾಪಂ ಸ್ತೇಯಕೃತಂ ದ್ವಿಜಃ ॥ ೧೪೬ ॥

ಅಗಮ್ಯಾಗಮನೀ ಏನಃ ವ್ರತೈರೇಭಿರಪಾನುದೇತ್ |
ಗುರುತಲ್ಪವ್ರತಂ ಕುರ್ಯಾದ್ರೇತಃ ಸಿಕ್ತ್ವಾ ಸ್ವಯೋನಿಷು ॥ ೧೪೭ ॥

ಸಖ್ಯುಃ ಪುತ್ರಸ್ಯ ಚ ಸ್ತ್ರೀಷು ಕುಮಾರೀಷ್ವಂತ್ಯಜಾಸು ಚ |
ಪೈತೃಷ್ವಸೇಯೀಂ ಭಗಿನೀಂ ಸ್ವಸ್ರೀಯಾಂ ಮಾತುರೇವ ಚ ॥ ೧೪೮ ॥

---

೧೪೫–೧೪೬. ಹತ್ತಿ, ರೇಷ್ಮೆ, ಉಣ್ಣೆ ಮುಂತಾದುವನ್ನೂ, ಕುದುರೆ ಮೊದಲಾದ ಒಂದು ಗೊರಸುಳ್ಳ ಹಸುವೇ ಮೊದಲಾದ ಎರಡು ಗೊರಸುಳ್ಳ ಪ್ರಾಣಿಗಳನ್ನೂ, ಪಕ್ಷಿ, ಚಂದನ, ಓಷಧಿಗಳು. ಮತ್ತು ಹಗ್ಗ ಇವನ್ನು ಅಪಹರಿಸಿದವನು, ಮೂರು ದಿವಸ ಹಾಲಿನ ಆಹಾರದಿಂದಲೇ ಇರಬೇಕು. ಇಂತಹ ವ್ರತಗಳಿಂದ ದ್ವಿಜನಾದವನು ಕಳ್ಳತನದಿಂದುಂಟಾದ ಪಾಪಗಳನ್ನು ಹೋಗಲಾಡಿಸಿಕೊಳ್ಳಬೇಕು.

೧೪೭–೧೪೮. ಅಗಮ್ಯರಾದ ಸ್ತ್ರೀಯರಲ್ಲಿ ಗಮನಮಾಡಿದವರು ಈ ವ್ರತಗಳಿಂದ ಪಾತಕಗಳನ್ನು ಹೋಗಲಾಡಿಸಿಕೊಳ್ಳಬೇಕು, ಅನ್ಯಸ್ತ್ರೀಯಲ್ಲಿಯೂ, ಸ್ನೇಹಿತನ ಮತ್ತು ಪುತ್ರನ ಸ್ತ್ರೀಯಲ್ಲಿಯೂ, ಕೌಮಾರಾವಸ್ಥೆಯಲ್ಲಿರುವ ಅವಿವಾಹಿತ ಯುವತಿಗಳಲ್ಲಿಯೂ, ಚಂಡಾಲರೇ ಮೊದಲಾದ ಅಂತ್ಯಜಾತಿಯ ಸ್ತ್ರೀಯಲ್ಲಿಯೂ ಸಂಗಮನಮಾಡಿದವನು ಗುರುತಲ್ಪವೆಂಬ ಪಾತಕಕ್ಕೆ ಹೇಳಿರುವ ವ್ರತವನ್ನೇ ಪ್ರಾಯಶ್ಚಿತ್ತವನ್ನಾಗಿ ಆಚರಿಸಬೇಕು. ಅತ್ತೆಯ ಮಗಳನ್ನೂ (ತಂದೆಯ ಸೋದರಿ ಮಗಳು) ಅಕ್ಕನನ್ನೂ ತಾಯಿಯ ತಂಗಿಯಮಗಳನ್ನೂ, ತಾಯಿಯ ಅಣ್ಣನ ಅಥವಾ ತಮ್ಮನ ಮಗಳನ್ನೂ (ಸೋದರಮಾವಂದಿರ ಹೆಣ್ಣುಮಕ್ಕಳು) ಗಮನ ಮಾಡಿದವನು ಪಾಪನಾಶಕ್ಕಾಗಿ ಚಾಂದ್ರಾಯಣವನ್ನಾಚರಿಸಬೇಕು.

ಮಾತುಶ್ಚ ಭ್ರಾತುಸ್ತನಯಾಂ ಗತ್ವಾ ಚಾಂದ್ರಾಯಣಂ ಚರೇತ್ ।
ಏತಾಸ್ತಿಸ್ರಸ್ತು ಭಾರ್ಯಾರ್ಥೇ ನೋಪಯಚ್ಛೇತ ಬುದ್ಧಿಮಾನ್ ॥ ೧೪೯ ॥

ಜ್ಞಾತಯೋ ನೋಪಯಮನಾಃ ಪಿತುಶ್ಚ ಹ್ಯುಪಯನ್ನಧಃ ।
ಅಮಾನುಷೀಷು ಪುರುಷಃ ಉದಕ್ಯಾಂ ವಾಮಯೋನಿಷು ॥ ೧೫೦ ॥

ರೇತಃ ಸಿಕ್ತ್ವಾ ಜಲೇ ಚೈವ ಕೃಚ್ಛ್ರಂ ಸಾಂತಪನಂ ಚರೇತ್ ।
ಮೈಥುನಂ ತು ಸಮಾಸೇವ್ಯ ಪುಂಸಿ ಯೋಷಿತಿ ವಾ ದ್ವಿಜಃ ॥ ೧೫೧ ॥

ಗೋಯಾನೇಷು ದಿವಾ ಚೈವ ಸವಾಸಾಃ ಸ್ನಾನಮಾಚರೇತ್ ।
ಚಂಡಾಲಾನ್ತ್ಯಜಸ್ತ್ರೀಯೋಗಾದ್ಭುಕ್ತ್ವಾ ಚ ಪ್ರತಿಗೃಹ್ಯ ಚ ॥ ೧೫೨ ॥

---

೧೪೯-೧೫೦. ಬುದ್ಧಿಶಾಲಿಯಾದವನು ಈ ಮೂರುಕನ್ಯೆಯರನ್ನೂ ಮದುವೆಮಾಡಿಕೊಳ್ಳಬಾರದು (ಇಲ್ಲಿ ಸೋದರತ್ತೆ ಮಕ್ಕಳು. ತಾಯಿಯ ತಂಗಿಯ (ಚಿಕ್ಕತಾಯಿಯ) ಮಕ್ಕಳು ಸೋದರಮಾವಂದಿರ ಮಕ್ಕಳು ಈ ಮೂರು ಕನ್ಯೆಯರೇ ನಿಷೇಧಿಸಲ್ಪಟ್ಟಿರುವರೆಂದು ತಿಳಿಯಬೇಕು ಭಗಿನಿ (ಅಕ್ಕ) ಯನ್ನು ಈ ಶ್ಲೋಕದಲ್ಲಿ ಹೇಳಿದ್ದರೂ ಅವಳು ಅಧಿಕವಯಸ್ಸಿನವಳಾದುದರಿಂದ ಅವಳ ವಿವಾಹಕ್ಕೆ ಪ್ರಸಂಗವೇ ಇಲ್ಲ ಕಡಿಮೆವಯಸ್ಸುಳ್ಳ ಈ ಮೂವರ ವಿಷಯದಲ್ಲೇ ಪ್ರಸಂಗವನ್ನು ಆಶಂಕಿಸಿ ನಿಷೇಧಿಸಿದ್ದಾರೆ.) ತಂದೆಯ ಜ್ಞಾತಿವರ್ಗಕ್ಕೆ ಸೇರಿರುವವರ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬಾರದು, ಹಾಗೆ ಮಾಡಿಕೊಂಡಲ್ಲಿ ಅಧಃಪಾತವನ್ನು ಹೊಂದುತ್ತಾನೆ ಯಾವ ವರ್ಣಕ್ಕೆ ಸೇರಿದ ಮನುಷ್ಯನಾದರೂ ಮನುಷ್ಯೇತರ ಪ್ರಾಣಿಗಳಲ್ಲಿಯೂ, ರಜಸ್ವಲೆಯಾದ, ತನಗಿಂತ ಹೀನವರ್ಣದ ಸ್ತ್ರೀಯಲ್ಲಿಯೂ, ಜಲದಲ್ಲಿಯೂ ಮೈಥುನ ಮಾಡಿದುದೇ ಆದರೆ ಸಾಂತಪನವೆಂಬ ಕೃಚ್ಛ್ರವನ್ನಾಚರಿಸಬೇಕು.

೧೫೧-೧೫೨. ದ್ವಿಜನಾದವನು ಪುರುಷನಲ್ಲಿಯೇ ಆಗಲಿ, ಪರಸ್ತ್ರೀಯಲ್ಲಿಯೇ ಆಗಲಿ ಮೈಥುನವನ್ನು ಸೇವಿಸುದುದೇ ಆದರೆ ಹಗಲಿನಲ್ಲೆಲ್ಲಾ ಗೋವನ್ನು ಅನುಸರಿಸಿ ಸಂಚರಿಸಿ ಅನಂತರ ಸಚೇಲ ಸ್ನಾನಮಾಡಬೇಕು. ಚಂಡಾಲ ಮತ್ತು ಅವನಿಗಿಂತಲೂ ಹೀನವಾದ ಜಾತಿಯ ಸ್ತ್ರೀಸಂಬಂಧದಿಂದ ಭೋಜನ ಪ್ರತಿಗ್ರಹಾದಿಗಳನ್ನು ಮಾಡಿದಲ್ಲಿ ಹಾಗೆ ಮಾಡಿದ ಬ್ರಾಹ್ಮಣನು ಅಜ್ಞಾನದಿಂದ ಮಾಡಿದ್ದದ್ದೇ ಆದರೆ

ಪತತ್ಯಜ್ಞಾನತೋ ವಿಪ್ರೋ ಜ್ಞಾನಾತ್ಸಾಮ್ಯಂ ಚ ಗಚ್ಛತಿ ।
ವಿಪ್ರದುಷ್ಟಾಂ ಸ್ತ್ರಿಯಂ ಭರ್ತಾ ನಿರುಂಧ್ಯಾದೇಕವೇಶ್ಮನೀ ॥ ೧೫೩ ॥

ಯತ್ಪುಂಸಃ ಪರದಾರೇಷು ತಚ್ಚೈನಾಂ ಚಾರಯೇದ್ವ್ರತಂ ।
ಸಾ ಚೇತ್ಪುನಃ ಪ್ರದುಷ್ಯೇತ ಸದೃಶೇನೋಪಮಂತ್ರಿತಾ ॥ ೧೫೪ ॥

ಕೃಚ್ಛ್ರಂ ಚಾಂದ್ರಾಯಣಂ ಚೈವ ತದಸ್ಯಾಃ ಪಾವನಂ ಸ್ಮೃತಂ ।
ಯತ್ಕರೋತ್ಯೇಕರಾತ್ರೇಣ ವೃಷಲೀ ಸೇವನಾದ್ವಿಜಃ ॥ ೧೫೫ ॥

ತದ್ಭೈಕ್ಷ್ಯಭುಗ್ಜಪನ್ನಿತ್ಯಂ ತ್ರಿಭಿರ್ವರ್ಷೈಃ ವ್ಯಪೋಹತಿ ।
ಏಷಾ ಪಾಪಕೃತಾಮುಕ್ತಾ ಚತುರ್ಣಾಮಪಿ ನಿಷ್ಕೃತಿಃ ॥ ೧೫೬ ॥

---

ಪತಿತನಾಗುತ್ತಾನೆ (ಪಾತಕಿಯಾಗುತ್ತಾನೆ.) ಬುದ್ಧಿಪೂರ್ವಕವಾಗಿ ಮಾಡಿದ್ದಲ್ಲಿ ಆ ವರ್ಣದ ಸಾಮ್ಯವನ್ನೇ ಹೊಂದುತ್ತಾನೆ. (ಪಾತಕಿಯಾಗುವುದು ಮಾತ್ರವಲ್ಲದೆ ಆ ವರ್ಣದ ಸಾಮ್ಯವೂ ಉಂಟಾಗುತ್ತದೆ ಎಂದು ತಾತ್ಪರ್ಯ.)

೧೫೩-೧೫೪. ಬ್ರಾಹ್ಮಣನಿಂದಲೇ (ವ್ಯಭಿಚಾರದಿಂದ) ದೂಷಿಸಲ್ಪಟ್ಟ ಬ್ರಾಹ್ಮಣ ಸ್ತ್ರೀಯನ್ನು ಪತಿಯಾದವನು ಅಂತಹ ದೋಷಕ್ಕೆ ಅವಕಾಶಕೊಡದೆ ಒಂದೇ ಮನೆಯಲ್ಲಿ ಅವಳನ್ನು (ಹೊರಕ್ಕೆ ಬಿಡದೆ) ಬಂಧಿಸಬೇಕು. ಪರಸ್ತ್ರೀಯಲ್ಲಿ ಪ್ರವರ್ತಿಸಿದ ಪುರುಷನಿಗೆ ಯಾವ ವ್ರತವು ಪಾಪನಾಶಕ್ಕಾಗಿ ಹೇಳಲ್ಪಟ್ಟಿದೆಯೋ ಅಂತಹ ವ್ರತವನ್ನೇ ಇವಳಿಂದಲೂ ಮಾಡಿಸಬೇಕು. ಹೀಗೆ ಮಾಡಿದರೂ ಅವಳು ಪುನಃ ಸಮಾನವರ್ಣದ ಬ್ರಾಹ್ಮಣನಿಂದಲೇ ದೂಷಿಸಲ್ಪಟ್ಟಲ್ಲಿ ಕೃಚ್ಛ್ರ ಚಾಂದ್ರಾಯಣಗಳಿಂದಲೇ ಅವಳು ಶುದ್ಧಿಹೊಂದಬೇಕು.

೧೫೫-೧೫೬. ದ್ವಿಜನಾದವನು ಶೂದ್ರೀಸೇವನೆಯಿಂದ ಒಂದು ರಾತ್ರಿಯಲ್ಲಾದರೂ ಎಷ್ಟು ಪಾಪಹೊಂದುವನೋ, ಅಂತಹ ಪಾಪವನ್ನು ಅವನು ನಿತ್ಯವೂ ಭಿಕ್ಷಾನ್ನದಿಂದ ಜೀವಿಸುತ್ತಾ ಮೂರುವರ್ಷ ಪರ್ಯಂತ ಜಪನಿಯಮದಲ್ಲಿದ್ದು ಹೋಗಲಾಡಿಸಿಕೊಳ್ಳಬೇಕು. ಇಲ್ಲಿಯವರಿಗೆ ಸಾಕ್ಷಾತ್ತಾಗಿ ಪಾಪಮಾಡಿದ ನಾಲ್ಕು ವರ್ಣದವರಿಗೂ ಪ್ರಾಯಶ್ಚಿತ್ತವನ್ನು ಹೇಳಿ ಆಯಿತು. ಇನ್ನುಮುಂದೆ ಪತಿತರಾದವರ ಸಂಸರ್ಗದಿಂದ ಉಂಟಾಗುವ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ, ಕೇಳಿರಿ.

ಪತಿತೈಃ ಸಂಪ್ರಯುಕ್ತಾನಾಮಿಮಾಃ ಶೃಣುತ ನಿಷ್ಕೃತೀಃ ।
ಸಂವತ್ಸರೇಣ ಪತತಿ ಪತಿತೇನ ಸಹಾಚರನ್　　　　॥ ೧೫೭ ॥

ಯಾಜನಾಧ್ಯಾಪನಾದ್ದಾನಾದುಕ್ತಿಪಾನಾಶನಾಸನಾತ್ ।
ಯೋ ಯೇನ ಪತಿತೇನೈಷಾಂ ಸಂಸರ್ಗಂ ಯಾತಿ ಮಾನವಃ　　　　॥ ೧೫೮ ॥

ಸ ತಸ್ಯೈವ ವ್ರತಂ ಕುರ್ಯಾತ್ತತ್ಸಂಸರ್ಗಸ್ಯ ಶುದ್ಧಯೇ ।
ಪತಿತಸ್ಯೋದಕಂ ಕಾರ್ಯಂ ಸಪಿಂಡೈರ್ಬಾಂಧವೈಸ್ಸಹ　　　　॥ ೧೫೯ ॥

ನಿಂದಿತೇಽಹನಿ ಸಾಯಾಹ್ನೇ ಜ್ಞಾತ್ಯೃತ್ವಿಗ್ಗುರುಸನ್ನಿಧೌ ।
ದಾಸೀ ಘಟಮಪಾಂ ಪೂರ್ಣಂ ಪರ್ಯಸ್ಯೇತ್ಪ್ರೇತವತ್ಸದಾ　　　　॥ ೧೬೦ ॥

---

೧೫೭–೧೫೮. ಯಾಜನ, ಅಧ್ಯಾಪನದಾನ ಇವುಗಳಿಂದಲೂ, ಅಸಂಭಾವ್ಯ ಭಾಷಣ, ಅಪೇಯಪಾನ, ನಿಷಿದ್ಧವಸ್ತುಗಳ ಭಕ್ಷಣ, ನಿಂದ್ಯರ ಸಹವಾಸಾದಿಗಳಿಂದಲೂ ಪತಿತನಾದವನೊಡನೆ ಒಂದು ವರ್ಷಕಾಲ ಸಂಸರ್ಗ ಹೊಂದಿದವನೂ ಪತಿತನೇ ಆಗುತ್ತಾನೆ. ಮೇಲೆ ಹೇಳಿರುವ ಕಾರಣಗಳಿಂದ ಯಾವ ಮನುಷ್ಯನು ಪತಿತನ ಸಂಸರ್ಗದಿಂದ ದೂಷಿಸಲ್ಪಡುತ್ತಾನೆಯೋ ಅವನೂ ಸಹ ಸಂಸರ್ಗದಿಂದುಂಟಾದ ಪಾಪನಿವೃತ್ತಿಗಾಗಿ ಪತಿತನಿಗೆ ಹೇಳಲಾಗಿರುವ ವ್ರತವನ್ನೇ ಆಚರಿಸಬೇಕು.

೧೫೯–೧೬೧. ಪತಿತನಾದವನು ಪ್ರಾಯಶ್ಚಿತ್ತಾದಿಗಳಿಂದ ಶುದ್ಧಿಹೊಂದದೇ ಇದ್ದಲ್ಲಿ ಅವನ ಜ್ಞಾತಿಗಳೆಲ್ಲರೂ ಏಕೀಭವಿಸಿ ದುಷ್ಟವಾದ (ರಿಕ್ತವೇ ಮೊದಲಾದ) ತಿಥಿಯಲ್ಲಿ ಸಾಯಂಕಾಲದಲ್ಲಿ ಸ್ವಜನರು ಋತ್ವಿಕ್ಕುಗಳು ಗುರು ಇವರೆದುರಿಗೆ ಆ ಪತಿತನಾಮ ನಿರ್ದೇಶಪೂರ್ವಕವಾಗಿ ಉದಕದಾನ ಮತ್ತು ಪ್ರೇತಕಾರ್ಯವನ್ನು ನಡೆಸಬೇಕು. ಅನಂತರ ದಾಸಿಯೊಬ್ಬಳು ಅಶುಚಿಕರವಾದ ನೀರಿನಿಂದ ತುಂಬಿದ ಗಡಿಗೆಯನ್ನು ತಂದು ಈ ಜ್ಞಾತಿಗಳಿಂದ ನೆಲದಲ್ಲಿ ಹಾಕಲ್ಪಟ್ಟ ಅಗ್ರವಿಲ್ಲದ ದರ್ಭೆಗಳ ಮೇಲೆ ಇತರ ದಾಸಿಗಳೊಡಗೂಡಿ ಬಂದು ಆ ಗಡಿಗೆಯನ್ನು ತಲೆ ಕೆಳಗಾಗುವಂತೆ ಎಡಗಾಲಿನಿಂದ ಶವದಂತೆ ಉರುಟಿಸಬೇಕು. ಆಗ ಜ್ಞಾತಿಗಳು ಇವನು ಉದಕಕ್ಕೆ ಅರ್ಹನಲ್ಲವೆಂದು ಎಲ್ಲರೂ ಸಾರಿಹೇಳಿ ಆ ಒಂದು ದಿನ ಮಾತ್ರ ಆಶೌಚವನ್ನನುಭವಿಸಬೇಕು. ಅನಂತರ ಆ ಪತಿತನೊಡನೆ ಸಂಭಾಷಣ ಸಹ

ಅಹೋರಾತ್ರಮುಪಾಸೀರನ್ನಶೌಚಂ ಬಾಂಧವೈಸ್ಸಹ ।
ನಿವರ್ತಯೇರ್ಯ ತಸ್ಮಾತ್ತು ಸಂಭಾಷಣಸಹಾಸನೇ ॥ ೧೬೧ ॥

ದಾಯಾದಸ್ಯ ಪ್ರದಾನಂ ಚ ಯಾತ್ರಾಮೇವ ಚ ಲೌಕಿಕೀಂ ।
ಜ್ಯೇಷ್ಠಭಾಗಂ ನಿವರ್ತೇತ ಜ್ಯೇಷ್ಠಾವಾಪ್ತಂ ಚ ಯದ್ವಸು ॥ ೧೬೨ ॥

ಜ್ಯೇಷ್ಠಾಂಶಂ ಪ್ರಾಪ್ನುಯಾಚ್ಚಾಪಿ ಯವೀಯಾರ್ನ್ ಗುಣತೋಽಧಿಕಃ ।
ಪ್ರಾಯಶ್ಚಿತ್ತೇತು ಚರಿತೇ ಪೂರ್ಣಂ ಕುಂಭಮಪಾಂ ನವಂ ॥ ೧೬೩ ॥

ತೇನೈವ ಸಾರ್ಧಂ ಪ್ರಾಪ್ಯೇಯುಃ ಸ್ನಾತ್ವಾ ಪುಣ್ಯೇ ಜಲಾಶಯೇ ।
ಸತ್ಸ್ವಪ್ಸು ತಂ ಘಟಂ ಪ್ರಾಪ್ಯ ಪ್ರವಿಶ್ಯ ಭವನಂ ಸ್ವಕಂ ॥ ೧೬೪ ॥

---

ವಾಸಾದಿಗಳನ್ನು ಬಿಡಬೇಕು. (ಇಲ್ಲಿ ಮಿತಾಕ್ಷರಾ ಎಂಬ ಗ್ರಂಥದ ಕ್ರಮವನ್ನನುಸರಿಸಿ ಪ್ರೇತಕಾರ್ಯವನ್ನು ಮೊದಲೇ ನಿರೂಪಿಸಿ ಅನಂತರ ಗಡಿಗೆಯ ಸ್ಫೋಟವನ್ನು ಹೇಳಿರುವರು. ಧರ್ಮಸಿಂಧುವಿನಲ್ಲಿ ಮೊದಲೇ ಗಡಿಗೆಯ ಭಂಗವನ್ನು ಹೇಳಿ ಅನಂತರ ಜ್ಞಾತಿಗಳು ಮಾಡತಕ್ಕ ಪ್ರೇತಕಾರ್ಯವನ್ನು ನಿರೂಪಿಸಿರುವರು. ಇದು ಆಯಾಯ ದೇಶಭೇದದಿಂದ ಬಂದ ಆಚಾರಭೇದವೆಂದು ತೋರುತ್ತದೆ.)

೧೬೨-೧೬೩. ಅಂತಹ ಪತಿತನಿಗೆ ದಾಯಭಾಗವನ್ನು ಕೊಡಕೂಡದು. ಅವನೊಡನೆ ಲೌಕಿಕವಾದ ಯಾವ ವ್ಯವಹರಣೆಯನ್ನೂ ಮಾಡಕೂಡದು. ಜ್ಯೇಷ್ಠಭಾಗವನ್ನೂ ಕೊಡಕೂಡದು. ಆ ಜ್ಯೇಷ್ಠಾಂಶವನ್ನು ಕಿರಿಯವರಲ್ಲಿ ಗುಣಶಾಲಿಯಾದವನೇ ಹೊಂದಬೇಕು. ಹೀಗೆ ಪರಿತ್ಯಾಗಮಾಡಿದನಂತರ ಪಶ್ಚಾತ್ತಾಪದಿಂದ ಅವನು ಪ್ರಾಯಶ್ಚಿತ್ತ ಮಾಡಿಕೊಂಡದ್ದೇ ಆದರೆ, ಗೋಗ್ರಾಸಾದಿಗಳಿಂದ ಅವನ ಶುದ್ಧಿಯನ್ನು ಪರೀಕ್ಷಿಸಿ ಶುದ್ಧನಾಗಿದ್ದಲ್ಲಿ ಸುವರ್ಣದ ಅಥವ ಮಣ್ಣಿನ ಹೊಸಘಟವನ್ನು ಪುಣ್ಯಕರವಾದ ತೀರ್ಥದ ಸಮೀಪಕ್ಕೆ ಕೊಂಡೊಯ್ದು ಜ್ಞಾತಿಗಳೆಲ್ಲರೂ ಘಟದಲ್ಲಿ ತುಂಬಿರುವ ತೀರ್ಥದಿಂದ ಮಂತ್ರಪೂರ್ವಕವಾಗಿ ಆ ಪಾತಕಿಯನ್ನು ಸ್ನಾನ ಮಾಡಿಸಿ ಅವನೊಡನೆ ತಾವೂ ಸ್ನಾನಮಾಡಿ ತೀರ್ಥದಿಂದ ತುಂಬಿದ ಆ ಘಟವನ್ನು ಆ ಪಾತಕಿಗೆ ಕೊಡಬೇಕು. ಅವನು ಮಂತ್ರಪೂರ್ವಕವಾಗಿ ಆ ಘಟವನ್ನು ಸ್ವೀಕರಿಸಿದ ನಂತರ ಅದರ ಜಲವನ್ನು ಅವನೊಡನೆ ಎಲ್ಲರೂ ಕುಡಿಯಬೇಕು.

೧೬೪-೧೬೫. ನೀರಿನಿಂದ ತುಂಬಿರುವಾಗಲೇ ಆ ಘಟವನ್ನು ತೆಗೆದುಕೊಂಡು ತಮ್ಮ ಮನೆಗೆ ಬಂದು ಜಾತಕರ್ಮ ಉಪನಯನಾದಿ ಕಾರ್ಯಗಳೆಲ್ಲವನ್ನೂ

ಸರ್ವಾಣಿ ಜ್ಞಾ[1]ತಿಕಾರ್ಯಾಣಿ ಯಥಾಪೂರ್ವಂ ಸಮಾಚರೇತ್ ।
ಏನಮೇವ ವಿಧಿಂ ಕುರ್ಯಾದ್ಯೋಷಿತ್ಸು ಪತಿತಾಸ್ವಪಿ || ೧೬೫ ||

ವಸ್ತ್ರಾನ್ನಪಾನ್ನಂ ದೇಯಂ ತು ವಸೇಯುಶ್ಚ ಗೃಹಾಂತಿಕೇ ।
ಏನಸ್ವಿಭಿರನಿರ್ಣಿಕ್ತೈರ್ನಾರ್ಥಂ ಕಿಂಚಿತ್ಸಮಾಚರೇತ್ || ೧೬೬ ||

ಕೃತನಿರ್ಣೇಜನಾಂಶ್ಚೈತಾನ್ನ ಜುಗುಪ್ಸೇತ ಕರ್ಹಿಚಿತ್ ।
ಬಾಲಘ್ನಾಂಶ್ಚ ಕೃತಘ್ನಾಂಶ್ಚ ವಿಶುದ್ಧಾನಪಿ ಧರ್ಮತಃ || ೧೬೭ ||

ಶರಣಾಗತಹಂತ್ರ್ಶ್ಚ ಸ್ತ್ರೀಹಂತ್ರ್ಯಾಂಶ್ಚ ನ ಸಂವಸೇತ್ ।
ಯೇಷಾಂ ದ್ವಿಜಾನಾಂ ಸಾವಿತ್ರೀ ನಾನೂಚ್ಯೇತ ಯಥಾವಿಧಿ || ೧೬೮ ||

ತಾಂಶ್ಚಾರಯಿತ್ವಾ ತ್ರೀನ್ ಕೃಚ್ಛ್ರಾನ್ಯಥಾವಿಧ್ಯುಪನಾಯಯೇತ್ ।
ಪ್ರಾಯಶ್ಚಿತ್ತಂ ಚಿಕೀರ್ಷಂತಿ ವಿಕರ್ಮಸ್ಥಾಸ್ತು ಯೇ ದ್ವಿಜಾಃ || ೧೬೯ ||

---

ಯಥಾಕ್ರಮವಾಗಿ ನಡೆಸಬೇಕು. ಸ್ತ್ರೀಯರು ಪತಿತರಾದರೂ ಅವರ ವಿಷಯದಲ್ಲಿ ಈ ವಿಧಿಯನ್ನೇ ಅನುಸರಿಸಬೇಕು. ವಸ್ತ್ರ, ಅನ್ನಪಾನಗಳನ್ನು ಮಾತ್ರ ಅವರಿಗೆ ಕೊಡಬೇಕು. ರಕ್ಷಣೆಗಾಗಿ ಮನೆಯ ಸಮೀಪದಲ್ಲೇ ವಾಸಮಾಡಬೇಕು.

೧೬೬–೧೬೭. ಪ್ರಾಯಶ್ಚಿತ್ತದಿಂದ ಶುದ್ಧರಾಗದವರೊಡನೆ ಯಾವ ಕೆಲಸವನ್ನೂ ಮಾಡಬಾರದು. ಪ್ರಾಯಶ್ಚಿತ್ತಾಚರಣದಿಂದ ಶುದ್ಧರಾದವರೊಡನೆ ಯಾವ ವಿಧವಾದ ಜುಗುಪ್ಸೆಯನ್ನೂ ತೋರಿಸಬಾರದು. ಆದರೆ ಆರೀತಿ ಪ್ರಾಯಶ್ಚಿತ್ತ ಹೊಂದಿ ಧಾರ್ಮಿಕದೃಷ್ಟಿಯಿಂದ ಶುದ್ಧರಾಗಿದ್ದರೂ, ಅವರು ಬಾಲಕನ ಹನನ, ಕೃತಘ್ನತೆ, ಶರಣಾಗತಹನನ ಸ್ತ್ರೀಹನನ ಈ ವಿಧವಾದ ಪಾಪಮಾಡಿದಲ್ಲಿ ಅಂತಹವರೊಡನೆ ಸಹವಾಸಮಾಡಬಾರದು. (ಇಂತಹ ಪಾತಕಿಗಳು ಪ್ರಾಯಶ್ಚಿತ್ತದಿಂದ ಪಾಪನಾಶವನ್ನು ಹೊಂದಿದ್ದರೂ ಅವರು ಸ್ವಕರ್ಮಾಚರಣೆಗೆ ಮಾತ್ರ ಶುದ್ಧರೇ ಹೊರತು, ಇತರರ ಸಂಸರ್ಗಕ್ಕೆ ಅರ್ಹರಲ್ಲವೆಂದು ತಾತ್ಪರ್ಯ.)

೧೬೮–೧೬೯. ಯಾವ ಬ್ರಾಹ್ಮಣರಿಗೆ ಉಪನಯನ ಕಾಲದಲ್ಲಿ ಉಪದೇಶ ಹೊಂದಿದ್ದ ಸಾವಿತ್ರಿಯು ಯಥಾವಿಧಿಯಾಗಿ ಅನುವರ್ತಿಸದೆ ವಿಚ್ಛೇದಹೊಂದು

---

1 ಇಲ್ಲಿ ಜಾತಕಾರ್ಯಾಣಿ ಎಂದು ಪಾಠವಿರಬೇಕೆಂದು ತೋರುತ್ತದೆ.

ಬ್ರಾಹ್ಮಣಾಶ್ಚ ಪರಿತ್ಯಕ್ತಾ ಯೇಷಾಂ ಮಧ್ಯೇ ತದಾದಿಶೇತ್ ।
ಯದ್ಗರ್ಹಿತೇನಾರ್ಜಯಂತಿ ಬ್ರಾಹ್ಮಣಾಃ ಕರ್ಮಣಾ ಧನಂ ॥ ೧೭೦ ॥

ತಸ್ಯೋತ್ಸರ್ಗೇಣ ಶುಧ್ಯಂತಿ ಜಪ್ಯೇನ ತಪಸೈವ ಚ ।
ಜಪಿತ್ವಾ ತ್ರೀಣಿ ಸಾವಿತ್ರ್ಯಾಃ ಸಹಸ್ರಾಣಿ ಸಮಾಹಿತಃ ॥ ೧೭೧ ॥

ಮಾಸಂ ಗೋಷ್ಠೇ ಪಯಃ ಪೀತ್ವಾ ಮುಚ್ಯತೇಽಸತ್ಪ್ರತಿಗ್ರಹಾತ್ ।
ಉಪವಾಸಕೃಶಂ ತಂ ತು ಗೋವ್ರಜಾತ್ಪುನರಾಗತಂ ॥ ೧೭೨ ॥

ಪ್ರಣತಂ ಪರಿಪೃಚ್ಛೇಯುಃ ಸೌಮ್ಯ ಸೌಮ್ಯೇಚ್ಛಸೀತಿ ಕಿಂ ।
ಸತ್ಯಮುಕ್ತ್ವಾ ತು ವಿಪ್ರೇಭ್ಯೋ ವಿತರೇದ್ಯವಸಂ ಗವಾಂ ॥ ೧೭೩ ॥

---

ವುದೋ ಅಂತಹ ಬ್ರಾಹ್ಮಣರಿಂದ ಮೂರು ಕೃಚ್ಛ್ರವನ್ನು ಮಾಡಿಸಿ ಪುನಃ ಉಪನಯನವನ್ನು ಮಾಡಿಸಬೇಕು. ಭ್ರಷ್ಟರಾದ ಬ್ರಾಹ್ಮಣರು ಶುದ್ಧಿಗಾಗಿ ಪ್ರಾಯಶ್ಚಿತ್ತವನ್ನು ಅಪೇಕ್ಷಿಸಿದಲ್ಲಿ ಅಂತಹ ಬ್ರಾಹ್ಮಣರನ್ನೇ ಆ ಕಾರ್ಯಕ್ಕೆ ವಿನಿಯೋಗಿಸಬೇಕು.

೧೭೦-೧೭೧. ಬ್ರಾಹ್ಮಣರಾದವರು ನಿಂದಿತವಾದ (ಕರ್ಮದಿಂದ) ಹಣವನ್ನು ಸಂಪಾದಿಸಿದುದೇ ಆದರೆ ಆ ಹಣವೆಲ್ಲವನ್ನೂ ಪರಿತ್ಯಾಗಮಾಡಿ ಜಪದಿಂದಲೂ ತಪಸ್ಸಿನಿಂದಲೂ ಶುದ್ಧರಾಗಬಹುದು. ಮೂರು ಸಾವಿರ ಸಾವಿತ್ರೀ ಜಪವನ್ನು ನಿಯಮದೊಡನೆ ಮಾಡಿ ಹಸುವಿನ ಕೊಟ್ಟಿಗೆಯಲ್ಲಿ ಒಂದು ತಿಂಗಳವರಿಗೂ ಹಾಲಿನಿಂದಲೇ ಜೀವಿಸುತ್ತಿರಬೇಕು. ಆಗ ಅವನು ನಿಂದ್ಯರಿಂದ ದ್ರವ್ಯಾರ್ಜನೆಮಾಡಿದ ದೋಷದಿಂದ ನಿವೃತ್ತಿ ಹೊಂದುತ್ತಾನೆ.

೧೭೨-೧೭೩. ಹಾಗೆ ಉಪವಾಸದಿಂದ ಕೃಶನಾಗಿ ಹಸುವಿನ ಕೊಟ್ಟಿಗೆಯಿಂದ ಪುನಃ ಬಂದು ಅವನು ಬ್ರಾಹ್ಮಣರನ್ನು ನಮಸ್ಕರಿಸಬೇಕು. ಆಗ ಬ್ರಾಹ್ಮಣರು ಸೌಮ್ಯನೇ ಪುನಃ ಅಂತಹ ದ್ರವ್ಯಾರ್ಜನೆಮಾಡಲು ಆಶಿಪಡುವೆಯಾ ಎಂದು ಕೇಳಬೇಕು. ಅಂತಹ ಬ್ರಾಹ್ಮಣರಿಗೆ ಸತ್ಯವಾಗಿಯೂ ಮಾಡುವುದಿಲ್ಲವೆಂದು ಉತ್ತರ ಹೇಳಿ ಪಾತಕಿಯಾದವನು ಹಸುವಿನ ಮುಂದೆ ಹುಲ್ಲನ್ನು ಹಾಕಬೇಕು. ಆ ಹುಲ್ಲನ್ನು ಹಸುವು ಸ್ವೀಕರಿಸಿದ್ದೇ ಆದರೆ ಅವನು ಆಗ ಶುದ್ಧ ನಾಗಿರುವನೆಂದು ತಿಳಿದು ಬ್ರಾಹ್ಮಣರು ಅವನನ್ನು ಸ್ವೀಕರಿಸಬೇಕು.

ಗೋಭಿಃ ಪ್ರವರ್ತಿತೇ ತೀರ್ಥೇ ಕುರ್ಯುಸ್ತಸ್ಯ ಪರಿಗ್ರಹಂ ।
ವ್ರಾತ್ಯಾನಾಂ ಯಾಜನಂ ಕೃತ್ವಾ ಪರೇಷಾಮಂತ್ಯಕರ್ಮ ಚ　　॥ ೧೭೪ ॥

ಅಭಿಚಾರಮಹೀನಂ ಚ ತ್ರಿಭಿಃ ಕೃಚ್ಛ್ರೈರ್ವಿಶುಧ್ಯತಿ ।
ಶರಣಾಗತಂ ಪರಿತ್ಯಜ್ಯ ವೇದಂ ವಿಪ್ಲಾವ್ಯ ಚ ದ್ವಿಜಃ　　॥ ೧೭೫ ॥

ಸಂವತ್ಸರಂ ಯತಾಹಾರಸ್ತತ್ಪಾಪಮಪಗಚ್ಛತಿ ।
ಶ್ವಶೃಗಾಲೋರಗೈರ್ದಷ್ಟಃ ಗ್ರಾಮ್ಯೈಃ ಕ್ರವ್ಯಾದ್ಭಿರೇವ ಚ　　॥ ೧೭೬ ॥

ಗವಾಶ್ವೋಷ್ಟ್ರವರಾಹೈಶ್ಚ ಪ್ರಾಣಾಯಾಮೇನ ಶುಧ್ಯತಿ ।
ಷಷ್ಠಾನ್ನಕಾಲಮಶನಂ ಸಂಹಿತಾಜಾಪ ಏವ ಚ　　॥ ೧೭೭ ॥

ಹೋಮಶ್ಚ ಶಾಕಲೋ ನಿತ್ಯಮಪಂಕ್ತ್ಯಾನಾಂ ವಿಶೋಧನಂ ।
ಉಷ್ಟ್ರಯಾನಂ ಸಮಾರುಹ್ಯ ಖರಯಾನಂ ಚ ಕಾಮತಃ　　॥ ೧೭೮ ॥

---

೧೭೪–೧೭೫. ಭ್ರಷ್ಟರಾದ ವ್ರಾತ್ಯರಿಂದ ಯಜ್ಞಯಾಗ ಮಾಡಿಸಿದವನೂ ಇತರರ ಪ್ರೇತಕಾರ್ಯಗಳನ್ನು ಮಾಡಿಸಿದವನೂ ಸಾಮಾನ್ಯವಾದ ಅಭಿಚಾರಾ (ಮಾಟಕೂಟಾ) ದಿಗಳನ್ನು ನಡೆಸಿದವನೂ ಸಹ ಶುದ್ಧನಾಗಲು ಮೂರು ಕೃಚ್ಛ್ರವನ್ನಾಚರಿಸಬೇಕು. ಶರಣಾಗತರನ್ನು ಪರಿತ್ಯಾಗ ಮಾಡಿದವನೂ ವೇದವನ್ನು (ಅಪಾತ್ರಪ್ರದಾನವೇ ಮೊದಲಾದ) ದುರಾಚಾರಗಳಿಂದ ಕೆಡಿಸಿದ ದ್ವಿಜನೂ ಸಹ ಸಂವತ್ಸರಪರ್ಯಂತವೂ ಆಹಾರನಿಯಮದಲ್ಲಿದ್ದು ಆ ಪಾತಕವನ್ನು ಹೋಗಲಾಡಿಸಿಕೊಳ್ಳಬೇಕು.

೧೭೬–೧೭೭. ಗ್ರಾಮದಲ್ಲಿರುವ ನಾಯಿ, ನರಿ, ಸರ್ಪ, ಇವುಗಳಿಂದಲೂ, ಮಾಂಸಾಹಾರಿಗಳಾದ ಮೃಗಗಳಿಂದಲೂ ಹಸು, ಕುದುರೆ, ಒಂಟೆ, ಹಂದಿ ಇವುಗಳಿಂದಲೂ ಕಚ್ಚಲ್ಪಟ್ಟಲ್ಲಿ ಅಂತಹವನು ಪ್ರಾಣಾಯಾಮದಿಂದ ಶುದ್ಧಿಹೊಂದುತ್ತಾನೆ. ಅಪಾಙ್ಕ್ತೇಯರ ಸಂಸರ್ಗದಿಂದ ದೂಷಿತನಾದವನು ಆರನೇ ಯಾಮದಲ್ಲಿ ಊಟ ಮಾಡುತ್ತಾ ಸಂಹಿತೆಯ ಜಪದಿಂದಲೂ ಶಾಕಲಹೋಮದಿಂದಲೂ ಶುದ್ಧನಾಗುತ್ತಾನೆ.

೧೭೮–೧೭೯. ಒಂಟೆಯ ಯಾನವನ್ನೂ ಕತ್ತೆಯ ವಾಹನವನ್ನೂ ಬುದ್ಧಿಪೂರ್ವಕವಾಗಿ ಆರೋಹಣಮಾಡಿದಲ್ಲಿ ಅಂತಹ ಬ್ರಾಹ್ಮಣನು ಸ್ನಾನಮಾಡಿ ದಿಗಂಬರನಾಗಿದ್ದು ಪ್ರಾಣಾಯಾಮದಿಂದ ಶುದ್ಧನಾಗುತ್ತಾನೆ. ಪಕ್ಷಿಯಿಂದ ಕುಟುಕ

ಸ್ನಾತ್ವಾ ತು ವಿಪ್ರೋ ದಿಗ್ವಾಸಾಃ ಪ್ರಾಣಾಯಾಮೇನ ಶುಧ್ಯತಿ ।
ವಿನಾ ಭಿನ್ನೋಽಪ್ಸು ಚಾದ್ಯಂತಃ ಶರೀರಂ ಸನ್ನಿವೇಶಯೇತ್ ॥ ೧೭೯ ॥

ಸಚೇಲೋ ಬಹಿರಾಪ್ಲುತ್ಯ ಗಾಮಾಲಭ್ಯ ವಿಶುಧ್ಯತಿ ।
ವೇದೋದಿತಾನಾಂ ನಿತ್ಯಾನಾಂ ಕರ್ಮಣಾಂ ಸಮತಿಕ್ರಮೇ ॥ ೧೮೦ ॥

ಸ್ನಾತಕವ್ರತಲೋಪೇ ಚ ಪ್ರಾಯಶ್ಚಿತ್ತಮಭೋಜನಂ ।
ಹುಂಕಾರಂ ಬ್ರಾಹ್ಮಣಸ್ಯೋಕ್ತ್ವಾ ತ್ವಂಕಾರಂ ತು ಗರೀಯಸಃ ॥ ೧೮೧ ॥

ಸ್ನಾತ್ವಾನಶ್ನನ್ನಹಶ್ಶೇಷಮಭಿವಾದ್ಯ ಪ್ರಸಾದಯೇತ್ ।
ತಾಡಯಿತ್ವಾ ತೃಣೇನಾಪಿ ಕಂಠೇ ಬದ್ಧ್ವಾಪಿ ವಾಸಸಾ ॥ ೧೮೨ ॥

---

ಲ್ಪಟ್ಟವನು ತನ್ನ ಶರೀರವನ್ನೆಲ್ಲಾ ಆದ್ಯಂತವಾಗಿ ನೀರಿನಲ್ಲಿ ಮುಳುಗಿಸಿ ಸಚೇಲ ಸ್ನಾನಮಾಡಿ ಹೊರಗೆಬಂದು ಗೋವನ್ನು ಸ್ಪರ್ಶಮಾಡಿ ಶುದ್ಧನಾಗುತ್ತಾನೆ.

೧೮೦-೧೮೧. ವೇದದಲ್ಲಿ ಹೇಳಲಾಗಿರುವ ನಿತ್ಯಕರ್ಮಗಳನ್ನು ಯಥಾವಿಧಿಯಾಗಿ ಆಚರಿಸದೆ, ಅತಿಕ್ರಮವುಂಟಾದಲ್ಲಿ ಮತ್ತು ಸ್ನಾತಕವ್ರತವು ಲುಪ್ತವಾದಲ್ಲಿ ಭೋಜನವನ್ನು ಬಿಟ್ಟು ಉಪವಾಸದಿಂದಿರುವುದೇ ಪ್ರಾಯಶ್ಚಿತ್ತ. ಬ್ರಾಹ್ಮಣನ ವಿಷಯದಲ್ಲಿ ಹುಂಕಾರದಿಂದ ಗರ್ಜನೆಮಾಡಿದರೂ, ಮತ್ತು ದೊಡ್ಡವರ ವಿಷಯದಲ್ಲಿ ನೀನು ತಾನು ಎಂದು ಲಾಘವೋಕ್ತಿಯಿಂದ ವರ್ತಿಸಿದರೂ ಸಹ ಅಂತಹ ಅಪರಾಧ ಶಾಂತಿಗಾಗಿ ಸ್ನಾನಮಾಡಿ ಆ ದಿನವೆಲ್ಲಾ ಉಪವಾಸವಿದ್ದು ಯಾರನ್ನು ಅವಮಾನಿಸಿರುವನೋ ಅವರನ್ನೇ ನಮಸ್ಕರಿಸಿ ಅವರ ಅನುಗ್ರಹವನ್ನು ಹೊಂದಬೇಕು.

೧೮೨-೧೮೩. ಬ್ರಾಹ್ಮಣನನ್ನು ಹುಲ್ಲುಕಡ್ಡಿಯಿಂದಾದರೂ ಹೊಡೆದು ಪರಾಭವಗೊಳಿಸಿನಲ್ಲಿ ಮತ್ತು ವಸ್ತ್ರದಿಂದಲಾದರೂ ಕುತ್ತಿಗೆಯನ್ನು ಬಿಗಿದು ತೊಂದರೆಪಡಿಸಿದಲ್ಲಿ, ವಾದದಲ್ಲಿ ಜಯಿಸಿ ಅವಮಾನಪಡಿಸಿದಲ್ಲಿಯೂ, ಅಂತಹ ಪರಾಭವಕ್ಕೊಳಗಾದ ಬ್ರಾಹ್ಮಣನನ್ನೇ ನಮಸ್ಕರಿಸಿ ಪ್ರಸನ್ನನಾಗುವಂತೆ ಮಾಡಬೇಕು ನೂರು ವರ್ಷದ ವೃದ್ಧಬ್ರಾಹ್ಮಣನನ್ನು ಹಾಸ್ಯಮಾಡಿ ಧಿಕ್ಕರಿಸುವುದ

ವಿವಾದೇನಾಪಿ ನಿರ್ಜಿತ್ಯ ಪ್ರಣಿಪತ್ಯ ಪ್ರಸಾದಯೇತ್ ।
ಅವಗೂರ್ಯ ತ್ವಬ್ದಶತಂ ಸಹಸ್ರಮಭಿಹತ್ಯ ಚ ॥ ೧೮೩ ॥

ಜಿಘಾಂಸಯಾ ಬ್ರಾಹ್ಮಣಸ್ಯ ನರಕಂ ಪ್ರತಿಪದ್ಯತೇ ।
ಶೋಣಿತಂ ಯಾವತಃ ಪಾಂಸೂನ್ ಸಂಗೃಹ್ಣಾತಿ ದ್ವಿಜನ್ಮನಃ ॥ ೧೮೪ ॥

ತಾವಂತ್ಯಬ್ದಸಹಸ್ರಾಣಿ ತತ್ಕರ್ತಾ ನರಕಂ ವ್ರಜೇತ್ ।
ಅವಗೂರ್ಯ ಚರೇತ್ಕೃಚ್ಛ್ರಮತಿಕೃಚ್ಛ್ರಂ ನಿಪಾತನೇ ॥ ೧೮೫ ॥

ಕೃಚ್ಛ್ರಾತಿಕೃಚ್ಛ್ರಂ ಕುರ್ವೀತ ವಿಪ್ರಸ್ಯೋತ್ಪಾದ್ಯ ಶೋಣಿತಂ ।
ಚಂಡಾಲಾದಿರವಿಜ್ಞಾತೋ ಯಸ್ಯ ತಿಷ್ಠೇತ ವೇಶ್ಮನಿ ॥ ೧೮೬ ॥

---

ರಿಂದಲೂ, ಹೆಚ್ಚಾಗಿ ಬಯ್ಯುವುದು ಹೊಡೆಯುವುದು ಇವುಗಳಿಂದಲೂ, ಅಂತಹ ಬ್ರಾಹ್ಮಣನನ್ನು ಕೊಲ್ಲಲು ಆಶಿಸುವುದು ಇವೆಲ್ಲವೂ ಹಾಗೆ ಮಾಡಿದವನಿಗೆ ನರಕವನ್ನುಂಟುಮಾಡುತ್ತವೆ.

೧೮೪-೧೮೫. ಬ್ರಾಹ್ಮಣನ ದೇಹದಲ್ಲಿ ವ್ರಣಉಂಟಾಗಿ ಅದರಿಂದ ಬಿದ್ದ ರಕ್ತವು ಎಷ್ಟು ಧೂಳಿಗಳನ್ನು ಸಂಗ್ರಹಿಸುತ್ತದೆಯೋ (ಎಷ್ಟು ಧೂಳೀಕಣಗಳಿಂದ ನೆನಸಲ್ಪಡುತ್ತದೆಯೋ ಎಂದು ತಾತ್ಪರ್ಯ) ಅಷ್ಟು ಸಹಸ್ರ ವರ್ಷದವರಿಗೂ ಅಂತಹ ವ್ರಣವೇ ಮೊದಲಾದುವನ್ನು ಮಾಡಿದವನು ನರಕವನ್ನು ಹೊಂದುತ್ತಾನೆ. ಬ್ರಾಹ್ಮಣನನ್ನು ಹಾಸ್ಯಮಾಡಿ ಅವಮಾನಿಸಿದವನು ಕೃಚ್ಛ್ರವನ್ನಾಚರಿಸಬೇಕು. ಕೆಳಕ್ಕೆ ಬೀಳಿಸಿದಲ್ಲಿ ಅತಿಕೃಚ್ಛ್ರವನ್ನಾಚರಿಸಬೇಕು. ರಕ್ತವನ್ನುಂಟುಮಾಡಿದಲ್ಲಿ ಕೃಚ್ಛ್ರಾತಿಕೃಚ್ಛ್ರವೆಂಬ ಮಹಾ ಪ್ರಾಯಶ್ಚಿತ್ತವನ್ನೇ ಆಚರಿಸಬೇಕು.

೧೮೬-೧೮೭. ಚಂಡಾಲಾದಿನಿಕೃಷ್ಟ ಜಾತಿಯುವನು ಮನೆಯ ಯಜಮಾನನಿಗೆ ತಿಳಿಯದಂತೆ ಯಾವ ಮನೆಯಲ್ಲಿ ಸೇರುವನೋ ಕೆಲವುಕಾಲ ಕಳೆದನಂತರ ಅದನ್ನು ತಿಳಿದ ಯಜಮಾನನು ಪ್ರಾಯಶ್ಚಿತ್ತದಿಂದ ತಾನು ಶುದ್ಧನಾಗಬೇಕು. ಅಂತಹ ಮನೆಯ ಯಜಮಾನನು ಬ್ರಾಹ್ಮಣಕ್ಷತ್ರಿಯವೈಶ್ಯರಲ್ಲೊಬ್ಬನಾಗಿದ್ದಲ್ಲಿ ಚಾಂದ್ರಾಯಣವನ್ನಾಗಲಿ ಪರಾಕವನ್ನಾಗಲಿ ಆಚರಿಸಿ ಶುದ್ಧಿಹೊಂದಬೇಕು, ಶೂದ್ರನಾಗಿದ್ದಲ್ಲಿ ಪ್ರಾಜಾಪತ್ಯವ್ರತವನ್ನಾಚರಿಸಬೇಕು. ಉಳಿದವರು ಅವರವರ ಉತ್ಕ

**ಸಮ್ಯಗ್ಜ್ಞಾತಸ್ತು ಕಾಲೇನ ತಸ್ಯ ಕುರ್ವೀತ ಶೋಧನಂ ।**
**ಚಾಂದ್ರಾಯಣಂ ಪರಾಕಂ ವಾ ದ್ವಿಜಾನಾಂ ತು ವಿಶೋಧನಂ ॥ ೧೮೭ ॥**

**ಪ್ರಾಜಾಪತ್ಯಂ ತು ಶೂದ್ರಾಣಾಂ ಶೇಷಂ ತದನುಸಾರತಃ ।**
**ಗುಡಂ ಕುಸುಂಭಂ ಲವಣಂ ತಥಾ ಧಾನ್ಯಾನಿ ಯಾನಿ ಚ ॥ ೧೮೮ ॥**

**ಕೃತ್ವಾ ಗೃಹೇ ತತೋ ದ್ವಾರಿ ತೇಷಾಂ ದದ್ಯಾದ್ಧುತಾಶನಂ ।**
**ಮೃಣ್ಮಯಾನಾಂ ತು ಭಾಂಡಾನಾಂ ತ್ಯಾಗ ಏವ ವಿಧೀಯತೇ ॥ ೧೮೯ ॥**

**ದ್ರವ್ಯಾಣಾಂ ಪರಿಶೇಷಾಣಾಂ ದ್ರವ್ಯಶುದ್ಧಿರ್ವಿಧೀಯತೇ ।**
**ಯಸ್ತಸ್ಯ ಭುಂಕ್ತೇ ಪಕ್ವಾನ್ನಂ ಕೃಚ್ಛ್ರಾರ್ಧಂ ತಸ್ಯ ದಾಪಯೇತ್ ॥೧೯೦॥**

**ಶುಷ್ಕಾನ್ನಭೋಜಿನಃ ಪಾದಮಿತ್ಯಾಹ ಭಗವಾನ್ ಮನುಃ ।**
**ಕೂಪೇ ತಾನವಸಂತಾರ್ಯ ಸ್ಪರ್ಶಸಂಕಲ್ಪದೂಷಿತಾಃ ॥ ೧೯೧ ॥**

---

ಷಾಪಕರ್ಷಕ್ಕೆ ತಕ್ಕಂಥ ಪ್ರಾಜಾಪತ್ಯವನ್ನಾಗಲಿ ಅದಕ್ಕಿಂತ ಕಡಿಮೆಯಾದ ಪ್ರಾಯಶ್ಚಿತ್ತವನ್ನಾಗಲಿ ಮಾಡಿಕೊಳ್ಳಬಹುದು.

೧೮೮–೧೮೯. ಬೆಲ್ಲ, ಕುಸುಂಭ, ಉಪ್ಪು, ಇತರ ಧಾನ್ಯಗಳು ಇವೆಲ್ಲವನ್ನೂ ಅಂತಹ ಚಂಡಾಲಪ್ರವೇಶ ಉಂಟಾಗಿದ್ದ ಮನೆಯ ಬಾಗಿಲಿನಲ್ಲಿ ರಾಶಿಯಾಗಿ ಇಟ್ಟು ಅದಕ್ಕೆ ಬೆಂಕಿಹಚ್ಚಬೇಕು. ಮಣ್ಣಿನ ಪಾತ್ರೆಗಳೆಲ್ಲವನ್ನೂ ತ್ಯಜಿಸಲೇಬೇಕು. ಮನೆಯಲ್ಲಿದ್ದ ಇತರ ಪಾತ್ರೆಪದಾರ್ಥಗಳಿಗೆ ಆಯಾಯ ವಿಹಿತದ್ರವ್ಯದಿಂದ ಶುದ್ಧಿ ಮಾಡಬೇಕೆಂದು ಶಾಸ್ತ್ರವು ವಿಧಿಸುತ್ತದೆ

೧೯೦–೧೯೧. ಅಂತಹ ಚಂಡಾಲ ಸಂಸರ್ಗದಿಂದ ದೂಷಿತನಾದವನ ಪಕ್ವಾನ್ನವನ್ನು ಯಾವನು ಭೋಜನಮಾಡುವನೋ, ಅಂತಹವನಿಗೆ ಅರ್ಧ ಕೃಚ್ಛ್ರವನ್ನು ಪ್ರಾಯಶ್ಚಿತ್ತವನ್ನಾಗಿ ವಿಧಿಸಬೇಕು. ಒಣಗಿದ ಭೋಜ್ಯಪದಾರ್ಥಗಳನ್ನು ಭೋಜಿಸಿದವನಿಗೆ ಕೃಚ್ಛ್ರದ ನಾಲ್ಕನೇಯ ಒಂದು ಭಾಗವನ್ನು ವಿಧಿಸಬೇಕೆಂದು ಪೂಜ್ಯನಾದ ಮನುವು ಹೇಳಿರುವನು. ಅಂತಹ ಸಂಸರ್ಗಿಗಳು ಬ್ರಾಹ್ಮಣರು ಸ್ನಾನಮಾಡುವ ಕೊಳದಲ್ಲಿಳಿದು ಸ್ಪರ್ಶಾದಿಗಳಿಂದ ದೂಷಿಸಿದ್ದೇ ಆದರೆ ಅಂತಹ ಸ್ಪರ್ಶಾದಿಗಳಿಂದ ದೂಷಿತರಾದವರು ಉಪವಾಸವಿದ್ದು ಪಂಚಗವ್ಯವನ್ನು ಸೇವಿಸಿದಲ್ಲಿ ಶುದ್ಧರಾಗುವರು.

ಶುದ್ಧ್ಯೇಯುರುಪವಾಸೇನ ಪಂಚಗವ್ಯೇನ ಚಾಪ್ಯಥ ।
ಯಸ್ತು ಸಂಸ್ಪೃಶ್ಯ ಚಂಡಾಲಮಶ್ನೀಯಾದ್ವಾ ತ್ವಕಾಮತಃ ॥ ೧೯೨ ॥

ದ್ವಿಜಶ್ಚಾಂದ್ರಾಯಣಂ ಕುರ್ಯಾತ್ತಪ್ತಕೃಚ್ಛ್ರಮಥಾಪಿ ವಾ ।
ವರ್ಣಸಂಕರಸಂಕೀರ್ಣಾಶ್ಚಂಡಾಲಾದಿ ಜುಗುಪ್ಸಿತಾಃ ॥ ೧೯೩ ॥

ಭುಕ್ತ್ವಾ ಪೀತ್ವಾ ತಥಾ ತೇಷಾಂ ಷಡ್ರಾತ್ರೇಣ ವಿಶುಧ್ಯತಿ ।
ಅಂತ್ಯಾನಾಂ ಭುಕ್ತಶೇಷಂ ತು ಭಕ್ಷಯಿತ್ವಾ ದ್ವಿಜಾತಯಃ ॥ ೧೯೪ ॥

ವ್ರತಂ ಚಾಂದ್ರಾಯಣಂ ಕುರ್ಯುಃ ತ್ರಿರಾತ್ರಂ ಶೂದ್ರ ಏವ ಚ ।
ಚಂಡಾಲಕೂಪಭಾಂಡೇಷು ಅಜ್ಞಾನಾದ್ಯಃ ಪಿಬೇಜ್ಜಲಂ ॥ ೧೯೫ ॥

---

೧೯೨-೧೯೩. ಯಾವ ದ್ವಿಜನು ಚಂಡಾಲನ ಸ್ಪರ್ಶಹೊಂದಿದ್ದರೂ ತಿಳಿಯದೇ ಭೋಜನವಮಾಡುತ್ತಾನೆಯೋ ಅವನು ತನ್ನ ಸಂಸರ್ಗ ದೋಷವು ತಿಳಿದನಂತರ ಚಾಂದ್ರಾಯಣವನ್ನಾಗಲಿ ತಪ್ತಕೃಚ್ಛ್ರವನ್ನಾಗಲಿ ಆಚರಿಸಿ ಶುದ್ಧಿಹೊಂದಬೇಕು. ಸಂಕರವರ್ಣದವರ ಸಹವಾಸದಿಂದಲೂ ಚಂಡಾಲಾದಿ ಸಂಸರ್ಗದಿಂದ ಜುಗುಪ್ಸೆ ಹೊಂದಿರುವವರ ಸಂಸರ್ಗದಿಂದಲೂ ಇದ್ದು ಭೋಜನ ಪಾನಾದಿಗಳನ್ನು ನಡೆಸಿದಲ್ಲಿ ಆರು ರಾತ್ರಿ ಅಶುದ್ಧರಾಗಿದ್ದು ನಂತರ ಅವರು ವಿಹಿತ ಪ್ರಾಯಶ್ಚಿತ್ತದಿಂದ ಶುದ್ಧಿ ಹೊಂದುತ್ತಾರೆ.

೧೯೪-೧೯೫. ದ್ವಿಜನಾದವನು (ಬ್ರಾಹ್ಮಣ ಕ್ಷತ್ರಿಯ ವೈಶ್ಯ) ಚಂಡಾಲನೇ ಮೊದಲಾದ ಅಂತ್ಯ ವರ್ಣದವರ ಭೋಜನ ಶೇಷವನ್ನು ಭಕ್ಷಣೆ ಮಾಡಿದಲ್ಲಿ ಆ ಪಾತಕದ ನಿವೃತ್ತಿಗಾಗಿ ಚಾಂದ್ರಾಯಣವನ್ನಾಚರಿಸಬೇಕು. ಅವನು ಶೂದ್ರನಾಗಿದ್ದಲ್ಲಿ ಮೂರು ರಾತ್ರಿ ಅಶುದ್ಧಿಯನ್ನು ಅನುಭವಿಸಬೇಕು. ದ್ವಿಜನಾದವನು ಚಂಡಾಲರ ಉಪಯೋಗಕ್ಕಾಗಿ ನಿರ್ಮಿಸಲ್ಪಟ್ಟು ಅವರಿಂದ ಉಪಯೋಗಿಸಲಾಗುತ್ತಿರುವ ಭಾವಿಯಲ್ಲಾಗಲಿ, ಪಾತ್ರೆಯಲ್ಲಾಗಲಿ ಇದ್ದ ನೀರನ್ನು ತಿಳಿಯದೇ ಪಾನ ಮಾಡಿದ್ದೇ ಆದರೆ, ಅಂತಹ ದ್ವಿಜನು ಸಾಂತಪನವೆಂಬ ಪ್ರಾಯಶ್ಚಿತ್ತದಿಂದ ಶುದ್ಧಿ ಹೊಂದಬೇಕು. ಹಾಗೆ ಪಾನಮಾಡಿದವನು ಶೂದ್ರನಾಗಿದ್ದಲ್ಲಿ ಅವನು ಒಂದುದಿನ ಉಪವಾಸವಿರಬೇಕು.

ದ್ವಿಜಃ ಸಾಂತಪನಂ ಕುರ್ಯಾಚ್ಛೂದ್ರಶ್ಚೋಪವಸೇದ್ದಿನಂ ।
ಉಚ್ಛಿಷ್ಟೋ ಯದಿ ಸಂಸ್ಪೃಷ್ಟಃ ಶುನಾ ಶೂದ್ರೇಣ ವಾ ದ್ವಿಜಃ ॥ ೧೯೬ ॥

ಉಪೋಷ್ಯ ರಜನೀಮೇಕಾಂ ಪಂಚಗವ್ಯೇನ ಶುಧ್ಯತಿ ।
ಉಚ್ಛಿಷ್ಟೇನ ಯದಿ ಸ್ಪೃಷ್ಟಃ ಉಚ್ಛಿಷ್ಟೋ ಬ್ರಾಹ್ಮಣೋತ್ತಮಃ॥ ೧೯೭ ॥

ತ್ರಿಕಾಲಮಾಚರೇತ್ಸ್ನಾನಂ ನಕ್ತಂ ಭುಂಜೀತ ವಾಗ್ಯತಃ ।
ಕ್ಷತ್ರಿಯೇಣ ತಥಾ ಸ್ಪೃಷ್ಟಃ ಸ್ನಾನಂ ನಕ್ತಂ ಸಮಾಚರೇತ್ ॥ ೧೯೮ ॥

ಸ್ಪೃಷ್ಟಃ ಸವರ್ಣೇನಾಚಾಮೇದಮೇಧ್ಯಂ ಸ್ಪೃಶತೇ ಯದಿ ।
ಅಹೋರಾತ್ರೋಷಿತೋ ಭೂತ್ವಾ ಪಂಚಗವ್ಯೇನ ಶುಧ್ಯತಿ ॥ ೧೯೯ ॥

ಅಧ್ವಾನಂ ಪ್ರಸ್ಥಿತೋ ವಿಪ್ರಃ ಕಾಂತಾರೇ ಯದ್ಯನೂದಕೇ ।
ಪಕ್ವಾನ್ನೇನ ಗೃಹೀತೇನ ಮೂತ್ರೋಚ್ಚಾರಂ ಕರೋತಿ ವೈ ॥ ೨೦೦ ॥

---

೧೯೬–೧೯೭. ದ್ವಿಜನಾದವನು ತಾನು ಎಂಜಲ ಕೈಯಲ್ಲಿರುವಾಗ ನಾಯಿನಿಂದಲೇ ಆಗಲಿ, ಶೂದ್ರನಿಂದಲೇ ಆಗಲಿ ಸ್ಪರ್ಶಹೊಂದಿದಲ್ಲಿ ಅಂತಹ ದ್ವಿಜನು ಒಂದು ರಾತ್ರಿ ಉಪವಾಸವಿದ್ದು ಪಂಚಗವ್ಯದಿಂದ ಶುದ್ಧನಾಗುತ್ತಾನೆ. ಹಾಗೆ ಎಂಜಲಿನಲ್ಲಿದ್ದ ಬ್ರಾಹ್ಮಣನು ಎಂಜಲಿನಲ್ಲಿದ್ದ ಮತ್ತೊಬ್ಬನ (ವೈಶ್ಯ ಶೂದ್ರರ) ಸ್ಪರ್ಶವನ್ನು ಹೊಂದಿದ್ದೇ ಆದರೆ, ತ್ರಿಕಾಲದಲ್ಲೂ ಸ್ನಾನಮಾಡಿ ಹಗಲಿನಲ್ಲೆಲ್ಲಾ ಉಪವಾಸವಿದ್ದು ರಾತ್ರಿಯಲ್ಲಿ ಮೌನದಿಂದ ಭೋಜನಮಾಡಬೇಕು.

೧೯೮–೧೯೯. ಹಾಗೇ ಉಚ್ಛಿಷ್ಟನಾಗಿದ್ದ ಕ್ಷತ್ರಿಯನಿಂದ ಅಂತಹ ಬ್ರಾಹ್ಮಣನು ಸ್ಪರ್ಶಹೊಂದಿದಲ್ಲಿ ರಾತ್ರಿಯಲ್ಲಿ ಸ್ನಾನಮಾಡಬೇಕು. ಅಂತಹ ಉಚ್ಛಿಷ್ಟರಾಗಿರುವ ಸಮಾನವರ್ಣದವರಿಂದ ಸ್ಪರ್ಶವುಂಟಾದಲ್ಲಿ ಆಚಮನ ಮಾತ್ರದಿಂದ ಶುದ್ಧಿಯುಂಟಾಗುತ್ತದೆ. ಅಮೇಧ್ಯದ ಸ್ಪರ್ಶವನ್ನು ಹೊಂದಿದವನು ಹಗಲಿನಲ್ಲಿಯೂ, ರಾತ್ರಿಯಲ್ಲಿಯೂ ಉಪವಾಸದಿಂದಿದ್ದು ಪಂಚಗವ್ಯದಿಂದ ಮಾರನೆಯ ದಿನ ಶುದ್ಧಿಹೊಂದುತ್ತಾನೆ.

೨೦೦–೨೦೧. ಮಾರ್ಗದಲ್ಲಿ ಸಂಚಾರಿಯಾಗಿ ಹೊರಟ ಬ್ರಾಹ್ಮಣನು, ನೀರಿಲ್ಲದ ಕಾಡಿನಲ್ಲಿ ಸಂಚರಿಸುವಾಗ ತಾನು ತಂದಿದ್ದ ಪಕ್ವಾನ್ನವನ್ನು (ಬುತ್ತಿ) ಕೆಳಗೆ ಎಲ್ಲಿಯೂ ಇಡದೆ ತಲೆಯ ಮೇಲೆಯೇ ಇಟ್ಟುಕೊಂಡು ಮೂತ್ರವಿಸರ್ಜನೆಯನ್ನು

**ಅನಿಧಾಯ್ಯೈವ ತದ್ದ್ರವ್ಯಂ ಕೃತ್ವಾಂಗೇ ಉತ್ತಮೇ ಸ್ಥಿತಂ ।**
**ಶೌಚಂ ಕೃತ್ವಾ ಯಥಾನ್ಯಾಯಮುಪವಿಶ್ಯ ಯಥಾವಿಧಿ ॥ ೨೦೧ ॥**

**ಅನ್ನಮಭ್ಯುಕ್ಷಯೇಚ್ಚಾಪಿ ಉದ್ಧೃತ್ಯಾರ್ಕಸ್ಯ ದರ್ಶಯೇತ್ ।**
**ಅರ್ಕಾಭಾವೇಽಸ್ಯಥಾಗ್ನೇಶ್ಚ ಬಸ್ತಸ್ಯಾಪಿ ಪ್ರದರ್ಶಯೇತ್ ॥ ೨೦೨ ॥**

**ತ್ಯಕ್ತ್ವಾ ಗ್ರಾಸತ್ರಯಂ ತಸ್ಮಾಚ್ಛೇಷಂ ಶುದ್ಧಿಮವಾಪ್ನುಯಾತ್ ।**
**ಮ್ಲೇಚ್ಛೈರ್ಹೃತಾನಾಂ ಚೋರೈರ್ವಾ ಕಾಂತಾರೇ ವಾ ಪ್ರವಾಸಿನಾಂ ॥**

**ಭಕ್ಷ್ಯಾಭಕ್ಷ್ಯವಿಶುಧ್ಯರ್ಥಂ ತೇಷಾಂ ವಕ್ಷ್ಯಾಮಿ ನಿಷ್ಕೃತಿಂ ।**
**ಪುನಃ ಪ್ರಾಪ್ಯ ಸ್ವದೇಶಂ ಚ ವರ್ಣಾನಾಮನುಪೂರ್ವಶಃ ॥ ೨೦೪ ॥**

ಮಾಡಿದುದೇ ಆದರೆ ಅಂತಹ ಬ್ರಾಹ್ಮಣನು ಯಥಾವಿಧಿಯಾಗಿ ಶೌಚಮಾಡಿಕೊಂಡ ಭೋಜನ ನಿಯಮಕ್ಕೆ ತಕ್ಕಂತೆ ಊಟಕ್ಕೆ ಕುಳಿತಾಗ ಆ ಅನ್ನವನ್ನು ಪ್ರೋಕ್ಷಿಸಿ ಮೇಲಕ್ಕೆ ಎತ್ತಿಹಿಡಿದು ಸೂರ್ಯನಿಗೆ ತೋರಿಸಬೇಕು.

೨೦೨-೨೦೩. ಆಗ ಸೂರ್ಯನು ಕಾಣಿಸದಿದ್ದಲ್ಲಿ ಅಗ್ನಿಗೆ ತೋರಿಸಬೇಕು. ಅಥವಾ ಆಡಿಗಾದರೂ ತೋರಿಸಬೇಕು, ಹಾಗೆ ಮಾಡಿದನಂತರ ಆ ಅನ್ನದಲ್ಲಿ ಮೂರು ಕಬಳವನ್ನು ತ್ಯಾಗಮಾಡಿದ್ದಲ್ಲಿ ಉಳಿದ ಅನ್ನವು ಶುದ್ಧಿಹೊಂದುತ್ತದೆ (ಭಕ್ಷಣಕ್ಕೆ ಅರ್ಹವೆಂದು ತಾತ್ಪರ್ಯ.)

೨೦೩-೨೦೪. ಯಾರು ಮ್ಲೇಚ್ಛರೇ ಮೊದಲಾದ ಕಾಡುಜನಗಳಿಂದಾಗಲಿ ಕಳ್ಳರಿಂದಾಗಲಿ ಅಪಹರಿಸಲ್ಪಟ್ಟು ಕಾಡಿನಲ್ಲೇ ನಿರ್ಬಂಧಕ್ಕೆ ಸಿಕ್ಕಿ ವಾಸಮಾಡಿ ಬರುವರೋ ಅಂತಹವರ ವಿಷಯದಲ್ಲಿ ಭಕ್ಷ್ಯಾಭಕ್ಷ್ಯ ವಿವೇಚನೆಗಾಗಿ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ. ಅಂತಹ ತೊಂದರೆಗೆ ಸಿಕ್ಕಿದವರು ಪುನಃ ತಮ್ಮದೇಶಕ್ಕೆ ಬಂದು ಮುಂದೆ ಹೇಳಲಾಗುವ ಬ್ರಾಹ್ಮಣಾದಿ ವರ್ಣಕ್ರಮವನ್ನನುಸರಿಸಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಬ್ರಾಹ್ಮಣನಾದವನು ಅರ್ಧಕೃಚ್ಛ್ರವನ್ನಾಚರಿಸಿ ಸಂಸ್ಕಾರ ಹೊಂದಬೇಕು.

ಕೃಚ್ಛ್ರಸ್ಯಾರ್ಧೇ ಬ್ರಾಹ್ಮಣಸ್ತು ಪುನಃ ಸಂಸ್ಕಾರಮರ್ಹತಿ ।
ಪಾದೋನಾರ್ಧೇ ಕ್ಷತ್ರಿಯಸ್ತು ಅರ್ಧಾರ್ಧೇ ವೈಶ್ಯ ಏವ ಚ ॥ ೨೦೫ ॥

ಪಾದಂ ಕೃತ್ವಾ ತಥಾ ಶೂದ್ರೋ ದಾನಂ ದತ್ವಾ ವಿಶುಧ್ಯತಿ ।
ಉದಕ್ಯಾ ತು ಸವರ್ಣಾ ಯಾ ಸ್ಪೃಷ್ಟ್ವಾಚೇತ್ಸ್ಯಾದುದಕ್ಯಯಾ ॥ ೨೦೬ ॥

ಅಹೋರಾತ್ರೋಷಿತಾ ಸಾ ಚ ಶುದ್ಧಾ ಸ್ನಾನೇನ ಶುಧ್ಯತಿ ।
ಮೂತ್ರಂ ಕೃತ್ವಾ ವ್ರಜೇನ್ಮಾರ್ಗಂ ಸ್ಮೃತಿಭ್ರಂಶಾಜ್ಜಲಂ ಪಿಬೇತ್ ॥ ೨೦೭ ॥

ಅಹೋರಾತ್ರೋಷಿತೋ ಭೂತ್ವಾ ಪಂಚಗವ್ಯೇನ ಶುಧ್ಯತಿ ।
ಮೂತ್ರೋಚ್ಚಾರಂ ದ್ವಿಜಃ ಕೃತ್ವಾಪ್ಯಕೃತ್ವಾ ಶೌಚಮಾತ್ಮನಃ ॥ ೨೦೮ ॥

---

೨೦೫-೨೦೬. ಕ್ಷತ್ರಿಯನಾದವನು ನಾಲ್ಕನೇ ಒಂದು ಭಾಗದಿಂದ ಕಡಿಮೆಯಾದ ಅರ್ಧಕೃಚ್ಛ್ರವನ್ನಾಚರಿಸಬೇಕು. ವೈಶ್ಯನಾದವನು, ಅರ್ಧಕೃಚ್ಛ್ರದ ಅರ್ಧಭಾಗವನ್ನಾಚರಿಸಬೇಕು. ಶೂದ್ರನಾದವನು ಆ ಅರ್ಧಕೃಚ್ಛ್ರದ ನಾಲ್ಕನೆಯೊಂದು ಭಾಗವನ್ನಾಚರಿಸಿ ದಾನಾದಿಗಳನ್ನು ಮಾಡಿ ಶುದ್ಧನಾಗುತ್ತಾನೆ, ರಜಸ್ವಲೆಯಾದಹೆಂಗಸು ಸಮಾನವರ್ಣದವಳಾದ ಮತ್ತೊಬ್ಬ ರಜಸ್ವಲೆಯ ಸ್ಪರ್ಶವನ್ನು ಹೊಂದಿದ್ದೇ ಆದರೆ ಅವಳು ಆ ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಹಾಗೆಯೇ ಉಪವಾಸವಿದ್ದು ಸ್ನಾನದಿಂದ ಶುದ್ಧಳಾಗುತ್ತಾಳೆ.

೨೦೭-೨೦೮. ಮಾರ್ಗಸಂಚಾರಿಯಾಗಿರುವ ಬ್ರಾಹ್ಮಣನು ಮೂತ್ರವಿಸರ್ಜನೆಯನ್ನು ಮಾಡಿ ಶೌಚಮಾಡಿಕೊಳ್ಳದೆ ಮರೆತು ಜಲಪಾನವನ್ನು ಮಾಡಿದ್ದೇ ಆದರೆ ಆ ದಿನ ಹಗಲು ರಾತ್ರಿ ಉಪವಾಸವಿದ್ದು ಪಂಚಗವ್ಯ ಸೇವನೆಯಿಂದ ಶುದ್ಧನಾಗುತ್ತಾನೆ. ದ್ವಿಜನಾದವನು ಮೂತ್ರೋತ್ಸರ್ಜನಮಾಡಿ ಶೌಚಮಾಡಿಕೊಳ್ಳದೆ ಅಜ್ಞಾನದಿಂದ ಭೋಜನಮಾಡಿದ್ದೇ ಆದರೆ ಅವನು ಮೂರು ರಾತ್ರಿ ಯವಧಾನ್ಯದ ಗಂಜಿಯನ್ನು ಪಾನಮಾಡುತ್ತಿದ್ದು ಶುದ್ಧನಾಗುತ್ತಾನೆ. (ಇಲ್ಲಿ ಮೇಲಿನ ಶ್ಲೋಕದಲ್ಲಿಯೂ ಈ ಪಾಪವನ್ನೇ ಉದ್ದೇಶಿಸಿ ಪ್ರಾಯಶ್ಚಿತ್ತವನ್ನು ಹೇಳಿರುವುದರಿಂದ ಈ ಶ್ಲೋಕವು ಪ್ರಕ್ಷಿಪ್ತವೆಂದು ಸೂಚಿಸಲು ಮೂಲಪುಸ್ತಕದಲ್ಲಿ ಈ ಕಂಸದಲ್ಲಿ ಇದನ್ನು ಸೇರಿಸಲಾಗಿದೆ. ವಿಚಾರಮಾಡಿದಲ್ಲಿ ಮೇಲಿನ ಶ್ಲೋಕವು ಮಾರ್ಗಸ್ಥನ ವಿಷಯದಲ್ಲಿ

ಮೋಹಾದ್ಭುಕ್ತ್ವಾ ತ್ರಿರಾತ್ರಂ ತು ಯವಾನ್ ಪೀತ್ವಾ ವಿಶುಧ್ಯತಿ ।
ಪರಿತ್ಯಕ್ತಮಹಾಯಜ್ಞಾಃ ಪ್ರವ್ರಜ್ಯಾವಿಚ್ಯುತಾಶ್ಚ ಯೇ || ೨೦೯ ||

ಅನಾಶಕನಿವೃತ್ತಾಶ್ಚ ತೇಷಾಂ ಶುದ್ಧಿಃ ಪ್ರವಕ್ಷ್ಯತೇ ।
ಚಾರಯೇತ್ತ್ರೀಣಿ ಕೃಚ್ಛ್ರಾಣಿ ಚಾಂದ್ರಾಯಣಮಥಾಪಿ ವಾ || ೨೧೦ ||

ಜಾತಕರ್ಮಾದಿಸಂಸ್ಕಾರೈಃ ಸಂಸ್ಕುರ್ಯಾತ್ತಂ ತಥಾ ಪುನಃ ।
ಉಪಾನಹಮಮೇಧ್ಯಂ ವಾ ಚಾಸ್ಯ ಸಂಸ್ಪೃಶತೇ ಮುಖಂ || ೨೧೧ ||

ಪುತ್ರಿಕಾಗೋಮಯೌ ತಸ್ಯ ಪಂಚಗವ್ಯಂ ವಿಶೋಧನಂ ।
ವಾಪನಂ ವಿಕ್ರಯಂ ಚೈವ ನೀಲವೃತ್ತ್ಯುಪಜೀವನಂ || ೨೧೨ ||

ಅನಿವಾರ್ಯವಾದ ಜಲಪಾನವನ್ನುದ್ದೇಶಿಸಿ ಲಘುವಾದ ಪ್ರಾಯಶ್ಚಿತ್ತವನ್ನು ವಿಧಾನ ಮಾಡುತ್ತಿದೆ, ಅನಂತರ ಹೇಳಿರುವ ಶ್ಲೋಕವು ಮಾರ್ಗಸ್ಥನ ವಿಷಯದಲ್ಲಿ ವಿಧಿಸುವುದಿಲ್ಲ. ಭೋಜನವನ್ನುದ್ದೇಶಿಸಿ ಮೂರುರಾತ್ರಿ ಯವಧಾನ್ಯದಿಂದ ಜೀವಿಸಬೇಕೆಂದು ಬೇರೆ ಪ್ರಾಯಶ್ಚಿತ್ತವನ್ನು ವಿಧಿಸುತ್ತದೆ ಆದುದರಿಂದ ಈ ಎರಡು ಶ್ಲೋಕಗಳೂ ವಿಷಯ ಭೇದದಿಂದಲೂ ಪ್ರಾಮಾಣಿಕವಾಗಿರುವುದರಿಂದ ಪ್ರಕ್ಷಿಪ್ತವೆಂದು ಹೇಳಲು ಅವಕಾಶವಿಲ್ಲವೆಂದು ತೋರುತ್ತದೆ.)

೨೦೯-೨೧೦. ಯಾರು ತನ್ನ ಆಶ್ರಮಕ್ಕೆ ಉಚಿತವಾದ ಪಂಚಮಹಾಯಜ್ಞಾದಿಗಳನ್ನಾಚರಿಸದೆ ಭ್ರಷ್ಟರಾಗಿರುವರೋ ಮತ್ತು ಆಶ್ರಮೋಚಿತವಾದ ಕರ್ಮಗಳನ್ನು ಶಾಸ್ತ್ರಕ್ರಮದಿಂದಲೇ ಬಿಟ್ಟು ಸಂನ್ಯಾಸಿಯಾಗಿದ್ದರೂ ಅಂತಹ ಸಂನ್ಯಾಸ ಧರ್ಮದಿಂದಲೂ ಭ್ರಷ್ಟರಾಗಿರುವರೋ, ಹಿಂಸೆಯೇ ಮೊದಲಾದ ನಿಂದ್ಯಕರ್ಮಗಳಿಂದ ನಿವೃತ್ತಿಯನ್ನು ಹೊಂದಿರುವುದಿಲ್ಲವೋ, ಅಂತಹ ಪಾತಕಿಗಳಿಗೆ ಶುದ್ಧಿಯನ್ನು ಹೇಳುತ್ತೇನೆ. ಅಂತಹ ಭ್ರಷ್ಟರಿಂದ ಮೂರು ಕೃಚ್ಛ್ರಗಳನ್ನೋ ಅಥವಾ ಚಾಂದ್ರಾಯಣವನ್ನೋ ಮಾಡಿಸಿ ಅನಂತರ ಜಾತಕರ್ಮಾದಿಗಳಿಂದ ಅವರನ್ನು ಪುನಃ ಸಂಸ್ಕರಿಸಬೇಕು

೨೧೧-೨೧೨. ಪಾದರಕ್ಷೆ ಅಥವ ಅಮೇಧ್ಯವು ಮುಖಕ್ಕೆ ತಗಲಿದ್ದೇ ಆದರೆ, ಎಳೆಗರುವಿನ ಸಗಣಿಯಿಂದ ಮಾಡಿದ ಪಂಚಗವ್ಯದಿಂದ ಶುದ್ಧಿಹೊಂದಬೇಕು. ನೀಲಿಯನ್ನು ಬಿತ್ತುವದೇ ಆಗಲಿ ನೀಲಿಯ ವಿಕ್ರಯವೇ ಮೊದಲಾದ ವೃತ್ತಿಯೂ,

ಪತನೀಯಂ ಹಿ ವಿಪ್ರಸ್ಯ ನೀಲಸೂತ್ರಸ್ಯ ಧಾರಣಾತ್ ।
ಸ್ನಾನಂ ದಾನಂ ತಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ॥ ೨೧೩ ॥

ವೃಥಾ ತಸ್ಯ ಮಹಾಯಜ್ಞಾಃ ನೀಲೀಸೂತ್ರಸ್ಯ ಧಾರಣಾತ್ ।
ನೀಲರಕ್ತಂ ಯದಾ ವಸ್ತ್ರಂ ದ್ವಿಜೋಂಗೇಷು ಹಿ ಧಾರಯೇತ್ ॥ ೨೧೪ ॥

ಉಪೋಷ್ಯ ರಜನೀಮೇಕಾಂ ಪಂಚಗವ್ಯೇನ ಶುಧ್ಯತಿ ।
ನೀಲದಾರು ಯದಾ ಭಜ್ಯೇದ್ಬ್ರಾಹ್ಮಣಸ್ಯ ತು ಪಾದಯೋಃ ॥ ೨೧೫ ॥

ಶೋಣಿತಂ ದೃಶ್ಯತೇ ಚಾಸ್ಯ ದ್ವಿಜಶ್ಚಾಂದ್ರಾಯಣಂ ಚರೇತ್ ।
ವಾಪಿತಂ ಯತ್ರ ನೀಲಂ ತು ತಾವದೇವಾಶುಚಿರ್ಮಹೀ ॥ ೨೧೬ ॥

---

ಮತ್ತು ಆ ನೀಲಿಯ ವ್ಯವಹರಣವೇ ಮೊದಲಾದ ವೃತ್ತಿಯಿಂದ ಜೀವಿಸುವಿಕೆ, ಇವು ಬ್ರಾಹ್ಮಣನಿಗೆ ಪಾತಕವನ್ನುಂಟುಮಾಡುತ್ತವೆ. ನೀಲಿಯ ಬಣ್ಣದ ನೂಲು ನೂಲಿನಿಂದ ಮಾಡಲ್ಪಟ್ಟ ವಸ್ತ್ರ ಇವುಗಳ ಧಾರಣವೂ ಬ್ರಾಹ್ಮಣನಿಗೆ ಪಾತಕವನ್ನುಂಟು ಮಾಡುತ್ತವೆ.

೨೧೩–೨೧೪. ಬ್ರಾಹ್ಮಣನಾದವನು ನೀಲಿಯ ಸೂತ್ರವನ್ನು ಧರಿಸಿದುದೇ ಆದರೆ ಅವನು ನಿತ್ಯವೂ ಮಾಡುವ ಸ್ನಾನ, ದಾನ, ತಪಸ್ಸು, ಹೋಮ, ಅಧ್ಯಯನ, ಪಿತೃತರ್ಪಣ, ಮಹಾಯಜ್ಞಗಳು ಎಲ್ಲವೂ ವ್ಯರ್ಥವಾಗುತ್ತದೆ. ಬ್ರಾಹ್ಮಣನಾದವನು ಕಪ್ಪಾದ ಮತ್ತು ಕೆಂಪಾದ ವಸ್ತ್ರವನ್ನು ದೇಹದಲ್ಲಿ ಧರಿಸಿದುದೇ ಆದರೆ ಅಂತಹ ಬ್ರಾಹ್ಮಣನು ಒಂದು ರಾತ್ರಿ ಉಪವಾಸವಿದ್ದು ಪಂಚಗವ್ಯದಿಂದ ಶುದ್ಧಿ ಹೊಂದಬೇಕು.

೨೧೫–೨೧೬. ಬ್ರಾಹ್ಮಣನಾದವನು ನೀಲಿಯ ಮಗವನ್ನು ಕಾಲಿನಿಂದ ಮೆಟ್ಟಿ ಮುರಿದುದೇ ಆದರೆ ಅದರಿಂದ ಕಾಲಿನಲ್ಲಿ ರಕ್ತವು ಕಂಡುಬಂದದ್ದೇ ಆದರೆ, ಅಂತಹ ಬ್ರಾಹ್ಮಣನು ಚಾಂದ್ರಾಯಣವನ್ನಾಚರಿಸಬೇಕು. ಯಾವ ಭೂಮಿಯಲ್ಲಿ ನೀಲಿಯನ್ನು ಬೆಳೆಯಲು ನೆಡುತ್ತಾರೆಯೋ ಆಗಲೇ ಆ ಭೂಮಿಯೂ ಅಶುಚಿಯಾಗುತ್ತದೆ. ಅಂತಹ ಭೂಮಿಯು ಹನ್ನೆರಡು ವರ್ಷದವರಿಗೂ ಅಶುಚಿಯಾಗಿದ್ದು ಅನಂತರ ಶುದ್ಧಿಹೊಂದುತ್ತದೆ. (ಅಂದರೆ ನೀಲಿಯು ಬೆಳೆದಿರುವ ಭೂಮಿಯೂ ಬ್ರಾಹ್ಮಣನ ಪ್ರವೇಶಕ್ಕೆ ಅರ್ಹವಲ್ಲವೆಂದು ತಾತ್ಪರ್ಯ) " ನೀಲೀಮಧ್ಯೇತು ಗಚ್ಛೇದ್ಯಃ

ಪ್ರಮಾಣಂ ದ್ವಾದಶಾಬ್ದಾನಿ ಅತ ಊರ್ಧ್ವಂ ಶುಚಿರ್ಭವೇತ್ ।
ಅಂತ್ಯಜಾತಿಃ ಶ್ವಪಾಕೇನ ಸಂಸ್ಪೃಷ್ಟ್ವಾ ಸ್ತ್ರೀರಜಸ್ವಲಾ ॥ ೨೧೭ ॥

ಚತುರ್ಥೇಽಹನಿ ಶುದ್ಧಾಯಾಃ ಪ್ರಾಯಶ್ಚಿತ್ತಂ ವಿಶೋಧನಂ ।
ತ್ರಿರಾತ್ರಮುಪವಾಸಃ ಸ್ಯಾತ್ಪಂಚಗವ್ಯಂ ತಥೈವ ಚ ॥ ೨೧೮ ॥

ಉಚ್ಛಿಷ್ಟೇನ ತು ಸಂಸ್ಪೃಷ್ಟಾ ಕದಾಚಿತ್ ಸ್ತ್ರೀ ರಜಸ್ವಲಾ ।
ಯಾವನ್ನ ಶುದ್ಧಿಮಾಪ್ನೋತಿ ನಾಶ್ನೀಯಾತ್ತಾವದೇವ ತು ॥ ೨೧೯ ॥

ಚಂಡಾಲಶ್ವಪಚೌ ಸ್ಪೃಷ್ಟ್ವಾ ಶವಧೂಮಂ ಚ ಸೂತಿಕಾಂ ।
ಶವಂ ಸ್ಪರ್ಶಯಿತಾ ಶ್ವಾನಂ ಸದ್ಯಃ ಸ್ನಾನೇನ ಶುಧ್ಯತಿ ॥ ೨೨೦ ॥

---

ಪ್ರಮಾದಾದ್ಬ್ರಾಹ್ಮಣಃ ಕ್ವಚಿಲ್ ॥ ಅಹೋರಾತ್ರೋಷಿತೋ ಭೂತ್ವಾ ಪಂಚಗವ್ಯೇನ ಶುಧ್ಯತಿ, ಎಂದು ಆಪಸ್ತಂಬರವಚನವೂ ವೈದ್ಯನಾಥೀಯದಲ್ಲಿ ಉದಹರಿಸಲ್ಪಟ್ಟಿದೆ.

೨೧೭-೨೧೯. ಅಂತ್ಯವರ್ಣದ ಸ್ತ್ರೀಯು (ಚಂಡಾಲಿ) ರಜಸ್ವಲೆಯಾಗಿರುವಾಗ ಶ್ವಪಾಕನೆಂಬ ಹೀನಜಾತಿಯುವನ ಸ್ಪರ್ಶವನ್ನು ಹೊಂದಿದ್ದೇ ಆದರೆ ಅವಳು ನಾಲ್ಕನೆಯದಿನ ಸ್ನಾನಮಾಡಿ ಶುದ್ಧಳಾದನಂತರ ಈ ಪ್ರಾಯಶ್ಚಿತ್ತವನ್ನು ಮಾಡಿಕ್ಕೊಳ್ಳಬೇಕು, ಮೂರುದಿವಸ ಉಪವಾಸವಿದ್ದು ಪಂಚಗವ್ಯಪ್ರಾಶನವೇ ಅವಳಿಗೆ ಪ್ರಾಯಶ್ಚಿತ್ತ, ರಜಸ್ವಲೆಯಾದಸ್ತ್ರೀಯು ಎಂಜಲಿನಿಂದ ಅಥವಾ ಆ ಎಂಜಲಿನ ಸಂಬಂಧವುಳ್ಳವನಿಂದ ಆಕಸ್ಮಿಕವಾಗಿ ಸ್ಪರ್ಶಹೊಂದಿದ್ದೇಆದರೇ ಅವಳು ಶುದ್ಧಿ ಹೊಂದುವ ಪರ್ಯಂತವೂ ಊಟಮಾಡಕೂಡದು (ಸ್ನಾನಪರ್ಯಂತವೆಂದು ತಾತ್ಪರ್ಯ)

೨೨೦-೨೨೧. ಚಂಡಾಲರ ಮತ್ತು ಶವದಹೊಗೆಯ ಪ್ರಸವದಿಂದ ಹತ್ತುದಿನ ತುಂಬದಿರುವ ಹೆಂಗಸಿನ ಸ್ಪರ್ಶದಿಂದಲೂ, ಶವ, ನಾಯಿ, ಇವುಗಳ ಸ್ಪರ್ಶದಿಂದಲೂ, ಅಶುದ್ಧಿಹೊಂದಿದವನು ಸ್ನಾನದಿಂದ ಸದ್ಯಃ ಶುದ್ಧನಾಗುತ್ತಾನೆ. ಬ್ರಾಹ್ಮಣನಾದವನು ರಕ್ತಮಾಂಸಗಳ ಜಿಡ್ಡಿನಿಂದ ಕೂಡಿರುವ ಮೂಳೆಯನ್ನು ಮುಟ್ಟಿದುದೇ ಆದರೆ ಸ್ನಾನದಿಂದ ಶುದ್ಧಿಹೊಂದುತ್ತಾನೆ. ಆದರೆ ಆ ಮೂಳೆಯು ಜಿಡ್ಡಿಲ್ಲದೆ ಒಣಗಿ

ನಾ ಸ್ಪೃಷ್ಟ್ವಾಸ್ಥಿತು ಸಸ್ನೇಹಂ ಸ್ನಾತ್ವಾ ವಿಪ್ರೋ ವಿಶುಧ್ಯತಿ ।
ಆಚಮ್ಯೈವ ತು ನಿಸ್ನೇಹಂ ಗಾಮಾಲಭ್ಯಾರ್ಕಮೀಕ್ಷ್ಯ ಚ ॥ ೨೨೧ ॥

ರಥ್ಯಾಕರ್ದಮತೋಯೇನ ನಾಭಿಸ್ಪೃಷ್ಟೋ ಭವತ್ಯಧಃ ।
ಮೃತ್ತೋಯೈಶ್ಚರ್ಚಯೇದಂಗಂ ತತಃ ಶುದ್ಧಿಮವಾಪ್ನುಯಾತ್ ॥ ೨೨೨ ॥

ವಾಂತಂ ವಿವಿಕ್ತಃ ಸ್ನಾತ್ವಾ ತು ಘೃತಂ ಪೀತ್ವಾ ವಿಶುಧ್ಯತಿ ।
ಕ್ಷುರಕರ್ಮ ತತಃ ಕೃತ್ವಾ ಸ್ನಾನೇನೈವ ವಿಶುಧ್ಯತಿ ॥ ೨೨೩ ॥

ಅಪಾಂಕ್ತೇಯೈಸ್ತು ಯಃ ಪಙ್ಕ್ತ್ಯಾಂ ಭುಂಕ್ತೇ ಕಶ್ಚಿದ್ದ್ವಿಜೋತ್ತಮಃ ।
ಅಹೋರಾತ್ರೋಷಿತೋ ಭೂತ್ವಾ ಪಂಚಗವ್ಯೇನ ಶುಧ್ಯತಿ ॥ ೨೨೪ ॥

---

ಹೋಗಿದ್ದಲ್ಲಿ ಆಚಮನಮಾಡಿ ಗೋವನ್ನು ಮುಟ್ಟಿ ಸೂರ್ಯನನ್ನು ನೋಡಿದಲ್ಲಿ ಶುದ್ಧನಾಗುತ್ತಾನೆ.

೨೨೨-೨೨೩. ರಾಜಬೀದಿಯ ಕೆಸರು ಮತ್ತು ನೀರು ಇವು ಹೊಕ್ಕಳಿನ ಕೆಳಭಾಗದ ಅವಯವಗಳಲ್ಲಿ ಸ್ಪರ್ಶಹೊಂದಿದುದೇ ಆದರೆ ಮೃತ್ತಿಕೆಯಿಂದ ಕೂಡಿದ ಶುದ್ಧೋದಕದಿಂದ ಆ ಅವಯುವಗಳಲ್ಲಿ ಲೇಪಿಸಿದಲ್ಲಿ ಅನಂತರ ಅವನು ಶುದ್ಧಿಹೊಂದುತ್ತಾನೆ. ವಾಂತಿಮಾಡಿದವನು ಸ್ನಾನಮಾಡಿ ತುಪ್ಪವನ್ನು ಪಾನಮಾಡಿದಲ್ಲಿ ಶುದ್ಧನಾಗುತ್ತಾನೆ. ಕ್ಷೌರಮಾಡಿಸಿಕೊಂಡವನು ಅನಂತರ ಸ್ನಾನಮಾಡಿದಲ್ಲಿ ಶುದ್ಧಿಹೊಂದುತ್ತಾನೆ.

೨೨೪-೨೨೫. ಯಾವ ಬ್ರಾಹ್ಮಣೋತ್ತಮನು ಅಪಾಙ್ಕ್ತೇಯರೊಡನೆ (ಒಂದೇ ಪಙ್ಕ್ತಿಯಲ್ಲಿ ಕುಳಿತು ಭೋಜನಮಾಡಲು ಅನರ್ಹರಾದವರೊಡನೆ) ಅವರ ಪಙ್ಕ್ತಿಯಲ್ಲಿಯೇ ಕುಳಿತು ಭೋಜನಮಾಡುತ್ತಾನೆಯೋ ಅವನು ಮಾರನೆಯದಿನ ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಸಹ ಉಪವಾಸವಿದ್ದು ಪಂಚಗವ್ಯ ಸೇವನೆಯಿಂದ ಶುದ್ಧಿಹೊಂದುತ್ತಾನೆ. ದ್ವಿಜನಾದವನು ಚಂದ್ರಸೂರ್ಯಗ್ರಹಣಕಾಲದಲ್ಲಿ ಭೋಜನ ಮಾಡಿದುದೇ ಆದರೆ ಅವನು ಚಾಂದ್ರಾಯಣವನ್ನಾಚರಿಸಬೇಕು. ಬ್ರಹ್ಮಚಾರಿ

ಚಂದ್ರಾರ್ಕಗ್ರಹಣೇ ಭುಕ್ತ್ವಾ ದ್ವಿಜಶ್ಚಾಂದ್ರಾಯಣಂ ಚರೇತ್ ।
ಬ್ರಹ್ಮಚಾರೀ ಶುನಾ ದಷ್ಟಸ್ತ್ರ್ಯಹಂ ಸಾಯಂ ಪಯಃ ಪಿಬೇತ್ ॥ ೨೨೫ ॥

ಗೃಹಸ್ಥೋ ವಾ ತ್ರಿರಾತ್ರಂ ತು ಚೈಕಾಹಂ ತ್ವಗ್ನಿಹೋತ್ರವಾನ್ ।
ನಾಭೇರೂರ್ಧ್ವಂ ತು ದಷ್ಟಸ್ಯ ತದೇವ ದ್ವಿಗುಣಂ ಭವೇತ್ ॥ ೨೨೬ ॥

ಬಾಹ್ವೋಶ್ಚ ತ್ರಿಗುಣಂ ಜ್ಞೇಯಂ ಮೂರ್ಧನಿ ಸ್ಯಾಚ್ಚತುರ್ಗುಣಂ ।
ಉದ್ಗ್ರಂಥಮೃತಕಂ ಪ್ರೇತಂ ಯಃ ಸ್ಪೃಶೇದ್ಬ್ರಾಹ್ಮಣಃ ಕ್ವಚಿತ್ ॥

ತಸ್ಯ ಶುದ್ಧಿಂ ವಿಜಾನೀಯಾತ್ತಪ್ತಕೃಚ್ಛ್ರೇಣ ನಿತ್ಯಶಃ ।
ಆತ್ಮಾನಂ ಘಾತಯೇದ್ಯಸ್ತು ರಜ್ವಾದಿಭಿರುಪಕ್ರಮೈಃ ॥ ೨೨೮ ॥

ತಸ್ಯ ಪ್ರೇತಕ್ರಿಯಾಂ ಕೃತ್ವಾ ತಪ್ತಕೃಚ್ಛ್ರೇಣ ಶುಧ್ಯತಿ ॥ ೨೨೯ ॥

---

ಯಾದವನು ನಾಯಿಸಿಂದ ಕಚ್ಚಲ್ಪಟ್ಟಲ್ಲಿ ಮೂರುದಿವಸದವರೆಗೂ ಸಾಯಂಕಾಲದಲ್ಲಿ ಹಾಲನ್ನು ಕುಡಿಯಬೇಕು, (ಹಗಲಿನಲ್ಲಿಯೂ ಉಪವಾಸವಿದ್ದು ಸಾಯಂಕಾಲದಲ್ಲಿ ಮಾತ್ರ ಕ್ಷೀರಪಾನವೆಂದು ತಾತ್ಪರ್ಯ.)

೨೨೬-೨೨೭ ಗೃಹಸ್ಥನಾಗಿದ್ದವನು ಆರೀತಿ ನಾಯಿನಿಂದ ಕಚ್ಚಲ್ಪಟ್ಟಲ್ಲಿ ಮೂರುರಾತ್ರಿ ಹಾಲನ್ನು ಕುಡಿಯಬೇಕು. ಅಗ್ನಿಹೋತ್ರಿಯಾಗಿದ್ದಲ್ಲಿ ಒಂದುದಿನ ಮಾತ್ರ ಕ್ಷೀರಪಾನದಲ್ಲಿರಬೇಕು. ಹೊಕ್ಕಳಿಗಿಂತ ಮೇಲುಭಾಗದ ಅವಯವಗಳಲ್ಲಿ ಕಚ್ಚಲ್ಪಟ್ಟಲ್ಲಿ ಮೇಲೆ ಹೇಳಿರುವ ಪ್ರಾಯಶ್ಚಿತ್ತವನ್ನೇ ಎರಡರಷ್ಟು ಆಚರಿಸಬೇಕು ತೋಳುಗಳಲ್ಲಿ ಕಚ್ಚಲ್ಪಟ್ಟಲ್ಲಿ ಮೂರರಷ್ಟು ತಲೆಯಲ್ಲಿ ಕಚ್ಚಲ್ಪಟ್ಟಲ್ಲಿ ನಾಲ್ಕರಷ್ಟು ಆಚರಿಸಬೇಕು. ನೇಣುಹಾಕಿಕೊಂಡು ಮೃತನಾದವನ ಶವವನ್ನು ಬ್ರಾಹ್ಮಣನು ಮುಟ್ಟಿದುದೇ ಆದರೆ ಅವನು ನಿತ್ಯವೂ ತಪ್ತಕೃಚ್ಛ್ರವನ್ನಾಚರಿಸಿ ಶುದ್ಧಿ ಹೊಂದಬೇಕು.

೨೨೮-೨೩೦. ಯಾವನು ಹಗ್ಗವೇ ಮೊದಲಾದ ಸಾಧನಗಳಿಂದ ಆತ್ಮಹತ್ಯೆಯನ್ನೇ ಮಾಡಿಕೊಳ್ಳುತ್ತಾನೆಯೋ ಅಂತಹ ಆತ್ಮಘಾತಿಗೆ ಉತ್ತರ ಕ್ರಿಯೆಯನ್ನು

ವ್ರತೈರ್ದ್ವಿಜಾತಯಃ ಶೋಧ್ಯಾಃ ವ್ರತೈರಾವಿಷ್ಕೃತೈರ್ಮಯಾ ॥ ೨೩೦ ॥

ಅನಾವಿಷ್ಕೃತಪಾಪಾಂಶ್ಚ ಮಂತ್ರೈರ್ಹೋಮೈಶ್ಚ ಸಾಧಯೇತ್ ।
ಖ್ಯಾಪನೇನಾನುತಾಪೇನ ತಪಸಾಧ್ಯಯನೇನ ಚ ॥ ೨೩೧ ॥

ಪಾಪಕೃನ್ಮುಚ್ಯತೇ ಪಾಪಾತ್ತಥಾ ದಾನೇನ ಚಾಪರೇ ।
ಯಥಾ ಯಥಾ ನರೋ ಧರ್ಮಂ ಸ್ವಯಂ ಕೃತ್ವಾ ನ ಭಾಷತೇ ॥ ೨೩೨ ॥

ತಥಾ ತಥಾ ಚ ಯೇನೈವ ತಸ್ಮಾತ್ಪಾಪಾತ್ಪ್ರಮುಚ್ಯತೇ ।
ಕೃತ್ವಾ ಪಾಪಂ ಹಿ ಸ್ಮರ್ತವ್ಯಂ ತಸ್ಮಾತ್ಪಾಪಾತ್ಪ್ರಮುಚ್ಯತೇ ॥ ೨೩೩ ॥

---

ಮಾಡಿದವನು ತಪ್ತಕೃಚ್ಛ್ರವನ್ನು ಮಾಡಿಕೊಂಡು ತಾನು ಶುದ್ಧಿಹೊಂದಬೇಕು. ಈ ರೀತಿ ನಾನು ಹೇಳಿರುವ ವ್ರತಗಳಿಂದ ಪಾತಕಿಗಳಾದ ದ್ವಿಜರನ್ನು ಶುದ್ಧಿಗೊಳಿಸಬೇಕು.

೨೩೧. ಯಾರು ತಮ್ಮ ಪಾಪಗಳನ್ನು ಹೊರಗೆಡಹುವುದಿಲ್ಲವೋ ಅಂತಹ ಗೂಢಪಾತಕಿಗಳು ಮಂತ್ರಗಳಿಂದಲೂ ಹೋಮಗಳಿಂದಲೂ ಆ ಪಾಪಗಳಿಂದ ಬಿಡುಗಡೆಯನ್ನು ಸಾಧಿಸಬೇಕು. ಪಾಪಿಯಾದವನು, ತನ್ನ ಪಾಪವನ್ನು ಹೊರಗೆ ಪ್ರಸಿದ್ಧಗೊಳಿಸುವುದರಿಂದಲೂ ತಾನುಮಾಡಿದುದರಿಂದ ತಪ್ಪೆಂದು ತಿಳಿದು ಪಶ್ಚಾತ್ತಾಪ ಪಡುವುದರಿಂದಲೂ, ಕಾಯಕ್ಲೇಶಕರವಾದ ತಪಸ್ಸುಗಳಿಂದಲೂ, ಅಧ್ಯಯನದಿಂದಲೂ ಆ ಪಾಪಗಳಿಂದ ಮುಕ್ತನಾಗುತ್ತಾನೆ. ಕೆಲವು ಪಾಪಗಳು ದಾನದಿಂದಲೂ ನಾಶಹೊಂದುತ್ತವೆ.

೨೩೨–೨೩೪. ಯಾವನು ಪಾಪನಿವೃತ್ತಿಗಾಗಿ ಧರ್ಮಾನುಷ್ಠಾನ ಮಾಡಿದುದನ್ನು ತಾನಾಗಿ ಇತರರಿಗೆ ಹೇಳದೆ ಹೇಗೆ ಹೇಗೆ ಮೌನದಿಂದಿರುವನೋ ಹಾಗೆ ಹಾಗೆಲ್ಲಾ ಅವನಿಗೆ ಆ ಪಾಪದಿಂದ ಬಿಡುಗಡೆಯುಂಟಾಗುತ್ತ ಬರುತ್ತದೆ. ಪಾಪ ಮಾಡಿದವನು ತಾನು ಇಂತಹ ಪಾಪಮಾಡಿದುದು ತಪ್ಪೆಂದು ಸ್ಮರಿಸಿಕೊಂಡರೂ

**ಯಥಾ ಯಥಾ ಮನಸ್ತಸ್ಯ ದುಷ್ಕೃತಂ ಕರ್ಮ ಗರ್ಹತಿ ।**
**ತಥಾ ತಥಾ ಶರೀರಂ ತತ್ತೇನಾಧರ್ಮೇಣ ಮುಚ್ಯತೇ ॥ ೨೩೪ ॥**

**ನೈತತ್ಕುರ್ಯಾಂ ಪುನರಿತಿ ನಿವೃತ್ತ್ಯಾಂ ಪ್ರಯತೇನ್ನರಃ ।**
**ಏವಂ ಸಂಚಿಂತ್ಯ ಮನಸಾ ಪ್ರೇತ್ಯ ಕರ್ಮಫಲೋದಯಂ ॥ ೨೩೫ ॥**

**ಮನೋವಾಕ್ಕರ್ಮಭಿರ್ನಿತ್ಯಂ ಶುಭಂ ಕರ್ಮ ಸಮಾಚರೇತ್ ।**
**ಅಜ್ಞಾನಾದ್ಯದಿ ವಾ ಜ್ಞಾನಾತ್ಕೃತ್ವಾ ಕರ್ಮ ವಿಗರ್ಹಿತಂ ॥ ೨೩೬ ॥**

**ತಸ್ಮಾದ್ಧಿ ಮುಚ್ಯತೇ ನಿತ್ಯಂ ದ್ವಿತೀಯಂ ನ ಸಮಾಚರೇತ್ ।**
**ಯಸ್ಮಿನ್ಕರ್ಮಣ್ಯಸ್ಯ ಕೃತೇ ಮನಸಃ ಸ್ಯಾದಲಾಘವಂ ।**
**ತಸ್ಮಿಂಸ್ತಾವತ್ತಪಃ ಕುರ್ಯಾದ್ಯಾವತ್ತುಷ್ಟಿಕರಂ ಭವೇತ್ ॥ ೨೩೭ ॥**

---

ಆ ಪಾಪದಿಂದ ಮುಕ್ತನಾಗುತ್ತಾನೆ. ಮತ್ತು ಪಾಪಕ್ಕೆ ಕಾರಣವಾದ ದುಷ್ಕರ್ಮದಲ್ಲಿ ಯಾವನ ಮನಸ್ಸು ಹೇಗೆ ಹೇಗೆ ಜುಗುಪ್ಸೆಹೊಂದಿ ಪರಾಙ್ಮುಖವಾಗುತ್ತ ಬರುತ್ತ ದೆಯೋ ಹಾಗೆ ಹಾಗೆಲ್ಲಾ ಅವನ ಶರೀರವು ಅಧರ್ಮದಿಂದ ದೂರವಾಗುತ್ತ ಬರುತ್ತದೆ.

೨೩೫–೨೩೬. ಅಧರ್ಮದಿಂದ ಒಂದಾವರ್ತಿ ಭಯಪಟ್ಟ ಮನಷ್ಯನು ಪುನಃ ಇಂತಹ ಕಾರ್ಯವನ್ನು ನಾನು ಮಾಡುವುದಿಲ್ಲವೆಂದು ನಿವೃತ್ತಿಮಾರ್ಗವನ್ನೇ ಬಳಕೆಗೆ ತರಬೇಕು. ಈ ರೀತಿ ಕರ್ಮಗಳಿಂದುಂಟಾದ ಪರಲೋಕದ ಸುಖದುಃಖ ಗಳನ್ನು ಮನಸ್ಸಿನಿಂದ ಆಲೋಚಿಸಿ ಮನೋವಾಕ್ಕರ್ಮಗಳಿಂದ ಶುಭಕರವಾದ ಕಾರ್ಯಗಳನ್ನೇ ಯಾವಾಗಲೂ ಆಚರಿಸಬೇಕು ತಿಳಿಯದೇ ಆಗಲಿ ಪಾಪಕರವಾದ ಕಾರ್ಯವನ್ನು ಮಾಡಿದವನು. ಆ ಕಾರ್ಯದಿಂದ ಪಶ್ಚಾತ್ತಾಪಹೊಂದಿ ಪುನಃ ಅಂತಹ ಕಾರ್ಯವನ್ನು ಮಾಡದೇ ಇದ್ದಲ್ಲಿ ಅವನೂ ಆ ಪಾಪದಿಂದ ಮುಕ್ತನೇ ಆಗುತ್ತಾನೆ.

೨೩೭–೨೩೮. ಯಾವ ಕೆಲಸವನ್ನು ಮಾಡಿದಲ್ಲಿ ಮನಸ್ಸಿಗೆ ನೋವು ಉಂಟಾಗುವುದೋ ಅಂತಹ ಕೆಲಸವು ಅಕಸ್ಮಿಕವಾಗಿ ನಡೆದಲ್ಲಿ ತನಗೆ ಮನಸ್ಸಿಗೆ ತುಷ್ಟಿಯುಂಟಾಗುವವರಿಗೂ ಆ ಪಾಪದ ನಿವೃತ್ತಿಗಾಗಿ ತಪಸ್ಸನ್ನಾಚರಿಸಬೇಕು. ಈಗ ನಾನು ಯಾವ ಯಾವ ಪಾತಕಗಳಿಗೆ ಪ್ರಾಯಚಿತ್ತವನ್ನು ಹೇಳಿರುವೆನೋ ಅವುಗಳೆಲ್ಲವೂ ಆಯಾಯ ಪಾಪಗಳ ತಾರತಮ್ಯಕ್ಕೆ ತಕ್ಕಂತೆ ಯಥೋಚಿತವಾಗಿ

**ಗುರುಲಘುತಾಂ ತು ವಿಚಾರ್ಯ ಯಥಾವತ್**
**ಯೇಷು ಮಯಾಗಮನಂ ಚ ತವೋಕ್ತಂ ।**
**ತೇಷು ನ ಚೇತ್ಸಹನಿಶ್ಚಿತಬುದ್ಧಿಃ**
**ವಿಪ್ರವರೈಃ ಕುಶಲೈಃ ಸುಧಿಯಾ ವಾ ॥ ೨೭೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ಪ್ರಾಯಶ್ಚಿತ್ತಾಧ್ಯಾಯೋ ನಾಮ ತ್ರಿಸಪ್ತತಿತಮೋಽಧ್ಯಾಯಃ**

---

ನಿರ್ಣಯಿಸಲ್ಪವೆ. ಒಂದು ವೇಳೆ ಅವುಗಳ ಗುರು ಲಘು ಭಾವಗಳ ನಿರ್ಣಯವಾಗದೆ ಸಂದೇಹವುಂಟಾಗಿ ಇದೇ ಪ್ರಾಯಚಿತ್ತವೆಂಬ ನಿಶ್ಚಯವುಂಟಾಗುವುದಿಲ್ಲವೋ ಅಂತಹ ಸಂದರ್ಭದಲ್ಲಿ ಸಂದೇಹಗ್ರಸ್ತನಾದವನು ಇತರ ಬ್ರಾಹ್ಮಣೋತ್ತಮರ (ಆಚಾರದಿಂದಲೂ) ಮತ್ತು ಶಾಸ್ತ್ರಗಳಲ್ಲಿ ನಿಪುಣರಾಗಿರುವವರ ಹಾಗೂ ಬುದ್ಧಿಶಾಲಿಯಾಗಿರುವವರ ಸಲಹೆಯಂತೆ ತಕ್ಕ ಪ್ರಾಯಶ್ಚತ್ತವನ್ನು ನಿಶ್ಚಯಿಸಿಕೊಳ್ಳಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದಲ್ಲಿದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಸೇರಿರುವ ಪ್ರಾಯಶ್ಚಿತ್ತಾಧ್ಯಾಯವೆಂಬ ಎಪ್ಪತ್ತಮೂರನೆಯ ಅಧ್ಯಾಯವು ಮುಗಿದಿದೆ.



## ಎಪ್ಪತ್ತಮೂರನೆಯ ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಪಾಪಿಗಳಾದವರು ಪ್ರಾಯಶ್ಚಿತ್ತಹೊಂದದೆ ಇದ್ದಲ್ಲಿ ರಾಜನಾದವನು ದಂಡ ಪ್ರಣಯನವನ್ನು ಕೈಕೊಳ್ಳಬೇಕು ಎಂಬ ಪ್ರಸಂಗದಲ್ಲಿ ಪಾಪಗಳಿಗೆಲ್ಲಾ ಪ್ರಾಯಶ್ಚಿತ್ತವನ್ನು ಹೇಳಬೇಕೆಂದು ಭಾರ್ಗವರಾಮನು ಮಾಡಿದ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಅಭೋಜ್ಯವಾದ ಅನ್ನ ಭಕ್ಷಣವೇ ಮೊದಲಾದ ಅನೇಕ ಉಪಪಾತಕಗಳನ್ನೂ ಬ್ರಹ್ಮಹತ್ಯೆಯೇ ಮೊದಲಾದ ಅನೇಕ ಮಹಾಪಾತಕಗಳನ್ನೂ ಪರಿಗಣಿಸಿ ಅಂತಹ ಪಾಪಗಳಿಗೆ ಶಾಸ್ತ್ರಸಿದ್ಧವಾದ ಪ್ರಾಯಶ್ಚಿತ್ತಗಳನ್ನೂ ಆಯಾಯ ವರ್ಣಭೇದಕ್ಕೆ ತಕ್ಕಂತೆ ಉಪಪಾದಿಸಿರುವರು ರಹಸ್ಯವಾದ ಪಾಪಗಳಿಗೂ ತಪಸ್ಸೇ ಮೊದಲಾದ ಪ್ರಾಯಶ್ಚಿತ್ತಗಳು ಹೇಳಲ್ಪಟ್ಟವೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಚತುಸ್ಸಪ್ತತಿತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಇತ್ಯೇತದೇನಸಾಮುಕ್ತಂ ಪ್ರಾಯಶ್ಚಿತ್ತಂ ಯಥಾವಿಧಿ |**
**ಅತ ಊರ್ಧ್ವಂ ರಹಸ್ಯಾನಾಂ ಪ್ರಾಯಶ್ಚಿತ್ತಂ ನಿಬೋಧ ಮೇ || ೧ ||**

**ಪೌರುಷೇಣ ತು ಸೂಕ್ತೇನ ಜಪ್ಯಹೋಮೈರ್ದ್ವಿಜೋತ್ತಮಾಃ |**
**ಮಾಸೇನೈಕೇನ ಮುಚ್ಯಂತೇ ಪಾತಕೈಃ ಸಂಯತೇಂದ್ರಿಯಾಃ || ೨ ||**

**ಸವ್ಯಾಹೃತೀಕಪ್ರಣವಾಃ ಪ್ರಾಣಾಯಾಮಾಸ್ತು ಷೋಡಶ |**
**ಅಪಿ ಭ್ರೂಣಹನಂ ಮಾಸಾತ್ಪುನಂತ್ಯಹರಹಃ ಕೃತಾಃ || ೩ ||**

---

### ಎಪ್ಪತ್ತನಾಲ್ಕನೆಯ ಅಧ್ಯಾಯ.

೧–೨. ಪುಷ್ಕರನು ಹೇಳುತ್ತಾನೆ :—ಎಲೈ ಭಾರ್ಗವನೇ, ಇದುವರಿಗೆ ಎಲ್ಲಾ ಪಾಪಗಳಿಗೂ ಶಾಸ್ತ್ರವಿಧಿಯನ್ನನುಸರಿಸಿ ಪ್ರಾಯಶ್ಚಿತ್ತವನ್ನು ಹೇಳಿದ್ದಾಯಿತು. ಇನ್ನು ಮುಂದೆ ಪಾಪಮಾಡಿದವರಿಂದ ಹೊರಗೆಡಹಲ್ಪಡದೆ ರಹಸ್ಯವಾಗಿರುವ ಪಾಪಗಳಿಗೆ ಅವರು ಮಾಡಬೇಕಾದ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ ಕೇಳು— ರಹಸ್ಯವಾದ ಪಾಪವುಳ್ಳ ಬ್ರಾಹ್ಮಣೋತ್ತಮರು ಜಿತೇಂದ್ರಿಯರಾಗಿದ್ದು ಪುರುಷ ಸೂಕ್ತದ ಜಪ ಮತ್ತು ಹೋಮಗಳನ್ನು ಒಂದು ತಿಂಗಳವರಿಗೂ ನಡೆಸಿದಲ್ಲಿ ಅವರು ಅಂತಹ ರಹಸ್ಯ ಪಾಪದಿಂದಲೂ ಮುಕ್ತರಾಗುತ್ತಾರೆ.

೩–೪. ವ್ಯಾಹೃತಿಯಿಂದ ಕೂಡಿದ ಪ್ರಣವ (ಓಂಕಾರ) ದೊಡನೆ ಹದಿನಾರು ಪ್ರಾಣಾಯಾಮಗಳನ್ನು ಮಾಡಿದುದೇ ಆದರೆ ಆ ರೀತಿ ಒಂದು ತಿಂಗಳವರಿಗೂ

ಕೌತ್ಸಂ ಜಪ್ತ್ವಾಪ ಇತ್ಯೇತದ್ವಾಸಿಷ್ಠಂ ಪ್ರತಿ ಚ ತ್ರ್ಯೃಚಂ ।
ಮಾಹೇಶಂ ಶುದ್ಧವತ್ಯಶ್ಚ ಸುರಾಪೋಽಪಿ ವಿಶುಧ್ಯತಿ ॥ ೪ ॥

ಸಕೃಜ್ಜಪ್ತ್ವಾಸ್ಯವಾಮೀಯಂ ಶಿವಸಂಕಲ್ಪಮೇವ ಚ ।
ಅಪಹೃತ್ಯ ಸುವರ್ಣಂ ತು ಕ್ಷಣಾದ್ಭವತಿ ನಿರ್ಮಲಃ ॥ ೫ ॥

ಹವಿಷ್ಮತೀಯಮಸ್ಯೇತಿ ನತಮಂಹ ಇತೀತಿ ಚ ।
ಜಪ್ತ್ವಾ ಚ ಪೌರುಷಂ ಸೂಕ್ತಂ ಮುಚ್ಯತೇ ಗುರುತಲ್ಪಗಃ ॥ ೬ ॥

ಏನಸಾಂ ಸ್ಥೂಲಸೂಕ್ಷ್ಮಾಣಾಂ ಚಿಕೀರ್ಷನ್ನಪನೋದನಂ ।
ಅವೇತ್ಯೃಚಂ ಜಪೇದಬ್ದಂ ಯತ್ಕಿಂಚಿದಪಿ ತಾನಿ ಚೇತ್ ॥ ೭ ॥

ಪ್ರತಿಗೃಹ್ಯಾಪ್ರತಿಗ್ರಾಹ್ಯಂ ಭುಕ್ತ್ವಾ ಚಾನ್ನಂ ವಿಗರ್ಹಿತಂ ।
ಜಪಂಸ್ತರತ್ಸಮಂದೀಯಂ ಪ್ರಯತೋ ಮಾನವಸ್ತ್ರ್ಯಹಂ ॥ ೮ ॥

---

ಪ್ರತಿ ನಿತ್ಯವೂ ಮಾಡಿದ ಆ ಪ್ರಾಣಾಯಾಮಗಳು ಭ್ರೂಣಹತ್ಯೆ ಮಾಡಿದವನನ್ನೂ ಪವಿತ್ರಗೊಳಿಸುತ್ತವೆ. ಕೌತ್ಸರಿಂದ ದೃಷ್ಟವಾದ ಆಪ ಇತ್ ಎಂಬ ಮಂತ್ರವನ್ನೂ ವಾಸಿಷ್ಠವಾದ ಮೂರು ಋಕ್ಕುಗಳನ್ನೂ ಜಪಮಾಡಿದವನು ಸುರಾಪಾನಮಾಡಿದ್ದರೂ ಆ ಪಾಪದಿಂದ ಮುಕ್ತನಾಗಿ ಶುದ್ಧನಾಗುತ್ತಾನೆ.

೫-೬. ಅಸ್ಯವ್ವಾಮಸ್ಯ ಎಂಬ ಅಸ್ಯವಾಮೀಯ ಸೂಕ್ತವನ್ನೂ ಶಿವಸಂಕಲ್ಪವನ್ನೂ ಒಂದು ಬಾರಿ ಜಪಮಾಡಿದವನು ಸುವರ್ಣದ ಚೌರ್ಯವನ್ನು ಮಾಡಿದ್ದರೂ ಕ್ಷಣಕಾಲದಲ್ಲಿ ಅವನು ನಿಷ್ಪಾಪನಾಗುತ್ತಾನೆ. ಮತ್ತು ಹವಿಷ್ಮತೀ ಎಂಬ ಸೂಕ್ತವನ್ನೂ ನತಮಂಹಃ ಎಂಬ ಸೂಕ್ತವನ್ನೂ ಪುರುಷ ಸೂಕ್ತವನ್ನೂ ಸಹ ಜಪಮಾಡಿದವನು ಗುರುತಲ್ಪಗಮನ ಮಾಡಿದ್ದರೂ ಅವನು ಆ ಪಾಪದಿಂದ ಮುಕ್ತನಾಗುತ್ತಾನೆ.

೭-೮. ಪಾಪಗಳು ಸೂಕ್ಷ್ಮವಾಗಿಯೋ, ಮಹತ್ತಾಗಿಯೋ ಇದ್ದಲ್ಲಿ ಅಂತಹ ಪಾಪಗಳನ್ನು ಹೋಗಲಾಡಿಸಲು ಅಪೇಕ್ಷೆಯುಳ್ಳವನು ಅವುಗಳು ಹೇಗಿದ್ದರೂ ಸರಿ ಅವೇ ಎಂಬ ಋಕ್ಕನ್ನು ಒಂದುವರ್ಷ ಪೂರ್ತಿಯಾಗಿ ಜಪಿಸಬೇಕು. ಮತ್ತು ದುಷ್ಟವಾದ ದಾನಗಳನ್ನು ಸ್ವೀಕರಿಸಿಯೂ ನಿಂದಿತವಾದ ಅನ್ನವನ್ನು ಭಕ್ಷಿಸಿಯೂ ಪಾತಕಿಯಾದ ಬ್ರಾಹ್ಮಣನು ಮೂರು ದಿವಸ ಪೂರ್ತಿಯಾಗಿ ತರತ್ಸಮಂದೀಯವೆಂಬ ಸೂಕ್ತವನ್ನು ಜಪಿಸಿದುದೇ ಆದರೆ ಅವನು ಶುದ್ಧನಾಗುತ್ತಾನೆ.

ಸೋಮಾರೌದ್ರಂ ತು ವಹ್ನೀನಾಂ ಜಪನ್ ಸತ್ಯಸ್ಯ ಶುಧ್ಯತಿ ।
ಸ್ರವಂತ್ಯಾಮಾಚರೇತ್ಸ್ನಾನಂ ಪರ್ಯಸ್ಯಮಿತಿ ವಾ ತ್ರ್ಯೃಚಂ ॥ ೯ ॥

ಅದ್ವಾರಸಾನಮಿತ್ಯೇತದೇನಸ್ವೀ ಸಪ್ತಕಂ ಜಪೇತ್ ।
ಅಪ್ರಕಾಶಂ ತು ಕೃತ್ವೈನೋ ಮಾಸಮಾಸೀತ ಭೈಕ್ಷ್ಯಭುಕ್ ॥ ೧೦ ॥

ಮಂತ್ರೈಃ ಶಾಕಲಹೋಮೀಯೈರಬ್ದಂ ಹುತ್ವಾ ಘೃತಂ ದ್ವಿಜಃ ।
ಸುಗುರ್ವಪ್ಯಪಹಂತ್ಯೇನೋ ಜಪ್ತ್ವಾ ವಾಮನ ಇಷ್ಯತೇ ॥ ೧೧ ॥

ದ್ರುಪದಾ ನಾಮ ಸಾ ದೇವೀ ಯಜುರ್ವೇದೇ ಪ್ರತಿಷ್ಠಿತಾ ।
ಅಂತರ್ಜಲೇ ತ್ರಿರಾವೃತ್ಯ ಮುಚ್ಯತೇ ಸರ್ವಕಿಲ್ಬಿಷೈಃ ॥ ೧೨ ॥

ಮಹಾಪಾತಕಸಂಯುಕ್ತೋ ನ ಗಚ್ಛೇದ್ಗಾಃ ಸಮಾಹಿತಃ ।
ಸ್ವಭ್ಯಸ್ಯ ಪಾವಮಾನೀಯಂ ಭೈಕ್ಷ್ಯಾಹಾರೋ ವಿಶುಧ್ಯತಿ ॥ ೧೩ ॥

---

೯-೧೦. ಸೋಮಾರೌದ್ರಂ ಎಂಬ ಸೂಕ್ತವನ್ನೂ ಸತ್ಯಸೂಕ್ತವನ್ನೂ ಜಪಿಸುತ್ತಾ ಪರ್ಯಸ್ಯ ಎಂಬ ಮೂರು ಋಕ್ಕುಗಳನ್ನೂ ಜಪಿಸುತ್ತಾ ಮಹಾನದೀ ಸ್ನಾನದಿಂದಲೂ ಪಾತಕಿಯು ಶುದ್ಧಿಹೊಂದುತ್ತಾನೆ. ಅದ್ವಾರಸಾನವೆಂಬ ಋಕ್ಕುಗಳನ್ನೂ ಪಾಪಿಯಾದವನು ಶುದ್ಧಿಗಾಗಿ ಜಪಿಸಬೇಕು. ಗೂಢವಾಗಿ ಪಾಪ ಮಾಡಿದವನು ಒಂದು ತಿಂಗಳು ಪರ್ಯಂತ ಭಿಕ್ಷಾಟನೆಯಿಂದ ಜೀವಿಸಬೇಕು.

೧೧-೧೨. ಶಾಕಲಿ ಹೋಮದಲ್ಲಿ ಹೇಳಿರುವ ಮಂತ್ರಗಳಿಂದ ವರ್ಷಪರ್ಯಂತ ತುಪ್ಪದಿಂದ ಹೋಮಮಾಡಿದ ಬ್ರಾಹ್ಮಣನು ವಾಮನಸೂಕ್ತವನ್ನೂ ಜಪಿಸಿದಲ್ಲಿ ಪ್ರಬಲವಾದ ಪಾಪವನ್ನೂ ಹೋಗಲಾಡಿಸಿಕೊಳ್ಳುತ್ತಾನೆ. ಯಜುರ್ವೇದದಲ್ಲಿ ದ್ರುಪದಾ ಎಂಬ ಗಾಯತ್ರಿಯು ಪ್ರಸಿದ್ಧಿಹೊಂದಿದೆ. ಅದನ್ನು ನೀರಿನ ಮಧ್ಯದಲ್ಲಿ ನಿಂತು ಮೂರುಬಾರಿ ಜಪಿಸಿದವನು ಸರ್ವವಿಧವಾದ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೧೩-೧೪. ಮಹಾಪಾತಕದಿಂದ ಕೂಡಿದವನು ಮೊದಲು ಗೋಸೇವೆಗೆ ಹೋಗಕೂಡದು, ಸ್ಥಿರವಾದ ಮನಸ್ಸಿನಿಂದ ಪವಮಾನ ಸೂಕ್ತವನ್ನು ಆವರ್ತಿಮಾಡಿ ಭಿಕ್ಷೆಯಿಂದ ಜೀವಿಸುತ್ತಾ ಅವನು ಶುದ್ಧಿಹೊಂದುತ್ತಾನೆ ಅಥವಾ ಅರಣ್ಯದಲ್ಲಿ

ಅರಣ್ಯೇ ವಾ ತ್ರಿರಭ್ಯಸ್ಯ ಪ್ರಯತೋ ವೇದಸಂಹಿತಾಂ ।
ಮುಚ್ಯತೇ ಪಾತಕೈಃ ಸರ್ವೈಃ ಪರಾಕೈಃ ಶೋಧಿತಸ್ತ್ರಿಭಿಃ　　|| ೧೪ ||

ತ್ರ್ಯಹಂ ತೂಪವಸೇದ್ಯುಕ್ತಸ್ತ್ರಿರಹ್ನೋಭ್ಯುಪಯನ್ನಪಃ ।
ಮುಚ್ಯತೇ ಪಾತಕೈಸ್ಸರ್ವೈರ್ಜಪ್ತ್ವಾ ತ್ರಿರಘಮರ್ಷಣಂ　　|| ೧೫ ||

ಯಥಾಶ್ವಮೇಧಃ ಸುತರಾಂ ಸರ್ವಪಾಪಾಪನೋದನಃ ।
ತಥಾಘಮರ್ಷಣಂ ಸೂಕ್ತಂ ಸರ್ವಪಾಪಾಪನೋದನಂ　　|| ೧೬ ||

ಹತ್ವಾ ಲೋಕಾನಪೀಮಾಂ ಸ್ತ್ರೀನಶ್ನನ್ನಪಿ ಯತಸ್ತತಃ ।
ಋಗ್ವೇದಂ ಧಾರಯನ್ವಿಪ್ರೋ ನೈನಃ ಪ್ರಾಪ್ನೋತಿ ಕಿಂಚನ　　|| ೧೭ ||

ಋಕ್ಸಂಹಿತಾಂ ಸಮಭ್ಯಸ್ಯ ಯಜುಷಾಂ ವಾ ಸಮಾಹಿತಃ ।
ಸಾಮ್ನಾಂ ವಾ ಸರಹಸ್ಯಾನಾಂ ಸರ್ವಪಾಪೈಃ ಪ್ರಮುಚ್ಯತೇ　　|| ೧೮ ||

---

ಇದ್ದುಕೊಂಡು ಶುದ್ಧನಾಗಿ ವೇದಸಂಹಿತೆಯನ್ನು ಮೂರಾವರ್ತಿ ಜಪಿಸಿದಲ್ಲಿ ನಂತರ ಮೂರುಪರಾಕವೆಂಬ ತಪಸ್ಸಿನ ಆಚರಣೆಯಿಂದಲೂ ದೇಹಶುದ್ಧಿಯನ್ನು ಹೊಂದಿ ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೧೫-೧೬. ಮೂರು ದಿವಸ ಉಪವಾಸದಿಂದದ್ದು ನಿಯಮಶಾಲಿಯಾಗಿ ಮೂರು ಹಗಲಿನಲ್ಲಿಯೂ ನೀರಿನಲ್ಲಿ ನಿಂತು ಮೂರಾವರ್ತಿ ಅಘಮರ್ಷಣವನ್ನು ಜಪಿಸುದುದೇ ಆದರೆ ಎಲ್ಲಾ ಪಾಪಗಳಿಂದಲೂ ಅವನು ಮುಕ್ತನಾಗುತ್ತಾನೆ. ಅಶ್ವಮೇಧಯಾಗವು ಹೇಗೆ ಸರ್ವಪಾಪಗಳಿಗೂ ನಾಶಕವೋ ಹಾಗೆಯೇ ಅಘಮರ್ಷಣವೂ ಸರ್ವಪಾಪಗಳಿಗೂ ನಾಶಕವಾದದ್ದು.

೧೭-೧೮. ಋಗ್ವೇದವನ್ನು ಕ್ರಮವಾಗಿ ಅಭ್ಯಾಸಮಾಡಿ ಧಾರಣೆಯಿಂದ ದೃಢಪಡಿಸಿಕೊಂಡು ಪಾರಾಯಣಮಾಡುವ ಬ್ರಾಹ್ಮಣನು ಮೂರುಲೋಕವನ್ನೂ ಕೊಂದರೂ ಯಾವ ನಿಯಮವೂ ಇಲ್ಲದೆ ಅಭೋಜ್ಯವಾದ ಅನ್ನವನ್ನು ಭುಂಜಿಸಿದರೂ ಸಹ ಅವನು ಯಾವ ಪಾಪಕ್ಕೂ ಗುರಿಯಾಗಲಾರನು. ಋಕ್ಸಂಹಿತೆಯನ್ನಾಗಲಿ ಯಜುಸ್ಸಂಹಿತೆಯನ್ನಾಗಲಿ ರಹಸ್ಯಗಳೊಡನೆ ಸಾಮವೇದವನ್ನಾಗಲಿ ನಿಯಮದೊಡನೆ ಪಾರಾಯಣ ಮಾಡುವವನು ಎಲ್ಲಾ ಪಾಪಗಳಿಂದಲೂ ವಿಮೋಚನೆ ಹೊಂದುತ್ತಾನೆ.

ಯಥಾ ಮಹಾಹ್ರದಂ ಪ್ರಾಪ್ಯ ಕ್ಷಿಪ್ರಂ ಲೋಷ್ಟೋ ವಿನಶ್ಯತಿ ।
ತಥಾ ದುಶ್ಚರಿತಂ ಸರ್ವಂ ವೇದೇ ತ್ರಿವೃತಿ ಮಜ್ಜತಿ ॥ ೧೯ ॥

ಋಚೋ ಯಜೂಂಷಿ ಚಾದ್ಯಾನಿ ಸಾಮಾನಿ ವಿವಿಧಾನಿ ಚ ।
ಏಷ ಜ್ಞೇಯಸ್ತ್ರಿವೃದ್ವೇದೋ ಯೋ ವೈ ವೇದ ಸ ವೇದವಿತ್ ॥ ೨೦ ॥

ಆದ್ಯಂ ವೈ ತ್ರ್ಯಕ್ಷರಂ ಬ್ರಹ್ಮ ತ್ರಯೀ ಯಸ್ಮಿನ್ ಪ್ರತಿಷ್ಠಿತಾ ।
ಸ ಗುಹ್ಯೋಽನ್ಯಸ್ತ್ರಿವೃದ್ವೇದೋ ಯೋ ವೇದ್ಯೈನಂ ಸ ವೇದವಿತ್ ॥ ೨೧ ॥

ವೇದಾಭ್ಯಾಸೋಽನ್ವಹಂ ಶಕ್ತ್ಯಾ ಮಹಾಯಜ್ಞಕ್ರಿಯಾಸಮಃ ।
ನಾಶಯತ್ಯಾಶು ಪಾಪಾನಿ ಮಹಾಪಾತಕಜಾನ್ಯಪಿ ॥ ೨೨ ॥

ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇ ಕ್ಷಣಾತ್ ।
ತಥಾ ಜ್ಞಾನಾಗ್ನಿನಾ ಪಾಪಂ ಕ್ಷಿಪ್ರಂ ದಹತಿ ವೇದವಿತ್ ॥ ೨೩ ॥

---

೧೯–೨೦. ಮಣ್ಣಿನ ಹೆಂಟೆಯು ಮಹಾಸಮುದ್ರವನ್ನು ಹೊಂದಿ ಅಲ್ಲಿ ಕರಗಿ ನಾಶವಾಗುವಂತೆ ಎಲ್ಲಾ ಪಾಪಗಳೂ ತ್ರಿವೃದ್ವೇದದಲ್ಲಿ ಮುಳುಗಿಹೋಗುತ್ತವೆ. ತ್ರಿವೃದ್ರೂಪವಾದ ವೇದವೆಂದರೆ ಋಗ್ವೇದ ಯಜುರ್ವೇದ ಮತ್ತು ನಾನಾವಿಧವಾದ ಸಾಮುಗಳು ಈ ಮೂರುವೇದಗಳ ಸಮುದಾಯವೆಂದರ್ಥ. ಈ ಸಮುದಾಯವನ್ನು ತಿಳಿದಿರುವವನೇ ಇಲ್ಲಿ ವೇದವಿತ್ ಎಂದು ಹೇಳಲ್ಪಟ್ಟಿರುವನು.

೨೧–೨೨. ಮೂರು ಅಕ್ಷರಗಳಿಂದಕೂಡಿರುವ ಪ್ರಣವವೇ ಮುಖ್ಯವಾದ ಮೊದಲನೆಯವೇದ, ಅದರಲ್ಲಿಯೇ ಮೂರುವೇದಗಳೂ ಅಡಗಿವೆ ಆದುದರಿಂದ ಅದು ರಹಸ್ಯವಾದ ತ್ರಿವೃದ್ವೇದವೆಂದು ಪರಿಗಣಿಸಲ್ಪಟ್ಟಿದೆ. ಅದನ್ನು ತಿಳಿದವನೂ ಸಹ ವೇದವಿತ್ ಎಂದು ಹೇಳಲ್ಪಡುತ್ತಾನೆ. ತನ್ನಶಕ್ತಿಗೆ ತಕ್ಕಂತೆ ನಿತ್ಯವೂ ನೆರವೇರಿಸಲಾದ ವೇದಾಭ್ಯಾಸವು ಮಹಾಯಜ್ಞಗಳ ಆಚರಣೆಗೆ ಸಮವಾದದ್ದು. ಆ ವೇದಾಭ್ಯಾಸವು ಮಹಾಪಾತಕ ಮತ್ತು ಉಪಪಾತಕಗಳನ್ನೂ ಸಹ ಜಾಗ್ರತೆಯಾಗಿ ನಾಶಮಾಡುತ್ತದೆ.

೨೩–೨೪. ಜ್ವಲಿಸುವ ಅಗ್ನಿಯು ಕಟ್ಟಿಗೆಗಳನ್ನೆಲ್ಲಾ ಹೇಗೆ ಕ್ಷಣಕಾಲದಲ್ಲಿ ಭಸ್ಮಮಾಡುತ್ತದೆಯೋ ಹಾಗೆ ವೇದಜ್ಞನಾದವನು ತನ್ನ ಜ್ಞಾನವೆಂಬ ಅಗ್ನಿಯಿಂದ

ಯೇ ವಾಸುದೇವಂ ಜಗತಾಮಧೀಶಂ
ಭಕ್ತ್ಯಾಗತಾಃ ಸರ್ವಜಗತ್ಪ್ರಧಾನಂ ।
ತೇ ಪಾತಕಾನ್ಯಾಶು ವಿಧೂಯ ಲೋಕೇ
ಭವಂತಿ ಚಂದ್ರಾರ್ಕಸಮಪ್ರಭಾವಾಃ ॥ ೨೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಹಸ್ಯಪ್ರಾಯಶ್ಚಿತ್ತೋ ನಾಮ
ಚತುಸ್ಸಪ್ತತಿತಮೋಽಧ್ಯಾಯಃ

---

ಪಾಪಗಳನ್ನೆಲ್ಲಾ ಜಾಗ್ರತೆಯಾಗಿ ನಾಶಮಾಡುತ್ತಾನೆ. ಯಾರು ಜಗತ್ತಿಗೆ ಪ್ರಧಾನ ಪುರುಷನಾದ ವಾಸುದೇವನನ್ನು ಭಕ್ತಿಯಿಂದ ಸೇವಿಸುತ್ತಿರುವರೋ ಅವರು ತಮ್ಮ ಪಾಪಗಳನ್ನೆಲ್ಲಾ ಹೋಗಲಾಡಿಸಿಕೊಂಡು ಚಂದ್ರಸೂರ್ಯನಿಗೆ ಸಮಾನರಾಗಿ ಜಗತ್ತಿನಲ್ಲಿ ಬೆಳಗುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದ ಮಾರ್ಕಂಡೇಯ
ಸಂವಾದದಲ್ಲಿ ರಹಸ್ಯಪ್ರಾಯಶ್ಚಿತ್ತವೆಂಬ ಎಪ್ಪತ್ತನಾಲ್ಕನೆಯ
ಅಧ್ಯಾಯವು ಮುಗಿದಿದೆ.



## ಎಪ್ಪತ್ತನಾಲ್ಕನೇ ಅಧ್ಯಾಯದ ಸಾರಾಂಶ.

ಹಿಂದಿನ ಅಧ್ಯಾಯದಲ್ಲಿ ಎಲ್ಲಾ ಪಾಪಗಳನ್ನೂ ನಿರೂಪಿಸಿ ಅವುಗಳ ನಿವೃತ್ತಿಗಾಗಿ ಆಚರಿಸಬೇಕಾದ ಪ್ರಾಯಶ್ಚಿತ್ತಗಳನ್ನು ವಿಸ್ತಾರವಾಗಿ ಹೇಳಿದ್ದಾಯಿತು. ಈ ಅಧ್ಯಾಯದಲ್ಲಿ ಹೊರಗೆ ಯಾರಿಗೂ ತೋರದಂತೆ ರಹಸ್ಯವಾಗಿ ನಡೆದುಹೋದ ದುಷ್ಕಾರ್ಯದಿಂದ ಉಂಟಾದ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ನಿರೂಪಿಸಿರುವರು. ಇಲ್ಲಿ ಹೇಳಿರುವ ಪ್ರಾಯಶ್ಚಿತ್ತಗಳೆಲ್ಲವೂ ವೇದಜ್ಞರಾದವರಿಂದ ಮಹಾಮಂತ್ರಗಳ ಜಪ ಹೋಮ ವೇದಗಳ ಪಾರಾಯಣ ಇವುಗಳಿಂದ ನೆರವೇರಿಸಲ್ಪಡುವ ಪಾಪ ಪ್ರತಿಕ್ರಿಯೆಗಳಾಗಿವೆ. ಒಟ್ಟಿನಲ್ಲಿ ಈ ಪ್ರಾಯಶ್ಚಿತ್ತಗಳು ಅಧಿಕಾರಿ ಭೇದದಿಂದ ವ್ಯವಸ್ಥೆ ಪಡಿಸತಕ್ಕವುಗಳಾಗಿವೆ. ಧರ್ಮಶಾಸ್ತ್ರಕಾರರು ಈ ವಿಷಯವನ್ನು ವಿವೇಚಿಸಿ ಪಾಪಗಳ ಗೌರವಲಾಘವ ತಾರತಮ್ಯಕ್ಕೆ ತಕ್ಕಂತೆ ಪ್ರಾಯಶ್ಚಿತ್ತವನ್ನು ವಿಧಿಸಲು ಈ ಶ್ಲೋಕಗಳನ್ನೇ ಪ್ರಮಾಣಗಳನ್ನಾಗಿ ಉದಾಹರಿಸಿರುವರು.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

# ದ್ವಿತೀಯಖಂಡೇ

---

## ಪಂಚಸಪ್ತತಿತಮೋಽಧ್ಯಾಯಃ

**|| ರಾಮ ಉವಾಚ ||**

**ಪ್ರೇತಶುದ್ಧಿಂ ಸಮಾಚಕ್ಷ್ವ ಸೂತಿಕಾಶುದ್ಧಿಮೇವ ಚ ।**
**ದ್ರವ್ಯಶುದ್ಧಿಂ ಚ ಭಗವನ್ ತ್ವಂ ಹಿ ವೇತ್ಸಿ ಯಥಾ ತಥಾ || ೧ ||**

---

## ಎಪ್ಪತ್ತೈದನೆಯ ಅಧ್ಯಾಯ.

೧-೨. ಭಾರ್ಗವನು ಪ್ರಶ್ನೆಮಾಡುತ್ತಾನೆ. ಪೂಜ್ಯನೇ ಯಾರಾದರೂ ಮೃತಿಹೊಂದಿದುದೇ ಆದರೆ ಅವರ ಅನುಬಂಧಿಗಳಿಗೆ ಯಾವ ರೀತಿಯಲ್ಲಿ ಶುದ್ಧಿಯು ಶಾಸ್ತ್ರದಲ್ಲಿ ಹೇಳಲಾಗಿದೆ. ಮತ್ತು ಪ್ರಸವದಲ್ಲಿ ಅಶುದ್ಧಳಾಗಿರುವ ಸ್ತ್ರೀ ಮತ್ತು ಅವಳ ಅನುಬಂಧಿಗಳು ಹೊಂದಬಹುದಾದ ಶುದ್ಧಿಯ ಕ್ರಮವೇನು, ದ್ರವ್ಯ(ಪದಾರ್ಥ)ಗಳಿಗೂ ಶುದ್ಧಿಕ್ರಮವು ಯಾವ ರೀತಿಯಲ್ಲಿ ನಡೆಯಬೇಕು ಎಂಬುದನ್ನು ದಯವಿಟ್ಟು ಹೇಳಬೇಕು. ಈ ವಿಚಾರಗಳಲ್ಲೆಲ್ಲಾ ನೀನು ಯಥಾರ್ಥಜ್ಞಾನವನ್ನು ಹೊಂದಿರುವೆ. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ. ಮೃತಿಹೊಂದಿದವನ ಜ್ಞಾತಿಗಳು (ಅಂದರೆ ಹತ್ತುದಿನ ಆಶೌಚದವರು ಸಂಪಿಡರೆಂದು ವ್ಯವಹರಿಸಲ್ಪಡುತ್ತಾರೆ) ಸಪಿಂಡರಾಗಿದ್ದಲ್ಲಿ ಅವರಿಗೆ ಹತ್ತುದಿನ ಆಶೌಚವನ್ನು ಶಾಸ್ತ್ರವು ವಿಧಿಸುತ್ತದೆ. ಜನನವಾದರೂ ಹಾಗೇ ಹತ್ತುದಿನ ಆಶೌಚವು ವಿಹಿತವಾಗಿದೆ. ಇದು ಬ್ರಾಹ್ಮಣರಿಗೆ ಅನ್ವಯಿಸುವ ಆಶೌಚ (ಇಲ್ಲಿ ಪಾತಕಿಯಾಗಿರುವವನಿಗೆ ಆ ಪಾಪಸಂಬಂಧದಿಂದ ಶಾಸ್ತ್ರೀಯ ಕರ್ಮಗಳಲ್ಲಿ ಅನರ್ಹತೆಯುಂಟಾಗುವಂತೆ ಈ ಆಶೌಚವೆಂಬ ನೈಮಿತ್ತಿಕವಾದ ಅಶುದ್ಧಿಯೂ ಕರ್ಮಗಳಲ್ಲಿ ಅನರ್ಹತೆಗೆ ಕಾರಣವಾಗಿರುವುದರಿಂದ ಪಾಪಗಳ ನಿವೃತ್ತಿಗೆ ಪ್ರಾಯಶ್ಚಿತ್ತವನ್ನು ಹೇಳುವಂತೆಯೇ ಈ ಅಶುದ್ಧಿಗೂ ತಕ್ಕ ನಿವೃತ್ತಿ

॥ ಪುಷ್ಕರ ಉವಾಚ ॥

ದಶಾಹಂ ಶಾವಮಾಶೌಚಂ ಸಪಿಂಡೇಷು ವಿಧೀಯತೇ ।
ಜನನೇ ಚ ತಥಾಪ್ಯೇವಂ ಬ್ರಾಹ್ಮಣಾನಾಂ ಭೃಗೂತ್ತಮ ॥ ೨ ॥

ದ್ವಾದಶಾಹೇನ ರಾಜನ್ಯಃ ಪಕ್ಷಾದ್ವೈಶ್ಯೋ ವಿಶುಧ್ಯತಿ ।
ಮಾಸೇನ ಶುದ್ಧಿಮಾಪ್ನೋತಿ ತಥಾ ಶೂದ್ರೋಽಪಿ ಭಾರ್ಗವ ॥ ೩ ॥

ಅನುಲೋಮ್ಯೇನ ಪತ್ನೀನಾಂ ದಾಸೀನಾಂ ಚ ಭೃಗೂತ್ತಮ ।
ಸ್ವಾಮಿತುಲ್ಯಂ ಭವೇಚ್ಛೌಚಂ ಮೃತೇ ಸ್ವಾಮಿನಿ ಯೌತುಕಂ ॥ ೪ ॥

---

ಕಾಲವನ್ನು ಶಾಸ್ತ್ರಗಳೇ ಬೋಧಿಸುತ್ತವೆ. ಪಾಪಗಳು ಕರ್ಮಾನುಸಾರವಾಗಿ ಉಂಟಾಗುವ ದುರದೃಷ್ಟರೂಪಗಳಿಂದೂ ಈ ಆಶೌಚಗಳು ನೈಮಿತ್ತಿಕವಾಗಿ ಉಂಟಾಗುವ ಅನಿವಾರ್ಯವಾದ ಅಶುದ್ಧಿಗಳಿಂದೂ ಶಾಸ್ತ್ರದೃಷ್ಟಿಯಿಂದ ನಿರ್ಣಯಿಸ ಬೇಕಾಗಿದೆ. ಈ ಆಶೌಚಾದಿಗಳು ಪ್ರಾಯಶ್ಚಿತ್ತದ ಅಪೇಕ್ಷೆಯಿಲ್ಲದೆ ಶಾಸ್ತ್ರವಿಹಿತ ವಾದ ಆಯಾಯ ಕಾಲದಲ್ಲಿ ನಿವೃತ್ತಿಹೊಂದುತ್ತವೆ. ಎಂಬುದೂ ಶಾಸ್ತ್ರದಿಂದಲೇ ನಿರ್ಣಯಿಸತಕ್ಕದ್ದಾಗಿದೆ).

೩-೪. ಕ್ಷತ್ರಿಯನು ಹನ್ನೆರಡು ದಿನಗಳಲ್ಲಿಯೂ, ವೈಶ್ಯನು ಹದಿನೈದು ದಿನ ಗಳಲ್ಲಿಯೂ, ಶೂದ್ರನು ಒಂದು ತಿಂಗಳಲ್ಲಿಯೂ ಶುದ್ಧರಾಗಿರುತ್ತಾರೆ. ಅನುಲೋಮ ಕ್ರಮದಿಂದ (ಅಂದರೆ ಉತ್ತಮವರ್ಣದವನಿಂದ ನಿಕೃಷ್ಟ ವರ್ಣದವರನ್ನೂ ಪತ್ನಿಯ ರನ್ನಾಗಿ ಸ್ವೀಕರಿಸುವಿಕೆ) ಪತ್ನಿಯರಾಗಿರುವ ಸ್ತ್ರೀಯರಿಗೂ ದಾಸಿಯರಿಗೂ ಸಹ ಸ್ವಾಮಿಯು ಮೃತನಾದಲ್ಲಿ ಸ್ವಾಮಿಯಂತೆಯೇ ಆಶೌಚ ಮತ್ತು ಶುದ್ಧಿ ಇವು ಉಂಟಾಗುತ್ತವೆ. (ಅಂದರೆ ಬ್ರಾಹ್ಮಣನಿಂದ ಸ್ವೀಕರಿಸಲ್ಪಟ್ಟ ಬ್ರಾಹ್ಮಣ ಕ್ಷತ್ರಿಯ ವೈಶ್ಯಾದಿ ಸ್ತ್ರೀಯರಿಗೆ ಬ್ರಾಹ್ಮಣನಂತೆಯೇ ಹತ್ತು ದಿನಗಳು ಕಳೆದನಂತರ ಶುದ್ಧಿ ಹಾಗೆಯೇ ಕ್ಷತ್ರಿಯನಿಂದ ಸ್ವೀಕರಿಸಲ್ಪಟ್ಟ ಕ್ಷತ್ರಿಯ ವೈಶ್ಯಾದಿ ಸ್ತ್ರೀಯರಿಗೂ ಕ್ಷತ್ರಿಯ ನಂತೆ ಹನ್ನೆರಡು ದಿನ ಕಳೆದ ನಂತರ ಶುದ್ಧಿ, ಇದೇ ರೀತಿ ವೈಶ್ಯನ ವಿಷಯದಲ್ಲಿಯೂ ಸಹ ಶುದ್ಧಿಯುಂಟಾಗುತ್ತದೆಂದು ತಾತ್ಪರ್ಯ).

ಷಡ್ಭಿಸ್ತ್ರಿಭಿರಥೈಕೇನ ಕ್ಷತ್ರವಿಟ್‌ಶೂದ್ರಯೋನಿಷು ।
ಬ್ರಾಹ್ಮಣಃ ಶುದ್ಧಿಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೫ ॥

ವಿಟ್‌ಶೂದ್ರಯೋನೌ ಶುದ್ಧಿಸ್ಸ್ಯಾತ್ಕ್ಷತ್ರಿಯಸ್ಯ ತಥೈವ ಚ ।
ಷಡ್ರಾತ್ರೇಣ ತ್ರಿರಾತ್ರೇಣ ಷಡ್ಭಿಃ ಶೂದ್ರಃ ತಥಾ ವಿಶಃ ॥ ೬ ॥

ಅದಂತಜಾತಬಾಲೇ ತು ಸದ್ಯಃ ಶೌಚಂ ವಿಧೀಯತೇ ।
ಬಾಲೇತ್ವಕೃತಚೂಡೇ ಚ ವಿಶುದ್ಧಿರ್ನೈಶಿಕೀ ಸ್ಮೃತಾ ॥ ೭ ॥

ತಥಾ ಚಾನುಪನೀತೇ ತು ತ್ರಿರಾತ್ರಾಚ್ಛುದ್ಧಿರಿಷ್ಯತೇ ।
ತತಃ ಪರಂ ದಶಾಹೇನ ಶುದ್ಧ್ಯೇಯುಸ್ತಸ್ಯ ಬಾಂಧವಾಃ ॥ ೮ ॥

೫–೬. ಬ್ರಾಹ್ಮಣನು ಕ್ಷತ್ರಿಯಾದಿ ವರ್ಣಗಳ ಸ್ತ್ರೀಯರನ್ನು ಮದುವೆಯಾಗಿ ಆ ಸ್ತ್ರೀಯರಲ್ಲಿ ಪುತ್ರನು ಜನಿಸಿ (ಸಾಪಿಂಡ್ಯವನ್ನು) ಜ್ಞಾತಿತ್ವವನ್ನು ಹೊಂದಿದಲ್ಲಿ ಮತ್ತು ಹಾಗೆಯೇ ಕ್ಷತ್ರಿಯನು ವೈಶ್ಯಶೂದ್ರ ಸ್ತ್ರೀಯರಲ್ಲಿ ಪುತ್ರರನ್ನು ಹೊಂದಿದಲ್ಲಿ ಆಶೌಚನಿವೃತ್ತಿಕಾಲವನ್ನು ಇಲ್ಲಿ ವಿವರಿಸುತ್ತಾರೆ. ಬ್ರಾಹ್ಮಣನು ಕ್ಷತ್ರಿಯ ಸ್ತ್ರೀಯಲ್ಲಿ ಪುತ್ರನನ್ನು ಹೊಂದಿದುದೇ ಆದರೆ ಅವನು ಆರು ದಿನದಲ್ಲಿಯೂ ವೈಶ್ಯಸ್ತ್ರೀಯಲ್ಲಿ ಹಾಗೆ ಪುತ್ರವಂತನಾದಲ್ಲಿ ಮೂರು ದಿನಗಳಲ್ಲಿಯೂ, ಶೂದ್ರಸ್ತ್ರೀಯಲ್ಲಿ ಪುತ್ರವಂತನಾದಲ್ಲಿ ಒಂದು ದಿನದಲ್ಲಿಯೂ ಶುದ್ಧಿಹೊಂದುತ್ತಾನೆ ಹಾಗೆಯೇ ಕ್ಷತ್ರಿಯನು ವೈಶ್ಯ ಮತ್ತು ಶೂದ್ರಸ್ತ್ರೀಯರಲ್ಲಿ ಪುತ್ರವಂತನಾದಲ್ಲಿ ಅವನು ಕ್ರಮವಾಗಿ ಆರು ಮತ್ತು ಮೂರು ದಿನಗಳಲ್ಲಿ ಶುದ್ಧನಾಗುತ್ತಾನೆ. ಹಾಗೆಯೇ ವೈಶ್ಯನು ಶೂದ್ರ ಸ್ತ್ರೀಯಲ್ಲಿ ಪುತ್ರವಂತನಾದಲ್ಲಿ ಆರು ದಿನಗಳಲ್ಲಿ ಶುದ್ಧನಾಗುತ್ತಾನೆ

೭–೮. ಹಲ್ಲು ಹುಟ್ಟುವುದಕ್ಕೆ ಮೊದಲೇ ಮಗುವು ತೀರಿಹೋದಲ್ಲಿ ಬಂಧುಗಳಿಗೆ ಆಗಲೇ ಶುದ್ಧಿಯುಂಟಾಗುತ್ತದೆ. ಹಲ್ಲು ಹುಟ್ಟಿದ ಮೇಲೆ ಚೌಲಕ್ಕೆ ಮೊದಲು ಮೃತವಾದಲ್ಲಿ ಒಂದು ರಾತ್ರಿ ಆಶೌಚದಿಂದ ಶುದ್ಧಿಯುಂಟಾಗುತ್ತದೆ. ಚೂಡಾಕರ್ಮವಾದ ಮೇಲೆ ಉಪನಯನಕ್ಕೆ ಮೊದಲು ಮೃತನಾದಲ್ಲಿ ಮೂರು ದಿನ ಆಶೌಚವಿದ್ದು ಅನಂತರ ಶುದ್ಧಿಹೊಂದುತ್ತಾನೆ. ಉಪನಯನವೂ ಆಗಿದ್ದಲ್ಲಿ ಹತ್ತು ದಿನಗಳು ಕಳೆದ ನಂತರವೇ ಶುದ್ಧಿಯುಂಟಾಗುತ್ತದೆ.

**ಊನತ್ರಿವಾರ್ಷಿಕೇ ಶುದ್ಧೇ ಪಂಚಾಹಾ ಶುದ್ಧಿರಿಷ್ಯತೇ ।**
**ದ್ವಾದಶಾಹೇನ ಶುದ್ಧಿಃ ಸ್ಯಾದತೀತೇ ವತ್ಸರತ್ರಯೇ ॥ ೯ ॥**

**ಗತೈಃ ಸಂವತ್ಸರೈಃ ಷಡ್ಭಿಃ ಶುದ್ಧಿರ್ಮಾಸೇನ ಕೀರ್ತಿತಾ ।**
**ಸ್ತ್ರೀಣಾಮಕೃತಚೂಡಾನಾಂ ವಿಶುದ್ಧಿರ್ನೈಶಿಕೀ ಸ್ಮೃತಾ ॥ ೧೦ ॥**

**ತಥಾ ಹಿ ಕೃತಚೂಡಾನಾಂ ತ್ರ್ಯಹಾಚ್ಛುಧ್ಯಂತಿ ಬಾಂಧವಾಃ ।**
**ವಿವಾಹಿತಾಸು ನಾಶೌಚಂ ಪಿತೃಪಕ್ಷೇ ವಿಧೀಯತೇ ॥ ೧೧ ॥**

**ಪಿತುರ್ಗೃಹೇ ಪ್ರಸೂತಾಯಾಂ ವಿಶುದ್ಧಿರ್ನೈಶಿಕೀ ಸ್ಮೃತಾ ।**
**ಸೂತಿಕಾ ದಶರಾತ್ರೇಣ ಶುದ್ಧಿಮಾಪ್ನೋತಿ ನಾನ್ಯಥಾ ॥ ೧೨ ॥**

---

೯–೧೦. ಮೃತಿಹೊಂದಿದ ಬಾಲಕನು ಮೂರು ವರ್ಷಕ್ಕಿಂತ ಕಡಿಮೆಯಾದ ವಯಸ್ಸಿನಲ್ಲಿದ್ದಲ್ಲಿ ಐದು ದಿನಗಳ ನಂತರ ಅವನ ಬಂಧುಗಳಿಗೆ ಶುದ್ಧಿಯುಂಟಾಗುತ್ತದೆ. ಮೂರು ವರ್ಷಗಳು ತುಂಬಿದಲ್ಲಿ ಹನ್ನೆರಡು ದಿನಗಳಲ್ಲಿ ಶುದ್ಧಿಯುಂಟಾಗುತ್ತದೆ. ಆರು ವರ್ಷಗಳು ತುಂಬಿದ್ದಲ್ಲಿ ಒಂದು ತಿಂಗಳು ಕಳೆದನಂತರ ಶುದ್ಧಿಯುಂಟಾಗುತ್ತದೆ. (ಇದು ಹೆಚ್ಚಾದ ಆಶೌಚವುಳ್ಳ ಬ್ರಾಹ್ಮಣೇತರರ ವಿಷಯ) ಸ್ತ್ರೀಶಿಶುಗಳು ಚೂಡಾಕರ್ಮಕ್ಕೆ ಅರ್ಹವಾದ ವಯಸ್ಸಿಗಿಂತಲೂ ಕಡಿಮೆಯ ವಯಸ್ಸಿನಲ್ಲಿ ಮೃತಿ ಹೊಂದಿದುದೇ ಆದರೆ ಒಂದು ರಾತ್ರಿಯಲ್ಲಿಯೇ ಬಂಧುಗಳಿಗೆ ಶುದ್ಧಿಯುಂಟಾಗುತ್ತದೆ.

೧೧–೧೨. ಚೂಡಾಕರ್ಮದ ವಯಸ್ಸು ತುಂಬಿದ್ದಲ್ಲಿ ಮೂರು ದಿವಸಗಳು ಕಳೆದನಂತರ ಬಂಧುಗಳು (ಜ್ಞಾತಿಗಳು) ಶುದ್ಧರಾಗುತ್ತಾರೆ, ವಿವಾಹ ಹೊಂದಿರುವ ಕನ್ಯೆಗಳ ವಿಷಯದಲ್ಲಿ ತಂದೆಯಕಡೆಯವರಿಗೆ ಆಶೌಚವನ್ನು ಶಾಸ್ತ್ರಗಳು ವಿಧಿಸುವುದಿಲ್ಲ. ತಂದೆಯ ಮನೆಯಲ್ಲಿ ಮಗಳು ಪ್ರಸವಿಸಿದಲ್ಲಿ ಆಶೌಚವು ತಂದೆಗೆ ಒಂದು ರಾತ್ರಿ ಮಾತ್ರವೇ ಅನ್ವಯಿಸುತ್ತದೆ. ಪ್ರಸುವಿಸಿರುವ ಸ್ತ್ರೀಗೆ ಹತ್ತುದಿವಸ ಕಳೆದ ನಂತರವೇ ಶುದ್ಧಿಯುಂಟಾಗುತ್ತದೆ.

**ವಿವಾಹಿತಾಪಿ ಚೇತ್ಕನ್ಯಾ ಮ್ರಿಯತೇ ಪಿತೃವೇಶ್ಮನಿ ।**
**ತಸ್ಯಾಸ್ತ್ರಿರಾತ್ರಾಚ್ಛುಧ್ಯಂತಿ ಬಾಂಧವಾ ನಾತ್ರ ಸಂಶಯಃ ॥ ೧೩ ॥**

**ಪಿತೃವೇಶ್ಮನಿ ಯಾ ಕನ್ಯಾ ರಜಃ ಪಶ್ಯತ್ಯಸಂಸ್ಕೃತಾ ।**
**ತಸ್ಯಾಂ ಮೃತಾಯಾಂ ನಾಶೌಚಂ ಕದಾಚಿದಪಿ ಶಾಮ್ಯತಿ ॥ ೧೪ ॥**

**ಸಸ್ನಾನಂ ಖಲು ಶೌಚಂ ಚ ಪ್ರಥಮೇನ ಸಮಾಪಯೇತ್ ।**
**ಅಸಮಾನಂ ದ್ವಿತೀಯೇನ ಧರ್ಮರಾಜವಚೋ ಯಥಾ ॥ ೧೫ ॥**

**ದೇಶಾಂತರಸ್ಥಾಃ ಶ್ರುತ್ವಾ ತು ಕುಲ್ಯಾನಾಂ ಮರಣೋದ್ಭವೌ ।**
**ಯಚ್ಛೇಷಂ ದಶರಾತ್ರಸ್ಯ ತಾವದೇವ ಶುಚಿರ್ಭವೇತ್ ॥ ೧೬ ॥**

---

೧೩-೧೪. ಮದುವೆಯಾಗಿರುವ ಕನ್ಯೆಯು ತಂದೆಯ ಮನೆಯಲ್ಲಿಯೇ ಮೃತಳಾದ ಪಕ್ಷದಲ್ಲಿ ಅವಳು ವಿವಾಹಿತೆಯಾಗಿದ್ದರೂ ಅವಳ ನಿಮಿತ್ತವಾದ ಆಶೌಚವು ತಂದೆಯೇ ಮೊದಲಾದ ಅವಳ ಬಂಧುಗಳಿಗೆ ಮೂರು ದಿನಗಳು ಇದ್ದೇ ಇರುತ್ತದೆ. ಅನಂತರವೇ ಅವರಿಗೆ ಶುದ್ಧಿ, ಈ ವಿಷಯದಲ್ಲಿ ಸಂದೇಹವಿಲ್ಲ. ಯಾವ ಕನ್ಯೆಯು ವಿವಾಹಾದಿ ಸಂಸ್ಕಾರಹೊಂದದೆ ತಂದೆಯ ಮನೆಯಲ್ಲಿರುವಾಗಲೇ ಪುಷ್ಪವತಿಯಾಗುತ್ತಾಳೆಯೋ, ಅಂತಹ ಕನ್ಯೆಯು ಮೃತಳಾದಲ್ಲಿ ಅವಳ ಆ ಮರಣಾಶೌಚವು ತಂದೆಯೇ ಮೊದಲಾದ ಬಂಧುಗಳಿಗೆ ಹೋಗುವುದೇ ಇಲ್ಲ.

೧೫-೧೬. ಸ್ನಾನಮಾತ್ರದಿಂದ ಶುದ್ಧಿಹೊಂದಬಹುದಾದ ಆಶೌಚವನ್ನು ಮೊದಲನೆಯ ದಿನದಲ್ಲಿಯೇ ಅನುಭವಿಸಿ ಮುಗಿಸಬೇಕು. ಹಾಗಿಲ್ಲದಿರುವ (ಒಂದು ದಿನವಿರುವ ಆಶೌಚವನ್ನು) ಎರಡನೆಯ ದಿನ ಮುಗಿಸಬೇಕು. ಇದು ಯಮನ ವಚನದಿಂದಲೇ ಸಿದ್ಧವಾಗಿದೆ. ದೇಶಾಂತರವಾಸಿಗಳಾಗಿರುವ ಜ್ಞಾತಿಗಳು ತಮ್ಮ ವಂಶದವರ (ಜ್ಞಾತಿಗಳ) ಜನನಮರಣಗಳನ್ನು ಕೇಳಿದ್ದೇ ಆದರೆ ಆ ಜನನಾದಿ ದಿನ ಮೊದಲು ಹತ್ತು ದಿನಗಳಲ್ಲಿ ಉಳಿದಿರುವ ದಿನಗಳು ಮಾತ್ರ ಆಶೌಚವನ್ನನುಭವಿಸಬೇಕು. ಅನಂತರ ಶುದ್ಧರಾಗುತ್ತಾರೆ.

ಅತೀತೇ ದಶರಾತ್ರೇ ತು ತ್ರಿರಾತ್ರಮಶುಚಿರ್ಭವೇತ್ ।
ತಥಾ ಸಂವತ್ಸರೇಽತೀತೇ ಸ್ನಾತ ಏವ ಚ ಶುಧ್ಯತಿ ॥ ೧೭ ॥

ಮಾತಾಮಹೇ ತಥಾತೀತೇ ಆಚಾರ್ಯೇ ಚ ತಥಾ ಮೃತೇ ।
ಅನೌರಸೇಷು ಪುತ್ರೇಷು ಭಾರ್ಯಾಸ್ವನ್ಯಗತಾಸು ಚ ॥ ೧೮ ॥

ಪರಪೂರ್ವಾಸು ಭಾರ್ಯಾಸು ತ್ರಿರಾತ್ರಾಚ್ಛುದ್ಧಿರಿಷ್ಯತೇ ।
ನಿವಾಸೇ ರಾಜನಿ ಪ್ರೇತೇ ಮಾತುಲೇ ಶ್ವಶುರೇ ತಥಾ ॥ ೧೯ ॥

ಆಚಾರ್ಯಪತ್ನೀಪುತ್ರೇಷು ಶಿಷ್ಯೇ ಸ ಬ್ರಹ್ಮಚಾರಿಣಿ ।
ಏಕರಾತ್ರಮಶೌಚಂ ಸ್ಯಾದನ್ನದಾನೇ ತಥಾ ಮೃತೇ ॥ ೨೦ ॥

ರಾತ್ರಿಭಿರ್ಮಾಸತುಲ್ಯಾಭಿರ್ಗರ್ಭಸ್ರಾವೇ ವಿಶೋಧನಂ ।
ಸಪಿಂಡೇ ಬ್ರಾಹ್ಮಣೇ ವರ್ಣಾಃ ಸರ್ವ ಏವಾವಿಶೇಷತಃ ॥ ೨೧ ॥

---

೧೭-೧೮. ಹತ್ತು ದಿನಗಳು ಕಳೆದ ಮೇಲೆ ವರ್ಷದೊಳಗೆ ಕೇಳಿದಲ್ಲಿ ಮೂರು ದಿನ ಮಾತ್ರ ಅಶುಚಿಯಿಂದಿರಬೇಕು. ವರ್ಷವೂ ಕಳೆದ ಮೇಲೆ ಕೇಳಿದಲ್ಲಿ ಸ್ನಾನ ಮಾತ್ರದಿಂದಲೇ ಶುದ್ಧಿಯುಂಟಾಗುತ್ತದೆ. ಮಾತಾಮಹ (ತಾಯಿಯ ತಂದೆ) ಆಚಾರ್ಯ, ಮತ್ತು ಹೊಟ್ಟೆಯಲ್ಲಿ ಹುಟ್ಟದಿರುವ ಇತರ ಮಕ್ಕಳು (ಅಭಿಮಾನಪುತ್ರ) ಮತ್ತೊಬ್ಬನನ್ನು ಆಶ್ರಯಿಸಿಕೊಂಡಿರುವ ಪತ್ನಿ ಮತ್ತೊಬ್ಬನನ್ನು ಮೊದಲು ಆಶ್ರಯಿಸಿ ಕೊಂಡಿದ್ದ ಪತ್ನಿ ಇವರು ಮೃತರಾದಲ್ಲಿ ಮೂರು ದಿನಗಳು ಆಶೌಚವಿರಬೇಕು.

೧೯-೨೦. ರಾಜನು ತನ್ನ ಗೃಹದಲ್ಲಿಯೇ ಮೃತನಾದ ಪಕ್ಷದಲ್ಲಿ ಮತ್ತು ಸೋದರಮಾವ, ಮಾವ (ಪತ್ನಿಯ ತಂದೆ) ಆಚಾರ್ಯನ ಪತ್ನಿ ಪುತ್ರರು, ಶಿಷ್ಯ ಸಹಪಾಠಿ ಇವರು ಮೃತರಾದರೂ ಸಹ ಒಂದು ರಾತ್ರಿ ಆಶೌಚವಿಗಬೇಕು. ತನಗೆ ಅನ್ನದಾನ ಮಾಡಿದವನು ಮೃತನಾದರೂ ಈ ಏಕರಾತ್ರಾಶೌಚವು ಅನ್ವಯಿಸುತ್ತದೆ.

೨೧-೨೨. ಗರ್ಭಸ್ರಾವವುಂಟಾದಲ್ಲಿ ಆ ಗರ್ಭದ ಮಾಸಸಂಖ್ಯೆಗೆ ಸಮವಾದ ದಿನಸಂಖ್ಯೆಯಿಂದ ತಾಯಿಗೆ ಆಶೌಚವು ನಿವೃತ್ತಿಹೊಂದುತ್ತದೆ. (ಈ ಆಶೌಚವು ನಾಲ್ಕು ತಿಂಗಳಾದನಂತರ ಆರು ತಿಂಗಳವರಿಗೆ ಎಂದು ಧರ್ಮಶಾಸ್ತ್ರಕಾರರು ಇತರ ವಚನಗಳಿಂದ ನಿರ್ಣಯಿಸಿರುವರು. ನಾಲ್ಕು ತಿಂಗಳಿಗೆ ಮೊದಲು ಗರ್ಭಸ್ರಾವ

ದಶರಾತ್ರೇಣ ಶುಧ್ಯಂತಿ ದ್ವಾದಶಾಹೇನ ಭೂಮಿಪಾಃ ।
ವೈಶ್ಯಃ ಪಂಚದಶಾಹೇನ ಶೂದ್ರೋ ಮಾಸೇನ ಭಾರ್ಗವ		|| ೨೨ ||

ಭೃಗ್ವಗ್ನ್ಯನಶನಾಂಭೋಭಿರ್ಮೃತಾನಾಮಾತ್ಮಘಾತಿನಾಂ ।
ಪತಿತಾನಾಂ ಚ ನಾಶೌಚಂ ವಿದ್ಯುಚ್ಛಸ್ತ್ರಹತಾಶ್ಚ ಯೇ		|| ೨೩ ||

ಸತೀ ವ್ರತೀ ಬ್ರಹ್ಮಚಾರೀ ನೃಪಕಾರಕದೀಕ್ಷಿತಾಃ।
ನಾಶೌಚಭಾಜಃ ಕಥಿತಾಃ ರಾಜಕಾರ್ಯಕರಾಶ್ಚ ಯೇ		|| ೨೪ ||

ಅನುಗಮ್ಯೇಚ್ಛಯಾ ಪ್ರೇತಂ ಜ್ಞಾತಿಮಜ್ಞಾತಿಮೇವ ವಾ ।
ಸವಾಸಾ ಜಲಮಾಪ್ಲುತ್ಯ ಘೃತಂ ಪ್ರಾಶ್ಯ ವಿಶುಧ್ಯತಿ ।
ಮೈಥುನೇ ಕಟಧೂಮೇ ಚ ಸದ್ಯಃ ಸ್ನಾನಂ ವಿಧೀಯತೇ		|| ೨೫ ||

---

ವಾದಲ್ಲಿ ಮೂರುದಿನ ಮಾತ್ರವೇ ಆಶೌಚವೆಂದೂ ನಿಶ್ಚಯಿಸಿರುವರು. ಬ್ರಾಹ್ಮಣ ಕ್ಷತ್ರಿಯ ವೈಶ್ಯಶೂದ್ರರೆಂಬ ನಾಲ್ಕು ವರ್ಣದವರಿಗೂ ಸಪಿಂಡನಾದ ಜ್ಞಾತಿಯು ಮೃತನಾದಲ್ಲಿ ಕ್ರಮವಾಗಿ ಹತ್ತು ಹನ್ನೆರಡು ಹದಿನೈದು ಒಂದುತಿಂಗಳು ಈ ರೀತಿಯಾದ ಆಶೌಚವು ಮೇಲೆ ಹೇಳಿರುವ ಎಲ್ಲಾ ವರ್ಣದವರಿಗೂ ನಿಯತವಾದದ್ದು.

೨೩–೨೪. ಪರ್ವತ ಶಿಖರದಿಂದ ಬಿದ್ದೂ, ಅಗ್ನಿಯಲ್ಲಿ ಪ್ರವೇಶಿಸಿಯೂ, ಆಹಾರ ತ್ಯಾಗದಿಂದಲೂ, ನೀರಿನಲ್ಲಿ ಬೀಳುವುದರಿಂದಲೂ, ಮೃತಿಹೊಂದಿ ಯಾರು ಆತ್ಮಘಾತಿಗಳೆನಿಸಿಕೊಳ್ಳುವರೋ ಮತ್ತು ಯಾರು ಸಿಡಿಲಿನಿಂದಲೂ, ಶಸ್ತ್ರಪಾತದಿಂದಲೂ ಮೃತಿಹೊಂದುವರೋ ಇಂತಹವರಿಗಾಗಿ ಅನುಬಂಧಿಗಳು ಆಶೌಚವನ್ನು ಅನುಭವಿಸಬೇಕಾದುದಿಲ್ಲ. ಮತ್ತು ಪತಿವ್ರತೆಯಾದ ಸ್ತ್ರೀ, ವ್ರತನಿಯಮದಲ್ಲಿರುವವನು, ಬ್ರಹ್ಮಚಾರಿ, ದೊರೆ, ಅಸಾಧಾರಣರಾದ ಅವನ ಆಪ್ತಜನರು, ಯಜ್ಞದೀಕ್ಷೆಯಲ್ಲಿರುವವನು, ರಾಜನ ಅನುಯಾಯಿಗಳಾದ ಭೃತ್ಯರು ಇವರು ಆಶೌಚಕ್ಕೆ ಯಾವಾಗಲೂ ಅರ್ಹರಲ್ಲವೆಂದೇ ಹೇಳಲ್ಪಟ್ಟಿದೆ. (ಇದು ಜ್ಞಾತಿಸಂಬಂಧಿಯಾದ ಆಶೌಚವಿಷಯ.)

೨೫–೨೬. ಮೃತನಾದ ಜ್ಞಾತಿಯನ್ನಾಗಲಿ, ಇತರನನ್ನಾಗಲಿ ಇಚ್ಛೆಯಿಂದ ಅನುಗಮನ ಮಾಡಿದಲ್ಲಿ (ಶವವನ್ನು ಅನುಸರಿಸಿ ಹೋದಲ್ಲಿ) ಜಲದಲ್ಲಿ ಸಚೇಲ ಸ್ನಾನಮಾಡಿ ಘೃತವನ್ನು (ತುಪ್ಪ) ಪಾನಮಾಡಿದಲ್ಲಿ ಶುದ್ಧಿಹೊಂದುತ್ತಾನೆ, ಮೈಥುನ

**ಜನನಮರಣಯೋಃ ಶುಚಿರ್ದಶಾಹೇನ**
**ಭವತಿ ಶೌಚವಿಧೇಃ ನ ವಿಪ್ರಯೋಜ್ಯಂ ।**
**ನ ಚ ಭವತಿ ಪ್ರತಿಗ್ರಹೇಷು ದೋಷೋ**
**ದ್ವಿಪದ ಚತುಷ್ಪದಧಾನ್ಯದಕ್ಷಿಣಾಸು ॥ ೨೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಆಶೌಚವಿಧಿರ್ನಾಮ ಪಂಚಸಪ್ತತಿತಮೋಽಧ್ಯಾಯಃ**

---

ಮಾಡಿದವನೂ ಕಟದ ಧೂಮವನ್ನು ಸೇವಿಸಿದವನೂ ಸ್ನಾನದಿಂದ ಸದ್ಯಃ ಶುದ್ಧಿ ಹೊಂದುತ್ತಾನೆ. ಜನನ ಮತ್ತು ಮರಣ ವಿಷಯದಲ್ಲಿ ಬ್ರಾಹ್ಮಣನಿಗೆ ಹತ್ತುದಿನ ಕಳೆದನಂತರ ಶುದ್ಧಿಯುಂಟಾಗುವುದರಲ್ಲಿ ಸಂದೇಹವಿಲ್ಲ. ಮತ್ತು ಅವನಿಂದ ಹೊಂದ ಬಹುದಾದ ದಾನ ಮತ್ತು ದಕ್ಷಿಣೆ ಇವುಗಳಿಗೂ ಅವನಲ್ಲಿರುವ ಹಸು, ಆಡು, ಕುರಿ, ಧಾನ್ಯ ಮುಂತಾದುವುಗಳಿಗೂ ಯಾವ ದೋಶವೂ ಇಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ರಾಮನನ್ನು ಕುರಿತು
ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಆಶೌಚವಿಧಿ ಎಂಬ
ಎಪ್ಪತ್ತೈದನೆಯ ಅಧ್ಯಾಯ ಮುಗಿದಿದೆ.



## ಎಪ್ಪತ್ತೈದನೆಯ ಅಧ್ಯಾಯದ ಸಾರಾಂಶ.

ಹಿಂದಿನ ಅಧ್ಯಾಯದಲ್ಲಿ ನಿತ್ಯನೈಮಿತ್ತಿಕ ಕರ್ಮಗಳಿಗೆ ಅನರ್ಹತೆಯನ್ನುಂಟು ಮಾಡುವ ಮಹಾಪಾತಕ ಉಪಪಾತಕ ಇವುಗಳನ್ನು ನಿರೂಪಿಸಿ ಅವುಗಳಿಗೆ ಪ್ರಾಯಶ್ಚಿತ್ತರೂಪದಲ್ಲಿ ವ್ರತ ನಿಯಮ, ತಪಸ್ಸು, ಮಹಾಮಂತ್ರಗಳ ಜಪ, ಇವುಗಳನ್ನೆಲ್ಲಾ ವಿಸ್ತಾರವಾಗಿ ಹೇಳಿದನಂತರ ಇಂತಹ ಪಾಪಗಳಂತೆಯೇ ಕರ್ಮಾನುಷ್ಠಾನಕ್ಕೆ ಅನರ್ಹತೆಯನ್ನುಂಟುಮಾಡುವ ಆಶೌಚವೂ ಪ್ರಸಂಗದಿಂದ ನಿರೂಪಿಸಲು ಅರ್ಹವಾದುದರಿಂದ ಅಂತಹ ಅಶುಚಿಯನ್ನುಂಟುಮಾಡುವ ಆಶೌಚಕ್ಕೆ ನಿಮಿತ್ತಗಳನ್ನೂ ಅದರ ನಿವೃತ್ತಿಗೆ ತಕ್ಕ ಶಾಸ್ತ್ರೀಯವಾದ ಕಾಲವನ್ನೂ ಸಹ ಬ್ರಾಹ್ಮಣಾದಿ ಮತ ವ್ಯವಸ್ಥೆಗೆ ತಕ್ಕಂತೆ ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ಧರ್ಮಶಾಸ್ತ್ರಕಾರರ ವ್ಯವಸ್ಥೆಯಂತೆ ನಡೆದುಬರುತ್ತಿರುವ ಈಗಿನ ಆಚಾರಕ್ಕೆ ವಿರುದ್ಧವಾಗಿ ಇಲ್ಲಿ ಕೆಲವು ವಿಷಯಗಳು ಕಂಡುಬರುತ್ತವೆ. ಆದರೂ ದೇಶಭೇದದಿಂದಲೂ ವಿಷಯ ಭೇದವನ್ನೇರ್ಪಡಿಸುವುದರಿಂದಲೂ ಆ ರೀತಿಯಾದ ವಿರೋಧವನ್ನು ಪರಿಹರಿಸುವುದು ಸುಕರವೆಂದೂ ತಿಳಿಯಬೇಕು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷಟ್‌ಸಪ್ತತಿತಮೋಽಧ್ಯಾಯಃ

|| ಪುಷ್ಕರ ಉವಾಚ ||

**ದ್ವಿಜಂ ನ ನಿರ್ಹರೇತ್ಪ್ರೇತಂ ಶೂದ್ರೇಣ ತು ಕಥಂಚನ |**
**ನ ಚ ಶೂದ್ರಂ ದ್ವಿಜೇನಾಪಿ ತಯೋರ್ದೋಷೋಭಿಜಾಯತೇ || ೧ ||**

**ಅನಾಥಂ ಬ್ರಾಹ್ಮಣಪ್ರೇತಂ ಯೇ ವಹನ್ತಿ ದ್ವಿಜಾತಯಃ |**
**ಪದೇ ಪದೇ ಕ್ರತುಫಲಂ ಚಾನುಪೂರ್ವಾಲ್ಲಭಂತಿ ತೇ || ೨ ||**

**ಸಂಸ್ಕಾರಾರ್ಥಮನಾಥಸ್ಯ ಯಸ್ತು ಕಾಷ್ಠಂ ಪ್ರಯಚ್ಛತಿ |**
**ಕಾಷ್ಠಾಗ್ನಿದಾತಾ ಪ್ರಾಕಾಶ್ಯಂ ಸಂಗ್ರಾಮೇ ಲಭತೇ ಜಯಂ || ೩ ||**

---

### ಎಪ್ಪತ್ತಾರನೆಯ ಅಧ್ಯಾಯ.

೧–೨. ಮೃತ್ತಿಹೊಂದಿದ ಬ್ರಾಹ್ಮಣನ ಶವವನ್ನು ಶೂದ್ರನಿಂದ ಹೊತ್ತು ಸಾಗಿಸಬಾರದು ಹಾಗೆಯೇ ಶೂದ್ರನ ಶವವನ್ನು ಬ್ರಾಹ್ಮಣನು ಹೊತ್ತು ಸಾಗಿಸಬಾರದು ಹಾಗೆ ಮಾಡಿದಲ್ಲಿ ಇಬ್ಬರಿಗೂ ದೋಷವು ತಪ್ಪಿದ್ದಲ್ಲ. ಅನಾಥವಾದ ಬ್ರಾಹ್ಮಣ ಶವವನ್ನು ಯಾವ ಬ್ರಾಹ್ಮಣರು ಹೊತ್ತು ಸಾಗಿಸಿ ಸಂಸ್ಕಾರಕ್ಕೆ ಸಹಕರಿಸುವರೋ ಅಂತಹವರಿಗೆ ಹೆಜ್ಜೆ ಹೆಜ್ಜೆಗೂ ಯಜ್ಞದ ಫಲವೇ ಉಂಟಾಗುತ್ತದೆ. (ಇದು ಅರ್ಥಾದಿನಿರಪೇಕ್ಷೆಯಿಂದ ಸಹಕರಿಸಿದವರ ವಿಷಯ)

೩–೪. ಯಾವನು ಅನಾಥವಾದ ಶವದ ಸಂಸ್ಕಾರಕ್ಕಾಗಿ ಉಚಿತವಾಗಿ ಸೌದೆಯನ್ನು ಕೊಡುತ್ತಾನೆಯೋ ಹಾಗೆಯೇ ಯಾವನು ವಿಧಿಪೂರ್ವಕವಾಗಿ ಅಗ್ನಿಪ್ರದಾನ ಮಾಡುತ್ತಾನೆಯೋ ಅವನೂ ಸಹ ಯುದ್ಧದಲ್ಲಿ ಜಯಶಾಲಿ

**ಸಂಜ್ವಾಲ್ಯ ಬಾಂಧವಂ ಪ್ರೇತಂ ಅಪಸವ್ಯೇನ ತಾಂ ಚಿತಿಂ ।**
**ಪರಿಕ್ರಮ್ಯ ತತಃ ಸ್ನಾನಂ ಕುರ್ಯುಃ ಸರ್ವೇ ಸ್ವಬಾಂಧವಾಃ ॥ ೪ ॥**

**ಪ್ರೇತಾಯ ಚ ತಥಾ ದದ್ಯುಸ್ತ್ರಿಸ್ತ್ರೀನ್ಯೈ ಚೋದಕಾಂಜಲೀಃ ।**
**ದ್ವಾರ್ಯಶ್ಮನಿ ಪದಂ ದತ್ವಾ ಪ್ರವಿಶೇಯು ಸ್ತಥಾ ಗೃಹಂ ॥ ೫ ॥**

**ಅಕ್ಷತಾ ನಿಕ್ಷಿಪೇಯುಶ್ಚ ತಥಾ ವಹ್ನೌ ಸಮಾಹಿತಾಃ ।**
**ವಿದಶ್ಯ ನಿಂಬಪತ್ರಾಣಿ ಶಯೀರಂಶ್ಚ ಪೃಥಕ್ ಕ್ಷಿತೌ ॥ ೬ ॥**

**ಕ್ರೀತಲಬ್ಧಾಶನಾಶ್ಚೈವ ಭವೇಯುಃ ಸುಸಮಾಹಿತಾಃ ।**
**ನ ಚೈವ ಮಾಂಸಮಶ್ನೀಯುರ್ವ್ರಜೇಯುರ್ನ ಚ ಯೋಷಿತಂ ॥ ೭ ॥**

**ನಿರ್ವರ್ತಯೇಯುಸ್ತ್ವಥೈವೈಕಂ ಪಿಂಡಂ ಪ್ರೇತಸ್ಯ ನಿತ್ಯದಾ ।**
**ಅಶೌಚಂ ಯಾವದೇವಸ್ಯಾತ್ತಸ್ಮಿನ್ ವ್ಯಪಗತೇ ಪುನಃ ॥ ೮ ॥**

---

ಯಾಗುತ್ತಾನೆ. ಜ್ಞಾತಿವರ್ಗಕ್ಕೆ ಸೇರಿದವನ ಶವವನ್ನು ಚಿತಿಯಲ್ಲಿಟ್ಟು ಹತ್ತಿಸಿ ಆ ಚಿತಿಯನ್ನು ಅಪ್ರದಕ್ಷಿಣವಾಗಿ ಸುತ್ತಿ ಬಾಂಧವರೆಲ್ಲರೂ ನಂತರ ಸ್ನಾನ ಮಾಡಬೇಕು.

೫-೬. ಅನಂತರ ಮೃತನನ್ನುದ್ದೇಶಿಸಿ ಅಂಜಲಿಯಿಂದ ಮೂರಾವರ್ತಿ ಪ್ರೇತೋದಕವನ್ನು ಕೊಡಬೇಕು. ಅಲ್ಲಿಂದ ಬಂದು ಮನೆಯ ಬಾಗಲಲ್ಲಿರುವ ಕಲ್ಲನ್ನು ಮೊದಲು ತುಳಿದು ಅನಂತರ ಮನೆಗೆ ಪ್ರವೇಶಿಸಬೇಕು. ಆ ಮೇಲೆ ಬೇವಿನ ಎಲೆಗಳನ್ನು ಬಾಯಿನಲ್ಲಿ ಅಗಿದು ಬೇರೆ ಬೇರೆಯಾಗಿಯೇ ಭೂಮಿಯ ಮೇಲೆ ಮಲಗಬೇಕು.

೭-೮. ಆ ಆಶೌಚಕಾಲದಲ್ಲಿ ಕ್ರಯಲಬ್ಧವಾದ ಅಶನದಿಂದ ಜೀವಿಸಬೇಕು (ಮನೆಯಲ್ಲಿ ಪಾಕವನ್ನು ಮಾಡಕೂಡದೆಂದು ತಾತ್ಪರ್ಯ) ಶಾಂತರಾಗಿರಬೇಕು. ಆ ಕಾಲದಲ್ಲಿ ಮಾಂಸಭೋಜನವನ್ನೂ, ಸ್ತ್ರೀಗಮನವನ್ನೂ ಮಾಡಕೂಡದು. ನಿತ್ಯವೂ ಮೃತನಾದವನನ್ನುದ್ದೇಶಿಸಿ ಒಂದೊಂದು ಪಿಂಡವನ್ನು ಹಾಕಬೇಕು. ಅಶೌಚಮುಗಿಯುವವರೆಗೂ ಹೀಗೆ ಇದ್ದು ಆಶೌಚವು ಕಳೆದನಂತರ,

ಶ್ಮಶ್ರುಕರ್ಮ ತದಾ ಕೃತ್ವಾ ಸ್ನಾತಾಃ ಸಿದ್ಧಾರ್ಥಕೈಸ್ತಿಲೈಃ ।
ಪೂಜಯೇಯುರ್ದ್ವಿಜಾನ್ರಾಮ ಪರಿವರ್ತಿತವಾಸಸಃ ॥ ೯ ॥

ಅದಂತಜಾತೇ ತನಯೇ ಶಿಶೌ ಗರ್ಭಚ್ಯುತೇ ತಥಾ ।
ಕಾರ್ಯೋ ನೈವಾಗ್ನಿಸಂಸ್ಕಾರೋ ನೈವ ಚಾಸ್ಯೋದಕಕ್ರಿಯಾ ॥ ೧೦ ॥

ಚತುರ್ಥೇ ಚ ದಿನೇ ಕಾರ್ಯಸ್ತೈವಾಸ್ಥ್ನಾಂ ರಾಮ ಸಂಚಯಃ ।
ಅಸ್ಥಿಸಂಚಯನಾದೂರ್ಧ್ವಂ ಕುಲಸ್ಪರ್ಶೋ ವಿಧೀಯತೇ ॥ ೧೧ ॥

ಮೃತಸ್ಯ ಬಾಂಧವೈಸ್ಸಾರ್ಧಂ ಕೃತ್ವಾಶ್ರುಪತನಂ ನರಃ ।
ಅಸ್ಥಿಸಂಚಯನಾದರ್ವಾಕ್ ಸಚೇಲಂ ಸ್ನಾನಮಾಚರೇತ್ ॥ ೧೨ ॥

ಸ್ನಾತಶ್ಚ ಶುದ್ಧಿಮಾಪ್ನೋತಿ ತತಃ ಪರಮಿತಿ ಶ್ರುತಿಃ ।
ಅಸ್ಥ್ನಾಂ ಗಂಗಾಂಭಸಿ ಕ್ಷೇಪಾತ್ಪ್ರೇತಸ್ಯಾಭ್ಯುದಯೋ ಭವೇತ್ ॥ ೧೩ ॥

---

೯–೧೦. ಕ್ಷೌರವನ್ನು ಮಾಡಿಸಿಕೊಂಡು ಬಿಳಿಸಾಸವೆ ಮತ್ತು ಎಳ್ಳು ಇವುಗಳಿಂದ ಸ್ನಾನಮಾಡಿ ಬೇರೆ ವಸ್ತ್ರಗಳನ್ನು ಧರಿಸಿ ಬ್ರಾಹ್ಮಣ ಪೂಜೆಯನ್ನು ಮಾಡಬೇಕು. ಹಲ್ಲುಹುಟ್ಟದಿರುವ ಮಗುವೂ ಗರ್ಭದಿಂದಲೇ ಪಾತಹೊಂದಿದ ಮಗುವೂ ಅಗ್ನಿಸಂಸ್ಕಾರಕ್ಕೆ ಅರ್ಹವಲ್ಲ. ಅಂತಹ ಮಕ್ಕಳನ್ನುದ್ದೇಶಿಸಿ ಪ್ರೇತೋದಕವನ್ನು ಕೊಡಬಾರದು.

೧೧–೧೨ ದಹನವಾದ ನಾಲ್ಕನೇದಿನ ಅಸ್ಥಿಸಂಚಯ ಮಾಡಬೇಕು. ಅಸ್ಥಿಸಂಚಯನವಾದ ನಂತರ ಸ್ವಜಾತಿಯವರ ಸ್ಪರ್ಶವನ್ನು ಹೊಂದಬಹುದು. ಮೃತನಾದವನನ್ನುದ್ದೇಶಿಸಿ, ಬಂಧುವರ್ಗದೊಡನೆ ತಾನೂ ಕಣ್ಣೀರನ್ನು ಅನುಭವಿಸಿ ಅಸ್ಥಿಸಂಚಯನಕ್ಕೆ ಮೊದಲೇ ಸಚೇಲಸ್ನಾನಮಾಡಬೇಕು.

೧೩–೧೪. ಸ್ನಾನಮಾಡಿದನಂತರವೇ ಶುದ್ಧಿಹೊಂದುತ್ತಾನೆ ಎಂದು ವೇದ ವಚನವಿದೆ. ಆ ಅಸ್ಥಿಗಳನ್ನು ಗಂಗೆಯಲ್ಲಿ ಹಾಕಿದರೆ ಮೃತನಿಗೆ ಬಹಳ ಅಭ್ಯುದಯ ಉಂಟಾಗುತ್ತದೆ. ಸಗರಪುತರ ಅಸ್ಥಿಗಳನ್ನು ಮುಳುಗಿಸುವುದಕ್ಕಾಗಿಯೇ ಮಹಾ

ಅಸ್ಥ್ನಾಂ ಹಿ ಪ್ಲಾವನಾರ್ಥಾಯ ಸಾಗರಾಣಾಂ ಮಹಾತ್ಮನಾಂ ।
ಗಗನಾದ್ಭುವಮಾನೀತಾ ಗಂಗಾ ಗಗನಮೇಖಲಾ || ೧೪ ||

ಭಗೀರಥೇನ ಧರ್ಮಜ್ಞ ತಪಸಾ ಮಹತಾ ಪುರಾ ।
ಸಗರಸ್ಯ ಸುತಾಃ ಸರ್ವೇ ನರಕಸ್ಥಾ ಭೃಗೂತ್ತಮ || ೧೫ ||

ಗಂಗಾತೋಯಾಪ್ಲುತಾರಾಮ ದಿವಮಕ್ಷಯ್ಯಮಾಗತಾಃ ।
ಗಂಗಾತೋಯೇನ ಯಸ್ಯಾಸ್ಥಿ ಯಾವತ್ಸಂಖ್ಯಂ ನಿಮಜ್ಜತಿ || ೧೬ ||

ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ಆತ್ಮನಸ್ತ್ಯಾಗಿನಾಂ ನಾಸ್ತಿ ಪತಿತಾನಾಂ ತಥಾ ಕ್ರಿಯಾ || ೧೭ ||

ತೇಷಾಮಪಿ ತಥಾ ಗಂಗಾತೋಯೇ ಸ್ಯಾತ್ಪತನಂ ಹಿತಂ ।
ಪತಿತಾನಾಂ ತು ಯದ್ದತ್ತಂ ಶ್ರಾದ್ಧಂ ಚಾಥ ಜಲಾಂಜಲಿಃ || ೧೮ ||

---

ತಪಸ್ಸಿನಿಂದ ಭಗೀರಥನು ಆಕಾಶದಲ್ಲಿ ಪ್ರಕಾಶಿಸುತ್ತಿದ್ದ ಗಂಗೆಯನ್ನು ಭೂಮಿಗೆ ತಂದನು.

೧೫-೧೬. ನರಕದಲ್ಲಿದ್ದ ಸಗರಪುತ್ರರೆಲ್ಲರೂ ಗಂಗಾನೀರಿನಿಂದ ಅವರ ಅಸ್ಥಿಯು ತೋಯಲ್ಪಟ್ಟೊಡನೆಯೇ ಅಕ್ಷಯ್ಯವಾದ ಸ್ವರ್ಗವನ್ನು ಹೊಂದಿದರು. ಯಾವನ ಅಸ್ಥಿಯು ಗಂಗಾಜಲದಲ್ಲಿ ಎಷ್ಟುವರ್ಷ ಮುಳುಗಿರುವುದೋ ಅಷ್ಟು ಸಹಸ್ರವರ್ಷಗಳ ಪರ್ಯಂತವೂ ಅವನು ಸ್ವರ್ಗಲೋಕದಲ್ಲಿ ಗೌರವಿಸಲ್ಪಡುತ್ತಾನೆ

೧೭-೧೮. ಬುದ್ಧಿಪೂರ್ವಕವಾಗಿ ಆತ್ಮನಾಶ ಹೊಂದಿದವರಿಗೂ ಪತಿತರಿಗೂ ಶಾಸ್ತ್ರವಿಹಿತವಾದ ಸಂಸ್ಕಾರವನ್ನು ಮಾಡಕೂಡದು. ಅಂತಹವರು ಗಂಗಾಜಲದಲ್ಲಿ ಬಿದ್ದು ಆತ್ಮನಾಶವನ್ನು ಹೊಂದುವುದು ಅವರಿಗೂ ಹಿತಕರವಾದದ್ದು, ಪತಿತರಾದ ವರನ್ನುದ್ದೇಶಿ ಮಾಡಿದ ಶ್ರಾದ್ಧವೂ ಪ್ರೇತಾಂಜಲಿಯೂ ಸಹ ಆ ಮೃತನಾದವನನ್ನು ಹೊಂದುವುದಿಲ್ಲ. ಆಕಾಶದಲ್ಲಿಯೇ ಲಯಹೊಂದುತ್ತದೆ.

ನ ತತ್ಪ್ರೇತಃ ಸಮಾಪ್ನೋತಿ ಗಗನೇ ಪ್ರವಿಲೀಯತೇ ।
ಅನುಗ್ರಹೇಣ ಸಹಿತಾ ಪ್ರೇತಸ್ಯ ಪತಿತಸ್ಯ ತು ॥ ೧೯ ॥

ನಾರಾಯಣಬಲಿಃ ಕಾರ್ಯಸ್ತೇನಾನುಗ್ರಹಮಶ್ನುತೇ ।
ಅನಾದಿನಿಧನೋ ದೇವಃ ಶಂಖಚಕ್ರಗದಾಧರಃ ॥ ೨೦ ॥

ಅಕ್ಷಯಃ ಪುಂಡರೀಕಾಕ್ಷಸ್ತತ್ರ ದತ್ತಂ ನ ನಶ್ಯತಿ ।
ಯಥಾಕಥಂಚಿದ್ಯದ್ದತ್ತಂ ದೇವದೇವೇ ಜನಾರ್ದನೇ ॥ ೨೧ ॥

ಅವಿನಾಶಿ ತು ತದ್ವಿದ್ಧಿ ಪಾತ್ರಮೇಕೋ ಜನಾರ್ದನಃ ।
ಪರಸ್ಮಾತ್ತ್ರಾಯತೇ ಯಸ್ಮಾತ್ತಸ್ಮಾತ್ಪಾತ್ರಂ ಪ್ರಕೀರ್ತಿತಂ ।
ಪತತಾಂ ತ್ರಾಣದಸ್ತ್ವೇಕೋ ದೇವೋ ಮಧುನಿಷೂದನಃ ॥ ೨೨ ॥

---

೧೯-೨೦. ಪತಿತನಾದವನು ಮೃತನಾದಲ್ಲಿ ಅವನಿಗೆ ಒಳ್ಳೆಯದಾಗಬೇಕೆಂದು ಇಚ್ಛೆ ಇದ್ದಲ್ಲಿ ನಾರಾಯಣಬಲಿಯನ್ನು ಮಾಡಬೇಕು. ಅದರಿಂದ ಅವನಿಗೆ ಒಳ್ಳೆಯದಾಗುತ್ತದೇ ಶಾಶ್ವತನಾಗಿಯೂ ಶಂಕಚಕ್ರಗದಾಧಾರಿಯಾಗಿಯೂ ಇರುವ ಪುಂಡರೀಕಾಕ್ಷನಾದ ನಾರಾಯಣನು ಅಕ್ಷಯಮೂರ್ತಿಯಾಗಿರುವುದರಿಂದ ಅವನಲ್ಲಿ ಅರ್ಪಣೆ ಮಾಡಿದ ಯಾವುದೊಂದೂ ನಾಶಹೊಂದುವುದಿಲ್ಲ.

೨೧-೨೨. ದೇವಾಧಿಪತಿಯಾದ ಆ ಜನಾರ್ದನನಲ್ಲಿ ಭಕ್ತಿಯಿಂದಾಗಲಿ ಉದಾಸೀನತೆಯಿಂದಾಗಲಿ ಅರ್ಪಣಮಾಡಿದ ಯಾವುದೊಂದೂ ವ್ಯರ್ಥವಾಗದೆ ಅದು ಶಾಶ್ವತವಾಗಿ ನಿಲ್ಲುವುದು. ಆದುದರಿಂದ ಆ ಜನಾರ್ದನನೇ ಪಾತ್ರವೆಂದು ತಿಳಿ ಪರಲೋಕದ ದುಃಖದಿಂದ ಅವನು ಕಾಪಾಡತಕ್ಕವನಾದುದರಿಂದಲೇ ಅವನನ್ನು ಪಾತ್ರನೆಂದೇ ಹೇಳುತ್ತಾರೆ. ಮತ್ತು ಯಾರು ಪತಿತರಾಗಿರುತ್ತಾರೋ ಅವರನ್ನು ರಕ್ಷಿಸುವವನು ಆ ಮಧುಸೂದನನೊಬ್ಬನೇ ಎಂದು ತಿಳಿ (ಇಲ್ಲಿ ಪರಸ್ಮಾತ್ತ್ರಾಯತೆ ಇತಿ ಪಾತ್ರಂ ಎಂದೂ ಪತತಃ ತ್ರಾಯತೆ ಎಂದೂ ನಿರುಕ್ತಕ್ರಮದಿಂದ ಅವಯವಾರ್ಥವನ್ನು ವಿಶದಪಡಿಸಿರುವರು).

ಅಮಿತಬಲಪರಾಕ್ರಮೋ ಮಹೌಜಾಃ
ದುರಿತಭಯೋಪಹರೋ ಹರಿರ್ಮಹಾತ್ಮಾ ।
ಅಘಶತಮಲಿನೈಶ್ಚ ಸೇವ್ಯಮಾನೋ
ಭವತಿ ನೃಣಾಂ ತ್ರಿದಿವಾಯ ವಾಸುದೇವಃ　　॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಪ್ರೇತ ನಿರ್ಹರಣೋ ನಾಮ ಷಟ್ಸಪ್ತತಿತಮೋಽಧ್ಯಾಯಃ

---

೨೩. ಅಪರಿಮಿತವಾದ ಜ್ಞಾನಶಕ್ತಿಯುಳ್ಳವನಾಗಿಯೂ ಮಹಾತೇಜಸ್ವಿಯಾಗಿಯೂ ಇರುವ ಆ ವಾಸುದೇವನು ಅನೇಕ ಪಾಪಗಳಿಂದ ಅಪವಿತ್ರರಾಗಿರುವ ಮನುಷ್ಯರಿಂದ ಸೇವಿಸಲ್ಪಟ್ಟರೂ ಅವರ ಸರ್ವಪಾಪಗಳನ್ನೂ ನಾಶಮಾಡಿ ಅಂತಹ ಪಾಪಿಗಳಿಗೂ ಸದ್ಗತಿಯುಂಟಾಗುವಂತೆ ಆ ಮಹಾತ್ಮನೇ ಅನುಗ್ರಹಿಸುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದಲ್ಲಿ ಪುಷ್ಕರೋಪಾಖ್ಯಾನದಲ್ಲಿ ಪ್ರೇತನಿರ್ಹರಣವೆಂಬ ಎಪ್ಪತ್ತಾರನೆಯ ಅಧ್ಯಾಯ ಮುಗಿದಿದೆ.



## ಎಪ್ಪತ್ತಾರನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಆಶೌಚನಿರೂಪಣದ ಪ್ರಾಸಂಗಿಕ ಸಂಬಂಧದಿಂದ ಶವ ಸಂಸ್ಕಾರ ಕ್ರಮವನ್ನು ಸಂಗ್ರಹವಾಗಿ ನಿರೂಪಿಸಿ ಜ್ಞಾತಿಗಳು ಮೃತನ ವಿಷಯದಲ್ಲಿ ಅವಶ್ಯ ಆಚರಿಸಬೇಕಾದ ಕೆಲವು ಸಂಪ್ರದಾಯಗಳನ್ನೂ ಪತಿತರ ವಿಷಯದಲ್ಲಿ ಅನುಸರಿಸಬೇಕಾದ ಉತ್ತರ ಕ್ರಿಯಾವಿಧಾನವನ್ನೂ ನಿರೂಪಿಸಿರುವರು.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

# ದ್ವಿತೀಯಖಂಡೇ

---

## ಸಪ್ತಸಪ್ತತಿತಮೋಽಧ್ಯಾಯಃ

**॥ ಪುಷ್ಕರ ಉವಾಚ ॥**

**ಅಶೌಚೇ ತು ವ್ಯತಿಕ್ರಾಂತೇ ಸ್ನಾತಃ ಪ್ರಯತಮಾನಸಃ ।**
**ಸ್ನಾತಾನಲಂಕೃತಾನ್ಭಕ್ತ್ಯಾ ಗಂಧವಸ್ತ್ರೋಜ್ಜ್ವಲಾನ್ ದ್ವಿಜಾನ್ ॥ ೧ ॥**

**ಉದಙ್ಮುಖಾನ್ ಭೋಜಯೀತ ಸ್ವಾಸೀನಾನ್ಸುಸಮಾಹಿತಾನ್ ।**
**ಮಂತ್ರೋಹಾಶ್ಚಾತ್ರ ಕರ್ತವ್ಯಾಃ ತಥೈಕವಚನೇನ ಚ ॥ ೨ ॥**

**ಉಚ್ಛಿಷ್ಟಸಂನಿಧಾವೇಕಂ ತಥಾ ಪಿಂಡಂ ನಿವೇಶಯೇತ್ ।**
**ಕೀರ್ತಯೇಚ್ಚ ತಥಾ ತಸ್ಯ ನಾಮಗೋತ್ರೇ ಸಮಾಹಿತಃ ॥ ೩ ॥**

---

## ಎಪ್ಪತ್ತೇಳನೆಯ ಅಧ್ಯಾಯ.

೧–೨. ಆಶೌಚವು ಕಳೆದನಂತರ ಸ್ನಾನಮಾಡಿ ಪರಿಶುದ್ಧಮನಸ್ಸಿನಿಂದ ಕೂಡಿ ಸ್ನಾನದಿಂದ ಶುದ್ಧರಾಗಿಯೂ, ಗಂಧವಸ್ತ್ರಾದಿಗಳಿಂದ ಅಲಂಕೃತರಾಗಿಯೂ ಇರುವ ಬ್ರಾಹ್ಮಣರನ್ನು ಉತ್ತರಮುಖರನ್ನಾಗಿ ಕುಳ್ಳಿರಿಸಿ ಭಕ್ತಿಶ್ರದ್ಧೆಯಿಂದ ಅವರಿಗೆ ಭೋಜನಮಾಡಿಸಬೇಕು. ಈ ಸಂದರ್ಭದಲ್ಲಿ ಶ್ರಾದ್ಧಮಂತ್ರಗಳಲ್ಲಿ ಊಹಾ ಎಂಬ ಪದಪರಿವರ್ತನೆಯನ್ನೂ ಏಕವಚನಬಹುವಚನಾದಿ ವ್ಯತ್ಯಾಸವನ್ನೂ ಸಹ ಪ್ರಕೃತಕ್ಕೆ ತಕ್ಕಂತೆ ಏರ್ಪಡಿಸಿಕೊಳ್ಳಬೇಕು.

೩–೪. ಆಗ ಬ್ರಾಹ್ಮಣರು ಊಟಮಾಡುವ ಸ್ಥಳದಲ್ಲಿಯೇ ಒಂದು ಉಚ್ಛಿಷ್ಟ ಪಿಂಡವನ್ನಿಡಬೇಕು. ಮೃತನ ಹೆಸರು ಮತ್ತು ಗೋತ್ರಗಳನ್ನೂ ಸಹ ಶಾಂತಮನಸ್ಕನಾಗಿ ಪಿಂಡಪ್ರದಾನಕಾಲದಲ್ಲಿ ಉಚ್ಚರಿಸಬೇಕು. ಭೋಜನದಿಂದ ತೃಪ್ತರಾದ

ಭುಕ್ತವತ್ಸು ಚ ವಿಪ್ರೇಷು ಪೂಜಿತೇಷು ತಥಾ ಧನೈಃ ।
ವಿಸೃಷ್ಟಾಕ್ಷಯತೋಯೇಷು ಗೋತ್ರನಾಮಾನುಕೀರ್ತನೈಃ ॥ ೪ ॥

ಚತುರಂಗುಲವಿಸ್ತಾರಮುತ್ಖಾತಂ ತಾವದಂತರಂ ।
ವಿತಸ್ತಿದೀರ್ಘಂ ಕರ್ತವ್ಯಂ ಕರ್ಷೂಣಾಂ ಚ ತಥಾ ತ್ರಯಂ ॥ ೫ ॥

ಕರ್ಷೂಣಾಂ ತು ಸಮೀಪೇ ಚ ಜ್ವಾಲಯೇಜ್ಜ್ವಲನತ್ರಯಂ ।
ಸೋಮಾಯ ವಹ್ನಯೇ ರಾಮ ಯಮಾಯ ಚ ಸಮಾಹಿತಃ ॥ ೬ ॥

ಜುಹುಯಾದಾಹುತೀಃ ಸಮ್ಯಕ್ ತಥೈವ ಚ ತ್ರಯಸ್ತ್ರಯಃ ।
ಪಿಂಡನಿರ್ವಪಣಂ ಕುರ್ಯಾತ್ ಪ್ರಾಗ್ವದೇವ ಪೃಥಕ್ಪೃಥಕ್ ॥ ೭ ॥

ಅನ್ನೇನ ದಧ್ನಾ ಮಧುನಾ ತಥಾ ಮಾಂಸೇನ ಪೂರಯೇತ್ ।
ಮಧ್ಯೇ ಚೇದಧಿಮಾಸಸ್ಯಾತ್ಕುರ್ಯಾದಭ್ಯಧಿಕಂ ತತಃ ॥ ೮ ॥

---

ಆ ಬ್ರಾಹ್ಮಣರನ್ನು ಧನದಿಂದಲೂ ಸಂತೋಷಪಡಿಸಿ ಸಂತುಷ್ಟರಾದ ಅವರು ಮೃತನ ಗೋತ್ರ ಮತ್ತು ನಾಮನಿರ್ದೇಶಪೂರ್ವಕವಾಗಿ ಅಕ್ಷಯೋದಕವನ್ನು ಬಿಟ್ಟಮೇಲೆ—

೫-೭. ಅಲ್ಲಿ ನಾಲ್ಕು ಅಂಗುಲ ಅಗಲವಾಗಿಯೂ ಆಳವಾಗಿಯೂ ಇರುವ ಹನ್ನೆರಡು ಅಂಗುಲ ದೀರ್ಘವಾದ ಮೂರು ಗುಂಡಿ (ಹಳ್ಳ) ಗಳನ್ನು ಮಾಡಬೇಕು. ಆ ಹಳ್ಳಗಳ ಸಮೀಪದಲ್ಲಿಯೇ ಮೂರು ಅಗ್ನಿಕುಂಡಗಳನ್ನು ಪ್ರತಿಷ್ಠಿಸಿ ಜ್ವಲಿಸುವಂತೆ ಮಾಡಬೇಕು. ಆ ಅಗ್ನಿಯಲ್ಲಿ ಸೋಮನನ್ನೂ, ಅಗ್ನಿಯನ್ನೂ, ಯಮನನ್ನೂ ಉದ್ದೇಶಿಸಿ ಮೂರು ಮೂರು ಆಹುತಿಗಳನ್ನು ಚೆನ್ನಾಗಿ ಹೋಮಮಾಡಬೇಕು. ಅನಂತರ ಆ ಮೂರು ಅಗ್ನಿಗಳ ಸಮೀಪದಲ್ಲೂ ಮೊದಲಿನಂತೆಯೇ ಬೇರೆ ಬೇರೆ ಪಿಂಡಪ್ರದಾನವನ್ನೂ ಮಾಡಬೇಕು.

೮-೧೦. ಅನ್ನ, ಮೊಸರು, ಜೇನು, ಮಾಂಸ, ಇವುಗಳಿಂದ ಆ ಪಿಂಡವನ್ನು ತೃಪ್ತಿಪಡಿಸಿ ಹಳ್ಳವನ್ನೂ ಇವುಗಳಿಂದಲೇ ಪೂರ್ತಿಗೊಳಿಸಬೇಕು. ಒಂದು ವರ್ಷದ ಕೊನೆಯಲ್ಲಿ ಮಾಡತಕ್ಕ ಸಪಿಂಡೀಕರಣಕ್ಕೆ ಮೊದಲು ಅಧಿಕಮಾಸವು ಬಂದದ್ದೇ ಆದರೆ ಅಧಿಕಮಾಸದಲ್ಲೂ ಈ ರೀತಿಯಾದ ಶ್ರಾದ್ಧವನ್ನು ಬೇರೆ ಮಾಡಬೇಕು. ಹಾಗಿಲ್ಲದಿದ್ದರೆ, ಹನ್ನೆರಡನೆಯ ದಿನದಲ್ಲೇ ಇದನ್ನು ಮುಗಿಸಬೇಕು. (ಇದು ಹನ್ನೆರಡನೆಯ ದಿನವೇ ಸಪಿಂಡೀಕರಣವೆಂಬ ಪಕ್ಷದಲ್ಲಿ ಮೊದಲು ಹೇಳಿದುದು

**ಅಥವಾ ದ್ವಾದಶಾಹೇನ ಸರ್ವಮೇತತ್ಸಮಾಪಯೇತ್ ।**
**ಸಂವತ್ಸರಸ್ಯ ಮಧ್ಯೇ ಚೇದ್ಯದಿ ಸ್ಯಾದಧಿಮಾಸಕಃ ॥ ೯ ॥**

**ತತೋ ದ್ವಾದಶಕೇ ಶ್ರಾದ್ಧೇ ಕಾರ್ಯಂ ತದಧಿಮಾಸಿಕಂ ।**
**ತತೋ ದ್ವಾದಶಕೇ ಶ್ರಾದ್ಧೇ ಕಾರ್ಯಂ ತದಧಿಕಂ ಭವೇತ್ ॥ ೧೦ ॥**

**ಸಂವತ್ಸರೇ ಸಮಾಪ್ತೇ ತು ಶ್ರಾದ್ಧಂ ಶ್ರಾದ್ಧವದಾಚರೇತ್ ।**
**ಪ್ರೇತಾಯ ತಸ್ಮಾದೂರ್ಧ್ವಂ ಚ ತಸ್ಯೈವ ಪುರುಷತ್ರಯೇ ॥ ೧೧ ॥**

**ಪಿಂಡಾನ್ನಿರ್ವಪೇಚ್ಚಾತ್ರ ಚತುರಃ ಸುಸಮಾಹಿತಃ ।**
**ಸಂಸೃಜಂ ಪೃಥಿವೀಂ ದತ್ವಾ ಸಮಾನಾವೇತಿ ಚಾಪ್ಯಥ ॥ ೧೨ ॥**

**ಯೋಜಯೇತ್ಪ್ರೇತಪಿಂಡಂ ತು ಪಿಂಡೇಷ್ವನ್ಯೇಷು ಭಾರ್ಗವ ।**
**ಪ್ರೇತಪಾತ್ರಂ ಚ ಪಾತ್ರೇಷು ತಥೈವ ವಿನಿಯೋಜಯೇತ್ ॥ ೧೩ ॥**

---

ವತ್ಸರಾಂತ ಸಪಿಂಡೀಕರಣವು ಹನ್ನೆರಡನೆಯ ದಿನ ನಡೆದಿದ್ದರೂ ವರ್ಷಮಧ್ಯದಲ್ಲಿ ಅಧಿಕಮಾಸವು ಬಂದಲ್ಲಿ ಹನ್ನೆರಡು ಮಾಸಿಕ ಶ್ರಾದ್ಧಕ್ಕಿಂತಲೂ ಹೆಚ್ಚಾಗಿ ಒಂದು ಶ್ರಾದ್ಧವು ಆಚರಿಸಲ್ಪಡಬೇಕಾದೀತು. (ವತ್ಸರಾಂತಸಾಂಪಿಂಡ್ಯ ಪಕ್ಷದಲ್ಲಿ ಇತರ ಮಾಸಿಕಗಳೂ ಅಧಿಕಮಾಸದ ಮಾಸಿಕವೂ ಸಹ ಮೇಲೆ ಹೇಳಿರುವಂತೆ ಏಕೋದಿಷ್ಟಕ್ರಮದಂತೆಯೇ ನಡೆಯಬೇಕೆಂದು ಇತರ ಧರ್ಮಶಾಸ್ತ್ರಕಾರರ ಅಭಿಪ್ರಾಯವೂ ಇದೆ.)

೧೧-೧೩. ಸಂವತ್ಸರವು ಪೂರ್ಣವಾದ ಮೇಲೆ ಆ ಪ್ರೇತನನ್ನುದ್ದೇಶಿಸಿ ಮಾಡುತ್ತಿದ್ದ ಕರ್ಮವನ್ನೆಲ್ಲಾ ಪುರುಷತ್ರಯವನ್ನುದ್ದೇಶಿಸಿ (ಪಿತೃಪಿತಾಮಹಾದಿ) ಅನಂತರ ಕಾಲ ಶ್ರಾದ್ಧದಂತೆಯೇ ಶ್ರಾದ್ಧವನ್ನು ಮಾಡಬೇಕು. (ಇದು ಸಪಿಂಡೀಕರಣಾನಂತರ ಮಾಡತಕ್ಕ ಶ್ರಾದ್ಧವಿಷಯ) ಈ ದ್ವಾದಶಾಹ ಶ್ರಾದ್ಧದಲ್ಲಿ ನಾಲ್ಕು ಪಿಂಡಗಳನ್ನಿಡಬೇಕು. ಇದರಲ್ಲೊಂದು ದೊಡ್ಡ ಪ್ರೇತಪಿಂಡ. ಉಳಿದ ಮೂರು ಪುರುಷತ್ರಯೋದ್ದೇಶ್ಯಕವಾದ ಪಿಂಡಗಳು, ದೊಡ್ಡದಾಗಿರುವ ಆ ಪ್ರೇತಪಿಂಡವನ್ನು ಮೂರು ಭಾಗಮಾಡಿ ಇತರ ಮೂರು ಪಿಂಡಗಳೊಡನೆ, ಸಂಗಚ್ಛಂಧ್ವಂ ಎಂಬ ಸಂಸೃಜಮಂತ್ರದಿಂದಲೂ, ಸಮಾನಾ ಎಂಬ ಮಂತ್ರದಿಂದಲೂ ಸೇರಿಸಬೇಕು. ಭೂದಾನಾದಿಗಳನ್ನು ಮಾಡಿ ಪ್ರೇತಪಾತ್ರದ ಜಲವನ್ನೂ ಇತರ ಮೂರು ಅರ್ಘ್ಯಪಾತ್ರೆಗಳಲ್ಲಿ ಸೇರಿಸಬೇಕು.

ಪೃಥಕ್ಪೃಥಕ್ಚ ಕರ್ತವ್ಯಂ ಕರ್ಮೈತತ್ಕರ್ಮಣಾಂ ತ್ರಯೇ ।
ಮಂತ್ರವರ್ಜಮಿದಂ ಕರ್ಮ ಶೂದ್ರಸ್ಯಾಪಿ ವಿಧೀಯತೇ ॥ ೧೪ ॥

ಅಮಂತ್ರೋಚ್ಚಾರಣಂ ಸ್ತ್ರೀಣಾಂ ಕಾರ್ಯಮೇತತ್ತಥಾ ಭವೇತ್ ।
ಯಾವಜ್ಜೀವಂ ತಥಾ ಕುರ್ಯಾಚ್ಛ್ರಾದ್ಧಂ ತು ಪ್ರತಿವತ್ಸರಂ ।
ಅನೇನೈವ ವಿಧಾನೇನ ಭಕ್ತ್ಯಾ ಪ್ರಯತಮಾನಸಃ ॥ ೧೫ ॥

ಪ್ರೇತಾಯಾನ್ನಂ ಸೋದಕುಂಭಂ ಪ್ರದೇಯಂ
ನಿತ್ಯಂ ಭಕ್ತ್ಯಾ ಯಾವದಬ್ದಾವಸಾನಂ ।
ಏತತ್ಕಾರ್ಯಂ ಬಾಂಧವೈರ್ನೈವ ಕಾರ್ಯಃ
ಶೋಕಃ ಶೋಚನ್ನೈವ ಕಿಂಚಿತ್ಪ್ರಕುರ್ಯಾತ್ ॥ ೧೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಪ್ರೇತಕ್ರಿಯಾ ನಾಮ ಸಪ್ತಸಪ್ತತಿತಮೋಽಧ್ಯಾಯಃ

---

೧೪–೧೫. ಈ ವಿಧಾನವನ್ನು ಮೂರು ಪಿಂಡಗಳಲ್ಲೂ ಬೇರೆ ಬೇರೆಯಾಗಿ ಆಚರಿಸಬೇಕು. ಈ ಕರ್ಮವು ಮಂತ್ರವಿಲ್ಲದೆ ಕೇವಲ ತಂತ್ರರೂಪದಿಂದ ಶೂದ್ರನಿಗೂ ವಿಹಿತವಾಗಿದೆ. ಸ್ತ್ರೀಯರ ವಿಷಯದಲ್ಲಿ ಮಾತ್ರ ಮಂತ್ರೋಚ್ಚಾರಣವಿಲ್ಲದೆ ಈ ಕರ್ಮವನ್ನಾಚರಿಸಬೇಕು. ಇದು ನಡೆದನಂತರ ತಾನು ಬದುಕಿರುವವರಿಗೂ ಪ್ರತಿ ವರ್ಷದಲ್ಲಿಯೂ ಶ್ರಾದ್ಧವನ್ನು ಮಾಡುತ್ತಿರಬೇಕು. ಈ ವಿಧಿಯನ್ನನುಸರಿಸಿ ಭಕ್ತಿಯಿಂದಲೂ ಮನಶ್ಶುದ್ಧಿಯಿಂದಲೂ ಮಾಡಬೇಕು.

೧೬. ಮೃತನನ್ನುದ್ದೇಶಿಸಿ ವರ್ಷ ತುಂಬುವವರಿಗೂ ನಿತ್ಯವೂ ಭಕ್ತಿಯಿಂದ ಸೋದಕುಂಭ ಶ್ರಾದ್ಧವನ್ನು ಮಾಡಬೇಕು. (ಇದು ಉದಕುಂಭಪೂರ್ವಕವಾಗಿ ಮಾಡಬೇಕಾದ ನಿತ್ಯಶ್ರಾದ್ಧ) ಜ್ಞಾತಿಯಾದವನು ಈ ಕಾರ್ಯವನ್ನು ಅವಶ್ಯ ಮಾಡಬೇಕೇ ಹೊರತು ಕೇವಲ ಶೋಕಮಾತ್ರದಿಂದ ಮೃತನಿಗೆ ಏನನ್ನೂ ಮಾಡಿದಂತಾಗುವುದಿಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದ ಮಾರ್ಕಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ವಾಕ್ಯದಲ್ಲಿ ಪ್ರೇತಕ್ರಿಯೆಯೆಂಬ ಎಪ್ಪತ್ತೇಳನೆಯ ಅಧ್ಯಾಯ ಮುಗಿದಿದೆ.

## ಎಪ್ಪತ್ತೇಳನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಮೃತನನ್ನುದ್ದೇಶಿಸಿ ಜ್ಞಾತಿಗಳಾದ ಬಾಂಧವರು ಮಾಡಬೇಕಾದ ಉತ್ತರಕ್ರಿಯೆಯನ್ನು ಸಂಗ್ರಹವಾಗಿ ನಿರೂಪಿಸಿರುವರು. ಧರ್ಮಶಾಸ್ತ್ರಕಾರರು ಹೇಳಿರುವ ಕ್ರಮಕ್ಕಿಂತಲೂ ಇಲ್ಲಿ ಸ್ವಲ್ಪ ವ್ಯತ್ಯಾಸವು ಸ್ಥೂಲದೃಷ್ಟಿಯಿಂದ ತೋರಿಬರಬಹುದು. ಆದರೂ ದೇಶಭೇದದಿಂದಿರುವ ಸಂಪ್ರದಾಯ ಭೇದಕ್ಕೆ ತಕ್ಕಂತೆ ಈ ವಚನಗಳು ವಿಷಯಭೇದದಿಂದ ಪ್ರಮಾಣವೆನ್ನುವುದರಲ್ಲಿ ಅಡ್ಡಿ ಇಲ್ಲ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಷ್ಟಸಪ್ತತಿತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಬುಧೈರಾಶ್ವಾಸನೀಯಾಶ್ಚ ಬಾಂಧವೈರ್ಮೃತಬಾಂಧವಾಃ |**
**ವಚನೈರ್ಧರ್ಮಸಂಯುಕ್ತೈಸ್ತಾನಿ ಚಾನ್ಯಾನಿ ಮೇ ಶೃಣು || ೧ ||**

**ನಿತ್ಯಮಸ್ಮಿನ್ನಿರಾಲಂಬೇ ಕಾಲೇ ಸತತಯಾಯಿನಿ |**
**ನ ತದ್ಭೂತಂ ಪ್ರಪಶ್ಯಾಮಿ ಸ್ಥಿತಿರ್ಯಸ್ಯ ಭವೇದ್ಧ್ರುವಾ || ೨ ||**

---

### ಎಪ್ಪತ್ತೆಂಟನೆಯ ಅಧ್ಯಾಯ.

೧–೨. ಇಂತಹ ಸಮಯದಲ್ಲಿ ಜ್ಞಾನಿಗಳಾದ ಬಂಧುವರ್ಗದವರು ಮೃತನ ಬಾಂಧವರನ್ನು ಧಾರ್ಮಿಕವಾದ ಸಮಾಧಾನ ವಚನಗಳಿಂದ ಸಮಾಧಾನಪಡಿಸಬೇಕು. ಅಂತಹ ಧಾರ್ಮಿಕ ವಚನಗಳನ್ನೂ ಇತರ ಅಂತಹ ವಚನಗಳನ್ನೂ ಸಹ ನಾನು ಹೇಳುತ್ತೇನೆ ಕೇಳು. ಯಾವಾಗಲೂ ನಿರಾಶ್ರಯವಾಗಿ ಮುಂದೆ ಮುಂದೆ ನಡೆಯುತ್ತಿರುವ ಈ ಕಾಲಚಕ್ರದಲ್ಲಿ ಯಾವನಿಗೂ ಸ್ಥಿರವಾದ ಸ್ಥಾನವಿಲ್ಲ ಎಲ್ಲರೂ ಅಸ್ಥಿರರಾಗಿ ಕೆಲವು ದಿನವಿರಬೇಕೇ ಹೊರತು ಸ್ಥಿರವಾದ ಪಟ್ಟವು ಯಾರಿಗೂ ಇಲ್ಲವೆಂಬುದನ್ನು ನೋಡುತ್ತಿದ್ದೇವೆ.

ಗಂಗಾಯಾಃ ಸಿಕತಾಧಾರಾಸ್ತಥಾ ವರ್ಷತಿ ವಾಸವೇ ।
ಶಕ್ಯಾ ಗಣಯಿತುಂ ಲೋಕೇ ನ ವ್ಯತೀತಾಃ ಪಿತಾಮಹಾಃ ॥ ೩ ॥

ಚತುರ್ದಶ ವಿನಶ್ಯಂತಿ ಕಲ್ಪೇಕಲ್ಪೇ ಸುರೇಶ್ವರಾಃ ।
ಸರ್ವಲೋಕಪ್ರಧಾನಾಶ್ಚ ಮನವಶ್ಚ ಚತುರ್ದಶ ॥ ೪ ॥

ಬಹೂನೀಂದ್ರಸಹಸ್ರಾಣಿ ದೈತ್ಯೇಂದ್ರನಿಯುತಾನಿ ಚ ।
ವಿನಷ್ಟಾನೀಹ ಕಾಲೇನ ಮನುಜೇಷ್ವಥ ಕಾ ಕಥಾ ॥ ೫ ॥

ರಾಜರ್ಷಯಶ್ಚ ಬಹವಃ ಸರ್ವೇ ಸಮುದಿತಾ ಗುಣೈಃ ।
ದೇವಾ ಬ್ರಹ್ಮರ್ಷಯಶ್ಚೈವ ಕಾಲೇನ ನಿಧನಂ ಗತಾಃ ॥ ೬ ॥

---

೩–೫. ಗಂಗಾನದಿಯಲ್ಲಿ ಮರಳಿನ ಚೂರುಗಳು ಎಷ್ಟಿವೆಯೋ, ಇಂದ್ರನು ಮಳೆಗರೆಯುವಾಗ ಆ ಮಳೆಯಲ್ಲಿ ಎಷ್ಟು ಧಾರೆಗಳಿವೆಯೋ ಇವೂ ಒಂದುವೇಳೆ ಎಣಿಸಲು ಶಕ್ಯವಾಗಬಹುದು, . ಲೋಕದಲ್ಲಿ ಕಾಲಕ್ಕೆ ಅಧೀನರಾಗಿ ಗತಿಸಿದ ಪಿತಾಮಹರನ್ನು ಎಣಿಸಲು ಸಾಧ್ಯವೇ ಇಲ್ಲ. ಪ್ರತಿ ಕಲ್ಪದಲ್ಲಿಯೂ ಸುರಪತಿಗಳಾಗಿರುವ ಹದಿನಾಲ್ಕು ದೇವತೆಗಳೂ ಕಾಲಕ್ಕೆ ಅಧೀನರಾಗಿ ನಾಶಹೊಂದುತ್ತಾರೆ. ಹಾಗೆಯೇ ಸರ್ವಲೋಕಗಳಿಗೂ ಪ್ರಧಾನಪುರುಷರಾದ ಹದಿನಾಲ್ಕು ಮನುಗಳೂ ನಾಶಹೊಂದುತ್ತಾರೆ. ಅನಂತವಾದ ಈ ಕಾಲಚಕ್ರದಲ್ಲಿ ಸಾವಿರಾರು ಇಂದ್ರರೂ, ಹತ್ತಾರುಸಾವಿರ ದೈತ್ಯರಾಜರೂ ಸಹ ನಷ್ಟರಾಗಿರುವರು. ಇವರ ಪಾಡೇ ಹೀಗಿರುವಾಗ ಮನುಷ್ಯರ ಕಥೆ ಎಂತಹುದು. ಲೋಕಪ್ರಧಾನರಾದ ದೇವಪ್ರಕೃತಿಗಳೇ ಅಸ್ಥಿರರಾಗಿರುವಾಗ ಅಲ್ಪಶಕ್ತಿಯನ್ನೂ, ಅಲ್ಪಬುದ್ಧಿಯನ್ನೂ ಹೊಂದಿ ನೀರಿನ ಗುಳ್ಳೆಯಂತಿರುವ ಮನುಷ್ಯರ ಅಸ್ಥಿರತ್ವದಲ್ಲಿ ಹೇಳಬೇಕಾದುದೇನಿದೆ ಎಂದು ತಾತ್ಪರ್ಯ.

೬–೭. ಸರ್ವಗುಣಪರಿಪೂರ್ಣರಾದ ಅನೇಕ ರಾಜರ್ಷಿಗಳೂ ದೇವತೆಗಳೂ ಬ್ರಹ್ಮರ್ಷಿಗಳೂ ಕಾಲಕ್ಕೆ ಅಧೀನರಾಗಿ ಮೃತರಾಗಿರುವರು. ಜಗತ್ತಿನ ಸೃಷ್ಟಿ ಸಂಹಾರಕಾರ್ಯದಲ್ಲಿ ನಿರತರಾಗಿ ಸಮರ್ಥರಾಗಿರುವ ದೇವತೋತ್ತಮರೂ ಸಹ

ಯೇ ಸಮರ್ಥಾ ಜಗತ್ಯಸ್ಮಿನ್ಸೃಷ್ಟಿಸಂಹಾರಕಾರಣೇ |
ತೇಽಪಿ ಕಾಲೇನ ನೀಯಂತೇ ಕಾಲೋ ಹಿ ದುರತಿಕ್ರಮಃ || ೭ ||

ಆಕ್ರಮ್ಯ ಸರ್ವಂ ಕಾಲೇನ ಪರಲೋಕಾಯ ನೀಯತೇ |
ಕರ್ಮ ಪಶ್ಯತಿ ಸ್ನೋ ಜಂತುಸ್ತತ್ರ ಕಾ ಪರಿದೇವನಾ || ೮ ||

ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ |
ಅಸ್ಮಿನ್ನಪರಿಹಾರ್ಯೇಽರ್ಥೇ ನಾಸ್ತಿ ಲೋಕೇ ಸಹಾಯತಾ || ೯ ||

ಶೋಚಂತೋ ನೋಪಕುರ್ವಂತಿ ಮೃತಸ್ಯ ಹಿ ಜನಾಯದಾ |
ಅತೋ ನ ಶೋಚಿತವ್ಯಂ ಸ್ಯಾತ್ಕ್ರಿಯಾ ಕಾರ್ಯಾ ಸುಯತ್ನತಃ || ೧೦ ||

ಸುಕೃತಂ ದುಷ್ಕೃತಂ ಚೋಭೌ ಸಹಾಯೌ ಯಸ್ಯ ಗಚ್ಛತಃ |
ಬಾಂಧವೈಸ್ತಸ್ಯ ಕಿಂ ಕಾರ್ಯಂ ಶೋಚದ್ಭಿರಥ ವಾ ನವಾ || ೧೧ ||

---

ಕಾಲದಿಂದ ಒಯ್ಯಲ್ಪಡುತ್ತಾರೆ. ಈ ಕಾಲವು ಎಲ್ಲರಿಂದಲೂ ಅಜೇಯವಾದುದು. ಇದನ್ನು ಅತಿಕ್ರಮಿಸಿ ಬಾಳಲು ಯಾರಿಗೂ ಸಾಧ್ಯವಿಲ್ಲ.

೮–೯. ಗುಣಗಳೇ ಮೊದಲಾದ ಈ ಲೋಕದ ಸರ್ವಸಮೃದ್ಧಿಯನ್ನೂ ತಡೆದು ಆಕ್ರಮಿಸಿ ಕಾಲವು ಪರಲೋಕಕ್ಕೆ ಒಯ್ಯುತ್ತದೆ. ಪ್ರಾಣಿಯೆಲ್ಲವೂ ಅವನವನ ಕರ್ಮಕ್ಕೆ ಅಧೀನವಾಗಿರುವಾಗ ಕರ್ಮಗತಿಯಿಂದುಂಟಾಗುವ ಪರಲೋಕ ಗಮನಕ್ಕಾಗಿ ಏಕೆ ದುಃಖಪಡಬೇಕು. ಹುಟ್ಟಿದವನಿಗೆ ಒಂದಾನೊಂದು ದಿನ ಮೃತಿಯು ಸಿದ್ಧವಾಗಿಯೇ ಇರುತ್ತದೆ. ಮೃತನಾದವನಿಗೆ ಜನ್ಮವೂ ಪುನಃ ಸಿದ್ಧ ವಾಗಿಯೇ ಇದೆ. ಈ ಅನಿವಾರ್ಯವಾದ ಪ್ರಸಂಗದಲ್ಲಿ ಇದನ್ನೂ ತಡೆದು ಉಪಕರಿಸು ವವರು ಲೋಕದಲ್ಲಿತಾನೆ ಯಾರಿರುವರು.

೧೦–೧೨. ಬಂಧುಜನಗಳು ದುಃಖಪಟ್ಟರೂ ಸಹ ಮೃತನಿಗೆ ಉಪಕರಿಸಲು ಸಮರ್ಥರಾಗದಿರುವಾಗ ಅವರು ದುಃಖಪಡಲೇ ಕೂಡದು. ಅವನಿಗೆ ಮಾಡತಕ್ಕ ಉತ್ತರಕ್ರಿಯೆಗಳಲ್ಲಿ ಮಾತ್ರ ಪ್ರಯತ್ನದಿಂದ ಆಸಕ್ತರಾಗಬೇಕು. ಪರಲೋಕವನ್ನು ಹೊಂದುವ ಯಾವ ಮೃತನಿಗೆ ಅವನ ಪುಣ್ಯಪಾಪಗಳೇ ಸಹಾಯಗಳೆಂಬುದು ತಿಳಿದ ಮೇಲೆ ಬಾಂಧವರು ದುಃಖಿಸಿದರೂ ದುಃಖಿಸದಿದ್ದರೂ ಸಹ ಇವರಿಂದ

**ಬಾಂಧವಾನಾಮಶೌಚೇ ತು ಸ್ಥಿತಿಂ ಪ್ರೇತೋ ನ ವಿಂದತಿ ।**
**ಅತಸ್ತ್ವಭ್ಯೇತಿ ತಾನೇವ ಪಿಂಡತೋಯಪ್ರದಾಯಿನಃ　　॥ ೧೨ ॥**

**ಅರ್ವಾಕ್ ಸಪಿಂಡೀಕರಣಾತ್ಪ್ರೇತೋ ಭವತಿ ಯೋ ಮೃತಃ ।**
**ಪ್ರೇತಲೋಕಗತಸ್ಯಾನ್ನಂ ಸೋದಕುಂಭಂ ಪ್ರಯಚ್ಛತ　　॥ ೧೩ ॥**

**ಪಿತೃಲೋಕಗತಶ್ಚಾನ್ನಂ ಶ್ರಾದ್ಧಂ ಭುಂಕ್ತೇ ಸುಧಾಸಮಂ ।**
**ಪಿತೃಲೋಕಗತಸ್ಯಾಸ್ಯ ತಸ್ಮಾಚ್ಛ್ರಾದ್ಧಂ ಪ್ರಯತ್ನತಃ　　॥ ೧೪ ॥**

**ದೇವತ್ವೇ ಯಾತನಾಸ್ಥಾನೇ ತಿರ್ಯಗ್ಯೋನೌ ತಥೈವ ಚ ।**
**ಮಾನುಷ್ಯೇ ಚ ತಥಾಽಪ್ನೋತಿ ಶ್ರಾದ್ಧೇ ದತ್ತೇ ಸ್ವಬಾಂಧವೈಃ　　॥ ೧೫ ॥**

---

ಅವನಿಗಾಗುವ ಉಪಕಾರವೇನು ಅಪಕಾರವು ತಾನೆ ಯೇನು (ಆದುದರಿಂದ ಬಂಧು ಜನಗಳ ಶೋಕವು ನಿಷ್ಫಲವೆಂದೇ ತಾತ್ಪರ್ಯ) ಬಂಧುಗಳು ಉತ್ತರಕ್ರಿಯೆಯನ್ನು ನಡೆಸದೆ ಕೇವಲ ದುಃಖದಿಂದ ಕುಳಿತಿದ್ದಲ್ಲಿ ಇವರು ಅಶುಚಿಯಲ್ಲೇ ಇರಬೇಕಾಗುವುದು. ಹಾಗೆ ಇದ್ದಲ್ಲಿ ಮೃತನಾದವನಿಗೆ ಸ್ಥಿತಿಯೂ ಲಭಿಸದೆ ಪಿಂಡೋದಕಗಳನ್ನು ಅಪೇಕ್ಷಿಸಿ ಈ ಬಂಧು ಜನಗಳನ್ನೇ ಪುನಃ ಅವನು ಬಂದು ಸೇರಬೇಕಾಗುತ್ತದೆ. (ಇದರಿಂದ ಮೃತನಿಗೂ ತೊಂದರೆಯೇ ಉಂಟಾಗುತ್ತದೆ. ಎಂದು ತಾತ್ಪರ್ಯ.)

೧೩–೧೪. ಮೃತನಾದವನು ಸಪಿಂಡೀಕರಣ ನಡೆಯುವುದಕ್ಕೆ ಮೊದಲು ಪ್ರೇತನಾಗಿರುತ್ತಾನೆ. ಪ್ರೇತಲೋಕವನ್ನು ಹೊಂದಿರುವ ಅವನ ತೃಪ್ತಿಗಾಗಿ ಸೋದ ಕುಂಭವನ್ನು ಕೊಡುತ್ತಿರಬೇಕು. ಸಪಿಂಡೀಕರಣವಾದನಂತರ ಪಿತೃತ್ವವನ್ನು ಹೊಂದಿ ಅವನು ಪಿತೃಲೋಕ ಹೊಂದಿರುವಾಗ ಇಲ್ಲಿ ಮಾಡುವ ಶ್ರಾದ್ಧವೇ ಅವನಿಗೆ ಅಮೃತ ದಂತೆ ತೃಪ್ತಿಕರವಾಗುತ್ತದೆ. ಆದುದರಿಂದ ಪಿತೃಲೋಕವನ್ನು ಹೊಂದಿರುವ ಅವನ ತೃಪ್ತಿಗಾಗಿ ಪ್ರಯತ್ನಪೂರ್ವಕವಾಗಿ ಶ್ರಾದ್ಧವನ್ನು ಮಾಡಬೇಕು.

೧೫–೧೭. ಬಂಧುಗಳಿಂದ ಕೊಡಲ್ಪಟ್ಟ ಶ್ರಾದ್ಧವು ಮೃತನು ಪುಣ್ಯವಶದಿಂದ ದೇವತೆಯಾಗಿ ಸ್ವರ್ಗದಲ್ಲಿದ್ದರೂ ಪಾಪವಶದಿಂದ ನರಕದಲ್ಲಿ ನರಳುತ್ತಿದ್ದರೂ ಅಂತಹ ಸಾಮಾನ್ಯ ಪಾಪದಿಂದ ಪಶುಪಕ್ಷ್ಯಾದಿ ತಿರ್ಯಗ್ಜಾತಿಯಲ್ಲಿ ಜನಿಸಿದ್ದರೂ ಮನುಷ್ಯತ್ವ ವನ್ನೇ ಹೊಂದಿದ್ದರೂ ಸಹ ಆಯಾಯ ಜನ್ಮದಲ್ಲೂ ಅದನ್ನು (ಶ್ರಾದ್ಧವನ್ನು) ಹೊಂದಿಯೇ ಹೊಂದುತ್ತಾನೆ. ಇಂತಹ ಶ್ರಾದ್ಧವನ್ನು ಮಾಡಿದಲ್ಲಿ ಮೃತನಿಗೆ ಮಾತ್ರ

ಪ್ರೇತಸ್ಯ ಶ್ರಾದ್ಧಕರ್ತುಶ್ಚ ಪುಷ್ಟಿಃ ಶ್ರಾದ್ಧೇ ಕೃತೇ ಧ್ರುವಂ ।
ತಸ್ಮಾಚ್ಛ್ರಾದ್ಧಂ ಸದಾ ಕಾರ್ಯಂ ಶೋಕಂ ತ್ಯಕ್ತ್ವಾ ನಿರರ್ಥಕಂ ॥ ೧೬ ॥

ಏತಾವದೇವ ಕರ್ತವ್ಯಂ ಸದಾ ಪ್ರೇತಸ್ಯ ಬಂಧುಭಿಃ ।
ನೋಪಕುರ್ಯಾನ್ನರಃ ಶೋಚನ್ಪ್ರೇತಸ್ಯಾತ್ಮನ ಏವ ಚ ॥ ೧೭ ॥

ದೃಷ್ಟ್ವಾ ಲೋಕಮನಾಕ್ರಂದಂ ಮ್ರಿಯಮಾಣಾಂಶ್ಚ ಬಾಂಧವಾನ್ ।
ಧರ್ಮಮೇಕಂ ಸಹಾಯಾರ್ಥೇ ಕಾರಯಧ್ವಂ ಸದಾ ನರಾಃ ॥ ೧೮ ॥

ಮೃತೋಽಪಿ ಬಾಂಧವಃ ಶಕ್ತೋ ನಾನುಗಂತುಂ ನರೈರ್ಯತಃ ।
ಜಾಯಾವರ್ಜ್ಯಂ ಹಿ ಸರ್ವಸ್ಯ ಯಸ್ಯಾ ಭರ್ತಾ ವಿಪದ್ಯತೇ ॥ ೧೯ ॥

---

ವಲ್ಲದೆ ಶ್ರಾದ್ಧವನ್ನು ಮಾಡಿದವನಿಗೂ ಪುಷ್ಟಿಯುಂಟಾಗುತ್ತದೆ ಆದುದರಿಂದ ವ್ಯರ್ಥವಾದ ಶೋಕವನ್ನು ಬಿಟ್ಟು ಶ್ರಾದ್ಧಾದಿಗಳನ್ನು ಮಾಡಲು ಯಾವಾಗಲೂ ಪ್ರಯತ್ನಿಸಬೇಕು. ಬಂಧುಗಳಾದವರು ಮೃತನ ಪ್ರೀತಿಗಾಗಿ ಮಾಡತಕ್ಕ ಕೆಲಸವಿಷ್ಟೇ. ಇದನ್ನೂ ಮಾಡದೆ ಕೇವಲ ದುಃಖದಲ್ಲಿಯೇ ಇದ್ದಲ್ಲಿ ಮೃತನಿಗೂ ತನಗೂ ಸಹ ಯಾವ ಉಪಕಾರವನ್ನೂ ಮಾಡಿದಂತಾಗುವುದಿಲ್ಲ. (ಮೃತನಿಗೆ ಮಾತ್ರ ಇದರಿಂದ ದ್ರೋಹವುಂಟಾಗುವುದಿಲ್ಲ. ಆತ್ಮದ್ರೋಹವೂ ಉಂಟಾಗುತ್ತದೆಯೆಂದು! ತಾತ್ಪರ್ಯ.)

೧೮-೧೯. ಬಂಧುಗಳು ಮೃತರಾಗುವುದನ್ನೂ ಹಾಗಿದ್ದರೂ ಲೋಕವೆಲ್ಲವೂ ರೋದನವಿಲ್ಲದೆ ಇರುವುದನ್ನೂ ನೋಡಿ ಮೃತನಿಗೆ ಸಹಾಯಕಾರಿಯಾದ ಧರ್ಮವನ್ನು ಮಾಡುವುದರಲ್ಲಿ ನೀವೆಲ್ಲರೂ ಜಾಗರೂಕರಾಗಿರಿ. ಹೆಂಡತಿಯಾಗಿದ್ದವಳು ತನ್ನ ಪತಿಯು ಮೃತನಾದಲ್ಲಿ ಅವಳೊಬ್ಬಳು ಮೃತಳಾಗಿಯಾದರೂ ಪತಿಯನ್ನು ಅನುವರ್ತಿಸಬಲ್ಲಳೇ ಹೊರತು ಮತ್ತಾವ ಮನುಷ್ಯನೂ ಸಹ ತಾನು ಮೃತಿಹೊಂದಿದರೂ ಮೃತನಾದ ತನ್ನ ಬಂಧುವನ್ನು ಅನುಸರಿಸಿ ಹೋಗಲು ಸಾಧ್ಯವೇ ಇಲ್ಲ. (ಆದುದರಿಂದಲೇ ಅವನಿಗೆ ಪರಲೋಕದಲ್ಲಿ ಸಹಾಯಕಾರಿಯಾದ ಧರ್ಮವನ್ನು ಮಾತ್ರ ಬಿಡದೆ ಆಚರಿಸಬೇಕೆಂದು ತಾತ್ಪರ್ಯ.)

ಧರ್ಮ ಏಕೋಽನುಯಾತ್ಯೇನಂ ಯತ್ರ ಕುತ್ರ ಚ ಗಾಮಿನಂ ।
ನನ್ವಸಾರೇ ತ್ರಿಲೋಕೇಽಸ್ಮಿನ್ಧರ್ಮಂ ಕುರುತ ಮಾ ಚಿರಂ ॥ ೨೦ ॥

ಶ್ವಃ ಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ತ್ವಪರಾಹ್ಣಿಕಂ ।
ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಮಸ್ಯ ನ ವಾ ಕೃತಂ ॥ ೨೧ ॥

ಕ್ಷೇತ್ರಾಪಣಗೃಹಾಸಕ್ತಮನ್ಯತ್ರ ಗತಮಾನಸಂ ।
ವೃಕೀವಾಽರಣ್ಯಮಾಸಾದ್ಯ ಮೃತ್ಯುರಾದಾಯ ಗಚ್ಛತಿ ॥ ೨೨ ॥

ನ ಕಾಲಸ್ಯ ಪ್ರಿಯಃ ಕಶ್ಚಿದ್ದ್ವೇಷ್ಯಶ್ಚಾಸ್ಯ ನ ವಿದ್ಯತೇ ।
ಆಯುಷ್ಯೇ ಕರ್ಮಣಿ ಕ್ಷೀಣೇ ಪ್ರಸಹ್ಯ ಹರತೇ ಜನಂ ॥ ೨೩ ॥

---

೨೦-೨೧. ಈ ಜೀವನು ಎಲ್ಲಿದ್ದರೂ ಧರ್ಮವೊಂದೇ ಇವನನ್ನು ಹಿಂಬಾಲಿಸಿ ಇರುತ್ತದೆ. ಆದುದರಿಂದ ನಿಸ್ಸಾರವಾದ ಈ ಲೋಕತ್ರಯದಲ್ಲಿರುವವರೆಲ್ಲರೂ ವಿಲಂಬಮಾಡದೆ ಧರ್ಮಾಚರಣೆಯಲ್ಲಿ ಜಾಗರೂಕರಾಗಿರಬೇಕು. ನಾಳೆ ಮಾಡಬಹುದಾದ ಕಾರ್ಯವನ್ನು ಈ ದಿನವೇ ಮಾಡಬೇಕು. ಅಪರಾಹ್ಣದಲ್ಲಿ ಮಾಡಬಹುದಾದ ಕಾರ್ಯವನ್ನು ಪೂರ್ವಾಹ್ಣದಲ್ಲಿಯೇ ಮಾಡಿಬಿಡಬೇಕು. ಹಠಾತ್ತಾಗಿ ಬಂದೆರಗುವ ಮೃತ್ಯುವು ಇವನ ಕಾರ್ಯಾಕಾರ್ಯಗಳನ್ನು ನಿರೀಕ್ಷಿಸುವುದಿಲ್ಲ. (ಇದು ಧಾರ್ಮಿಕ ಕಾರ್ಯ ಸಾಮಾನ್ಯ ವಿಷಯ.)

೨೨-೨೩. ಹೊಲ, ಮನೆ, ಅಂಗಡಿ ಮೊದಲಾದ ಬಾಹ್ಯವಸ್ತುಗಳಲ್ಲಿ ಆಸಕ್ತಿಹೊಂದಿ ಜಾಗರೂಕತೆಯಿಲ್ಲದಿರುವವನನ್ನು ಅರಣ್ಯದಲ್ಲಿ ಅನ್ಯಮನಸ್ಕತೆಯಿಂದಿರುವ ಪ್ರಾಣಿಗಳನ್ನು ಹೆಣ್ಣುತೋಳವು ಅಪಹರಿಸುವಂತೆ ಮೃತ್ಯುವು ಹಠಾತ್ತಾಗಿ ಅಪಹರಿಸುತ್ತದೆ. ಕಾಲಕ್ಕೆ ಪ್ರಿಯನಾದವನು ಯಾರೂ ಇಲ್ಲ ಶತ್ರುವೂ ಸಹ ಯಾರೂ ಇಲ್ಲ. ಆದುದರಿಂದ ಆ ಕಾಲಕ್ಕೆ ಯಾರೂ ಸಕಾರಣವಾದ ಅನುಗ್ರಹ ನಿಗ್ರಹಗಳಿಗೆ ಪಾತ್ರರಾಗಲಾರರು ಎಷ್ಟು ದಿನದವರೆಗೆ ಚೇತನನಿಗೆ ಆಯುಷ್ಯವನ್ನು ಹೊಂದಿರಬಹುದಾದ ಕರ್ಮಬಲವಿರುವುದೋ ಅಷ್ಟುದಿನ ಮಾತ್ರ ಅವನು ಜೀವಿಸಿರಬಹುದು ಆ ಕರ್ಮವು ಸುಖದುಃಖಗಳನ್ನುಂಟುಮಾಡಿ ಕ್ಷಯಿಸಿಹೋದ ಒಡನೆಯೇ ಕಾಲವು ಅವನನ್ನು ಬಲಾತ್ಕಾರದಿಂದ ಅಪಹರಿಸಿಬಿಡುತ್ತದೆ.

ನಾಪ್ರಾಪ್ತಕಾಲೋ ಮ್ರಿಯತೇ ವಿದ್ಧಃ ಶರಶತೈರಪಿ ।
ಕುಶಾಗ್ರೇಣಾಪಿ ಸಂಸ್ಪೃಷ್ಟಃ ಪ್ರಾಪ್ತಕಾಲೋ ನ ಜೀವತಿ ॥ ೨೪ ॥

ನೌಷಧಾನಿ ನ ಮಂತ್ರಾಶ್ಚ ನ ಹೋಮಾ ನ ಪುನರ್ಜಪಾಃ ।
ತ್ರಾಯಂತೇ ಮೃತ್ಯುನೋಪೇತಂ ಜರಯಾ ವಾಪಿ ಮಾನವಂ ॥ ೨೫ ॥

ಆಗಾಮಿನಮನರ್ಥಂ ತು ಪ್ರತಿಘಾತಶತೈರಪಿ ।
ನ ನಿವಾರಯಿತುಂ ಶಕ್ತಾಸ್ತತ್ರ ಕಾ ಪರಿದೇವನಾ ॥ ೨೬ ॥

ಯಥಾ ಧೇನುಸಹಸ್ರೇಷು ವತ್ಸೋ ವಿಂದತಿ ಮಾತರಂ ।
ತಥಾ ಪೂರ್ವಕೃತಂ ಕರ್ಮ ಕರ್ತಾರಂ ವಿಂದತೇ ಧ್ರುವಂ ॥ ೨೭ ॥

---

೨೪-೨೫. ಚೇತನನಾಗಿರುವವನು ಕರ್ಮಾವಸಾನದಿಂದ ಮೃತ್ಯುವಿಗೆ ಗೋಚರನಾಗಿಯೇ ಮರಣವನ್ನು ಹೊಂದುತ್ತಾನೆ. ಕರ್ಮಾವಸಾನವಿಲ್ಲದಿರುವಾಗ ಅವನು ನೂರಾರು ಬಾಣಗಳಿಂದ ಭೇದಿಸಲ್ಪಟ್ಟಿದ್ದರೂ ಮರಣಹೊಂದುವುದಿಲ್ಲ. ಕರ್ಮಕ್ಷಯದಿಂದ ಮೃತ್ಯುವಿಗೆ ಗೋಚರವಾದುದೇ ಆದರೆ ಆಗ ದರ್ಭೆಯ ತುದಿಯಿಂದ ಚುಚ್ಚಲ್ಪಟ್ಟರೂ, ಸಾಕು. ಅವನು ಬದುಕುವುದೇ ಇಲ್ಲ. ಅಂತಹ ಮೃತ್ಯು ಗೋಚರನಾದವನನ್ನು ಔಷಧಗಳೇ ಆಗಲಿ ಮಂತ್ರಗಳೇ ಆಗಲಿ ಹೋಮಜಪಾದಿಗಳೇ ಆಗಲಿ ಬದುಕಿಸಲು ಸಾಧ್ಯವಾಗಲಾರವು. ಅವನು ಮುಪ್ಪಿನಿಂದ ಕೂಡಿದ್ದರೂ ಕರ್ಮಕ್ಷಯಾಕ್ಷಯಗಳೇ ಅವನ ಮರಣ ಜೀವನಗಳಿಗೆ ಕಾರಣವಾಗುತ್ತವೆಯೇ ಹೊರತು ಮತ್ತಾವ ಕಾರಣವೂ ಇಲ್ಲವೆಂದು ತಾತ್ಪರ್ಯ.

೨೬-೨೭. ಮುಂದೆ ಅನಿವಾರ್ಯವಾಗಿ ಉಂಟಾಗಬಹುದಾದ ಅನರ್ಥವನ್ನು ನೂರಾರು ಪ್ರತೀಕಾರಗಳಿಂದಲೂ ತಡೆಯಲು ಸಾಧ್ಯವಿಲ್ಲದಿರುವಾಗ ಈ ವಿಷಯದಲ್ಲಿ ದುಃಖಪಟ್ಟು ಫಲವೇನು. ಸಾವಿರಾರು ಹಸುಗಳು ಗುಂಪಾಗಿ ಸೇರಿರುವಾಗಲೂ ಕರುವು ತನ್ನ ತಾಯಿಯನ್ನೇ ಸೇರುವಂತೆ ಜನ್ಮಾಂತರದಲ್ಲಿ ಮಾಡಿದ ಕರ್ಮವು ತನ್ನ ಫಲಾನುಭವವನ್ನುಂಟುಮಾಡಲು ಅದಕ್ಕೆ ಅರ್ಹನಾದ ಕರ್ತೃವನ್ನೇ ಹುಡುಕಿ ಅವನಲ್ಲೇ ಸೇರುತ್ತದೆ.

**ಅವ್ಯಕ್ತಾದೀನಿ ಸರ್ವಾಣಿ ವ್ಯಕ್ತಮಧ್ಯಾನಿ ಚಾಪ್ಯಥ |**
**ಅವ್ಯಕ್ತನಿಧನಾನ್ಯೇವ ತತ್ರಕಾ ಪರಿದೇವನಾ ॥ ೨೮ ॥**

**ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ |**
**ತಥಾ ಜನ್ಮಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೨೯ ॥**

**ಗೃಹ್ಣಾತೀವ ಯಥಾ ವಸ್ತ್ರಂ ತ್ಯಕ್ತ್ವಾ ಪೂರ್ವಧೃತಂ ನರಃ |**
**ಗೃಹ್ಣಾತ್ಯೇವಂ ನವಂ ದೇಹಂ ದೇಹೀ ಕರ್ಮನಿಬಂಧನಃ ॥ ೩೦ ॥**

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ |**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ ೩೧ ॥**

---

೨೮–೨೯. ಸುಖದುಃಖಗಳಿಗೆ ಕಾರಣಗಳಾದ ಕರ್ಮಗಳ ಉತ್ಪತ್ತಿಯೂ ನಮಗೆ ಗೋಚರವಾಗುವಂತಿಲ್ಲ. ಅವುಗಳ ನಾಶವೂ ಸಹ ಗೋಚರವಾಗುವಂತಿಲ್ಲ ಮಧ್ಯಾವಸ್ಥೆಯಲ್ಲಿ ಮಾತ್ರ ಸುಖದುಃಖಗಳೆಂಬ ಕಾರ್ಯಾನುಭವದಿಂದ ಅವನ್ನು ಊಹಿಸಿ ತಿಳಿಯಲು ಅವಕಾಶವಿದೆ. ಹೀಗಿರುವಾಗ ಮೃತ್ಯುವಿಗೆ ಕಾರಣವಾದ ಕರ್ಮನಾಶವೂ ಅವ್ಯಕ್ತವಾಗಿರುವಲ್ಲಿ ಅದರ ಪ್ರತೀಕಾರಚಿಂತೆಯಿಂದ ಫಲವೇನು. ಇದಕ್ಕಾಗಿ ದುಃಖಿಸಿತಾನೆ ಫಲವೇನು. ದೇಹವನ್ನು ಹೊಂದಿರುವ ಚೇತನಸಿಗೆ ಕೌಮಾರಾವಸ್ಥೆ ಯೌವನಾವಸ್ಥೆ ಮತ್ತು ಮುಪ್ಪು ಸಹ ಹೇಗೆ ಅನಿವಾರ್ಯವೋ ಹಾಗೆಯೇ ಜನ್ಮಾಂತರ ಪ್ರಾಪ್ತಿಯೂ ಅನಿವಾರ್ಯವಾಗಿರುವುದರಿಂದ ಬುದ್ಧಿಶಾಲಿ ಯಾದವನಿಗೆ ಅನಿವಾರ್ಯವಾದ ವಿಷಯದಲ್ಲಿ ದುಃಖಕ್ಕೆ ಕಾರಣವೇ ಇಲ್ಲ.

೩೦–೩೧. ಮನುಷ್ಯನು ಮೊದಲು ತಾನು ಉಪಯೋಗಿಸಿದ್ದ ವಸ್ತ್ರವನ್ನು ಬಿಟ್ಟು ಬೇರೆ ವಸ್ತ್ರವನ್ನು ಸ್ವೀಕರಿಸುವಂತೆ ಕರ್ಮಮೂಲಕವಾದ ದೇಹವನ್ನು ಹೊಂದಿರುವವನೂ ಸಹ ಕರ್ಮಗಳಿಂದುಂಟಾಗಬಹುದಾದ ಸುಖದುಃಖಾನುಭವಕ್ಕೆ ತಕ್ಕ ಹೊಸ ದೇಹವನ್ನೂ ಹೊಂದಿಯೇ ಹೊಂದಬೇಕು. ಈ ದೃಷ್ಟಾಂತದಿಂದ ಅನೇಕ ವಸ್ತ್ರವನ್ನು ಅನುಭವಿಸುವ ದೇಹವು ಮುಂದುಮುಂದಿನ ವಸ್ತ್ರಗಳಿಗೂ ಅನ್ವಯಿಸುವಂತೆ ಅನೇಕ ದೇಹಗಳನ್ನು ಹೊಂದಲು ಅರ್ಹನಾದ ಆತ್ಮನಿಗೂ ಸಹ ಆಯಾಯ ದೇಹದಲ್ಲಿ ಅನುವೃತ್ತಿಯನ್ನು ಹೇಳಲು ಆತ್ಮವಸ್ತುವಿನ ನಿತ್ಯತ್ವವನ್ನು ಹೇಳುತ್ತಾರೆ. ಈ ಆತ್ಮವಸ್ತುವನ್ನು ಶಸ್ತ್ರವೇ ಮೊದಲಾದ ಆಯುಧಗಳು ಛೇದಿಸಲು

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೩೨ ॥**

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮೇವ ಚ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಥ ॥ ೩೩ ॥**

---

ಸಾಧ್ಯವಿಲ್ಲ ಅಗ್ನಿಯೂ ಸುಡಲು ಸಾಧ್ಯವಿಲ್ಲ. ನೀರೂ ಸಹ ತೋಯಿಸಿ ನಾಶಪಡಿಸಲು ಸಾಧ್ಯವಿಲ್ಲ ವಾಯುವೂ ಇದನ್ನು ಶೋಷಿಸುವುದಿಲ್ಲ. (ಲೋಕದಲ್ಲಿ ಭೇದಿಸಲು ಸಮರ್ಥವಾದ ಶಸ್ತ್ರವೇ ಮೊದಲಾದ ಆಯುಧಗಳಾಗಲಿ ಅದಕ್ಕೆ ಸಹಕಾರಿಯಾಗಿಯೂ ಸ್ವತಂತ್ರವಾಗಿಯೂ ನಾಶಪಡಿಸುವ ಅಗ್ನಿ, ವಾಯು, ಜಲ ಮುಂತಾದವೂ ಸಹ ಅನಿತ್ಯವಾದ ದೇಹವನ್ನು ಭೇದನಾದಿಗಳಿಂದ ನಾಶಪಡಿಸುವುವೇ ಹೊರತು ನಿತ್ಯವಾದ ಆತ್ಮವಸ್ತುವನ್ನು ನಾಶಪಡಿಸಲಾರವು. ಇದರಿಂದ ಅನಿತ್ಯವಾದ ದೇಹಕ್ಕೂ ನಿತ್ಯವಾದ ಆತ್ಮವಸ್ತುವಿಗೂ ತಾರತಮ್ಯವನ್ನು ಹೇಳಿ ದೇಹಾತ್ಮವಿವೇಕವನ್ನೂ ಹೇಳಿದಂತಾಯಿತು. ದೇಹವು ಅನಿತ್ಯವಾದರೂ ಕರ್ಮಫಲಾನುಭವಕ್ಕೆ ತಕ್ಕಂತೆ ವಸ್ತ್ರಾಂತರವನ್ನು ಅನುಭವಿಸುವುದಕ್ಕಾಗಿ ಸ್ವಲ್ಪ ಕಾಲವಿದ್ದು ಆ ಅನುಭವವನ್ನು ಹೊಂದುತ್ತದೆ. ಆತ್ಮವಸ್ತುವು ಶಾಶ್ವತವಾದುದರಿಂದ ಅನೇಕ ದೇಹಗಳನ್ನೂ ಕರ್ಮಾನುಗುಣವಾಗಿ ಹೊಂದುತ್ತದೆ. ದೇಹವು ಬೇರೆ ವಸ್ತ್ರವನ್ನು ಹೊಂದುವುದೂ ಆತ್ಮನ ಕರ್ಮಫಲವೇ ಆಗಿದೆ. ಆದುದರಿಂದ ಆ ಆತ್ಮನಿಗೆ ಬೇರೆ ವಸ್ತ್ರವನ್ನು ಹೊಂದುವಂತೆಯೇ ಬೇರೆ ದೇಹಪ್ರಾಪ್ತಿಯೂ ಕರ್ಮಾನುಗುಣವಾದುದರಿಂದ ವಸ್ತ್ರದಂತೆಯೇ ದೇಹಗಳು ಆತ್ಮನಿಗೆ ತಪ್ಪಿದ್ದಲ್ಲವೆಂದು ತಾತ್ಪರ್ಯ.)

೩೨-೩೩. ಇಂತಹ ಆತ್ಮವಸ್ತುವಿನ ನಿತ್ಯತ್ವವನ್ನೇ ಉಪಪಾದಿಸುತ್ತಾರೆ. ಈ ಆತ್ಮನು ಶಸ್ತ್ರಾದಿಗಳಿಂದ ಕತ್ತರಿಸಲ್ಪಡತಕ್ಕವನೂ ಅಲ್ಲ. ಅಗ್ನಿಯಿಂದ ದಹಿಸಲ್ಪಡತಕ್ಕವನೂ ಅಲ್ಲ. ಜಲದಿಂದ ತೊಯಿಸಲ್ಪಟ್ಟು ನಾಶಪಡಿಸಲ್ಪಡತಕ್ಕವನೂ ಅಲ್ಲ. ವಾಯುವಿನಿಂದ ಶೋಷಿಸಿ ನಾಶಪಡಿಸಲ್ಪಡತಕ್ಕವನೂ ಅಲ್ಲ. ಇವನು ನಿತ್ಯನಾಗಿಯೂ ವ್ಯಾಪಕನಾಗಿಯೂ ಸ್ಥಿರನಾಗಿಯೂ ಅನಾದಿಯಾಗಿಯೂ ಇರುವುದೇ ಇದಕ್ಕೆ ಕಾರಣ. ಮತ್ತು ಈ ಆತ್ಮನು ಇತರ ಪ್ರಾಕೃತ ವಸ್ತುಗಳಂತೆ ಗೋಚರನೂ ಅಲ್ಲ. ಊಹಿಸಲು ಶಕ್ಯನೂ ಅಲ್ಲ. ರೂಪಾಂತರದಿಂದ ವಿಕಾರಿಯೂ ಆಗುವುದಿಲ್ಲ ಆದುದರಿಂದ ನಿತ್ಯನಾದ ಆತ್ಮನಿಗೆ ಕರ್ಮಾನುಗುಣವಾದ ದೇಹಾಂತರ ಪ್ರಾಪ್ತಿಯು ಅನಿವಾರ್ಯವಾದುದರಿಂದ ಈ ದೇಹನಾಶಕ್ಕಾಗಿ ದುಃಖಪಡಲು ಕಾರಣವೇ ಇಲ್ಲ.

ಆಶ್ಚರ್ಯವತ್ಪಶ್ಯತಿ ಕಶ್ಚಿದೇನ-
ಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ
ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥ ೩೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಬಾಂಧವ ಸಮಾಶ್ವಾಸನಂ ನಾಮ ಅಷ್ಟಸಪ್ತತಿತಮೋಽಧ್ಯಾಯಃ

೩೪. ಇಂತಹ ಆತ್ಮವಸ್ತುವು ತಿಳಿಯಲಶಕ್ಯವೆಂಬುದನ್ನೇ ನಿರೂಪಿಸುತ್ತಾರೆ. ಇಂತಹ ಸಕಲವಸ್ತು ವಿಜಾತೀಯವಾದ ಈ ಆತ್ಮನನ್ನು ಲೋಕವಿಲಕ್ಷಣ ವಾದುದರಿಂದ ಆಶ್ಚರ್ಯರೂಪದಿಂದಿರುವವನನ್ನಾಗಿ ಒಬ್ಬಾನೊಬ್ಬನು ತಿಳಿಯು ತ್ತಾನೆ. (ಸಾಮಾನ್ಯಜನರಿಗೆ ದೇಹಾತ್ಮಭ್ರಮದಿಂದ ಈ ವಿಧವಾದ ತಿಳುವಳಿಕೆಯೂ ಉಂಟಾಗುವುದಿಲ್ಲವೆಂದು ತಾತ್ಪರ್ಯ) ಅದರಲ್ಲಿಯೂ ಸುಕೃತವಿಶೇಷದಿಂದ ಕೂಡಿ ತಪಸ್ವಿಯಾಗಿರುವ ಒಬ್ಬಾನೊಬ್ಬನು ಈ ವಿಧವಾದ ಆಶ್ಚರ್ಯಕರವಾದ ಆತ್ಮಸ್ವರೂಪ ವನ್ನು ಮತ್ತೊಬ್ಬನಿಗೆ ಹೇಳುತ್ತಾನೆ. (ಎಲ್ಲರಿಗೂ ಇದು ಅವಶ್ಯಕವೆಂದು ತಾತ್ಪರ್ಯ) ಹೀಗೆಯೇ ಆಶ್ಚರ್ಯಕರವಾದ ಈ ಆತ್ಮನನ್ನು ಸುಕೃತಿಯಾದ ಒಬ್ಬನು ಆದರದಿಂದ ಕೇಳುತ್ತಾನೆ (ಸಾಮಾನ್ಯ ಜನರಿಗೆ ಅಸಂಭಾವನಾಬುದ್ಧಿಯಿಂದ ಇದನ್ನು ಶ್ರವಣ ಮಾಡಲು ಸಹ ಆದರವುಂಟಾಗುವುದಿಲ್ಲವೆಂದು ತಾತ್ಪರ್ಯ) ಹೀಗೆ ಕೇಳಿದರೂ ಕೂಡ ಆತ್ಮಜ್ಞಾನವನ್ನು ಹೊಂದುವ ಸುಕೃತವಿಲ್ಲದವನು ತಿಳುವಳಿಕೆಯನ್ನೂ ಹೊಂದುವುದಿಲ್ಲ. ಇಲ್ಲಿ ತಿಳಿಯತಕ್ಕವನೇ ದುರ್ಲಭನೆಂದೂ ತಿಳಿದರೂ ಮತ್ತೊಬ್ಬನಿಗೆ ಹೇಳುವವನೂ ದುರ್ಲಭನೆಂದೂ ಹೇಳಿದರೂ ಆದರದಿಂದ ಕೇಳುವವನು ಮತ್ತೂ ದರ್ಲಭನೆಂದೂ ಹಾಗೆ ಕೇಳಿದರೂ ಸರಿಯಾಗಿ ತಿಳಿದು ಕೊಳ್ಳುವವನೂ ದುರ್ಲಭ ನೆಂದೂ ಹೇಳುವುದರಿಂದ ಆತ್ಮವಸ್ತುವಿನ ವಿಜಾತೀಯತ್ವವೂ ತಿಳಿಯಲಶಕ್ಯ ನೆಂಬುದೂ ಸಿದ್ಧವಾಗುತ್ತದೆ. ಆದುದರಿಂದ ಈ ಆತ್ಮನ ವಿಷಯದಲ್ಲಿ ಯಾವ ಸಂದೇಹವೂ ಉಂಟಾಗಲು ಕಾರಣವಿಲ್ಲ. ನಾಶವಿಲ್ಲದುದರಿಂದ ಲೋಕಾಂತರ ದಲ್ಲಿಯೂ ಇವನ ಸ್ಥಿತಿಗೆ ಕುಂದಿಲ್ಲ. ಆದುದರಿಂದ ಬಂಧುಗಳು ಮಾಡಿದ ಧರ್ಮಾನುಷ್ಠಾನದಿಂದ ಈ ಆತ್ಮನಿಗೆ ತೃಪ್ತಿಯುಂಟಾಗುವುದರಲ್ಲಿ ಸಂದೇಹವೇನೂ

ಇಲ್ಲ. ದೇಹನಾಶವು ವಸ್ತ್ರನಾಶದಂತೆ ಅನಿವಾರ್ಯವಾದುದರಿಂದ ಇದಕ್ಕಾಗಿ ಬಂಧುಗಳು ದುಃಖಿಸಬೇಕಾದುದಿಲ್ಲ. ಆವನ ತೃಪ್ತಿಗೆ ತಕ್ಕ ಧರ್ಮಾಚರಣೆಯಲ್ಲಿ ತತ್ಪರರಾಗಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ಬಂಧುಗಳ ಸಮಾಶ್ವಾಸನವೆಂಬ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದಿದೆ.



## ಎಪ್ಪತ್ತೆಂಟನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಮೃತನ ಬಂಧುಗಳನ್ನು ಇತರ ಬಂಧುವರ್ಗದವರು ಸಮಾಧಾನಪಡಿಸಬೇಕೆಂದೂ ಅಂತಹ ಸಮಾಶ್ವಾಸನವು ಬಂಧುಗಳ ಕೃತ್ಯವೆಂದೂ ಹೇಳಿ ಅದಕ್ಕೆ ಉಪಯುಕ್ತವಾದ ಕಾಲಗತಿಯ ಅನಿವಾರ್ಯತ್ವವನ್ನು ಬಹುಮುಖವಾಗಿ ವರ್ಣಿಸಿ ದೇಹಾತ್ಮವಿವೇಕದಿಂದ ಆತ್ಮನು ನಿತ್ಯನಾದುದರಿಂದಲೂ ದೇಹವು ವಸ್ತ್ರದಂತೆ ಅನಿತ್ಯವಾದುದರಿಂದಲೂ ಪ್ರಾಜ್ಞರಿಗೆ ಈ ವಿಷಯದಲ್ಲಿ ಶೋಕಕ್ಕೆ ಕಾರಣವಿಲ್ಲವೆಂದೂ ಉಪಪಾದಿಸಲಾಗಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕೋನಾಶೀತಿತಮೋऽಧ್ಯಾಯಃ

**|| ಪುಷ್ಕರ ಉವಾಚ ||**

**ಮೃನ್ಮಯಂ ಭಾಜನಂ ಸರ್ವಂ ಪುನಃಪಾಕೇನ ಶುಧ್ಯತಿ ।**
**ಮದ್ಯೈರ್ಮೂತ್ರಪುರೀಷೈರ್ವಾ ಷ್ಠೀವನೈಃ ಪೂಯಶೋಣಿತೈಃ ॥ ೧ ॥**

**ಸಂಸ್ಪೃಷ್ಟಂ ನೈವ ಶುಧ್ಯೇತ ಪುನಃಪಾಕೇನ ಮೃನ್ಮಯಂ ।**
**ಏತೈರೇವ ತಥಾ ಸ್ಪೃಷ್ಟಂ ತಾಮ್ರಸೌವರ್ಣರಾಜತಂ ॥ ೨ ॥**

---

### ಎಪ್ಪತ್ತೊಂಭತ್ತನೆಯ ಅಧ್ಯಾಯ.

೧-೨. ಮಣ್ಣಿನಿಂದ ಮಾಡಲಾಗಿರುವ ಪಾತ್ರೆಗಳೆಲ್ಲವೂ ಪುನಃ ಪಾಕದಿಂದ ಶುದ್ಧವಾಗುತ್ತವೆ. ಆದರೆ ಆ ಪಾತ್ರೆಗಳಿಗೆ ಮದ್ಯ, ಮೂತ್ರ, ಉಗುಳುವುದು ಕೀವು ರಕ್ತ ಮುಂತಾದ ಅಶುಚಿ ಪದಾರ್ಥಗಳ ಸಂಪರ್ಕ ಉಂಟಾಗಿದ್ದಲ್ಲಿ ಅವುಗಳಿಗೆ ಶುದ್ಧಿಯೇ ಇಲ್ಲ. ಇಂತಹ ಅಶುಚಿಪದಾರ್ಥ ಸಂಸರ್ಗವು ತಾಮ್ರ, ಚಿನ್ನ, ಬೆಳ್ಳಿ, ಮುಂತಾದುವುಗಳಿಂದ ಮಾಡಲ್ಪಟ್ಟ ಪಾತ್ರೆಗಳಿಗೆ ಉಂಟಾದಲ್ಲಿ ಅವುಗಳಿಗೆ ಅಗ್ನಿಯಲ್ಲಿ ಕಾಯಿಸುವುದರಿಂದ ಶುದ್ಧಿಯುಂಟು, ಹಾಗಿಲ್ಲದಿದ್ದರೆ ಇಂತಹ ಪಾತ್ರೆಗಳಿಗೆ ಕೇವಲ ನೀರಿನಲ್ಲಿ ತೊಳೆಯುವುದರಿಂದಲೇ ಶುದ್ಧಿಯುಂಟಾಗುತ್ತದೆ.

ಶುಧ್ಯತ್ಯಾತಾಪಿತಂ ಪಶ್ಚಾದನ್ಯಥಾ ಕೇವಲಾಂಭಸಾ ।
ಅಮ್ಲೋದಕೇನ ತಾಮ್ರಸ್ಯ ಸೀಸಸ್ಯ ತ್ರಪುಸಸ್ತಥಾ ॥ ೩ ॥

ಕ್ಷಾರೇಣ ಶುದ್ಧಿಂ ಕಾಂಸ್ಯಸ್ಯ ಲೋಹಸ್ಯ ಚ ವಿನಿರ್ದಿಶೇತ್ ।
ಮುಕ್ತಾಮಣಿಪ್ರವಾಲಾನಾಂ ಶುದ್ಧಿಃ ಪ್ರಕ್ಷಾಲನೇನ ತು ॥ ೪ ॥

ಅನ್ಯೇಷಾಂ ಚೈವ ಭಾಂಡಾನಾಂ ಸರ್ವಸ್ಯಾಶ್ಮಮಯಸ್ಯ ಚ ।
ಶಾಕರಜ್ಜುಮೂಲಫಲವೈದಲಾನಾಂ ತಥೈವ ಚ ॥ ೫ ॥

ಮಾರ್ಜನಾದ್ಯಜ್ಞಭಾಂಡಾನಾಂ ಪಾಣಿನಾ ಚಾಗ್ನಿಕರ್ಮಣಿ ।
ಉಷ್ಣಾಂಭಸಾ ತಥಾ ಶುದ್ಧಿಃ ಸಸ್ನೇಹಾನಾಂ ವಿನಿರ್ದಿಶೇತ್ ॥ ೬ ॥

ಶಯನಾಸನಯಾನಾನಾಂ ಸ್ಫ್ಯಶೂರ್ಪಶಕಟಸ್ಯ ಚ ।
ಶುದ್ಧಿಃ ಸಂಪ್ರೋಕ್ಷಣಾತ್ ಜ್ಞೇಯಾ ಪಲಾಲೇಂಧನಯೋಸ್ತಥಾ ॥ ೭ ॥

---

೩–೫. ನೀರಿನಿಂದಲೇ ಶುದ್ಧಿಮಾಡುವ ಸಂದರ್ಭದಲ್ಲಿ ತಾಮ್ರವನ್ನು ಹುಳಿಯ ನೀರಿನಿಂದಲೂ ಸೀಸ ಮತ್ತು ತವರ, ಕಂಚು ಈ ಲೋಹಗಳನ್ನು ಉಪ್ಪಿನಿಂದ ಕೂಡಿದ ನೀರಿನಿಂದಲೂ ಶುದ್ಧಿಮಾಡಬೇಕು ಮತ್ತು ರತ್ನ ಹವಳ ಇವುಗಳಿಗೆ ಕೇವಲ ಜಲದ ಕ್ಷಾಲನದಿಂದ ಶುದ್ಧಿಯುಂಟಾಗುತ್ತದೆ. ಇತರ ಸಾಮಾನ್ಯವಾದ ಪಾತ್ರೆಗಳಿಗೂ ಎಲ್ಲಾ ಕಲ್ಲಿನ ಪಾತ್ರೆಗಳಿಗೂ, ಕಾಯಿಪಲ್ಯಗಳು, ಹಗ್ಗ ಹುರಿ, ಗೆಣಸು, ಹಣ್ಣು ಮೊದಲಾದವುಗಳಿಗೂ ಇದೇ ರೀತಿಯಿಂದ ಶುದ್ಧಿಯುಂಟಾಗುತ್ತದೆ.

೬–೭. ಯಜ್ಞದಲ್ಲಿರುವ ಪಾತ್ರೆಗಳಿಗೆ ತೊಳೆಯುವಿಕೆಯಿಂದಲೂ, ಕೈಯಿಂದ ಹಿಡಿದುಕೊಂಡು ಅಗ್ನಿಯಲ್ಲಿ ಕಾಯಿಸುವುದರಿಂದಲೂ ಅವು ಜಿಡ್ಡಿನಿಂದ ಕೂಡಿದ್ದಲ್ಲಿ ಬಿಸಿನೀರಿನಿಂದಲೂ, ಶುದ್ಧಿಯುಂಟಾಗುತ್ತದೆ. ಹಾಸಿಗೆ, ಆಸನ, ಯಾನಗಳು ಯಜ್ಞಸಾಧನ, ಮೊರ, ಗಾಡಿ ಮುಂತಾದವುಗಳಿಗೂ ತರಗು ಸೌದೆ ಮುಂತಾದವುಗಳಿಗೂ ಹೊರಗೆ ಬಿಸಿಲು ಗಾಳಿ ಸಂಪರ್ಕವಾಗಿರುವಂತೆ ಇಡುವುದೇ ಶುದ್ಧಿ.

ಮಾರ್ಜನಾದ್ವೇಶ್ಮನಾಂ ಶುದ್ಧಿಃ ಕ್ಷಿತೌ ಶೋಧನತಃ ಕ್ಷಣಾತ್ ।
ಸಂಮಾರ್ಜಿತೇನ ತೋಯೇನ ವಾಸಸಾಂ ಶುದ್ಧಿರಿಷ್ಯತೇ ॥ ೮ ॥

ಬಹೂನಾಂ ಪ್ರೋಕ್ಷಣಾಚ್ಛುದ್ಧಿಃ ಧಾನ್ಯಾನಾಂ ಚ ವಿನಿರ್ದಿಶೇತ್ ।
ಶುದ್ಧಿರ್ದ್ರುಮಾಣಾಂ ವಿಜ್ಞೇಯಾ ನಿತ್ಯಸತ್ಪವನೇನ ತು ॥ ೯ ॥

ಪ್ರೋಕ್ಷಣಾತ್ಸಂಹತಾನಾಂ ತು ದಾರವಾಣಾಂ ಚ ತಕ್ಷಣಾತ್ ।
ಸಿದ್ಧಾರ್ಥಕಾಣಾಂ ಕಲ್ಕೇನ ಶೃಂಗದಂತಮಯಸ್ಯ ಚ ॥ ೧೦ ॥

ಗೋವಾಲೈಃ ಫಲಪತ್ರಾಣಾಮಸ್ಥ್ನಾಂ ಸ್ಯಾಚ್ಛೃಂಗವತ್ತಥಾ ।
ನಿರ್ಯಾಸಾನಾಂ ಗುಡಾನಾಂ ಚ ಲವಣಾನಾಂ ತಥೈವ ಚ ॥ ೧೧ ॥

ಕುಸುಂಭಕುಂಕುಮಾನಾಂ ಚ ಊರ್ಣಾಕಾರ್ಪಾಸಯೋಸ್ತಥಾ ।
ಪ್ರೋಕ್ಷಣಾತ್ಕಥಿತಾ ಶುದ್ಧಿರಿತ್ಯಾಹ ಭಗವಾನ್ ಹಿ ಸಃ ॥ ೧೨ ॥

---

೮-೯. ತೊಳೆಯುವುದರಿಂದ ಮನೆಯು ಶುದ್ಧಿಹೊಂದುತ್ತದೆ. ಭೂಮಿಗೆ ಶೋಧನದಿಂದ ಶುದ್ಧಿಯುಂಟಾಗುತ್ತದೆ. ಶುದ್ಧವಾದ ನೀರಿನಿಂದ ಬಟ್ಟೆಗಳಿಗೆ ಶುದ್ಧಿಯುಂಟಾಗುತ್ತದೆ. ಹೆಚ್ಚಾಗಿರುವ ಧಾನ್ಯದ ರಾಶಿಗೆ ಪ್ರೋಕ್ಷಣದಿಂದಲೇ ಶುದ್ಧಿ. ಮರಗಳಿಗೆಲ್ಲ ನಿತ್ಯವೂ ಹೊರಗಿರುವ ವಾಯುವಿನಿಂದಲೇ ಶುದ್ಧಿ—

೧೦-೧೧. ಗುಂಪಾಗಿರುವ ಪದಾರ್ಥಗಳಿಗೆ ಪ್ರೋಕ್ಷಣದಿಂದಲೂ, ಮರದ ಪಾತ್ರೆಗಳಿಗೆ ಕೆತ್ತುವುದರಿಂದಲೂ, ಕೊಂಬು, ದಂತ ಇವುಗಳಿಂದ ಮಾಡಿದ ಪದಾರ್ಥಗಳಿಗೆ ಬಿಳಿಯ ಸಾಸವೆಯ ಹಿಂಡಿಯಿಂದಲೂ, ಫಲ ಮತ್ತು ಎಲೆಗಳಿಗೆ ಗೋವಾಲದಿಂದಲೂ, ಮೂಳೆಯ ಪದಾರ್ಥಗಳಿಗೆ ಕೊಂಬಿಗೆ ಹೇಳಿರುವಂತೆಯೂ ಶುದ್ಧಿಯುಂಟಾಗುತ್ತದೆ. ಮರದ ಹಾಲಿನಿಂದುಂಟಾದ ಪದಾರ್ಥಗಳಿಗೂ ಬೆಲ್ಲ ಉಪ್ಪು ಮೊದಲಾದವುಗಳಿಗೂ, ಪ್ರೋಕ್ಷಣದಿಂದಲೇ ಶುದ್ಧಿಯು ಹೇಳಲ್ಪಟ್ಟಿದೆ.

೧೨-೧೩. ಹಾಗೆಯೇ ಕುಸುಂಭೆ, ಕುಂಕುಮ, ಉಣ್ಣೆ, ಹತ್ತಿ ಇವುಗಳಿಗೂ ಪ್ರೋಕ್ಷಣದಿಂದಲೇ ಶುದ್ಧಿ ಎಂದು ಭಗವಂತನೇ ಹೇಳಿರುವನು. ಭೂಮಿಯಲ್ಲಿರುವ ನೀರೂ ಹಾಗೆಯೇ ಕಲ್ಲಿನ ಮೇಲೆ ಇರುವ ನೀರೂ ಶುದ್ಧವಾದುದು ಆದರೆ ಆ ನೀರು

ಭೂಮಿಷ್ಠಮುದಕಂ ಶುದ್ಧಂ ತಥೈವ ಚ ಶಿಲಾಗತಂ ।
ವರ್ಣಗಂಧರಸೈರ್ದುಷ್ಟೈರ್ವರ್ಜಿತಂ ಯದಿ ತದ್ಭವೇತ್ ॥ ೧೩ ॥

ಶುದ್ಧಂ ನದೀಗತಂ ತೋಯಂ ಸರ್ವ ಏವ ತಥಾಕರಾಃ ।
ಶುದ್ಧಂ ಪ್ರಸಾರಿತಂ ಪಣ್ಯಂ ಶುದ್ಧೇ ಚಾಶ್ವಾಜಯೋರ್ಮುಖೇ ॥ ೧೪ ॥

ಮುಖವರ್ಜಂ ಚ ಗೌಃ ಶುದ್ಧಾ ಮಾರ್ಜಾರಃ ಶ್ವಾ ಚ ನೋ ಶುಚಿಃ ।
ಶಯ್ಯಾ ಭಾರ್ಯಾ ಶಿಶುರ್ವಸ್ತ್ರಮುಪವೀತಂ ಕಮಂಡಲುಃ ॥ ೧೫ ॥

ಆತ್ಮನಃ ಕಥಿತಂ ಶುದ್ಧಂ ನ ಪರಸ್ಯ ಕಥಂಚನ ।
ನಾರೀಣಾಂ ಚೈವ ವತ್ಸಾನಾಂ ಶಕುನೀನಾಂ ಶುನಾಂ ಮುಖಂ ॥ ೧೬ ॥

---

ದುಷ್ಟವಾದ ಬಣ್ಣ ಮತ್ತು ವಾಸನೆ, ರುಚಿ ಇವುಗಳಿಂದ ವರ್ಜಿತವಾಗಿರಬೇಕು. (ವರ್ಣದುಷ್ಟವೂ ಗಂಧದುಷ್ಟವೂ ರಸದುಷ್ಟವೂ ಆಗಿರಕೂಡದೆಂದು ತಾತ್ಪರ್ಯ).

೧೪-೧೫. ನದಿಯ ನೀರು ಶುದ್ಧವಾದುದು. ಹಾಗೆಯೇ ಎಲ್ಲಾ ಜಲಾಶಯದ ನೀರೂ ಶುದ್ಧವಾದುದು ಅಂಗಡಿಯಲ್ಲಿ ವಿಕ್ರಯಕ್ಕಾಗಿ ಹರಡಿರುವ ವಸ್ತುವು ಶುದ್ಧವಾದುದು. ಕುದುರೆ ಮತ್ತು ಆಡು ಇವುಗಳ ಮುಖವೂ ಶುದ್ಧವಾದುದು ಗೋವಿನ ಮುಖಭಾಗವು ಹೊರತು ಉಳಿದ ಎಲ್ಲಾ ಭಾಗವೂ ಯಾವಾಗಲೂ ಶುದ್ಧವಾದುದು. ಬೆಕ್ಕು ಮತ್ತು ನಾಯಿ ಇವು ಯಾವಾಗಲೂ ಶುದ್ಧವಲ್ಲ ಹಾಸಿಗೆ, ಹೆಂಡತಿ, ಮಗು, ಬಟ್ಟೆಗಳು ಯಜ್ಞೋಪವೀತ ಕಮಂಡಲು (ಚೊಂಬು) ಇವು ತನ್ನ ಪದಾರ್ಥಗಳೇ ಆಗಿದ್ದಲ್ಲಿ ತನಗಾಗಿ ಯಾವಾಗಲೂ ಶುದ್ಧವಾಗಿರುವುವು. ಮತ್ತೊಬ್ಬನ ಈ ವಸ್ತುಗಳು ತನಗೆ ಯಾವಾಗಲೂ ಶುದ್ಧವಲ್ಲ.

೧೬-೧೭. ತನ್ನ ಪತ್ನಿಯ ಮುಖವು ರತಿಕಾಲದಲ್ಲಿಯೂ ಕರುವಿನ ಮುಖವು ಹಾಲು ಕರೆಯುವ ಕಾಲದಲ್ಲಿಯೂ ಮರದಿಂದ ಹಣ್ಣನ್ನು ಹೊಂದುವ ಕಾಲದಲ್ಲಿ ಪಕ್ಷಿಗಳ ಮುಖವೂ ಬೇಟೆಯಾಡುವ ಕಾಲದಲ್ಲಿ ನಾಯಿನ ಮುಖವೂ ಯಾವಾಗಲೂ ಸ್ವತಃ ಶುದ್ಧವಾಗಿರುತ್ತವೆ. ರಜಸ್ವಲೆಯಾದ ವನಿತೆಯು ನಾಲ್ಕನೆಯ ದಿನದಲ್ಲಿ ಸ್ನಾನಮಾಡಿ ತನ್ನ ಪತಿಯ ಸಮಾಗಮಕ್ಕಾಗಿ ಶುದ್ಧಳಾಗುತ್ತಾಳೆ. ದೇವಕಾರ್ಯ

ರತೌ ಪ್ರಸ್ರವಣೇ ವೃಕ್ಷೇ ಮೃಗಯಾಯಾಂ ಸದಾ ಶುಚಿಃ ।
ಶುದ್ಧಾ ಭರ್ತುಶ್ಚತುರ್ಥೇಽಹ್ನಿ ಸ್ನಾತಾ ನಾರೀ ರಜಸ್ವಲಾ ॥ ೧೭ ॥

ದೈವಕರ್ಮಣಿ ಪಿತ್ರ್ಯೇ ಚ ಪಂಚಮೇಽಹನಿ ಶುಧ್ಯತಿ ।
ಕೃತ್ವಾ ಮೂತ್ರಪುರೀಷಂ ವಾ ಸ್ನಾತ್ವಾ ಭೋಕ್ತುಮನಾಸ್ತಥಾ ॥ ೧೮ ॥

ಭುಕ್ತ್ವಾ ಕ್ಷುತ್ವಾ ತಥಾ ಸುಪ್ತ್ವಾ ಪೀತ್ವಾ ಚಾಂಭೋಽವಗಾಹ್ಯ ಚ ।
ರಥ್ಯಾಮಾಕ್ರಮ್ಯ ವಾಚಾಮೇದ್ವಾಸೋ ವಿಪರಿಧಾಯ ಚ ॥ ೧೯ ॥

ಕೃತ್ವಾ ಮೂತ್ರಪುರೀಷಂ ಚ ಲೇಪಗಂಧಾಪಹಂ ಬುಧಃ ।
ಉದ್ಧೃತೇನಾಂಭಸಾ ಶೌಚಂ ಮೃದಾ ಶೌಚಂ ಸಮಾಚರೇತ್ ॥ ೨೦ ॥

ಮೇಹನೇ ಮೃತ್ತಿಕಾಃ ಪಂಚ ಲಿಂಗೇ ದ್ವೇ ಪರಿಕೀರ್ತಿತೇ ।
ಏಕಸ್ಮಿನ್ವಿಂಶತಿರ್ಹಸ್ತೇ ದ್ವಯೋರ್ಜ್ಞೇಯಾಶ್ಚತುರ್ದಶ ॥ ೨೧ ॥

---

ದಲ್ಲಿಯಾಗಲಿ, ಪಿತೃಕಾರ್ಯದಲ್ಲಿಯಾಗಲಿ ಅವಳು ಅನ್ವಯಿಸುವ ಸಂದರ್ಭದಲ್ಲಿ ಐದನೆಯ ದಿನ ಸ್ನಾನಮಾಡಿಯೇ ಅವಳು ಶುದ್ಧಳಾಗಿ ಆ ಕಾರ್ಯದಲ್ಲಿ ಅನ್ವಯಿಸಬೇಕು.

೧೮–೧೯. ಮಲಮೂತ್ರ ವಿಸರ್ಜನೆ ಮಾಡಿದ ಕಾಲದಲ್ಲಿಯೂ, ಸ್ನಾನ ಮಾಡಿದ ಮೇಲೆಯೂ, ಊಟಮಾಡುವ ಮೊದಲೂ, ಊಟಮಾಡಿದ ನಂತರವೂ, ಶೀನುಬಂದ ನಂತರವೂ, ಮಲಗಿ ಎದ್ದನಂತರವೂ, ನೀರು ಕುಡಿದನಂತರವೂ, ಜಲದಲ್ಲಿ ಪ್ರವೇಶಿಸಿದನಂತರವೂ, ರಾಜಬೀದಿಯಲ್ಲಿ ತಿರುಗಿಬಂದ ಅನಂತರವೂ ಬಟ್ಟೆಯನ್ನು ಉಟ್ಟುಕೊಂಡ ಮೇಲೂ, ಸಹ ಆಚಮನಮಾಡಿ ಶುದ್ಧನಾಗಬೇಕು. ಪಂಡಿತನಾದವನು ಮಲವಿಸರ್ಜನೆ ಮಾಡಿದಲ್ಲಿ ಅದರಿಂದುಂಟಾದ ಲೇಪನ ದುರ್ಗಂಧ ಗಳು ಹೋಗುವಂತೆ ಜಲಾಶಯಾದಿಗಳಿಂದ ಬೇರೆಯಾಗಿ ತರಲ್ಪಟ್ಟ ನೀರಿನಿಂದಲೂ, ಮೃತ್ತಿಕೆಯಿಂದಲೂ ಶೌಚಮಾಡಿಕೊಳ್ಳಬೇಕು. (ಮಹಾ ಜಲಾಶಯಗಳಲ್ಲಿ ಶೌಚ ವನ್ನು ಮಾಡಕೂಡದೆಂದು ತಾತ್ಪರ್ಯ.)

೨೧–೨೨. ಗುದಸ್ಥಾನದಲ್ಲಿ ಐದುಸಲ ಮೃತ್ತಿಕೆಯನ್ನೂ, ಲಿಂಗದಲ್ಲಿ ಎರಡಾವರ್ತಿಯೂ, ಒಂದೇ ಕೈಯಲ್ಲಿ ಇಪ್ಪತ್ತು ಬಾರಿಯಾಗಿಯೂ, ಎರಡು ಕೈಗಳಿಂದಲೂ ಶೌಚನದಲ್ಲಿ ಹದಿನಾಲ್ಕು ಬಾರಿಯಾಗಿಯೂ, ಉಗುರುಗಳನ್ನು ಚೆನ್ನಾಗಿ ತೊಳೆದು

ತಿಸ್ರಸ್ತು ಮೃತ್ತಿಕಾ ಜ್ಞೇಯಾಃ ಕೃತ್ವಾ ತು ನಖಶೋಧನಂ ।
ತಿಸ್ರಸ್ತಿಸ್ರಃ ಪಾದಯೋಶ್ಚ ಶೌಚಕಾಮ್ಯಸ್ತು ನಿತ್ಯದಾ ॥ ೨೨ ॥

ಶೌಚಮೇತದ್ಗೃಹಸ್ಥಾನಾಂ ದ್ವಿಗುಣಂ ಬ್ರಹ್ಮಚಾರಿಣಾಂ ।
ತ್ರಿಗುಣಂ ತು ವನಸ್ಥಾನಾಂ ಯತೀನಾಂ ಚ ಚತುರ್ಗುಣಂ ॥ ೨೩ ॥

ಮೃತ್ತಿಕಾ ಚ ವಿನಿರ್ದಿಷ್ಟಾ ತ್ರಿಪೂರ್ವಂ ಪೂರ್ಯತೇ ಯಯಾ ।
ಶುದ್ಧಿಶ್ಚ ಕಾಚಭಾಂಡಾನಾಂ ಕೇವಲೇನ ತಥಾಂಭಸಾ ॥ ೨೪ ॥

ಶ್ರೀಫಲೈರಂಶುಪಟ್ಟಾನಾಂ ಕ್ಷೌಮಾಣಾಂ ಗೌರಸರ್ಷಪೈಃ ।
ಶುದ್ಧಿಃ ಪದ್ಮಾಕ್ಷತೋಯೇನ ಮೃಗಲೋಮ್ನಾಂ ಪ್ರಕೀರ್ತಿತಾ ।
ಪುಷ್ಪಾಣಾಂ ಚಂದನಾನಾಂ ಚ ಪ್ರೋಕ್ಷಣಾಚ್ಛುದ್ಧಿರಿಷ್ಯತೇ ॥ ೨೫ ॥

---

ಕೊಂಡಿದ್ದಲ್ಲಿ ಕೈಗಳಿಗೆ ಮೂರು ಮೂರು ಸಲ ಮೃತ್ತಿಕೆಯನ್ನೂ ಕಾಲುಗಳಿಗೂ ಮೂರು ಮೂರು ಸಲ ಮೃತ್ತಿಕೆಯನ್ನೂ ಶುದ್ಧಿಯನ್ನಪೇಕ್ಷಿಸುವವನು ಮಾಡಿಕೊಳ್ಳಬೇಕು.

೨೩–೨೪. ಇಲ್ಲಿ ಹೇಳಿರುವ ಮೃತ್ತಿಕಾಸಂಖ್ಯೆಯೂ, ಶೌಚವೂ ಸಹ ಗೃಹಸ್ಥನಿಗೆ ಅನ್ವಯಿಸತಕ್ಕದ್ದು. ಬ್ರಹ್ಮಚಾರಿಗೆ ಇದರ ಎರಡರಷ್ಟು, ವಾನಪ್ರಸ್ಥನಿಗೆ ಮೂರರಷ್ಟು ಸಂನ್ಯಾಸಿಗೆ ನಾಲ್ಕರಷ್ಟೂ ಅನ್ವಯಿಸುತ್ತದೆ. ಮೃತ್ತಿಕೆಯ ಪರಿಮಾಣವೂ ಸಹ ಕೈಯ್ಯಿನ ಮೂರು ಬೆರಳುಗಳಲ್ಲಿ ಅಡಕವಾಗುವಷ್ಟು ಇರಬೇಕು. ಗಾಜಿನ ಪಾತ್ರೆಗಳಿಗೆ ಕೇವಲ ಜಲದಿಂದಲೇ ಶುದ್ಧಿ.

೨೫–೨೬ ಕಲಾಪತ್ತಿನ ಪಟ್ಟೆ ವಸ್ತ್ರಗಳಿಗೆ ಬಿಲ್ವಪತ್ರೆಯ ಹಣ್ಣಿನಿಂದಲೂ ಕೇವಲ ಪಟ್ಟವಸ್ತ್ರಗಳಿಗೆ ಬಿಳಿಯ ಸಾಸವೆಯಿಂದಲೂ, ಕೃಷ್ಣಾಜಿನವೇ ಮೊದಲಾದವುಗಳಿಗೆ ಪದ್ಮಾಕ್ಷದ (ತಾವರೆಯ ಬೀಜ) ಜಲದಿಂದಲೂ ಶುದ್ಧಿಯು ಹೇಳಲ್ಪಟ್ಟಿದೆ. ಹೂವು, ಗಂಧ ಇವುಗಳಿಗೆ ಪ್ರೋಕ್ಷಣ ಮಾತ್ರದಿಂದಲೇ ಶುದ್ಧಿಯುಂಟಾಗುತ್ತದೆ.

ಸಿದ್ಧಾರ್ಥಕೈಃ ಶುದ್ಧಿಮುದಾಹರಂತಿ
ಲೋಮ್ನಾಂ ತಥಾ ಭಾರ್ಗವವಂಶಮುಖ್ಯ ।
ಸರ್ವಸ್ಯ ಜೀವಸ್ಯ ವಿಶುದ್ಧಿರುಕ್ತಾ
ಮೃದಾ ಚ ತೋಯೇನ ವಿಗಂಧಲೇಪಾತ್ ॥ ೨೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ದ್ರವ್ಯಶುದ್ಧಿರ್ನಾಮೈಕೋನಾಶೀತಿತಮೋಽಧ್ಯಾಯಃ

---

ಎಲೈ ಭೃಗುಕುಲೋತ್ತಮನೇ ರೋಮದಿಂದ ಮಾಡಲ್ಪಟ್ಟ ಪದಾರ್ಥಗಳಿಗೆ ಬಿಳಿಯ ಸಾಸವೆಯಿಂದಲೂ ಶುದ್ಧಿಯನ್ನು ಹೇಳುತ್ತಾರೆ. ಪ್ರಾಣಿಗಳಿಗೆ ಮಾತ್ರ ದುರ್ಗಂಧ ಲೇಪಾದಿಗಳನ್ನು ಹೋಗಲಾಡಿಸಿ ಮೃತ್ತಿಕೋದಕದಿಂದ ಶುದ್ಧಿಯುಂಟಾಗುವುದೆಂದು ಹೇಳಲ್ಪಟ್ಟಿದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ದ್ರವ್ಯಶುದ್ಧಿ ಎಂಬ ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದಿದೆ.



## ಎಪ್ಪತ್ತೊಂಭತ್ತನೇ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಶುದ್ಧಿಯ ಪ್ರಸಂಗದಿಂದ ಮನುಷ್ಯನ ಉಪಯೋಗಕ್ಕೆ ಸಂಬಂಧಿಸಿರುವ ಎಲ್ಲಾ ಪದಾರ್ಥಗಳಿಗೂ ಶಾಸ್ತ್ರಸಿದ್ಧವಾದ ಶುದ್ಧಿಕ್ರಮವನ್ನು ನಿರೂಪಿಸಿರುತ್ತಾರೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಶೀತಿತಮೋಽಧ್ಯಾಯಃ

|| ರಾಮ ಉವಾಚ ||

ವರ್ಣಾನಾಮಾಶ್ರಮಾಣಾಂ ಚ ವೇತ್ತಿ ಸರ್ವಮಿದಂ ಭವಾನ್ ।

|| ಪುಷ್ಕರ ಉವಾಚ ||

ಅಹಿಂಸಾ ಸತ್ಯವಚನಂ ತೇ ಸ್ಯಾದ್ಭೂತೇಷ್ವನುಗ್ರಹಃ || ೧ ||

ತೀರ್ಥಾನುಸರಣಂ ದಾನಂ ಬ್ರಹ್ಮಚರ್ಯಮಮತ್ಸರಂ ।
ದೇವದ್ವಿಜಾತಿಶುಶ್ರೂಷಾ ಗುರೂಣಾಂ ಚ ಭೃಗೂತ್ತಮ || ೨ ||

ಶ್ರವಣಂ ಸರ್ವಧರ್ಮಾಣಾಂ ಪಿತೄಣಾಂ ಪೂಜನಂ ತಥಾ ।
ಭಕ್ತಿಶ್ಚ ಭೂಪತೌ ನಿತ್ಯಂ ತಥಾ ಸಚ್ಛಾಸ್ತ್ರನೇತ್ರತಾ || ೩ ||

ಆನೃಶಂಸ್ಯಂ ತಿತಿಕ್ಷಾ ಚ ತಥಾ ಚಾಸ್ತಿಕ್ಯಮೇವ ಹಿ ।
ಧರ್ಮಸಾಮಾನ್ಯಮೇತತ್ತೇ ಕಥಿತಂ ಭೃಗುಸತ್ತಮ || ೪ ||

---

### ಎಂಭತ್ತನೆಯ ಅಧ್ಯಾಯ.

೧–೩. ರಾಮನು ಕೇಳುತ್ತಾನೆ :—ವರ್ಣಾಶ್ರಮ ಧರ್ಮಗಳೆಲ್ಲವನ್ನೂ ನೀನು ತಿಳಿದಿರುವೆಯಲ್ಲವೇ (ಅದನ್ನೂ ಹೇಳಬೇಕೆಂದು ತಾತ್ಪರ್ಯ.)

೪–೫. ಪುಷ್ಕರನು ಹೇಳುತ್ತಾನೆ:—ಈ ರೀತಿ ಸದ್ಬುದ್ಧಿಯುಳ್ಳ ನಿನಗೆ ಅಹಿಂಸಾ ಬುದ್ಧಿಯೂ, ಸತ್ಯಭಾಷಣವೂ, ಪ್ರಾಣಿಗಳಲ್ಲಿ ದಯೆಯೂ, ಉಂಟಾಗಲಿ. ತೀರ್ಥಾದಿಗಳ ಸೇವನವೂ, ಬ್ರಹ್ಮಚರ್ಯವೂ (ಇಂದ್ರಿಯನಿಗ್ರಹ) ಪರರ ವೃದ್ಧಿಯಲ್ಲಿ ಮತ್ಸರವಿಲ್ಲದಿರುವಿಕೆಯೂ, ದೇವಬ್ರಾಹ್ಮಣರ ಶುಶ್ರೂಷೆಯೂ, ಗುರುಗಳ ಶುಶ್ರೂಷೆಯೂ, ಸರ್ವಧರ್ಮಗಳ ಶ್ರವಣವೂ, ಪಿತೃಗಳನ್ನು ಪೂಜಿಸುವಿಕೆಯೂ, ರಾಜನಲ್ಲಿ

ಯಜನಂ ಯಾಜನಂ ದಾನಂ ತಥೈವಾಧ್ಯಾಪನಕ್ರಿಯಾ ।
ಪ್ರತಿಗ್ರಹಂ ಚಾಧ್ಯಯನಂ ವಿಪ್ರಕರ್ಮಾಣಿ ನಿರ್ದಿಶೇತ್ ॥ ೫ ॥

ದಾನಮಧ್ಯಯನಂ ಚೈವ ಯಜನಂ ಚ ಯಥಾವಿಧಿ ।
ಕ್ಷತ್ರಿಯಸ್ಯ ಚ ವೈಶ್ಯಸ್ಯ ಕರ್ಮೇದಂ ಪರಿಕೀರ್ತಿತಂ ॥ ೬ ॥

ಕ್ಷತ್ರಿಯಸ್ಯ ವಿಶೇಷಸ್ತು ಪ್ರಜಾನಾಂ ಪರಿಪಾಲನಂ ।
ಕೃಷಿಗೋರಕ್ಷವಾಣಿಜ್ಯಂ ವೈಶ್ಯಸ್ಯ ಪರಿಕೀರ್ತಿತಂ ॥ ೭ ॥

ಶೂದ್ರಸ್ಯ ದ್ವಿಜಶುಶ್ರೂಷಾ ಸರ್ವಶಿಲ್ಪಾನಿ ಚಾಪ್ಯಥ ।
ಬ್ರಾಹ್ಮಣಾಃ ಕ್ಷತ್ರಿಯೋ ವೈಶ್ಯಸ್ತ್ರಯೋ ವರ್ಣಾ ದ್ವಿಜಾತಯಃ ॥ ೮ ॥

---

ಭಕ್ತಿಯೂ, ಯಾವಾಗಲೂ ಸಮೀಚೀನವಾದ ಶಾಸ್ತ್ರಜ್ಞಾನದಿಂದ ವ್ಯವಹರಿಸುವಿಕೆಯೂ, ಸರ್ವರ ವಿಷಯದಲ್ಲೂ ದಯೆಯಿಂದ ಸೌಜನ್ಯವರ್ತನೆ ಸಹನಶಕ್ತಿ ಮತ್ತು (ನಾಸ್ತಿಕನಾಗದೆ) ಆಸ್ತಿಕನಾಗಿರುವಿಕೆ ಇವೆಲ್ಲವೂ ಎಲ್ಲಾ ವರ್ಣದವರಿಗೂ ಎಲ್ಲಾ ಆಶ್ರಮದಲ್ಲೂ ಸಾಮಾನ್ಯ ಧರ್ಮಗಳು ಸಾಮಾನ್ಯ ಧರ್ಮಗಳನ್ನು ಈ ರೀತಿ ನಿನಗೆ ಹೇಳಿದ್ದಾಯಿತು. ಯಜನ(ಯಜ್ಞಮಾಡುವುದು) ಯಾಜನ(ಯಜ್ಞಮಾಡಿಸುವುದು) ದಾನ ಮತ್ತು ಅಧ್ಯಾಪನ, ಪ್ರತಿಗ್ರಹ (ದಾನವನ್ನು ಪಡೆಯುವುದು.) ಅಧ್ಯಯನ ಇವು ಬ್ರಾಹ್ಮಣನಿಗೆ ವಿಶೇಷ ಧರ್ಮಗಳಾಗಿ ಹೇಳಲ್ಪಟ್ಟಿವೆ.

೬–೭. ದಾನ, ಅಧ್ಯಯನ, ಯಥಾವಿಧಿಯಾದ ಯಜ್ಞಾಚರಣ ಇವು ಕ್ಷತ್ರಿಯನಿಗೂ, ವೈಶ್ಯನಿಗೂ ಸಹ ಅನ್ವಯಿಸುತ್ತವೆ. (ಬ್ರಾಹ್ಮಣನಿಗೆ ಹೇಳಿರುವ ವಿಶೇಷ ಧರ್ಮಗಳಲ್ಲಿ ಕ್ಷತ್ರಿಯ ವೈಶ್ಯರಿಗೂ ಇವು ಅನ್ವಯಿಸುತ್ತವೆ ಎಂದು ತಾತ್ಪರ್ಯ.) ಕ್ಷತ್ರಿಯನಿಗೆ ಪ್ರಜಾಪರಿಪಾಲನವೆಂಬುದು ವಿಶೇಷ ಧರ್ಮ (ಇದು ಬ್ರಾಹ್ಮಣ ವೈಶ್ಯರಿಗೆ ಅನ್ವಯಿಸುವುದಿಲ್ಲವೆಂದು ತಾತ್ಪರ್ಯ.) ಕೃಷಿ, ಗೋರಕ್ಷಣ, ವಾಣಿಜ್ಯ ಇವು ವೈಶ್ಯನ ವಿಶೇಷಧರ್ಮಗಳು (ಬ್ರಾಹ್ಮಣ ಕ್ಷತ್ರಿಯರಿಗೆ ಅನ್ವಯಿಸುವುದಿಲ್ಲವೆಂದು ತಾತ್ಪರ್ಯ)

೮–೯. ಶೂದ್ರನಿಗೆ ದ್ವಿಜರ ಶುಶ್ರೂಷೆ ಮತ್ತು ಸರ್ವವಿಧವಾದ ಶಿಲ್ಪ ಇವು ವಿಶೇಷಧರ್ಮಗಳು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು, ದ್ವಿಜಾತಿಗಳೆಂದು ಹೇಳಲ್ಪಡುತ್ತಾರೆ. ಏತಕ್ಕೆಂದರೆ ಅವರಿಗೆ ಉಪನಯನವೆಂಬುದು ಎರಡನೆಯ ಜನ್ಮ (ದ್ವಿಜಾತಿ ಎಂದರೆ ಎರಡಾವರ್ತಿ ಹುಟ್ಟಿದವನೆಂದರ್ಥ. ಎರಡನೆಯ ಜನ್ಮವೇ ಉಪನಯನ)

**ತೇಷಾಂ ಜನ್ಮದ್ವಿತೀಯಂ ತು ವಿಜ್ಞೇಯಂ ಮೌಂಜಿಬಂಧನಂ ।**
**ಆಚಾರ್ಯಸ್ತು ಪಿತಾ ತತ್ರ ಸಾವಿತ್ರೀ ಜನನೀ ತಥಾ ।**
**ಬ್ರಾಹ್ಮಣಕ್ಷತ್ರಿಯವಿಶಾಂ ಮೌಂಜೀಬಂಧನಜನ್ಮನಿ** ॥ ೯ ॥

**ವೃತ್ತ್ಯಾ ದ್ವಿಜಾಃ ಶೂದ್ರಸಮಾ ಭವಂತಿ**
**ಯಾವನ್ನ ವೇದೇ ಪ್ರಭವಂತಿ ರಾಮ ।**
**ತತಃ ಪರಂ ತೇ ದ್ವಿಜತಾಂ ಲಭಂತೇ**
**ಸಮಸ್ತಕಾರ್ಯೇಷ್ವಧಿದೈವತಂ ಚ** ॥ ೧೦ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ವರ್ಣಧರ್ಮಾಧ್ಯಾಯೋ ನಾಮಾಶೀತಿತಮೋಽಧ್ಯಾಯಃ**

---

ಉಪನಯನವೆಂಬ ಆ ಎರಡನೆಯ ಜನ್ಮದಲ್ಲಿ ಆಚಾರ್ಯನೇ ತಂದೆಯಂತೆ ಉತ್ಪಾದಕನಾಗುತ್ತಾನೆ. ಸಾವಿತ್ರಿಯೇ ತಾಯಿ. ಇದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದವರಿಗೂ ಸಾಧಾರಣ. ಆದುದರಿಂದ ಇವರೇ ದ್ವಿಜಾತಿಗಳೆಂದು ತಿಳಿಯಬೇಕು. (ಇಂತಹ ದ್ವಿಜರ ಶುಶ್ರೂಷೆಯೇ ಶೂದ್ರನ ವಿಶೇಷ ಧರ್ಮವೆಂದು ತಾತ್ಪರ್ಯ.)

೧೦. ಎಲೈ ಭಾರ್ಗವನೇ, ದ್ವಿಜರಾದವರು ತಮ್ಮ ವೃತ್ತಿಯಲ್ಲಿರದೆ ಶೂದ್ರವೃತ್ತಿಯಲ್ಲಿದ್ದಲ್ಲಿ ಅವರಿಗೆ ಸಮಾನರೇ ಆಗುತ್ತಾರೆ. ಅವರು ವೇದದ ಸಂಬಂಧದಿಂದ ಉಂಟಾಗಬಹುದಾದ ಮಹಿಮೆಯನ್ನು ಹೊಂದಲಾರರು ಆ ವೃತ್ತಿಯನ್ನು ಬಿಟ್ಟು ತಮ್ಮ ವೃತ್ತಿಗೇ ಬಂದು ಬ್ರಾಹ್ಮಣ್ಯವನ್ನು ಸಫಲಗೊಳಿಸಿಕೊಂಡಲ್ಲಿ ಅವರೇ ಪೂಜ್ಯರಾಗಿ ಎಲ್ಲಾ ಕಾರ್ಯಗಳಲ್ಲೂ ಮುಂದಾಳಾಗಿ ಮಾನ್ಯರಾಗುತ್ತಾರೆ. (ಇದು ಆಪತ್ಕಾಲದಲ್ಲಿ ಶೂದ್ರವೃತ್ತಿಯನ್ನನುಸರಿಸಿದ ದ್ವಿಜನ ವಿಷಯ.)

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ವರ್ಣಧರ್ಮಾಧ್ಯಾಯವೆಂಬ ಎಂಭತ್ತನೆಯ ಅಧ್ಯಾಯ ಮುಗಿದಿದೆ.



## ಎಂಭತ್ತನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಭಾರ್ಗವನು ಮಾಡಿದ ವರ್ಣಾಶ್ರಮ ಧರ್ಮದ ಪ್ರಶ್ನೆಗೆ ಅನುಗುಣವಾಗಿ ವರ್ಣಸಾಮಾನ್ಯಕ್ಕೂ ಇರುವ ಸಾಧಾರಣ ಧರ್ಮಗಳನ್ನೂ ಬ್ರಾಹ್ಮಣಾದಿವರ್ಣ ವಿಶೇಷಗಳಿಗಿರುವ ವಿಶೇಷಧರ್ಮವನ್ನೂ ವಿವರಿಸಿರುತ್ತಾರೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕಾಶೀತಿತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಆನುಲೋಮ್ಯೇನ ವರ್ಣಾನಾಂ ಜಾತಿರ್ಮಾತೃಸಮಾ ಸ್ಮೃತಾ |**
**ಚಂಡಾಲೋ ಬ್ರಾಹ್ಮಣೀಪುತ್ರಃ ಶೂದ್ರಃ ಸ್ಯಾತ್ಪ್ರತಿಲೋಮಜಃ || ೧ ||**

**ಮಾಗಧಶ್ಚ ತಥಾ ವೈಶ್ಯಾಚ್ಛೂದ್ರಾದಾಯೋಗವೋ ಭವೇತ್ |**
**ವೈಶ್ಯಾಯಾಃ ಪ್ರಾತಿಲೋಮ್ಯೇನ ಪ್ರತಿಲೋಮಾತ್ಸಹಸ್ರಶಃ || ೨ ||**

---

### ಎಂಭತ್ತೊಂದನೆಯ ಅಧ್ಯಾಯ.

೧–೨. ಪುಷ್ಕರನು ವರ್ಣಗಳಲ್ಲಿ ಜಾತಿನಿಯಮವನ್ನು ಹೇಳುತ್ತಾನೆ ವರ್ಣಗಳಲ್ಲಿ ಅನುಲೋಮಕ್ರಮದಿಂದ (ಅಂದರೆ ಬ್ರಾಹ್ಮಣನೇ ಮೊದಲಾದ ವರ್ಣದವರಿಗೆ ತಮಗಿಂತ ಕನಿಷ್ಠವಾದ ಜಾತಿಯ ಸ್ತ್ರೀಯರನ್ನು ಮದುವೆಯಾದಾಗ ಹುಟ್ಟುವ ಮಕ್ಕಳು ಅನುಲೋಮಜರಾಗುತ್ತಾರೆ. ನಿಕೃಷ್ಟವರ್ಣದವನಿಂದ ಉತ್ಕೃಷ್ಟ ವರ್ಣದ ಸ್ತ್ರೀಯಲ್ಲಿ ಹುಟ್ಟುವ ಮಕ್ಕಳು ಪ್ರತಿಲೋಮಜರಾಗುತ್ತಾರೆ ಈ ಪ್ರತಿ ಲೋಮಜರೆಲ್ಲರೂ ಸಂಕರವರ್ಣದವರಾಗುತ್ತಾರೆ.) ಹುಟ್ಟುವ ಮಕ್ಕಳು ತಾಯಿಗೆ ಸಮಾನವಾದ ಜಾತಿಯನ್ನೇ ಹೊಂದುತ್ತಾರೆ. ಬ್ರಾಹ್ಮಣನಿಗೆ ಬ್ರಾಹ್ಮಣಿಯಲ್ಲಿ ಹುಟ್ಟಿದವನು ಬ್ರಾಹ್ಮಣ, ಕ್ಷತ್ರಿಯಳಲ್ಲಿ ಹುಟ್ಟಿದವನು ಕ್ಷತ್ರಿಯ ಈ ರೀತಿ ತಾಯಿಯ ಜಾತಿಗೆ ಸಮಾನವಾದ ಜಾತಿಯುಳ್ಳವರಾಗುತ್ತಾರೆ. ಪ್ರತಿಲೋಮದಿಂದುಂಟಾದವ ರಲ್ಲಿ ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರನಿಂದ ಜನಿಸಿದವನು ಚಂಡಾಲನೆಂಬ ಸಂಕರ ಜಾತಿಯವನಾಗುತ್ತಾನೆ. ವೈಶ್ಯನಿಂದ ಹುಟ್ಟಿದವನು ಮಾಗಧನಾಗುತ್ತಾನೆ.

**ವಿವಾಹಃಸದೃಶೈಸ್ತೇಷಾಂ ನೋತ್ತಮೈರ್ನಾಧಮೈಸ್ತಥಾ ।**
**ಚಂಡಾಲಕರ್ಮ ನಿರ್ದಿಷ್ಟಂ ವಧ್ಯಾನಾಂ ಘಾತನಂ ತಥಾ ॥ ೩ ॥**

**ಸ್ತ್ರೀಜೀವನಂ ಚ ತದ್ರಕ್ಷಾ ಪ್ರೋಕ್ತಂ ವೈದೇಹಕಸ್ಯ ಚ ।**
**ಸೂತಾನಾಮಶ್ವಸಾರಥ್ಯಂ ಪುಕ್ಕಸಾನಾಂ ಚ ವ್ಯಾಧತಾ ॥ ೪ ॥**

**ಸ್ತುತಿಕ್ರಿಯಾ ಮಾಗಧಾನಾಂ ತಥಾ ಚಾಯೋಗವಸ್ಯ ಚ ।**
**ರಂಗಾವತರಣಂ ಪ್ರೋಕ್ತಂ ತಥಾ ಶಿಲ್ಪೈಶ್ಚ ಜೀವನಂ ॥ ೫ ॥**

**ಸೂತಾನಾಮಸ್ತಿ ಸಂಸ್ಕಾರಸ್ತಥಾ ವೈ ಯಾಜನಕ್ರಿಯಾ ।**

---

(ಇಲ್ಲಿ ಕ್ಷತ್ರಿಯ ಸ್ತ್ರೀಯಲ್ಲಿ ಎಂದು ಶೇಷಪೂರಣಮಾಡಿಕೊಳ್ಳಬೇಕು. ಪ್ರತಿಲೋಮ ಜಾತಿಯ ಪ್ರಸಂಗವಿರುವುದರಿಂದಲೂ ಮುಂದೆ ವೈಶ್ಯಾಯಾಃ ಎಂದು ಮತ್ತೊಂದು ಪ್ರತಿಲೋಮವನ್ನು ಹೇಳಿರುವುದರಿಂದಲೂ) ಹಾಗೆಯೇ ವೈಶ್ಯಸ್ತ್ರೀಯಲ್ಲಿ ಶೂದ್ರನಿಂದ ಜನಿಸಿದವನು ಆಯೋಗವನೆಂಬ ಸಂಕರಜಾತಿಯವನಾಗುತ್ತಾನೆ. ಹೀಗೆಯೇ ಅನೇಕ ಪ್ರತಿಲೋಮಜಾತಿಗಳುಂಟಾಗುತ್ತವೆ.

೩–೪. ಇಂತಹ ಪ್ರತಿಲೋಮ ಜಾತಿಯವರಿಗೆ ತಮಗೆ ಸಮನಾದವರೊಡನೆ ವಿವಾಹಾದಿ ಸಂಬಂಧಗಳು ಉಂಟಾಗಬೇಕೇ ವಿನಾ ತಮಗಿಂತ ಉತ್ತಮಜಾತಿಯಲ್ಲಾಗಲಿ ಅಧಮಜಾತಿಯಲ್ಲಾಗಲಿ ವಿವಾಹಸಂಬಂಧವು ನಿಷೇಧಿಸಲ್ಪಟ್ಟಿದೆ. ಇವರಲ್ಲಿ ಚಂಡಾಲನೆಂಬ ಸಂಕರಜಾತಿಯವನಿಗೆ ವಧ್ಯಸ್ಥಾನದಲ್ಲಿ ವಧ್ಯರನ್ನು ಕೊಲ್ಲುವುದೇ ಮೊದಲಾದ ಚಂಡಾಲಕರ್ಮವೇ ವಿಹಿತವಾಗಿದೆ. ವೈದೇಹಕನೆಂಬ ಸಂಕರಜಾತಿಯವನಿಗೆ (ಬ್ರಾಹ್ಮಣ ಸ್ತ್ರೀಯಲ್ಲಿ ವೈಶ್ಯನಿಂದ ಹುಟ್ಟಿದವನು ವೈದೇಹಕನೆನಿಸುತ್ತಾನೆ) ಸ್ತ್ರೀಯಿಂದಲೇ ಜೀವಿಕೆ ಮತ್ತು ಅಂತಹ ಸ್ತ್ರೀಗಳ ರಕ್ಷಣೆ ಇವೇ ಕರ್ಮಗಳು. ಸೂತನೆಂಬ ಸಂಕರಜಾತಿಯವನಿಗೆ (ಬ್ರಾಹ್ಮಣಿಯಲ್ಲಿ ಕ್ಷತ್ರಿಯನಿಂದ ಜನಿಸಿದವನು ಸೂತನಾಗುತ್ತಾನೆ) ಕುದುರೆಗಳಿಗೆ ಸಾರಥಿಯಾಗಿರುವಿಕೆ. ಪುಲ್ಕಸರೆಂಬ ಸಂಕರಜಾತಿಯವರಿಗೆ ಬೇಡರ ವೃತ್ತಿಯಿಂದ ಜೀವನ.

೫. ಮಾಗಧನೆಂಬ ಸಂಕರವರ್ಣದವನಿಗೆ ರಾಜಾದಿಗಳನ್ನು ಸ್ತೋತ್ರ ಮಾಡುವುದೇ ತನ್ನ ಕರ್ಮ. ಆಯೋಗವನಿಗೆ ಚಿತ್ರಕಲಾ ಮತ್ತು ಶಿಲ್ಪಗಳಿಂದ ಜೀವನ. ಸೂತರೆಂಬ ಕ್ಷತ್ರಿಯರಿಂದ ಬ್ರಾಹ್ಮಣಿಯಲ್ಲಿ ಜನಿಸಿದವರಿಗೆ ಉಪನಯನಾದಿ ಸಂಸ್ಕಾರಗಳುಂಟು. ಯಜ್ಞಯಾಗಾದಿ ವ್ಯಾಪಾರಗಳೂ ಉಂಟು.

ಬಹಿರ್ಗ್ರಾಮನಿವಾಸಶ್ಚ ಮೃತಚೇಲಸ್ಯ ಧಾರಣಂ　　|| ೬ ||

ಅಸಂಸ್ಪರ್ಶಸ್ತಥೈವಾನ್ಯೈಃ ಚಂಡಾಲಸ್ಯ ವಿಧೀಯತೇ |
ಬ್ರಾಹ್ಮಣಾರ್ಥೇ ಗವಾರ್ಥೇ ವಾ ದೇಹತ್ಯಾಗಾದುಪಸ್ಕೃತಃ　　|| ೭ ||

ಸ್ತ್ರೀಬಾಲಾಭ್ಯುಪಪತ್ತೌ ಚ ಬಾಹ್ಯಾನಾಂ ಶುದ್ಧಿಕಾರಣಂ |
ಸಂಕರೇ ಜಾತಯಸ್ತ್ವೇತಾಃ ಪಿತೃಮಾತೃಪ್ರದರ್ಶಿತಾಃ　　|| ೮ ||

ಪ್ರಚ್ಛನ್ನಾ ವಾ ಪ್ರಕಾಶಾ ವಾ ವೇದಿತವ್ಯಾಃ ಸ್ವಕರ್ಮಭಿಃ |
ಅನಾರ್ಯತಾ ನಿಷ್ಠುರತಾ ಪುರತೋ ನಿಷ್ಕ್ರಿಯಾತ್ಮತಾ　　|| ೯ ||

ಪುರುಷಂ ವ್ಯಂಜಯಂತೀಹ ಲೋಕೇ ಕಲುಷಯೋನಿಜಂ |
ಪಿತುರ್ವಾ ಭಜತೇ ಶೀಲಂ ಮಾತುರ್ವೋಭಯಮೇವ ವಾ　　|| ೧೦ ||

---

೬-೮. ಚಂಡಾಲನೆಂಬ ಸಂಕರಜಾತಿಯವನು ಗ್ರಾಮದ ಹೊರಗೇ ವಾಸಿಸಬೇಕೆಂದೂ ಶವಗಳ ಬಟ್ಟೆಯನ್ನೇ ಧರಿಸಬೇಕೆಂದೂ, ಇತರರಿಂದ ಅವನು ಅಸ್ಪೃಶ್ಯನೆಂದೂ ಶಾಸ್ತ್ರದ ವಿಧಿ ಇರುತ್ತದೆ. ಆದರೆ ಅವರು ಬ್ರಾಹ್ಮಣರ ಉಪಕಾರಕ್ಕಾಗಿಯೋ ಗೋವುಗಳ ಉಪಕಾರಕ್ಕಾಗಿಯೋ ಪ್ರಯತ್ನಿಸಿ, ಮತ್ತು ಅಶಕ್ತರಾದ ಸ್ತ್ರೀಬಾಲಕರ ಉಪಕಾರದಲ್ಲಿ ಯಾದರೂ ನಿರತನಾಗಿದ್ದು ಮೃತಿಹೊಂದಿದಲ್ಲಿ ಅವರಿಗೆ ಆ ಮರಣವೇ ಶುದ್ಧಿಗೆ ಕಾರಣವಾದೀತು. ಸಂಕರವರ್ಣದಲ್ಲಿ ಮಾತಾಪಿತೃಸಂಬಂಧದಿಂದುಂಟಾಗುವ ಜಾತಿಬೇಧಗಳನ್ನು ಈ ರೀತಿ ಹೇಳಿದ್ದಾಯಿತು.

೯-೧೦. ಇಂತಹ ಸಂಕರಜಾತಿಯವರು ಬಹಳ ರಹಸ್ಯವಾಗಿದ್ದು ಹೊರಗೆ ಪ್ರಕಾಶಕ್ಕೆ ಬಾರದಿದ್ದಲ್ಲಿ ಅವರವರ ಕಾರ್ಯವಿಶೇಷದಿಂದಲೇ ಅವರವರ ಜಾತಿಯನ್ನು ತಿಳಿಯಲು ಸಾಧ್ಯವಾಗುತ್ತದೆ. ಈ ರೀತಿಯಾದ ಅಧಮಜನ್ಮ ಹೊಂದಿದವರು, ಅನಾರ್ಯಸ್ವಭಾವದಿಂದಲೂ, ನಿರ್ಘೃಣೆಯಿಂದಲೂ ಜಡಸ್ವಭಾವದಿಂದಲೂ ತಮ್ಮ ಕಠಿನಸ್ವಭಾವವನ್ನು ಸೂಚಿಸತಕ್ಕವರಾಗಿಯೇ ಇರುವರು. ಏತಕ್ಕೆಂದರೆ, ಕೇವಲ ತಂದೆಯ ಅಥವಾ ತಾಯಿಯ ಅಥವಾ ಉಭಯರ ಶೀಲವನ್ನೇ ಇಂತಹವರು ಹೊಂದುತ್ತಾರೆ.

ನ ಕಥಂಚನ ದುರ್ಯೋನಿಃ ಪ್ರಕೃತಿಂ ಸ್ವಾಂ ನ ಗಚ್ಛತಿ ।
ಕುಲೇ ಮುಖ್ಯೇಽಪಿ ಜಾತಸ್ಯ ಯಸ್ಯ ಸ್ಯಾದ್ಯೋನಿಸಂಕರಃ ॥ ೧೧ ॥

ಸ ಶ್ರಯತ್ಯೇವ ತಚ್ಛೀಲಂ ನರೋಽಲ್ಪಮಪಿ ವಾ ಬಹು ।
ಯತ್ರ ತ್ವೇತೇ ಪರಿಧ್ವಂಸಾ ಜಾಯಂತೇ ವರ್ಣಸಂಕರಾಃ ॥ ೧೨ ॥

ರಾಷ್ಟ್ರೀಯೈಃ ಸಹ ತದ್ರಾಷ್ಟ್ರಂ ಕ್ಷಿಪ್ರಮೇವ ವಿನಶ್ಯತಿ ।
ಶೂದ್ರಾಯಾಂ ಬ್ರಾಹ್ಮಣಾಜ್ಜಾತಃ ಶ್ರೇಯಸಾ ಚೇತ್ಪ್ರಜಾಯತೇ ।
ಅಶ್ರೇಯರ್ಾಶ್ರೇಯಸೀಂ ಜಾತಿಂ ಗಚ್ಛತ್ಯಾಸಪ್ತಮಾದ್ಯುಗಾತ್ ॥ ೧೩ ॥

ರಾಜ್ಞಾ ಸ್ವಕಾಲಂ ಪರಿರಕ್ಷಣೀಯಂ
ಘೋರಂ ನೃಣಾಂ ಸಂಕರಮೇತದೇವ ।
ಆಸಾದ್ಯ ಘೋರಾಣಿ ಹಿ ಸಂಕರಾಣಿ
ನಶ್ಯಂತಿ ರಾಷ್ಟ್ರಾಣಿ ಸರಾಜಕಾನಿ ॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಸಂಕರ
ಧರ್ಮೋನಾಮೈಕಾಶೀತಿ ತಮೋಽಧ್ಯಾಯಃ

---

೧೧-೧೨. ದುಷ್ಟವಾದ ಯೋನಿಯಲ್ಲಿ ಜನಸಿದವನು ತನ್ನ ಸ್ವಾಭಾವಿಕವಾದ ಸ್ವರೂಪವನ್ನು ಎಂದಿಗೂ ಹೊಂದದೇ ಇರಲಾರನು. (ಸಂಕರವರ್ಣತೆಯೇ ಅವನ ಸ್ವರೂಪವೆಂದರ್ಥ) ಮುಖ್ಯವಾದ ಪ್ರಸಿದ್ಧವಂಶದಲ್ಲಿ ಜನಿಸಿದ್ದರೂ ಯಾವನಿಗೆ ಈ ರೀತಿಯಾದ ಯೋನಿಸಂಕರವು ಉಂಟಾಗುವುದೋ ಅಂತಹ ಮನುಷ್ಯನು ಅಧಮವರ್ಣದವನ ಶೀಲವನ್ನು ಸ್ವಲ್ಪ ಮಟ್ಟಿಗೆಯಾಗಲಿ, ಹೆಚ್ಚಾಗಿಯಾಗಲಿ ಹೊಂದಿಯೇ ಹೊಂದುತ್ತಾನೆ. ಈ ವರ್ಣಸಂಕರ ಉಂಟಾಗುವ ಸ್ಥಳಗಳಲ್ಲೆಲ್ಲಾ,

೧೩-೧೪. ಆ ದೇಶದ ಇತರ ಜನಗಳೊಡನೆ ಜಾಗ್ರತೆಯಾಗಿ ದೇಶವೇ ನಾಶಹೊಂದುತ್ತದೆ. ಶೂದ್ರಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದವನು ಶ್ರೇಯಸ್ಕಾರಿ ಯಾಗಿ ಹುಟ್ಟಿದುದೇ ಆದರೆ ಆ ಶೂದ್ರ ಸ್ತ್ರೀ ಸಂಬಂಧದಿಂದ ಉಂಟಾದ ಅಪವಿತ್ರತೆ ಯನ್ನು ಹೋಗಲಾಡಿಸಿಕೊಂಡು ಶ್ರೇಯಸ್ಕರವಾದ ಜಾತಿಯನ್ನು ಏಳು ಯುಗದ

ನಂತರ ಹೊಂದುತ್ತಾನೆ. ಆದುದರಿಂದ ರಾಜನಾದವನು ತನ್ನ ಆಳ್ವಿಕೆ ಇರುವ ಕಾಲದಲ್ಲಿ ಇಂತಹ ಘೋರವಾದ ಸಂಕರದೋಷದಿಂದ ರಾಷ್ಟ್ರವನ್ನು ರಕ್ಷಿಸಬೇಕು. ಇಂತಹ ಘೋರವಾದ ಸಂಕರದೋಷಗಳನ್ನು ಹೊಂದಿ ರಾಜನೊಡನೆ ರಾಷ್ಟ್ರಗಳೇ ನಾಶವಾದಾವು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಹೇಳಿದ ಪುಷ್ಕರೋಪಾಖ್ಯಾನದಲ್ಲಿ ಸಂಕರಧರ್ಮವೆಂಬ ಎಂಭತ್ತೊಂದನೆಯ ಅಧ್ಯಾಯ ಮುಗಿದಿದೆ.



## ಎಂಭತ್ತೊಂದನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ವರ್ಣಾಶ್ರಮಗಳ ವಿಷಯದಲ್ಲಿ ಬಂದ ಪ್ರಾಸಂಗಿಕ ಪ್ರಶ್ನೆಗೆ ಅನುಗುಣವಾಗಿ ಸಂಕರಜಾತಿಯ ಉತ್ಪತ್ತಿಕ್ರಮವನ್ನೂ ಆ ಜಾತಿಯ ಧರ್ಮಗಳನ್ನೂ ನಿರೂಪಿಸಿ ಇಂತಹ ಸಂಕರಜಾತಿಯ ಅಭಿವೃದ್ಧಿಯು ರಾಷ್ಟ್ರಕ್ಕೆ ನಾಶಕವಾದುದರಿಂದ ರಾಜನಾದವನು ಇದನ್ನು ತಡೆಗಟ್ಟಿ ದೇಶವನ್ನು ರಕ್ಷಿಸಬೇಕೆಂದು ಹೇಳಲಾಗಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ದ್ವ್ಯಶೀತಿತಮೋಽಧ್ಯಾಯಃ

|| ಪುಷ್ಕರ ಉವಾಚ ||

**ಆಜೀವಂ ತು ಯಥೋಕ್ತೇನ ಬ್ರಾಹ್ಮಣಃ ಸ್ವೇನ ಕರ್ಮಣಾ ।**
**ಜೀವೇತ್ಕ್ಷತ್ರಿಯಧರ್ಮೇಣ ಸಾ ಹ್ಯಸ್ಯ ವೃತ್ತ್ಯನಂತರಾ || ೧ ||**

**ಉಭಾಭ್ಯಾಮಪ್ಯಜೀವಂಸ್ತು ವೈಶ್ಯವೃತ್ತಿಂ ಸಮಾಚರೇತ್ ।**
**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರವೃತ್ತಿಂ ವಿವರ್ಜಯೇತ್ || ೨ ||**

---

### ಎಂಭತ್ತೆರಡನೆಯ ಅಧ್ಯಾಯ.

೧–೨. ಬ್ರಾಹ್ಮಣನಾದವನು ತಾನು ಜೀವಿಸಿರುವವರೆಗೂ ತನ್ನ ವೃತ್ತಿಯಿಂದಲೇ ಜೀವಿಸಬೇಕು. ವಿಹಿತವಾದ ವೃತ್ತಿಯಿಂದ ಜೀವನವು ಲಭಿಸದಿದ್ದಲ್ಲಿ ತನಗೆ ಸನ್ನಿಹಿತವಾದ ಕ್ಷತ್ರಿಯ ವೃತ್ತಿಯಿಂದ ಜೀವಿಸಬಹುದು. ಈ ಎರಡು ವೃತ್ತಿಯಿಂದಲೂ ಜೀವಿಕೆಯನ್ನು ಹೊಂದದಿರುವವನು ವೈಶ್ಯವೃತ್ತಿಯನ್ನಾದರೂ ಆಶ್ರಯಿಸಿ ಆಪತ್ಕಾಲದಲ್ಲಿ ಜೀವಿಸಬಹುದು. ಆದರೆ ಬ್ರಾಹ್ಮಣಕ್ಷತ್ರಿಯವೈಶ್ಯರು ಶೂದ್ರವೃತ್ತಿಯನ್ನು ಮಾತ್ರ ಸರ್ವಪ್ರಯತ್ನದಿಂದಲೂ ಬಿಡಬೇಕು.

**ಶೂದ್ರೋ ಬ್ರಾಹ್ಮಣವೃತ್ತಿಂ ಚ ವಿಶೇಷೇಣ ವಿವರ್ಜಯೇತ್ ।**
**ಆಜೀವತ್ಸು ಸ ವೃತ್ತ್ಯಾ ಚ ಮಧ್ಯವೃತ್ತಿಂ ಸಮಾಚರೇತ್ ॥ ೩ ॥**

**ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೈಶ್ಯವೃತ್ತ್ಯಾ ತು ವರ್ತಯನ್ ।**
**ಅಯಃ ಶಸ್ತ್ರಂ ವಿಷಂ ಮಾಂಸಂ ಸೋಮಂ ಗಂಧಾಂಶ್ಚ ಸರ್ವಶಃ ॥ ೪ ॥**

**ಕ್ಷೀರಂ ಕ್ಷೌದ್ರಂದಧಿ ಘೃತಂ ತೈಲಂ ಮಜ್ಜಾಂ ಗುಡಂ ಕುಶಂ ।**
**ಮದ್ಯಂ ನೀಲಂ ಚ ಲಾಕ್ಷಾಂ ಚ ಲವಣಂ ಪ್ರಾಣಿನೋಽಪಿ ಚ ॥ ೫ ॥**

**ವಿಕ್ರೀಣೀತ ತಿಲಾನ್ನೈವ ಪಕ್ವಾನ್ನಂ ಗೋರಸಾಂಸ್ತಥಾ ।**
**ರಸಾ ರಸೈರ್ನಿಹಂತವ್ಯಾ ಗಂಧೇನ ಲವಣಂ ರಸೈ ॥ ೬ ॥**

**ಕೃತಾನ್ನಂ ಚ ಕೃತಾನ್ನೇನ ತಿಲಧಾನ್ಯೇನ ತತ್ಸಮಂ ।**
**ವೈಶ್ಯೋ ವಾ ಕ್ಷತ್ರಿಯೋ ವಾಪಿ ವರ್ಜಯೇದ್ದ್ವಿಜಜೀವಿಕಾಂ ॥ ೭ ॥**

---

೩ ೪. ಶೂದ್ರನಾಗಿರುವವನು ಬ್ರಾಹ್ಮಣವೃತ್ತಿಯನ್ನು ಸರ್ವಪ್ರಕಾರ ದಿಂದಲೂ ಬಿಡಬೇಕು. ತನ್ನ ವೃತ್ತಿಯಿಂದ ಜೀವನವನ್ನು ಹೊಂದದಿರುವವನು ಮಧ್ಯವೃತ್ತಿಯನ್ನು ಹೊಂದಬಹುದು (ಬ್ರಾಹ್ಮಣನಾದವನು ಕ್ಷತ್ರಿಯವೈಶ್ಯ ವೃತ್ತಿಯನ್ನು ಹೊಂದಬಹುದೆಂದು ತಾತ್ಪರ್ಯ.) ಆದರೆ ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ ವೈಶ್ಯವೃತ್ತಿಯನ್ನು ಹೊಂದಿ ಜೀವಿಸಬೇಕಾದಲ್ಲಿ ಅವನು ಕಬ್ಬಿಣ, ಆಯುಧ, ವಿಷ, ಮಾಂಸ, ಸೋಮ, ಗಂಧಕಗಳು, ಹಾಲು, ಜೇನು, ಮೊಸರು, ತುಪ್ಪ, ಎಣ್ಣೆ, ಕೊಬ್ಬು, ಬೆಲ್ಲ, ನೀರು, ಮದ್ಯ, ನೀಲಿ, ಅರಗು, ಉಪ್ಪು, ಪ್ರಾಣಿಗಳು, ಎಳ್ಳು, ಪಕ್ವವಾದ ಅನ್ನ, ಮಜ್ಜಿಗೆ ಇವನ್ನು ವಿಕ್ರಯಿಸಬಾರದು. (ಇವು ಹೊರತು ಉಳಿದ ವಸ್ತುಗಳ ವಿಕ್ರಯದಿಂದ ವೈಶ್ಯವೃತ್ತಿಯನ್ನು ಅನುಸರಿಸ ಬಹುದೆಂದು ತಾತ್ಪರ್ಯ.)

೬-೮. ವೈಶ್ಯನೇ ಆಗಲಿ ಕ್ಷತ್ರಿಯನೇ ಆಗಲಿ ಬ್ರಾಹ್ಮಣಜೀವಿಕೆಯನ್ನು ತ್ಯಜಿಸಬೇಕು. ಬ್ರಾಹ್ಮಣನೂ ಸಹ (ವೈಶ್ಯವೃತ್ತಿಯ ಅವಲಂಬನದಲ್ಲಿರುವಾಗ) ಮಾಂಸವಿಕ್ರಯವನ್ನು ಮಾಡಿದುದೇ ಆದರೆ ಆಗಲೇ ಅವನು ಪತಿತನಾಗು

ಸದ್ಯಃ ಪತತಿ ಮಾಂಸೇನ ಲಾಕ್ಷಯಾ ಲವಣೇನ ಚ ।
ತ್ರ್ಯಹಾಚ್ಛೂದ್ರೋ ಭವತಿ ಬ್ರಾಹ್ಮಣಃ ಕ್ಷೀರವಿಕ್ರಯಾ ॥ ೮ ॥

ಇತರೇಷಾಂ ಹಿ ಪಣ್ಯಾನಾಂ ವಿಕ್ರಯೋನ್ಮನುಜೋತ್ತಮ ।
ಬ್ರಾಹ್ಮಣಃ ಸಪ್ತರಾತ್ರೇಣ ವೈಶ್ಯಭಾವಂ ಹಿ ಗಚ್ಛತಿ ॥ ೯ ॥

ಕ್ಷಿಪ್ರಾಣಿ ಯಾನಿ ರೂಕ್ಷಾಣಿ ಚರಾಣಿ ಚ ಮೃದೂನಿ ಚ ।
ವಾಣಿಜ್ಯೇ ತಾನಿ ಶಸ್ಯಂತೇ ತಿಥಿಂ ರಿಕ್ತಾಂ ವಿವರ್ಜಯೇತ್ ॥ ೧೦ ॥

ದ್ವಿಕಂ ಶತಂ ತು ಗೃಹ್ಣೀಯಾತ್ಕುಸೀದೇನಾಪಿ ವರ್ಧಯನ್ ।
ತತೋಽಧಿಕಂ ತು ಗೃಹ್ಣಾನಃ ಚೋರಸ್ಯಾಪ್ನೋತಿ ಕಿಲ್ಬಿಷಂ ॥ ೧೧ ॥

---

ತ್ತಾನೆ ಹಾಗೆಯೇ ಅರಗು ಮತ್ತು ಉಪ್ಪು ಇದರ ವಿಕ್ರಯದಿಂದಲೂ ಪತಿತನೇ ಆಗುತ್ತಾನೆ ಮತ್ತು ಹಾಲನ್ನು ವಿಕ್ರಯಿಸಿದುದೇ ಆದರೆ ಮೂರೇ ದಿವಸದಲ್ಲಿ ಅಂತಹ ಬ್ರಾಹ್ಮಣನು ಶೂದ್ರನಾಗುತ್ತಾನೆ.

೯-೧೦. ಇತರ ವಿಕ್ರೇಯ ವಸ್ತುಗಳನ್ನು ಬ್ರಾಹ್ಮಣನು ವಿಕ್ರಯಮಾಡಿದುದೇ ಆದರೆ ಏಳು ದಿವಸಗಳಲ್ಲೇ ಅವನು ವೈಶ್ಯನಾಗುತ್ತಾನೆ. (ಇಲ್ಲಿ ಹಿಂದೆ ನಿಷೇಧಿಸಲ್ಪಟ್ಟಿರುವ ವಸ್ತುಗಳಲ್ಲಿ ಇತರ ವಸ್ತುಗಳೆಂದು ತಾತ್ಪರ್ಯ.) ಅಶ್ವಿನಿಯೇ ಮೊದಲಾದ ಮೂರು ಕ್ಷಿಪ್ರನಕ್ಷತ್ರಗಳೂ, ರೋಹಿಣಿಯೇ ಮೊದಲಾದ ನಾಲ್ಕು ಉಗ್ರ ನಕ್ಷತ್ರಗಳೂ, ಸ್ವಾತಿಯೇ ಮೊದಲಾದ ಐದು ಚರನಕ್ಷತ್ರಗಳೂ, ಚಿತ್ತೆ, ರೇವತಿ ಮೊದಲಾದ ನಾಲ್ಕು ಮೃದುನಕ್ಷತ್ರಗಳೂ ಸಹ ವ್ಯಾಪಾರಕ್ಕೆ ಪ್ರಶಸ್ತವಾದುವು. ಕ್ರಯವಿಕ್ರಯರೂಪವಾದ ವಾಣಿಜ್ಯ ವ್ಯವಹಾರದಲ್ಲಿ ಇವು ಪ್ರಶಸ್ತಗಳೆಂದು ಹೇಳಲ್ಪಟ್ಟಿವೆ. ರಿಕ್ತ ತಿಥಿಯನ್ನು ಮಾತ್ರ ಈ ವ್ಯವಹಾರದಲ್ಲಿ ವರ್ಜಿಸಬೇಕು.

೧೧. ಈ ರೀತಿಯಾದ ವೈಶ್ಯವೃತ್ತಿಯಲ್ಲಿರುವವನು ಬಡ್ಡಿಯಿಂದ ಧನಾರ್ಜನೆ ಮಾಡಲು ಪ್ರಯತ್ನಿಸಿದಲ್ಲಿ ನೂರಕ್ಕೆ ಎರಡರಂತೆಯೇ ಬಡ್ಡಿಯನ್ನು ತೆಗೆದುಕೊಂಡು ತನ್ನ ಧನವನ್ನು ಅಭಿವೃದ್ಧಿಗೊಳಿಸಿಕೊಳ್ಳಬೇಕು. ಹಾಗಿಲ್ಲದೆ ಅದಕ್ಕಿಂತಲೂ ಹೆಚ್ಚಾಗಿ ಬಡ್ಡಿಯನ್ನು ತೆಗೆದುಕೊಂಡಲ್ಲಿ ಅವನು ಪರರ ಧನವನ್ನು ಅನ್ಯಾಯದಿಂದ ಹೊಂದಿದುದಕ್ಕಾಗಿ ಕಳ್ಳನಂತೆ ಪರಿಗಣಿಸಲ್ಪಟ್ಟು ಅವನ ಪಾಪವನ್ನೇ ಹೊಂದುತ್ತಾನೆ.

ಪ್ರತಿಪದ್ದ್ವಾದಶೀ ಷಷ್ಠೀ ನಕ್ಷತ್ರಾಣಿ ಧ್ರುವಾನಿ ಚ ।
ಕುಸೀದೇ ವರ್ಜನೀಯಾನಿ ನಿತ್ಯಂ ಸೂರ್ಯಸುತಸ್ಯ ಚ　　॥ ೧೨ ॥

ಕೃಷಿಂ ಭೂಮಿಪತೇರ್ಭಾಗಂ ದತ್ತ್ವಾ ಕುರ್ಯಾದ್ಯಥೋದಿತಂ ।
ಧ್ರುವಾಣಿ ಸೌಮ್ಯಂ ನೈತ್ರಂ ಚ ವಾಯುವ್ಯಂ ಪೌಷ್ಣಮಾಶ್ವಿನಂ　　॥ ೧೩ ॥

ವಾಸವಂ ಶ್ರಾವಣಂ ಚಿತ್ರಾ ವಿಶಾಖಾ ಮೂಲಮೇವ ಚ ।
ಕೃಷ್ಯಾರಂಭೇ ಪ್ರಶಸ್ಯಂತೇ ತಥಾ ಪುಷ್ಯಪುನರ್ವಸೂ　　॥ ೧೪ ॥

ಕೃಷ್ಯಾರಂಭೇ ಪ್ರಯತ್ನೇನ ತಿಥಿಂ ರಿಕ್ತಾಂ ವಿವರ್ಜಯೇತ್ ।
ಅಂಗಾರಕದಿನಂ ವರ್ಜ್ಯಂ ದಿವಸಂ ಸೂರ್ಯಜಸ್ಯ ಚ　　॥ ೧೫ ॥

ನಕ್ಷತ್ರಾಣಾಂ ಯಥೋಕ್ತಾನಾಂ ಮುಹೂರ್ತೇಷು ಚ ಕಾರಯೇತ್ ।
ಮುಹೂರ್ತೇ ಯದಿ ವಾ ಬ್ರಾಹ್ಮೇ ಸರ್ವಕರ್ಮಸು ಪೂಜಿತೇ　　॥ ೧೬ ॥

---

೧೨–೧೪. ಈ ವಿಧವಾದ ಲೇವಾದೇವಿಯ ವ್ಯವಹಾರದಲ್ಲಿ ಪಾಡ್ಯ, ದ್ವಾದಶಿ ಷಷ್ಠೀ ಈ ತಿಥಿಗಳನ್ನೂ, ಸ್ಥಿರನಕ್ಷತ್ರಗಳನ್ನೂ, ಶನಿವಾರವನ್ನೂ ಸಹ ಯಾವಾಗಲೂ ತ್ಯಜಿಸಬೇಕು. ಕೃಷಿಯಲ್ಲಿ ಪ್ರಯತ್ನಿಸುವವನು ರಾಜನಿಗೆ ಸಲ್ಲಬೇಕಾದ ಭಾಗವನ್ನು ಕೊಟ್ಟು ಇಲ್ಲಿ ಹೇಳಿರುವ ಕಾಲದಲ್ಲಿ ಕೃಷಿಗೆ ಪ್ರಾರಂಭಿಸಬೇಕು. ಸ್ಥಿರನಕ್ಷತ್ರಗಳು ಮತ್ತು ಸೌಮ್ಯ ನಕ್ಷತ್ರಗಳು ರೇವತಿ, ಸ್ವಾತಿ, ಪೂ. ಫಲ್ಗುನೀ, ಆಶ್ವಿನಿ, ಜ್ಯೇಷ್ಠೆ, ಶ್ರವಣ, ಚಿತ್ರಾ ವಿಶಾಖಾ, ಮೂಲ ಮತ್ತು ಪುಷ್ಯ, ಪುನರ್ವಸೂ ಈ ನಕ್ಷತ್ರಗಳು ಕೃಷಿಯನ್ನು ಪ್ರಾರಂಭಿಸಲು ಪ್ರಶಸ್ತಗಳೆಂದು ಹೇಳಲ್ಪಟ್ಟಿವೆ.

೧೫–೧೬. ಕೃಷಿಗೆ ಪ್ರಾರಂಭಿಸುವಾಗ ರಿಕ್ತತಿಥಿಯನ್ನು ತ್ಯಜಿಸಬೇಕು. ಮಂಗಳವಾರವನ್ನೂ ಶನಿವಾರವನ್ನೂ ಸಹ ತ್ಯಜಿಸಬೇಕು. ಮೇಲೆ ಹೇಳಿರುವ ನಕ್ಷತ್ರಗಳಲ್ಲಿ ಸರಿಯಾದ ಮುಹೂರ್ತಗಳಲ್ಲಿಯೇ ಮಾಡಬೇಕು. ಅಥವಾ ಸರ್ವ ಕರ್ಮಗಳಿಗೂ ಯೋಗ್ಯವಾದ ಬ್ರಾಹ್ಮಮುಹೂರ್ತದಲ್ಲೇ ಮಾಡಬಹುದು.

ವರಾಹಂ ಪೂಜಯೇದ್ದೇವಂ ಶೇಷಂ ಪೃಥ್ವೀಂ ತಥೈವ ಚ ।
ಪರ್ಜನ್ಯಂ ಭಾಸ್ಕರಂ ವಾಯುಂ ದೇವೇಶಂ ಶಶಿನಂ ತಥಾ ॥ ೧೭ ॥

ಫಾಲಂ ಚ ಗೋಯುಗಂ ಚೈವ ಗಂಧಮಾಲ್ಯಾನ್ನಸಂಪದಾ ।
ತತೋಽಗ್ನಿಹವನಂ ಕುರ್ಯಾತ್ಸುಸಮಿದ್ಧೇ ಹುತಾಶನೇ ॥ ೧೮ ॥

ದೇವತಾನಾಂ ಯಥೋಕ್ತಾನಾಂ ಜುಹುಯಾಚ್ಚ ಘೃತಾಹುತೀಃ ।
ಗಾವೋ ಭಗ ಇತಿದ್ವಾಭ್ಯಾಂ ಸೀರಾಂ ಯುಂಜಂತ್ಯತಸ್ತ್ರಿಭಿಃ ॥ ೧೯ ॥

ಫಾಲಂ ಶುನಾಂ ಸುಫಾಲೇತಿ ಲಾಂಗಲಂ ಚ ತಥೈತಿ ವೈ ।
ಹುತ್ವಾ ವಿಪ್ರಾನ್ ಸಮಭ್ಯರ್ಚ್ಯ ದಕ್ಷಿಣಾಭಿರ್ಯಥಾವಿಧಿ ॥ ೨೦ ॥

ಪೂರ್ವೋದಕ್ಪ್ರವಣಾಂ ಭೂಮಿಂ ವಾಹಯೇತ್ಪ್ರಾಗ್ಫಲೇನ ತು ।
ಸೀರಾ ಯುಂಜಂತ ಇತ್ಯೇತದೃಕ್ತ್ರಯಂ ಕೀರ್ತಯೇದ್ಬುಧಃ ॥ ೨೧ ॥

---

೭-೮. ಅಂತಹ ಶುಭಮುಹೂರ್ತದಲ್ಲಿ ವರಾಹಮೂರ್ತಿಯನ್ನೂ, ಶೇಷ ಮತ್ತು ಭೂದೇವಿ, ಮೇಘ, ಸೂರ್ಯ, ವಾಯು, ಇಂದ್ರ, ಚಂದ್ರ ಈ ದೇವತೆಗಳನ್ನೂ, ನೇಗಿಲು, ಒಂದು ಜೊತೆ ಗೋವುಗಳು (ಎತ್ತುಗಳು), ಇವುಗಳನ್ನೂ ಸಹ ಗಂಧ, ಹೂವು ಅನ್ನಾದಿಗಳ ಸಮೃದ್ಧಿಯಿಂದ ಪೂಜಿಸಬೇಕು. ಅನಂತರ ಜ್ವಲಿಸಿರುವ ಅಗ್ನಿಯಲ್ಲಿ ಹೋಮವನ್ನೂ ಮಾಡಬೇಕು.

೧೯-೨೦. ಇಲ್ಲಿ ಹೇಳಿರುವ ದೇವತೆಗಳಿಗೆ ತುಪ್ಪದಿಂದ ಹೋಮಮಾಡಿ ಆಹುತಿಯನ್ನು ಕೊಡಬೇಕು. ಗಾವೋ ಭಗಃ ಎಂಬ ಎರಡು ಮಂತ್ರಗಳಿಂದಲೂ ಸೀರಾಂ ಯುಂಜಂತಿ ಎಂಬ ಮೂರು ಮಂತ್ರದಿಂದಲೂ ಲಾಂಗಲಂ ಚ ಎಂಬ ಮಂತ್ರದಿಂದಲೂ ಹೋಮಮಾಡಿ ಬ್ರಾಹ್ಮಣರನ್ನು ದಕ್ಷಿಣಾದಿಗಳಿಂದ ಪೂಜಿಸಿ ಸಂತೋಷಪಡಿಸಬೇಕು.

೨೧-೨೨. ಪೂರ್ವದಿಕ್ಕಿಗೂ, ಉತ್ತರದಿಕ್ಕಿಗೂ ತಗ್ಗಾಗಿರುವ ಭೂಮಿಯನ್ನು ಮೊದಲನೇ ನೇಗಲಿನಿಂದ ಉಳಿಸಬೇಕು. ಆಗ "ಸೀರಾಯುಂಜಂತ" ಎಂಬ ಮೂರು ಋಕ್ಕುಗಳನ್ನೂ ಪಂಡಿತನಾದವನು ಜಪಿಸಬೇಕು. ಅನಂತರ

ಯಾ ಓಷಧಯ ಇತ್ಯೇವಂ ಬೀಜಂ ತದನುಮಂತ್ರಯೇತ್ ।
ಕೃತ್ವಾ ಸುವರ್ಣತೋಯಾಕ್ತಂ ಲಕ್ಷಣ್ಯೋ ವಾಪಯೇತ್ಪುಮಾನ್ ॥ ೨೨ ॥

ಪ್ರಾಙ್ಮುಖೈರ್ವಾಹಯೇದ್ಗೋಭಿಃ ಪ್ರಾಙ್ಮುಖಶ್ಚೈವ ವಾಪಯೇತ್ ।
ಶಂಖಪುಣ್ಯಾಹಘೋಷೇಣ ಬೀಜಾವಾಪಃ ಪ್ರಶಸ್ಯತೇ ॥ ೨೩ ॥

ಬೀಜಾವಾಪೇ ತಥಾ ಮಂತ್ರಂ ನಿಬೋಧ ಗದತೋ ಮಮ ।
ಪ್ರಜಾಪತೇ ಕಾಶ್ಯಪಾಯ ದೇವಲಾಯ ನಮಃ ಸದಾ ॥ ೨೪ ॥

ಸದಾ ಮೇ ಋಧ್ಯತಾಂ ದೇವೀ ಬೀಜೇಷು ಚ ಧನೇಷು ಚ ।
ಭೋಜಯೇದ್ಬ್ರಾಹ್ಮಣಾಂಶ್ಚಾತ್ರ ತಥೈವ ಚ ಕೃಷೀವಲಾನ್ ॥ ೨೫ ॥

ಕಾಲಶ್ಚ ಸರ್ವಃ ಪೂರ್ವೋಕ್ತಃ ಸಂಗ್ರಹೇಽಪಿ ಪ್ರಶಸ್ಯತೇ ।
ದೇವತಾನಾಂ ಪಿತೄಣಾಂ ಚ ಕೃತ್ವಾ ತತ್ರಾಪಿ ಪೂಜನಂ ॥ ೨೬ ॥

---

" ಯಾ ಓಷಧಯಃ " ಎಂಬ ಮಂತ್ರದಿಂದ ಬೀಜಗಳನ್ನು ಮಂತ್ರಿಸಬೇಕು. ಅನಂತರ ಆ ಬೀಜಗಳನ್ನು ಚಿನ್ನದ ನೀರಿನಿಂದ ನೆನಸಿ ಸುಲಕ್ಷಣವಂತನಾದ ಪುರುಷನು ಆ ಬೀಜಗಳನ್ನು ಭೂಮಿಯಲ್ಲಿ ಬಿತ್ತಬೇಕು.

೨೩-೨೪. ಉಳುವಾಗ ಪೂರ್ವಾಭಿಮುಖವಾಗಿರುವ ಎತ್ತುಗಳಿಂದಲೇ ಉಳಬೇಕು. ಬೀಜಗಳನ್ನು ಹಾಕುವಾಗಲೂ ಪೂರ್ವಾಭಿಮುಖನಾಗಿರಬೇಕು. ಬೀಜಗಳನ್ನು ಬಿತ್ತುವ ಕಾಲದಲ್ಲಿ ಶಂಖ ಮತ್ತು ಪುಣ್ಯಾಹಘೋಷದೊಡನೆ ಬಿತ್ತುವದು ಪ್ರಶಸ್ತ. ಬೀಜಗಳನ್ನು ಬಿತ್ತುವ ಕಾಲದಲ್ಲಿ ಹೇಳುವ ಮಂತ್ರವನ್ನೂ ಹೇಳುತ್ತೇನೆ ಕೇಳು. " ಪ್ರಜಾಪತೆ ಕಾಶ್ಯಪಾಯ ದೇವಲಾಯನಮಃ ಸದಾ ಸದಾಮೆ ಋದ್ಧತಾಂ ದೇವಿ ಬೀಜೇಷು ಚ ಧನೇಷುಚ " ಎಂಬ ಮಂತ್ರದಿಂದ ಬಿತ್ತಬೇಕು.

೨೫-೨೬. ಹೀಗೆ ಬಿತ್ತುವ ಸಮಯದಲ್ಲಿ ಬ್ರಾಹ್ಮಣರಿಗೂ, ವ್ಯವಸಾಯಗಾರರಿಗೂ ಭೋಜನಮಾಡಿಸಬೇಕು. ಧಾನ್ಯವನ್ನು ಸಂಗ್ರಹಿಸುವಾಗಲೂ ಸಹ (ಕೊಯ್ಲಿಗೆ ಬಂದಾಗ) ಮೊದಲು ನಾವು ಹೇಳಿರುವ ಕಾಲವೇ ಪ್ರಶಸ್ತವಾದುದು. ಆ ಕಾಲದಲ್ಲಿಯೂ ದೇವತೆಗಳ ಮತ್ತು ಪಿತೃಗಳ ಪೂಜೆಯನ್ನು ಭಕ್ತಿಯಿಂದ ಮಾಡಿ

ನವವಸ್ತ್ರಪರೀಧಾನಃ ಶ್ವೇತಮಾಲ್ಯಾನುಲೇಪನಃ ।
ಪ್ರಾಂಙ್ಮುಖಃ ಪ್ರಾಶನಂ ಕುರ್ಯಾತ್ಪಾತ್ರೇ ಸೌವರ್ಣರಾಜತೇ ॥ ೨೭ ॥

ತತ್ರಾಪಿ ಭೋಜಯೇದ್ವಿಪ್ರಾಂಸ್ತಥೈವ ಚ ಕೃಷೀವಲಾನ್ ।
ಕೃಷ್ಯೇ ವಿಶೇಷತಃ ಕಾರ್ಯಂ ಫಲಯಜ್ಞಂ ಭೃಗೂದ್ವಹ ॥ ೨೮ ॥

ಯೂಪೋಯಂ ನಿಹಿತೋ ಮಧ್ಯೇ ಪೇಷೀಪಾಸಕ್ತ ಕರ್ಷಕೈಃ ।
ತಸ್ಮಾದತಂದ್ರಿತೋ ದದ್ಯಾದನ್ನಂ ಧಾನ್ಯಾರ್ಥದಕ್ಷಿಣಾಂ ॥ ೨೯ ॥

ಭೂಮಿಂ ಭಿತ್ವೌಷಧೀಶ್ಛಿತ್ವಾ ಹತ್ವಾ ಕೀಟಪಿಪೀಲಿಕಂ ।
ಪುನಂತಿ ಖಲು ಯಜ್ಞೇನ ಕರ್ಷಕಾ ನಾತ್ರ ಸಂಶಯಃ ॥ ೩೦ ॥

---

ಹೊಸ ವಸ್ತ್ರವನ್ನು ಧರಿಸಿ ಬಿಳುಪಾದ ಹೂವು ಮತ್ತು ಗಂಧಗಳಿಂದ ಅಲಂಕೃತರಾಗಿ ಪೂರ್ವಾಭಿಮುಖನಾಗಿ ಕುಳಿತು ಚಿನ್ನದ ಅಥವಾ ಬೆಳ್ಳಿಯ ಪಾತ್ರೆಯಲ್ಲಿ ಹೊಸ ಅನ್ನವನ್ನು ಸೇವಿಸಬೇಕು.

೨೮-೨೯. ಆಗಲೂ ಸಹ ಬ್ರಾಹ್ಮಣರನ್ನೂ, ವ್ಯವಸಾಯಗಾರರನ್ನೂ ಭೋಜನಮಾಡಿಸಬೇಕು. ಕೃಷಿಯ ವ್ಯಾಪಾರದಲ್ಲಿರುವವನು ಈ ಫಲಯಜ್ಞವನ್ನು ವಿಶೇಷ ವೈಭವದಿಂದ ಮಾಡಿಯೇ ಮಾಡಬೇಕು. ಆಗ ಕಣದಲ್ಲಿ ನೆಟ್ಟಿರುವ ಮೇಟಿಯೇ ಯೂಪ, ವ್ಯವಸಾಯಗಾರರಿಂದ ನಿರ್ಮಿಸಲಾಗಿರುವ ಧಾನ್ಯತೆಗೆಯುವ ಸಾಧನವೇ (ಆರೆಯುವ ಗಂಡು) ಆ ಯೂಪಕ್ಕೆ ಅಲಂಕಾರವಾದ ವಸ್ತ್ರ, ಧಾನ್ಯವೇ ದಕ್ಷಿಣೆ ಆದುದರಿಂದ ಈ ಸಮಯದಲ್ಲಿ ಜಾಗರೂಕನಾಗಿದ್ದು ಅನ್ನದಾನವನ್ನು ಮಾಡಬೇಕು.

೩೦-೩೧. ಈ ಕೃಷಿಕರ್ಮದಲ್ಲಿ ವ್ಯವಸಾಯಗಾರರು ಯಜ್ಞದಲ್ಲಿ ಮಾಡುವಂತೆ ಭೂಮಿಯನ್ನು ನೇಗಿಲಿನಿಂದ ಭೇದಿಸಿ ಸ್ಥಳದ ಶುದ್ಧಿಗಾಗಿ ಅಲ್ಲಿರುವ ಹುಳು, ಇರುವೆ, ಮುಂತಾದುವನ್ನು ನಾಶಮಾಡಿ ಕೃಷಿ ಎಂಬ ಈ ಯಜ್ಞದಿಂದ ಜಗತ್ತನ್ನು ಪಾವನಗೊಳಿಸುತ್ತಾರೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ ಎಂಟು ಗೋವುಗಳಿಂದ ಮಾಡುವ ಉಳುಮೆಯು ಧರ್ಮಫಲವೆಂದೂ ಆರು ಗೋವುಗಳಿಂದ ಮಾಡಬೇಕಾದ

**ಅಷ್ಟಾಗವಂ ಧರ್ಮಹಲಂ ಷಡ್ಗವಂ ಜೀವಿತಾರ್ಥಿನಾಂ ।**
**ಚತುರ್ಗವಂ ನೃಶಂಸಾನಾಂ ದ್ವಿಗವಂ ಬ್ರಹ್ಮಘಾತಿನಾಂ      ॥ ೩೦ ॥**

**ಆಪದಂ ಚ ಸಮುತ್ತೀರ್ಯ ತ್ಯಕ್ತ್ವಾ ವಿತ್ತಂ ಚ ಕರ್ಮಣಾ ।**
**ಯದರ್ಜಿತಂ ತತಃ ಕುರ್ಯಾತ್ಪ್ರಾಯಶ್ಚಿತ್ತಂ ವಿಚಕ್ಷಣಃ      ॥ ೩೨ ॥**

---

ಉಳುಮೆಯು ಜೀವನಾರ್ಥಿಗಳ ಹಲವೆಂದೂ, ನಾಲ್ಕು ಗೋವುಗಳ ಉಳುಮೆಯು ಘಾತುಕರ ಹಲವೆಂದೂ, ಎರಡು ಗೋವುಗಳ ಉಳುಮೆಯು ಬ್ರಹ್ಮಘಾತಿಗಳ ಹಲವೆಂದೂ ಕರೆಯಲ್ಪಡುತ್ತದೆ. (ಇಲ್ಲಿ ಉಳುಮೆಯಿಂದ ಗೋವುಗಳಿಗೆ ಉಂಟಾಗುವ ಕ್ಲೇಶ ತಾರತಮ್ಯದಿಂದ ಉತ್ತಮ ಮಧ್ಯಮಾದಿ ಭೇದದಿಂದ ಕರೆದಿರುವಂತೆ ತೋರುತ್ತದೆ.)

೩೨-೩೩. ಆಪತ್ಕಾಲದಲ್ಲಿ ವೈಶ್ಯವೃತ್ತಿಯನ್ನು ಅವಲಂಬಿಸಿ ಕೃಷಿಯಲ್ಲಿ ಉದ್ಯೋಗಹೊಂದಿದರೂ ಸಹ ಅದರಿಂದ ಜೀವನವು ಲಭಿಸಿ ದಾರಿದ್ರ್ಯವೆಂಬ ದುಃಖವನ್ನು ಕಳೆದುಕೊಂಡ ನಂತರ ಬುದ್ಧಿಶಾಲಿಯಾದವನು ಆ ಕೃಷಿವೃತ್ತಿಯನ್ನು ಹೊಂದಿದುದಕ್ಕಾಗಿ ಸರಿಯಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಆಗ ಕೃಷಿಯಿಂದ ತಾನು ಸಂಪಾದಿಸಿದ ದ್ರವ್ಯದಲ್ಲಿ ಯೋಗ್ಯಕ್ರಮದಿಂದ ತ್ಯಾಗವನ್ನು ಕೈಗೊಳ್ಳಬೇಕು. ಏತಕ್ಕೆಂದರೆ ಮನುಷ್ಯನಿಗೆ ತನ್ನ ಸ್ವಧರ್ಮವು ಸ್ವಲ್ಪಮಟ್ಟಿಗೆ ನ್ಯೂನವಾದರೂ ಬಾಧಕವಿಲ್ಲ ಅದೂ ಸಹ ಅಧಿಕಾರಿಯ ಯೋಗ್ಯತೆಗೆ ತಕ್ಕಂತೆ ಶ್ರೇಯಸ್ಕರವಾಗಿಯೇ ಆಗುತ್ತದೆ. ಪರಕೀಯ ಧರ್ಮವಾದರೋ ಚೆನ್ನಾಗಿ ಆಚರಿಸಲ್ಪಟ್ಟು ಪರಿಪೋಷದಿಂದಿದ್ದರೂ ಸಹ ನ್ಯೂನವಾದ ತನ್ನ ಧರ್ಮವು ಪರಧರ್ಮಕ್ಕಿಂತ ಮೇಲಾಗಿಯೇ ಆದೀತು. ಸ್ವಧರ್ಮದಲ್ಲಿ ಬಹಳ ವೈಕಲ್ಯವುಂಟಾಗಿ ತನಗೆ ಅನರ್ಥಬಂದರೂ ಬಾಧಕವಿಲ್ಲ. ಪರಧರ್ಮವು ಮಾತ್ರ ಹೇಗಾದರೂ ತನಗೆ ಭಯಂಕರವಾಗಿಯೇ ಆಗುತ್ತದೆ. (ಇಲ್ಲಿ ಸ್ವಧರ್ಮವು ತನಗೆ ವಿಹಿತವಾದುದರಿಂದ ಅದು ಪರಿಪೂರ್ಣವಾದರೂ ನ್ಯೂನವಾದರೂ ಪರಿಪೂರ್ಣ ಫಲವೋ ಅಥವಾ ನ್ಯೂನ ಫಲವೋ ಉಂಟಾಗಬಹುದಾದುದರಿಂದ ಪರಧರ್ಮ ಸ್ವೀಕಾರ ಪ್ರಯುಕ್ತವಾದ ದೋಷಕ್ಕೆ ಅವಕಾಶವಿಲ್ಲ. ಪರಧರ್ಮವನ್ನು ಹೊಂದಿದ ಕಾಲದಲ್ಲಿ ಅದರಿಂದ ಫಲಾಫಲ ತಾರತಮ್ಯಗಳು ಪ್ರಯತ್ನಾನುಸಾರ ಉಂಟಾದರೂ ಪರಧರ್ಮ ಸ್ವೀಕಾರ ಪ್ರಯುಕ್ತವಾದ ದೋಷವು ತಪ್ಪಿದ್ದಲ್ಲ. ಆದುದರಿಂದ ಆಪತ್ಕಾಲದಲ್ಲಿ ವೈಶ್ಯಧರ್ಮವಾದ ಕೃಷಿಯನ್ನು ಹೊಂದಿದರೂ ಅದರಿಂದ ಪೂರ್ಣಪ್ರಯೋಜನವುಂಟಾದರೂ

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೩ ॥

ಋತೇನ ಜೀವೇದನೃತೇನ ಜೀವೇತ್
ಮಿತೇನ ಜೀವೇತ್ಪ್ರಮಿತೇನ ಜೀವೇತ್ ।
ಸತ್ಯಾನೃತಾಭ್ಯಾಮಥವಾಪಿ ಜೀವೇ-
ಚ್ಛ್ವವೃತ್ತಿಮೇಕಾಂ ಪರಿವರ್ಜಯೇತ್ತು ॥ ೩೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಆಪದ್ಧರ್ಮೋ ನಾಮ ದ್ವ್ಯಶೀತಿತಮೋಽಧ್ಯಾಯಃ

---

ಸಹ ಸ್ವಧರ್ಮತ್ಯಾಗದಿಂದುಂಟಾದ ಪಾಪನಾಶಕ್ಕಾಗಿ ಸರಿಯಾದ ಪ್ರಾಯಶ್ಚಿತ್ತವನ್ನು ಹೊಂದಿಯೇ ಹೊಂದಬೇಕೆಂದು ತಾತ್ಪರ್ಯ) ಈ ಶ್ಲೋಕವು ಭಗವದ್ಗೀತೆಯಲ್ಲಿ ಕರ್ಮಯೋಗಜ್ಞಾನಗಳ ವಿಷಯದಲ್ಲಿ ಉದಾಹರಿಸಲ್ಪಟ್ಟಿದೆ. ಇಲ್ಲಿ ಮಾತ್ರ ಜೀವನಕ್ಕೆ ಅರ್ಹವಾದ ವರ್ಣಾಶ್ರಮ ಧರ್ಮದ ವಿಷಯದಲ್ಲಿ ಯೋಜಿಸಲ್ಪಟ್ಟಿದೆ)

೩೪. ಶ್ರೇಷ್ಠವಾದ ಸ್ವಧರ್ಮದಿಂದ ಜೀವಿಸುವುದು ಉತ್ತಮ. ಹಾಗಿಲ್ಲದಿದ್ದರೆ, ತನಗಿಂತ ಸ್ವಲ್ಪ ಕಡಿಮೆಯಾದ ಕ್ಷತ್ರಿಯಧರ್ಮದಿಂದಾಗಲಿ ಜೀವಿಸಬಹುದು. ಅಷ್ಟು ಸಾಮರ್ಥ್ಯವಿಲ್ಲದವನು ಮಿತವಾಗಿಯೂ ಬಹಳ ಮಿತವಾಗಿಯೂ, ಇರುವ ಸ್ವಧರ್ಮದಲ್ಲೇ ಜೀವಿಸಬಹುದು. ಅದೂ ಸಾಧ್ಯವಾಗದಿದ್ದಲ್ಲಿ ಸತ್ಯಾನೃತವೆಂಬ ವೈಶ್ಯಧರ್ಮದಿಂದಲೂ ಜೀವಿಸಬಹುದು. (ಇಂತಹ ಜೀವನವೂ ಆಪತ್ಕಾಲದಲ್ಲಿ ದೋಷವಲ್ಲವೆಂದು ತಾತ್ಪರ್ಯ.) ಸೇವಾವೃತ್ತಿ ಎಂಬ ಶೂದ್ರವೃತ್ತಿಯನ್ನು ಮಾತ್ರ ಸರ್ವಪ್ರಕಾರದಿಂದಲೂ ಬಿಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಆಪದ್ಧರ್ಮ ಎಂಬ ಎಂಭತ್ತೆರಡನೆಯ ಅಧ್ಯಾಯವು ಮುಗಿದಿದೆ.

## ಎಂಭತ್ತೆರಡನೆಯ ಅಧ್ಯಾಯದ ಸಾರಾಂಶ.

ವರ್ಣಸಂಕರವನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸುವಾಗ ಆಯಾಯ ಸಂಕರಕ್ಕೆ ತಕ್ಕಂತೆ ಧರ್ಮಗಳನ್ನು ನಿರೂಪಿಸಲಾಯಿತು. ಈ ಅಧ್ಯಾಯದಲ್ಲಿ ಪ್ರಾಸಂಗಿಕವಾದ ಧರ್ಮದ ವಿಷಯದಲ್ಲಿ ಬ್ರಾಹ್ಮಣಾದಿ ವರ್ಣಗಳಿಗೆ ವಿಹಿತವಾದ ಸ್ವಧರ್ಮಗಳನ್ನು ನಿರೂಪಿಸಿ ಸ್ವಧರ್ಮದಿಂದ ಜೀವನವು ಲಭಿಸದಿರುವ ಆಪತ್ಕಾಲದಲ್ಲಿ ಕ್ಷತ್ರಿಯವೈಶ್ಯವೃತ್ತಿಗಳಿಂದಲೂ ಬ್ರಾಹ್ಮಣನು ಜೀವಿಸಬಹುದೆಂತಲೂ, ಹಾಗೆಯೇ ಕ್ಷತ್ರಿಯನೂ ವೈಶ್ಯವೃತ್ತಿಯಿಂದ ಆಪತ್ಕಾಲದ ಜೀವನವನ್ನು ನಡೆಸಬಹುದೆಂತಲೂ ನಿರೂಪಿಸಲಾಯಿತು. ಬ್ರಾಹ್ಮಣಾದಿ ಮೂರು ವರ್ಣದವರಿಗೂ ಶೂದ್ರವೃತ್ತಿಯನ್ನು ತ್ಯಜಿಸಬೇಕೆಂಬ ವಿಷಯದಲ್ಲಿ ಸಾಮ್ಯವಿದ್ದರೂ ತಮಗಿಂತ ಮೇಲ್ಪಟ್ಟ ವರ್ಣದ ಧರ್ಮದಲ್ಲಿ ಕ್ಷತ್ರಿಯಾದಿಗಳಿಗೆ ಅವಕಾಶವಿಲ್ಲ ಅಂದರೆ ಬ್ರಾಹ್ಮಣನಿಗೆ ತನ್ನ ಮತ್ತು ತನಗಿಂತ ಕಡಿಮೆಯಾದ ಎರಡು ವರ್ಣಗಳ ಧರ್ಮದಲ್ಲಿಯೂ, ಕ್ಷತ್ರಿಯನಿಗೆ ತನ್ನ ಮತ್ತು ತನಗಿಂತ ಕಡಿಮೆಯಾದ ವೈಶ್ಯವರ್ಣದ ಧರ್ಮದಲ್ಲಿಯೂ ವೈಶ್ಯನಿಗೆ ತನ್ನ ಧರ್ಮಮಾತ್ರದಲ್ಲಿಯೂ ಆಪತ್ಕಾಲದಲ್ಲಿ ಅವಕಾಶ ಉಂಟೆಂದು ಹೇಳಿದಂತಾಗುತ್ತದೆ. ಇದರಿಂದ ವೈಶ್ಯನಿಗೆ ಸತ್ಕಾಲದಲ್ಲಿಯೂ, ಆಪತ್ಕಾಲದಲ್ಲಿಯೂ ತನ್ನ ವೃತ್ತಿಯೇ ನಿಯತವೆಂದು ಫಲಿತವಾಗುತ್ತದೆ. ಹೀಗೆ ವೈಶ್ಯವೃತ್ತಿಯನ್ನು ಅವಲಂಬಿಸುವವರಿಗೆ ಕೃಷಿ ಮತ್ತು ವಾಣಿಜ್ಯ ಮತ್ತು ಲೇವಾದೇವಿ ಇವುಗಳೂ ಅನ್ವಯಿಸುತ್ತವೆಯಾದುದರಿಂದ ಅವುಗಳ ವಿಷಯದಲ್ಲಿ ಕೃಷಿಗೆ ಬೇಕಾದ ಶಾಸ್ತ್ರೀಯವಾದ ಮಂತ್ರ ಮೊದಲಾದ ಕ್ರಮಗಳನ್ನೂ, ವಾಣಿಜ್ಯದಲ್ಲಿ ಲಾಭದ ಪರಿಮಿತಿಯನ್ನೂ, ವಿಕ್ರಯಿಸುವ ಪದಾರ್ಥಗಳ ನಿಯಮವನ್ನೂ ನಿರೂಪಿಸಿ ಅದಕ್ಕೆ ಉಪಯುಕ್ತಗಳಾದ ತಿಥಿವಾರ ನಕ್ಷತ್ರಾದಿಗಳನ್ನೂ ನಿರೂಪಿಸಲಾಗಿದೆ. ಕೃಷಿಯು ಫಲಕ್ಕೆ ಬಂದಾಗಲೂ ಮಾಡಬೇಕಾದ ಫಲಯಜ್ಞವನ್ನೂ ನಿರೂಪಿಸಿ ಇಂತಹ ಆಪದ್ಧರ್ಮವನ್ನು ಹೊಂದಿದವನು ಅನುಕೂಲಸ್ಥಿತಿಗೆ ಬಂದಮೇಲೆ ಪ್ರಾಯಶ್ಚಿತ್ತವನ್ನಾಚರಿಸಿ ಪರಧರ್ಮಸಂಬಂಧದಿಂದುಂಟಾದ ಪಾತಕವನ್ನು ಹೋಗಲಾಡಿಸಿಕೊಳ್ಳಬೇಕೆಂತಲೂ ನಿರೂಪಿಸಲಾಯಿತು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

# ದ್ವಿತೀಯಖಂಡೇ

---

## ತ್ರ್ಯಶೀತಿತಮೋಽಧ್ಯಾಯಃ

**|| ರಾಮ ಉವಾಚ ||**

**ಕಾಮ್ಯಂ ಕರ್ಮ ಸಮಾಚಕ್ಷ್ವ ವಾಣಿಜ್ಯಂ ಯೇನ ಶುಧ್ಯತಿ ।**
**ಕೃಷಿಂ ಚ ಬಹುಲಾಂ ಚೈವ ಕರ್ಮಣಾ ಕೇನ ಚಾಪ್ನುತೇ || ೧ ||**

**|| ಪುಷ್ಕರ ಉವಾಚ ||**

**ಮೂಲೇನೋಪೋಷಿತಃ ಕುರ್ಯಾದಿದಂ ಕರ್ಮ ಪುರೋಹಿತಃ ।**
**ಉಪೋಷಿತಸ್ಯ ಧರ್ಮಜ್ಞ ಯಜಮಾನಸ್ಯ ನಿತ್ಯಶಃ || ೨ ||**

---

## ಎಂಭತ್ತಮೂರನೆಯ ಅಧ್ಯಾಯ.

೧-೨. ರಾಮನು ಪ್ರಶ್ನೆಮಾಡುತ್ತಾನೆ. ವಾಣಿಜ್ಯವೃತ್ತಿಯನ್ನು ಆಚರಿಸುವವನಿಗೆ ಆ ತನ್ನ ವೃತ್ತಿಯು ಯಾವ ಕರ್ಮದಿಂದ ಶುದ್ಧವಾಗಿಯೂ, ಫಲಪ್ರದವಾಗಿಯೂ ಆಗಬಹುದೋ ಅಂತಹ ಕಾಮ್ಯಕರ್ಮವನ್ನು ಹೇಳಬೇಕು. ಕರ್ಮ ಮತ್ತು ಕೃಷಿಯು ಹೆಚ್ಚಾಗಿ ಫಲಪ್ರದವಾಗಬೇಕಾದಲ್ಲಿ ಮಾಡಬೇಕಾದ ಕಾರ್ಯಕ್ರಮವನ್ನೂ ಸಹ ಹೇಳಬೇಕು. (ಫಲವಿಶೇಷದೃಷ್ಟಿಯಿಂದ ಮಾಡತಕ್ಕ ಕರ್ಮವು ಕಾಮ್ಯಕರ್ಮವೆಂದು ಶಾಸ್ತ್ರಕಾರರು ನಿರ್ಣಯಿಸಿರುವರು) ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ. ಮೂಲಾ ನಕ್ಷತ್ರದಲ್ಲಿ ಉಪವಾಸವಿದ್ದು ಪುರೋಹಿತನು ಈ ಕರ್ಮವನ್ನು ನಡೆಸಬೇಕು. ಯಾರಿಗೆ ಈ ಫಲವು ಲಭಿಸಬೇಕೋ ಅಂತಹ ಯಜಮಾನನನ್ನೂ ಉಪವಾಸ ಮಾಡಿಸಬೇಕು.

ಪ್ರಾಪ್ತಾಸೂತ್ತರಾಷಾಢಾಸು ಪ್ರಾಙ್ಮುಖಂ ಸ್ನಾಪಯೇನ್ನರಂ ।
ಯುಕ್ತೈರ್ವೇತಸಮೂಲೇನ ಶಂಖಮುಕ್ತಾಫಲೈಸ್ತಥಾ ॥ ೩ ॥

ಮಣಿಭಿಶ್ಚ ಯಥಾ ಲಾಭಂ ಕನಕೇನ ತಥೈವ ಚ ।
ಅಕಾಲಮೂಲೈಃ ಕಲಶೈಃ ಚತುರ್ಭಿರ್ಭೃಗುನಂದನ ॥ ೪ ॥

ನವೈಸ್ತು ಪೂಜಯೇದ್ದೇವಂ ಶಂಖಚಕ್ರಗಧಾಧರಂ ।
ಪೂರ್ವಾಷಾಢಾಂ ತಥೈವಾಪೋ ವರುಣಂ ಚ ನಿಶಾಕರಂ ॥ ೫ ॥

ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।
ಏತೇಷಾಮೇವ ಜುಹುಯಾತ್ತಥಾ ನಾಮ್ನಾ ಘೃತಂ ದ್ವಿಜ ॥ ೬ ॥

ನೀಲವಾಸಾವೃತೋ ಭೂತ್ವಾ ಕ್ಷಿಪೇದಪ್ಸು ಸಮಾಹಿತಃ ।
ನೀಲಾನಿ ರಾಮ ವಾಸಾಂಸಿ ಪಯಾಂಸಿ ವಿವಿಧಾನಿ ಚ ॥ ೭ ॥

---

೩–೪. ಹಾಗೆ ಉಪವಾಸದಲ್ಲಿರುವ ಯಜಮಾನನನ್ನು ಉತ್ತರಾಷಾಢಾ ನಕ್ಷತ್ರ ಬಂದಾಗ ಪೂರ್ವಾಭಿಮುಖವಾಗಿ ಕುಳ್ಳಿರಿಸಿ ನೀರಂಜಿಯಬೇರು. ಶಂಖ, ಮುತ್ತು, ತನಗೆ ಸಿಕ್ಕಿದಷ್ಟು ರತ್ನಗಳು ಅಥವಾ ಚಿನ್ನ, ಅಕಾಲದಲ್ಲಿ ಸಿಕ್ಕುವ ಮೂಲಿಕೆಗಳು ಇವುಗಳಿಂದ ಕೂಡಿದ ನಾಲ್ಕು ಕಲಶಗಳಿಂದ ಸ್ನಾನ ಮಾಡಿಸಬೇಕು.

೫–೬. ಮತ್ತು ಹೊಸದಾದ ಗಂಧಪುಷ್ಪಾದಿಗಳಿಂದ ಶಂಖಚಕ್ರಗದಾಧರನಾದ ಹರಿಯನ್ನೂ, ಪೂರ್ವಾಷಾಢ, ವರುಣ, ಚಂದ್ರ ಇವರನ್ನೂ ಸಹ ಗಂಧ ಪುಷ್ಪ ಧೂಪದೀಪನೈವೇದ್ಯ ನಮಸ್ಕಾರಗಳಿಂದ ಪೂಜಿಸಿ ಇವರನ್ನೇ ಉದ್ದೇಶಿಸಿ ನಾಮೋಚ್ಚಾರಣೆಮಾಡಿ ತುಪ್ಪದಿಂದ ಹೋಮವನ್ನು ಮಾಡಬೇಕು.

೭–೮. ಅನಂತರ ಕಪ್ಪುಬಟ್ಟೆಯನ್ನುಟ್ಟು ಶಾಂತಮನಸ್ಸಿನಿಂದ ಕಪ್ಪಾದ ವಸ್ತ್ರವನ್ನೂ, ನಾನಾವಿಧವಾದ ಹಾಲನ್ನೂ, ಕಡೆಗೋಲನ್ನೂ, ಮದ್ಯವನ್ನೂ,

**ತಥಾ ಮಂಥಂ ಸುರಾಂ ಚೈವ ಮೈರೇಯಂ ವಿವಿಧಂ ತಥಾ ।**
**ಶುಕ್ಲಾನಿ ಚೈವ ಮಾಲ್ಯಾನಿ ಧೂಪಂ ದದ್ಯಾತ್ತು ಕಂಬುನಾ ॥ ೮ ॥**

**ತಿಮ್ಯಸ್ಥಿ ಮಕರಾದಸ್ಥಿ ಶಂಖಮುಕ್ತಾಫಲೇ ತಥಾ ।**
**ಸುವರ್ಣಾಂತರಿತಂ ಕೃತ್ವಾ ಧಾರಯೇಚ್ಚ ತಥಾ ಮಣಿಂ ॥ ೯ ॥**

**ಕೃತ್ತ್ವೈ ತತ್ಸಿದ್ಧಿಮಾಪ್ನೋತಿ ವಾಣಿಜ್ಯೇ ನಾತ್ರ ಸಂಶಯಃ ।**
**ಸಮುದ್ರಯಾನೇ ಚ ತಥಾ ಕಾಂತಾರೇ ನ ನಿಷೀದತಿ ॥ ೧೦ ॥**

**ನೀಲಾನಿ ರಾಮ ವಾಸಾಂಸಿ ದಕ್ಷಿಣಾ ಚಾತ್ರ ಶಸ್ಯತೇ ।**
**ಶಂಖಂ ಸುವರ್ಣಂ ರೂಪ್ಯಂ ಚ ತಥಾ ಮುಕ್ತಾಫಲಾನಿ ಚ ॥ ೧೧ ॥**

**ಹೋತ್ರೇ ಕರ್ತ್ರೇ ದ್ವಿಜೇಭ್ಯಶ್ಚ ಸರ್ವಮೇತದ್ವಿಧೀಯತೇ ।**
**ಬ್ರಾಹ್ಮಣಾನ್ ಭೋಜಯೇಚ್ಚಾತ್ರ ಪರಮಾನ್ನಂ ತು ಸಂಸ್ಕೃತಂ ॥ ೧೨ ॥**

---

ಮೈರೇಯವೆಂಬ ಮತ್ತೊಂದು ಬಗೆಯ ಮದ್ಯವನ್ನೂ, ಬಿಳುಪಾದ ಹೂವನ್ನೂ ಸಹ ನೀರಿನಲ್ಲಿ ಹಾಕಬೇಕು. ಶಂಖದಿಂದ ಧೂಪವನ್ನು ಅರ್ಪಿಸಬೇಕು.

೯-೧೦. ತಿಮಿ ಎಂಬ ಮೀನಿನ ಮೂಳೆ, ಮೊಸಳೆಯ ಮೂಳೆ, ಶಂಖ, ಮುತ್ತು, ರತ್ನಗಳು ಇವುಗಳನ್ನು ಚಿನ್ನದ ಹೊದಿಕೆಯಿಂದ ಮಣಿಯನ್ನಾಗಿ ಮಾಡಿಸಿ ಧರಿಸಬೇಕು. ಈ ವಿಧಾನವನ್ನು ಆಚರಿಸಿದವನು ವಾಣಿಜ್ಯದಲ್ಲಿ ಅಭಿವೃದ್ಧಿ ಹೊಂದುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ. ಅವನು ವಾಣಿಜ್ಯವೃತ್ತಿಯಿಂದ ಸಮುದ್ರಯಾನ ಮಾಡುವಾಗಲೂ, ಅರಣ್ಯದಲ್ಲಿ ಸಂಚರಿಸಿದರೂ ಸಹ ಅವನಿಗೆ ಯಾವ ವಿಧವಾದ ದುಃಖವೂ ಉಂಟಾಗುವುದಿಲ್ಲ

೧೧-೧೨. ಈ ಕರ್ಮವನ್ನು ಆಚರಿಸುವಾಗ ಹೋಮಮಾಡುವವನಿಗೂ, ಕರ್ತೃವಾದ ಪುರೋಹಿತನಿಗೂ, ಬ್ರಾಹ್ಮಣರಿಗೂ, ಸಹ ಕಪ್ಪಾದ ವಸ್ತ್ರಗಳು, ಶಂಖ, ಸುವರ್ಣ, ಬೆಳ್ಳಿ, ಮುತ್ತುಗಳು ಇವನ್ನು ದಕ್ಷಿಣೆಯಾಗಿ ದಾನಮಾಡಬೇಕು. ಪಾಯಸದಿಂದ ಬ್ರಾಹ್ಮಣರನ್ನು ಭೋಜನಮಾಡಿಸಬೇಕು.

ಅಲಂಘಯನ್ನಿತ್ಯಮಥಾಸ್ಯಮೃಕ್ಷಂ
　　ಕರೋತಿ ಕರ್ಮ್ಯೈತದತಂದ್ರಿತಾತ್ಮಾ ।
ನ ಜಾತು ಲಾಭಾದ್ವಿನಿವರ್ತತೇಽಸೌ
　　ಸಮುದ್ರಮಾರ್ಗಾದಿವ ನಿಮ್ನಗಾ ವೈ　　॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಪೂರ್ವಾಷಾಢಾ ಸ್ನಾನವರ್ಣನೋ ನಾಮ ತ್ರ್ಯಶೀತಿತಮೋಽಧ್ಯಾಯಃ

---

೧೩. ಯಾವನು ಇಲ್ಲಿ ಹೇಳಿರುವ ವಿಧಿಯನ್ನು ಅತಿಕ್ರಮಿಸದೆ ಈ ಕರ್ಮವನ್ನು ನಡೆಸುತ್ತಾನೆಯೋ ಅವನು ಸಮುದ್ರಮಾರ್ಗದಿಂದ ನದಿಗಳು ಹಿಂತಿರುಗದಿರುವಂತೆ ಯಾವಾಗಲೂ ಲಾಭವಿಲ್ಲದೆ ಹಿಂದೆ ತಿರುಗುವುದಿಲ್ಲ. ಲಾಭವು ನಿಯತವಾಗಿ ಆಗಿಯೇ ಆಗುತ್ತದೆ ಎಂದು ತಾತ್ಪರ್ಯ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಪೂರ್ವಾಷಾಢಾಸ್ನಾನವರ್ಣನವೆಂಬ ಎಂಭತ್ತಮೂರನೆಯ ಅಧ್ಯಾಯ ಮುಗಿದಿದೆ.



## ಎಂಭತ್ತಮೂರನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ವಾಣಿಜ್ಯವೃತ್ತಿಗೆ ಅಭಿವೃದ್ಧಿಯನ್ನುಂಟುಮಾಡುವ ಕಾಮ್ಯಕರ್ಮವಿಷಯಕವಾದ ಭಾರ್ಗವನ ಪ್ರಶ್ನೆಗೆ ತಕ್ಕಂತೆ ವಿಹಿತಕಾಲದಲ್ಲಿ ಸ್ನಾನ, ಹೋಮ, ದಾನ ಇವುಗಳನ್ನು ನಿರೂಪಿಸಿರುವರು. ಫಲಕಾಮನೆಯಿಂದ ಮಾಡಲಾಗುವ ವಿಶೇಷ ಕರ್ಮವಾದುದರಿಂದ ಇದು ಕಾಮ್ಯಕರ್ಮವೆಂದು ಹೇಳಲಾಗಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಚತುರಶೀತಿತಮೋಽಧ್ಯಾಯಃ

|| ಪುಷ್ಕರ ಉವಾಚ ||

**ಸ್ವಯಂ ಸೂಪೋಷಿತೋ ವಿದ್ವಾನ್ ಯಜಮಾನಮುಪೋಷಿತಂ ।**
**ಮೂಲೇನ ಸ್ನಾಪಯೇನ್ನಿತ್ಯಂ ತಥಾಪ್ಯಾಶಾಮುಖಸ್ಥಿತಂ || ೧ ||**

**ದೂರ್ವಾಕುಶಶಮೀಪತ್ರಪೂರ್ಣೇನ ಸುದೃಢೇನ ಚ ।**
**ಕುಂಭದ್ವಯೇನ ಸ್ನಾತಸ್ತು ಪೂಜಯೇನ್ಮಧುಸೂದನಂ || ೨ ||**

**ವಿರೂಪಾಕ್ಷಂ ಸವರುಣಂ ಚಂದ್ರಂ ಮೂಲಂ ತಥೈವ ಚ ।**
**ಗಂಧಮಾಲ್ಯನಮಸ್ಕಾರಧೂಪ ದೀಪಾನ್ನ ಸಂಪದಾ || ೩ ||**

---

### ಎಂಭತ್ತನಾಲ್ಕನೆಯ ಅಧ್ಯಾಯ.

೧–೨. ತಾನೂ ಉಪವಾಸದಲ್ಲಿದ್ದು ಪುರೋಹಿತನಾದವನು ಉಪವಾಸದಲ್ಲಿರುವ ಯಜಮಾನನನ್ನು ಮೂಲಾನಕ್ಷತ್ರದಲ್ಲಿ ಪಶ್ಚಿಮಾಭಿ ಮುಖವಾಗಿ ಕುಳ್ಳಿರಿಸಿ ಗರಿಕೆ, ದರ್ಭೆ, ಬನ್ನಿಯಪತ್ರೆ ಇವುಗಳಿಂದ ಕೂಡಿದ ದೃಢವಾದ ಎರಡು ಕುಂಭಗಳಿಂದ ಸ್ನಾನಮಾಡಿಸಬೇಕು. ಮತ್ತು ಹರಿಯನ್ನೂ ಪೂಜಿಸಬೇಕು.

೩–೫. ಶಂಕರ, ವರುಣ, ಚಂದ್ರ, ಮೂಲ, ಇವರನ್ನು ಗಂಧಪುಷ್ಪ ಧೂಪದೀಪನೈವೇದ್ಯಾದಿಗಳಿಂದ ಯಥಾವಿಧಿಯಾಗಿ ಪೂಜಿಸಿ ಇವರನ್ನೇ ಉದ್ದೇಶಿಸಿ ಅವರವರ ನಾಮೋಚ್ಚಾರಣಮಾಡಿ ತುಪ್ಪದಿಂದ ಹೋಮವನ್ನೂ, ಮಾಡಬೇಕು.

ಏತೇಷಾಮೇವ ಜುಹುಯಾತ್ತಥಾ ನಾಮ್ನಾ ಘೃತಂ ದ್ವಿಜ ।
ಪೀತವಾಸಾಸ್ತತೋ ಭೂತ್ವಾ ಮತ್ಸ್ಯಕುಲ್ಮಾಷಸೂಕರೈಃ ॥ ೪ ॥

ಸುರಾಕೃಸರಸಂಯುಕ್ತೈಃ ಸ್ನಾನೋಕ್ತಾಶಾಮುಖಸ್ಥಿತಃ ।
ಬಲಿಂ ನಿರ್ಋತಯೇ ದದ್ಯಾಜ್ಜಾನು ಕೃತ್ವಾ ತತಃ ಕ್ಷಿತೌ ॥ ೫ ॥

ತತೋಽಷ್ಟಾದಶಭಿಃ ಪುಷ್ಪೈಃ ಮೂಲೈಃ ಪಂಚಭಿರೇವ ಚ ।
ಸುವರ್ಣಗರ್ಭಂ ಚ ಮಣಿಂ ವಿದ್ವಾನ್ ಶಿರಸಿ ಧಾರಯೇತ್ ॥ ೬ ॥

ಕೃತ್ವೈತತ್ಸಕಲಂ ಕರ್ಮ ಕೃಷಿಂ ಬಹುಫಲಾಂ ಲಭೇತ್ ।
ದಕ್ಷಿಣಾ ಚಾತ್ರ ದಾತವ್ಯಾ ಮೂಲಾನಿ ಚ ಫಲಾನಿ ಚ ॥ ೭ ॥

ಪೀತಾನಿ ಚೈವ ವಸ್ತ್ರಾಣಿ ಕನಕಂ ರಜತಂ ತಥಾ ।
ಭೋಜನಂ ಚಾತ್ರ ದಾತವ್ಯಂ ಬ್ರಾಹ್ಮಣಾನಾಮಭೀಪ್ಸಿತಂ ॥ ೮ ॥

---

ಅನಂತರ ಹೊಂಬಣ್ಣದ ವಸ್ತ್ರವನ್ನು ಧರಿಸಿ ಮೀನು, ಅಲಸಂದೆ, ಹಂದಿ, ಮದ್ಯ, ಚಿಗಳಿ ಇವುಗಳಿಂದ ಕೂಡಿದ ಬಲಿಯನ್ನು ಸ್ನಾನಕ್ಕಾಗಿ ಹೇಳಿರುವ ದಿಕ್ಕಿಗೆ ಅಭಿಮುಖನಾಗಿ ನಿಋಋತಿಯನ್ನುದ್ದೇಶಿಸಿ ಭೂಮಿಯ ಮೇಲೆ ಮಂಡಿಗಳನ್ನಿಟ್ಟು ಕುಳಿತು ಅರ್ಪಿಸಬೇಕು.

೬-೭. ಅನಂತರ ಹದಿನೆಂಟು ಹೂವುಗಳಿಂದಲೂ, ಐದು ಬೇರುಗಳಿಂದಲೂ ಪೂಜಿಸಿ ಸುವರ್ಣದಲ್ಲಿ ಕಟ್ಟಿದ ಮಣಿಯನ್ನು ಜ್ಞಾನಿಯಾದವನು ತಲೆಯಲ್ಲಿ ಧರಿಸಬೇಕು. ಈ ಕರ್ಮವೆಲ್ಲವನ್ನೂ ಮಾಡಿದವನು ಬಹುಮಟ್ಟಿಗೂ ಫಲಕಾರಿಯಾದ ಕೃಷಿಯನ್ನು ಹೊಂದುತ್ತಾನೆ. ಈ ಕರ್ಮದಲ್ಲಿಯೂ ಫಲಮೂಲಾದಿಗಳನ್ನು ದಕ್ಷಿಣೆಯಾಗಿ ಕೊಡಬೇಕು.

೮-೯. ಹೊಂಬಣ್ಣದ ವಸ್ತ್ರಗಳನ್ನೂ, ಚಿನ್ನ ಬೆಳ್ಳಿಗಳನ್ನೂ ದಾನಮಾಡಬೇಕು. ಬ್ರಾಹ್ಮಣರಿಗೆ ಅಭಿಮತವಾದ ಭೋಜನವನ್ನೂ ಮಾಡಿಸಬೇಕು ಎಲ್ಲೆ

ಅಲಂಘಯನ್ಮೂಲಮಿದಂ ಹಿ ಕುರ್ವನ್
ಸ್ನಾನಂ ಸದಾ ಭಾರ್ಗವವಂಶಮುಖ್ಯ ।
ಕೃಷಿಂ ಸಮಾಪ್ನೋತಿ ಸದೈವ ವಿದ್ವಾನ್
ಯಥೇಪ್ಸಿತಂ ನಾತ್ರ ವಿಚಾರ್ಯಮಸ್ತಿ　　　　॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಮೂಲಸ್ನಾನ ವರ್ಣನೋ ನಾಮ ಚತುರಶೀತಿತಮೋಽಧ್ಯಾಯಃ

---

ಭೃಗುಕುಲೋತ್ತಮನೇ ಇಲ್ಲಿ ಹೇಳಿರುವ ಈ ಮೂಲಸ್ನಾನವನ್ನು ಯಾವ ವಿಧದಲ್ಲೂ ಅತಿಕ್ರಮಿಸದೆ ಮಾಡುವವನು ಸಂಪೂರ್ಣವಾದ ಕೃಷಿಯ ಫಲವನ್ನು ಹೊಂದುತ್ತಾನೆ ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಮೂಲಸ್ನಾನವರ್ಣನವೆಂಬ ಎಂಭತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.



## ಎಂಭತ್ತನಾಲ್ಕನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಕಾಮ್ಯಕರ್ಮ ಪ್ರಕರಣದಲ್ಲಿ ಕೃಷಿಯು ಉತ್ತಮ ಫಲವನ್ನು ಕೊಡಬೇಕಾದಲ್ಲಿ ಮಾಡಬೇಕಾದ ಕಾಮ್ಯಕರ್ಮವನ್ನು ಮೂಲ ಸ್ನಾನವೆಂಬ ವಿಧಿಯಿಂದ ಅದಕ್ಕೆ ಬೇಕಾಗುವ ಯಜನದಾನದಕ್ಷಿಣೆಗಳೊಡನೆ ವಿವರಿಸಲಾಗಿದೆ.



*

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಪಂಚಾಶೀತಿತಮೋಽಧ್ಯಾಯಃ

|| ರಾಮ ಉವಾಚ ||

**ಧರ್ಮಮಾರ್ಗಮಹಂ ತ್ವತ್ತಃ ಶ್ರೋತುಮಿಚ್ಛಾಮಿ ಮೇ ವದ ।**
**ತ್ವಂ ಹಿ ವೇತ್ಥ ಮಹಾಭಾಗ ಸರ್ವಧರ್ಮಾನ್ಯಥಾವಿಧಿ || ೧ ||**

|| ಪುಷ್ಕರ ಉವಾಚ ||

**ಷೋಡಶರ್ತು ನಿಶಾಃ ಸ್ತ್ರೀಣಾಮಾದ್ಯಾಸ್ತಿಸ್ರಸ್ತು ಗರ್ಹಿತಾಃ ।**
**ವ್ರಜೇದ್ಯುಗ್ಮಾಸು ಪುತ್ರಾರ್ಥೀ ತತಃ ಪರಮಿತಿ ಶ್ರುತಿಃ || ೨ ||**

---

### ಎಂಭತ್ತೈದನೆಯ ಅಧ್ಯಾಯ.

೧. ಪುನಃ ಭಾರ್ಗವನು ಪ್ರಶ್ನೆಮಾಡುತ್ತಾನೆ. ಎಲೈ ಮಹಾತ್ಮನೇ ನೀನು ಎಲ್ಲಾ ಧರ್ಮಗಳನ್ನೂ ಯಥಾವಿಧಿಯಾಗಿ ತಿಳಿದಿರುವೆ. ಆದುದರಿಂದ ಆ ಧರ್ಮ ಮಾರ್ಗವನ್ನು ನಿನ್ನಿಂದಲೇ ತಿಳಿಯಲು ನನಗೆ ಇಚ್ಛೆಯುಂಟಾಗುತ್ತಿದೆ. ಆದುದ ರಿಂದ ದಯವಿಟ್ಟು ಅದನ್ನೂ ಹೇಳಬೇಕು ಎನ್ನಲು ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಎಲ್ಲಾ ಧರ್ಮಗಳಿಗೂ ಮೂಲ ಭೂತವಾದ ಗೃಹಸ್ಥನ ಋತುಕಾಲ ಗಮನವನ್ನು ಪ್ರಾರಂಭಿಸುತ್ತಾರೆ. ಸ್ತ್ರೀಯರಿಗೆ ಸ್ವಾಭಾವಿಕವಾದ ಋತುಕಾಲ ಹದಿನಾರು ದಿವಸಗಳು. ಆ ಋತುಕಾಲದಲ್ಲಿ ಮೊದಲಿನ ಮೂರುದಿನಗಳು ನಿಂದ್ಯವೆಂದು ಹೇಳಲ್ಪಟ್ಟಿವೆ. ಉಳಿದ ರಾತ್ರಿಗಳಲ್ಲಿ ಶುದ್ಧವಾದ ಯುಗ್ಮದಿನದಲ್ಲಿಯೇ (ಸಮದಿನ) ಪುತ್ರಾರ್ಥಿಯಾದವನು ಸ್ತ್ರೀಸಮಾಗಮ ಹೊಂದಬೇಕು ಇದು ವೇದದಿಂದಲೇ

**ಅಯುಗ್ಮಾಸು ತಥಾ ರಾಮ ದುಹಿತಾರ್ಥೀ ಸ್ತ್ರಿಯಂ ವ್ರಜೇತ್ ।**
**ವಿಕೃಷ್ಟಯುಗ್ಮಾ[1]ಮುತ ಯೇ ಪ್ರಶಸ್ತಾಃ ಪ್ರಿಯದರ್ಶನಾಃ ॥ ೩ ॥**

**ದೀರ್ಘಾಯುಷೋ ಧರ್ಮಪರಾ ಭವಂತೀಹ ಧನಾನ್ವಿತಾಃ ।**
**ಗರ್ಭಸ್ಯ ಸ್ಪಷ್ಟತಾಧಾನೇ ಗರ್ಭಾಧಾನಿಕಮಿಷ್ಯತೇ ॥ ೪ ॥**

**ಪುರಾ ತು ಸ್ಪರ್ಶನಂ ಕಾರ್ಯಂ ಸೇವನಂ ತು ವಿಚಕ್ಷಣೈಃ ।**
**ಷಷ್ಠೇಽಷ್ಟಮೇ ವಾ ಸೀಮಂತಕರ್ಮಸ್ವೇತೇಷು ಚ ತ್ರಿಷು ॥ ೫ ॥**

**ಪುನ್ನಾಮಧೇಯಂ ನಕ್ಷತ್ರಂ ಪುತ್ರಕಾಮಸ್ಯ ಶಸ್ಯತೇ ।**
**ಆದಿತ್ಯಪುಷ್ಯಸಾವಿತ್ರಸೌಮ್ಯಮೂಲಾಃ ಸವೈಷ್ಣವಾಃ ॥ ೬ ॥**

---

ವಿಹಿತವಾದುದು. ವಿಷಮದಿನಗಳಲ್ಲಿ ಪುತ್ರಿಯನ್ನು ಅಪೇಕ್ಷಿಸುವವನು ಸ್ತ್ರೀಗಮನ ಮಾಡಬೇಕೆಂದೂ ಮೊದಲನೆಯ ಯುಗ್ಮದಿನಗಳಿಗಿಂತಲೂ ಕೊನೆಕೊನೆಯ ಯುಗ್ಮ ದಿನಗಳು 'ದೀರ್ಘಾಯುಷೋ ಧರ್ಮಪರಾ' ಎಂದು ಹೇಳಲಾಗುವ ಪುತ್ರಪ್ರಾಪ್ತಿಗೆ ಕಾರಣಗಳಾಗುತ್ತವೆಯಾಗಿ ಅವೇ ಪ್ರಶಸ್ತಗಳೆಂದೂ ತಿಳಿಯಬೇಕು.

೪-೫. ಇಂತಹ ಕಾಲದಲ್ಲಿ ಜನಿಸುವ ಮಕ್ಕಳು ದೀರ್ಘಾಯುಸ್ಸುಳ್ಳವ ರಾಗಿಯೂ, ಧರ್ಮಪರರಾಗಿಯೂ, ಧನಿಕರಾಗಿಯೂ ಆಗುತ್ತಾರೆ. ಗರ್ಭದ ಸೃಷ್ಟಿ ಮತ್ತು ಅದಕ್ಕೆ ಬೇಕಾದ ಆಧಾನ ಈ ಕರ್ಮಗಳು ಗರ್ಭಾಧಾನಿಕವೆಂದು ಹೇಳಲ್ಪಡು ತ್ತವೆ. ಇಂತಹ ಗರ್ಭಾಧಾನ ಕಾಲದಲ್ಲಿ ಪಂಡಿತರಾದವರು ಮೊದಲು ಸ್ತ್ರೀಯನ್ನು ಸೇವಿಸಿ ಅನಂತರ ಅವಳಿಗೆ ಪುಂಸವನವನ್ನು ನಡೆಸಬೇಕು. ಆರನೆಯ ತಿಂಗಳಲ್ಲಿ ಅಥವಾ ಎಂಟನೆಯ ತಿಂಗಳಲ್ಲಿ ಸೀಮಂತವನ್ನು ನಡೆಯಿಸಬೇಕು. ಆಧಾನ, ಪುಂಸವನ ಸೀಮಂತ ಈ ಮೂರು ಕರ್ಮಗಳಲ್ಲಿಯೂ ಪುತ್ರಾರ್ಥಿಯಾದವನಿಗೆ ಪುರುಷನಾಮಧೇಯವುಳ್ಳ ನಕ್ಷತ್ರಗಳೇ ಪ್ರಶಸ್ತಗಳೆಂದು ತಿಳಿಯಬೇಕು.

೬-೭. ಪುನರ್ವಸು, ಪುಷ್ಯ, ಅನೂರಾಧಾ, ಮೃಗಶಿರ, ಮೂಲ, ಶ್ರವಣ, ಇವು ಪುಂನ್ನಾಮಧೇಯ ನಕ್ಷತ್ರಗಳೆಂದು ಹೇಳಲ್ಪಟ್ಟಿವೆ. ಇವುಗಳಲ್ಲಿ ಸ್ವಾತಿಯನ್ನೂ

---

1 ಇಲ್ಲಿ ಪಾಠವು ಅಶುದ್ಧವಾಗಿದೆ. ವಿಕೃಷ್ಟಾಃ ತಾಸುಯುಗ್ಮಾಯೆ ಎಂದಿರಬೇಕು.

ಪುನ್ನಾಮಧೇಯೋ ನಿರ್ದಿಷ್ಟಾಃ ಸ್ಯಾತಿಕ್ಷ್ಯೈವಾತ್ರ ಸಪ್ತಮಂ ।
ಅಂಗಾರಕದಿನಂ ವರ್ಜ್ಯಂ ತಿಥಿಂ ರಿಕ್ತಾಂ ಚ ವರ್ಜಯೇತ್ ॥ ೭ ॥

ಅಚ್ಛಿನ್ನನಾಭ್ಯಾಂ ಕರ್ತವ್ಯಂ ಜಾತಕರ್ಮ ವಿಚಕ್ಷಣೈಃ ।
ಆಶೌಚೇ ತು ವ್ಯತಿಕ್ರಾಂತೇ ನಾಮಕರ್ಮವಿಧೀಯತೇ ॥ ೮ ॥

ಅಥವಾ ಭಾರ್ಗವಶ್ರೇಷ್ಠ ದಿನೇ ಪೂಜಿತಲಕ್ಷಣೇ ।
ಮೃದುಧ್ರುವೇಷು ಋಕ್ಷೇಷು ನಾಮಕರ್ಮ ವಿಧೀಯತೇ ॥ ೯ ॥

ತತ್ರಾಪ್ಯಂಗಾರಕದಿನಂ ತಿಥಿಂ ರಿಕ್ತಾಂ ಚ ವರ್ಜಯೇತ್ ।
ನಾಮಧೇಯಂ ತು ವರ್ಣಾನಾಂ ಕರ್ತವ್ಯಂ ತು ಸಮಾಕ್ಷರಂ ॥ ೧೦ ॥

ಮಾಂಗಲ್ಯಂ ಬ್ರಾಹ್ಮಣಸ್ಯೋಕ್ತಂ ಕ್ಷತ್ರಿಯಸ್ಯ ಬಲಾನ್ವಿತಂ ।
ವೈಶ್ಯಸ್ಯ ಧನಸಂಯುಕ್ತಂ ಶೂದ್ರಸ್ಯ ತು ಜುಗುಪ್ಸಿತಂ ॥ ೧೧ ॥

---

ಏಳನೆಯದಾಗಿ ಪರಿಗಣಿಸುವರು. ಮಂಗಲವಾರವನ್ನೂ, ರಿಕ್ತತಿಥಿಯನ್ನೂ ಈ ಕರ್ಮಗಳಲ್ಲಿ ಬಿಡಬೇಕು. ಶಿಶುವಿಗೆ ಜಾತಕರ್ಮವನ್ನು, ಹೊಕ್ಕಳು ಕುಡಿಯನ್ನು ಕೊಯ್ಯುವ ಮೊದಲೇ ಮಾಡಬೇಕಾದುದು ಶಾಸ್ತ್ರಜ್ಞನ ಕಾರ್ಯ.

೮-೯. ವೃದ್ಧಿಯು ಕಳೆದ ಮೇಲೆ ನಾಮಕರಣವು ಶಾಸ್ತ್ರದಲ್ಲಿ ವಿಹಿತವಾಗಿದೆ. ಎಲೈ ಭಾರ್ಗವನೇ ಒಂದುವೇಳೆ ಆಗ ನಾಮಕರಣವು ನಡೆಯದೇ ಇದ್ದಲ್ಲಿ ಶುಭದಿನದಲ್ಲಿ ಮೃದುಸ್ಥಿರ ನಕ್ಷತ್ರಗಳಲ್ಲಿ ನಾಮಕರಣವನ್ನು ಮಾಡಬಹುದೆಂದು ಶಾಸ್ತ್ರವಿಧಾನವಿರುತ್ತದೆ. ಆಗಲೂ ಸಹ ಮಂಗಳವಾರ ಮತ್ತು ರಿಕ್ತತಿಥಿಗಳನ್ನು ವರ್ಜಿಸಿಬೇಕು.

೧೦-೧೨. ನಾಮಕರಣವನ್ನು ಮಾಡುವಾಗ ಆಯಾಯ ಹೆಸರು ಸಮಾಕ್ಷರವಾಗಿರಬೇಕು. ಬ್ರಾಹ್ಮಣನಿಗೆ ಮಂಗಲವಾಚಕಶಬ್ದಪೂರ್ವಕವಾಗಿಯೂ, ಕ್ಷತ್ರಿಯನಿಗೆ ಬಲ (ಪೌರುಷ) ಸೂಚಕವಾದ ಪೂರ್ವಪದ ಉಳ್ಳದ್ದಾಗಿಯೂ, ವೈಶ್ಯನಿಗೆ ಧನ, ವಸು ಮುಂತಾದ ವಾಚಕಶಬ್ದ ಪೂರ್ವಪದ ಉಳ್ಳದ್ದಾಗಿಯೂ, ಶೂದ್ರನಿಗೆ ನಿಂದಾವಾಚಕಪದಪೂರ್ವಕವಾಗಿಯೂ ಹೆಸರುಗಳನ್ನಿಡಬೇಕು. ಬ್ರಾಹ್ಮಣನಿಗೆ ಶರ್ಮ ಎಂಬ ಹೆಸರಿನ ಕೊನೆಯ ಶಬ್ದವೂ, ಕ್ಷತ್ರಿಯನಿಗೆ ವರ್ಮ, ವೈಶ್ಯನಿಗೆ ಧನಾರ್ಥಕವಾದ ಶಬ್ದ, ಶೂದ್ರನಿಗೆ ದಾಸ ಶಬ್ದವೂ ಕೊನೆಯದಾಗಿರಬೇಕು. (ಶುಭಶರ್ಮಾ, ಮಂಗಲಶರ್ಮಾ ಇತ್ಯಾದಿ ಬ್ರಾಹ್ಮಣನಿಗೂ, ಬಲವರ್ಮಾ, ಮಿತ್ರವರ್ಮ

ಶರ್ಮ ವರ್ಮ ಧನಾರ್ಥಂ ತು ದಾಸಾಂತಂ ಚಾನುಪೂರ್ವಶಃ ।
ನಾಮಧೇಯಂ ತು ಕರ್ತವ್ಯಂ ಸ್ವಕುಲಾನುಗಮೇನ ವಾ ॥ ೧೨ ॥

ಸ್ತ್ರೀಣಾಂ ಸುಖೋದ್ಯಮಕ್ರೂರಂ ವಿಸ್ಪಷ್ಟಾರ್ಥಂ ಮನೋಹರಂ ।
ನಾಮ ಕಾರ್ಯಂ ಮಹಾಭಾಗ ನ ಕಾರ್ಯಂ ವಿಷಮಾಕ್ಷರಂ ॥ ೧೩ ॥

ಬಾಲಂ ತು ಕೃತನಾಮಾನಂ ಪೂಜಿತಸ್ಯ ಗದಾಭೃತಃ ।
ನಿವೇದಯೇನ್ಮಹಾಭಾಗ ತವ ಪುತ್ರೋಯಮಿತ್ಯುತ ॥ ೧೪ ॥

ಶಿಷ್ಯಃ ಪ್ರೇಷ್ಯಶ್ಚ ದಾಸಶ್ಚ ಸಂವಿಭಾಜ್ಯಶ್ಚ ಕೇಶವಃ ।
ನಿತ್ಯಂ ಸಂತಿ ವಿಭಾಗೇನ ಶುಭೇನ ಮಧುಸೂದನಃ ॥ ೧೫ ॥

ತತಸ್ತು ಪೂಜನಂ ಕಾರ್ಯಂ ಬ್ರಾಹ್ಮಣಾನಾಂ ಯಥಾವಿಧಿ ।
ಭೋಜಯೇದ್ಬ್ರಾಹ್ಮಣಾಂಶ್ಚಾತ್ರ ಪರಮಾನ್ನಂ ಸದಕ್ಷಿಣಂ ॥ ೧೬ ॥

---

ಇತ್ಯಾದಿಗಳು ಕ್ಷತ್ರಿಯನಿಗೂ, ವಸುಭೂತಿಃ, ವಸುಮಿತ್ರಂ, ಇತ್ಯಾಗಳು ವೈಶ್ಯನಿಗೂ ದೀನದಾಸಃ ಇತ್ಯಾದಿ ಶೂದ್ರನಿಗೂ ನಾಮಗಳಿರಬೇಕೆಂದು ತಾತ್ಪರ್ಯ) ಅಥವಾ ತಮ್ಮ ವಂಶಕ್ರಮಕ್ಕೆ ತಕ್ಕಂತೆ ಪಿತಾಮಹಾದಿಗಳ ನಾಮಧೇಯಗಳನ್ನಾದರೂ ಇಡಬಹುದು.

೧೪. ಸ್ತ್ರೀಶಿಶುಗಳಿಗೆ ಸುಖವಾಗಿ ಉಚ್ಚರಿಸಲು ಅರ್ಹವಾಗಿಯೂ, ಕ್ರೂರವಾಗಿ ತೋರದೆಯೂ ಸ್ಪಷ್ಟಾಕ್ಷರಗಳಿಂದ ಕೂಡಿ ಮನೋಹರವಾಗಿಯೂ ಇರುವ ಹೆಸರನ್ನಿಡ ಬೇಕು ಸ್ತ್ರೀಯರ ಹೆಸರೂ ಸಹ ವಿಷಮಾಕ್ಷರವಾಗಿರಕೂಡದು (ಲಕ್ಷ್ಮಿ, ಯಶೋದೇವಿ ಇತ್ಯಾದಿಗಳು) ನಾಮಕರಣದಿಂದ ಸಂಸ್ಕರಿಸಲ್ಪಟ್ಟ ಬಾಲಕನನ್ನು ಮಧುಸೂದನ ನನ್ನು ಪೂಜಿಸಿ ಅವನಲ್ಲಿ ಇವನು ನಿನ್ನ ಮಗನು ಎಂದು ಹೇಳಿ ಸಮರ್ಪಿಸಬೇಕು.

೧೫–೧೬. ಇದು ಪುತ್ರನಿಗೆ ಮಾತ್ರವಲ್ಲ ಶಿಷ್ಯ, ಭೃತ್ಯ, ದಾಸ ಇವರೆಲ್ಲರೂ ಮಧುಸೂದನನಿಗೆ ಸೇರಿದವರೆಂದು ಭಾವಿಸಬೇಕು ಏತಕ್ಕೆಂದರೆ ಆ ಮಧುಸೂದನನೇ ಶುಭಕರವಾದ ಎಲ್ಲಾ ರೂಪಗಳಿಂದಲೂ ಯಾವಾಗಲೂ ಎಲ್ಲರಲ್ಲೂ ನೆಲಸಿರುವನು ಈ ರೀತಿ .ಮಧುಸೂದನನಲ್ಲಿ ಒಪ್ಪಿಸಿದನಂತರ ಬ್ರಾಹ್ಮಣರ ಪ್ರೀತಿಯನ್ನು ಯಥಾವಿಧಿಯಾಗಿ ಉಂಟುಮಾಡಬೇಕು, ಪರಮಾನ್ನ ಭೋಜನದಿಂದಲೂ ದಾನ ದಕ್ಷಿಣಾದಿಗಳಿಂದಲೂ ಆ ಬ್ರಾಹ್ಮಣರನ್ನು ಪೂಜಿಸಬೇಕು.

**ಚೂಡಾಕರ್ಮ ತತಃ ಕಾರ್ಯಂ ಭೃಗುಪುತ್ರ ಯಥಾಕುಲಂ ।**
**ನಕ್ಷತ್ರಾಣ್ಯಸ್ಯ ಶಸ್ಯಂತೇ ಮೃದುಕ್ಷಿಪ್ರಚರಾಣಿ ಚ		॥ ೧೭ ॥**

**ತಿಥಿಂ ವಿವರ್ಜಯೇದ್ರಿಕ್ತಾಂ ಸೂರ್ಯಾರಾರ್ಕಿದಿನಾನ್ಯಪಿ ।**
**ತತ್ರಾಪಿ ವಾಸುದೇವಸ್ಯ ಪೂಜಾಂ ಕೃತ್ವಾ ವಿಶೇಷತಃ		॥ ೧೮ ॥**

**ಗರ್ಭಾಷ್ಟಮೇಽಬ್ದೇ ಕರ್ತವ್ಯಂ ಬ್ರಾಹ್ಮಣಸ್ಯೋಪನಾಯನಂ ।**
**ಗರ್ಭಾದೇಕಾದಶೇ ರಾಜ್ಞಃ ಗರ್ಭಾಚ್ಚ ದ್ವಾದಶೇ ವಿಶಃ		॥ ೧೯ ॥**

**ಚೂಡಾಕರ್ಮಣಿ ಯಃ ಪ್ರೋಕ್ತಃ ಕಾಲಃ ಸೋಽತ್ರಾಪಿ ಶಸ್ಯತೇ ।**
**ನಕ್ಷತ್ರಾಣಾಂ ಯಥೋಕ್ತಾನಾಂ ಮುಹೂರ್ತಾಶ್ಚ ಶುಭಪ್ರದಾಃ	॥ ೨೦ ॥**

**ಷೋಡಶಾಬ್ದೇ ಹಿ ವಿಪ್ರಸ್ಯ ರಾಜನ್ಯಸ್ಯ ದ್ವಿವಿಂಶತಿಃ ।**
**ವಿಂಶತೇಶ್ಚ ಚತುಷ್ಕಂ ತು ವೈಶ್ಯಸ್ಯ ಪರಿಕೀರ್ತಿತಂ		॥ ೨೧ ॥**

---

೧೭–೧೮. ಎಲೈ ಭಾರ್ಗವನೇ, ಅನಂತರ ತಮ್ಮ ತಮ್ಮ ಕುಲಧರ್ಮಕ್ಕೆ ತಕ್ಕಂತೆ ಚೌಲವನ್ನು ಮಾಡಬೇಕು. ಈ ಕರ್ಮಕ್ಕೆ ಮೃದುನಕ್ಷತ್ರಗಳೂ ಕ್ಷಿಪ್ರ ನಕ್ಷತ್ರಗಳೂ, ಚರನಕ್ಷತ್ರಗಳೂ, ಪ್ರಶಸ್ತ. ರಿಕ್ತತಿಥಿಯನ್ನೂ ಭಾನು, ಮಂಗಲ, ಶನಿ ಈ ವಾರಗಳನ್ನೂ ಸಹ ವರ್ಜಿಸಬೇಕು. ಈ ಕರ್ಮದಲ್ಲಿಯೂ ಸಹ ವಾಸುದೇವನಿಗೆ ವಿಶೇಷವಾದ ಪೂಜಾದಿಗಳನ್ನು ಮಾಡಬೇಕು.

೧೯–೨೦. ಬ್ರಾಹ್ಮಣನಾದವನು ಗರ್ಭಾಷ್ಟಮದಲ್ಲಿ ಉಪನಯನಮಾಡಬೇಕು. ಕ್ಷತ್ರಿಯನಾದವನು ಗರ್ಭಕ್ಕ ಹನ್ನೊಂದನೆಯ ವರ್ಷದಲ್ಲಿಯೂ ವೈಶ್ಯನಾದವನು ಗರ್ಭಕ್ಕೆ ಹನ್ನೆರಡನೆಯ ವರ್ಷದಲ್ಲಿಯೂ ಉಪನಯನ ಮಾಡಬೇಕು. ಚೂಡಾಕರ್ಮ (ಚೌಲ)ದಲ್ಲಿ ಯಾವ ನಕ್ಷತ್ರ ಮುಹೂರ್ತ ಕಾಲಗಳನ್ನು ಹೇಳಿರುವೆವೋ ಅವೇ ಉಪನಯನದಲ್ಲಿಯೂ ಶುಭಕರಗಳೆಂದು ತಿಳಿಯಬೇಕು.

೨೧–೨೨. ಬ್ರಾಹ್ಮಣನಿಗೆ ಹದಿನಾರು ವರ್ಷದವರೆಗೂ ಕ್ಷತ್ರಿಯನಿಗೆ ಇಪ್ಪತ್ತೆರಡು ವರ್ಷದವರೆಗೂ ವೈಶ್ಯನಿಗೆ ಇಪ್ಪತ್ತನಾಲ್ಕನೇ ವರ್ಷದವರೆಗೂ ಸಹ ಈ ಸಾವಿತ್ರಿಯ ಉಪದೇಶಕಾಲವು ಅತಿಕ್ರಮಿಸುವುದಿಲ್ಲ. ಹಾಗೆ ಈ ಕಾಲಗಳಲ್ಲಿ ಉಪನಯನದಿಂದ ಇವರು ಸಂಸ್ಕಾರ ಹೊಂದದೆ ಇದ್ದು ಕಾಲಾತೀತವಾದಲ್ಲಿ ಆಗ

**ಸಾವಿತ್ರೀ ನಾತಿವರ್ತೇತ ಅತ ಊರ್ಧ್ವಂ ನಿವರ್ತತೇ ।**
**ವಿಜ್ಞಾತವ್ಯಾ ಸ್ತ್ರಯೋಪ್ಯೇತೇ ಯಥಾಕಾಲಮಸಂಸ್ಕೃತಾಃ ॥ ೨೨ ॥**

**ಸಾವಿತ್ರೀಪತಿತಾ ವ್ರಾತ್ಯಾ ವ್ರಾತ್ಯಸ್ತೋಪಕ್ರಮಾದೃತೇ ।**
**ಮುಂಜಸ್ಯ ಬಿಲ್ವಜಾನಾಂ ಚ ಕ್ರಮಾನ್ಮೌಂಜಿಃ ಪ್ರಕೀರ್ತಿತಃ ॥ ೨೩ ॥**

**ಮಾರ್ಗವೈಯಾಘ್ರಚರ್ಮಾಣಿ ವಸ್ತ್ರಾಣಿ ವ್ರತಚಾರಿಣಾಂ ।**
**ಪರ್ಣಪಿಪ್ಪಲಬಿಲ್ವಾನಾಂ ಕ್ರಮಾದ್ದಂಡಾಃ ಪ್ರಕೀರ್ತಿತಾಃ ॥ ೨೪ ॥**

**ಕಚದೇಶಲಲಾಟಾಂಸತುಲ್ಯಾಃ ಪ್ರೋಕ್ತಾಃ ಕ್ರಮೇಣ ತು ।**
**ಅವಕ್ರಾಃ ಸತ್ವಚಃ ಸರ್ವೇ ನಾಗ್ನಿಶುಷ್ಕಾಸ್ತಥೈವ ಚ ॥ ೨೫ ॥**

---

ಈ ಮೂರು ವರ್ಣದವರೂ ವ್ರಾತ್ಯರೆಂದೇ ತಿಳಿಯಬೇಕು. ಏತಕ್ಕೆಂದರೆ ಆಗ ಇವರು ಸಾವಿತ್ರಿಯಿಂದ ಭ್ರಷ್ಟರಾದವರು, ಹಾಗೆ ವ್ರಾತ್ಯಕೂಟಕ್ಕೆ ಸೇರದೆ ಯಥಾಕಾಲದಲ್ಲಿ ಸಂಸ್ಕಾರ ಹೊಂದಿದಲ್ಲಿ,

೨೩–೨೪. ಬ್ರಾಹ್ಮಣನಿಗೆ ಮುಂಜದಿಂದಲೂ ಕ್ಷತ್ರಿಯವೈಶ್ಯರಿಗೆ ಬಿಲ್ವದಿಂದಲೂ ಮುಂಜಿಯು ಹೇಳಲ್ಪಟ್ಟಿದೆ. ಕ್ರಮವಾಗಿ ಕೃಷ್ಣಾಜಿನ ಬ್ರಾಹ್ಮಣನಿಗೂ ಇತರರಿಗೆ ಹುಲಿಯಚರ್ಮವೂ ವಸ್ತ್ರಗಳಾಗುತ್ತವೆ. ಮುತ್ತುಗ, ಅರಳಿ, ಬಿಲ್ವ ಈ ಮರದ ದಂಡಗಳನ್ನು ಕ್ರಮವಾಗಿ ಇವರು ಧರಿಸಬೇಕು.

೨೫–೨೬. ಆ ದಂಡಗಳೂ ಸಹ ಬ್ರಾಹ್ಮಣಾದಿ ವರ್ಣಕ್ರಮದಿಂದ ಕೇಶಗಳವರಿಗೂ ಹಣೆಯವರಿಗೂ ಭುಜಗಳವರಿಗೂ ದೀರ್ಘವಾಗಿರಬೇಕು. ಮತ್ತು ವಕ್ರವಾಗಿರದೆ ಋಜುವಾಗಿಯೂ, ತೊಗಟೆಯೊಡಗೂಡಿಯೂ, ಬೆಂಕಿಯಿಂದ ಸುಡದೆಯೂ ಇರಬೇಕು. ಎಲ್ಲಾ ವರ್ಣದ ದಂಡಗಳಿಗೂ ಈ ನಿಯಮವು ಸಮಾನವಾದುದು. ವಸ್ತ್ರ, ಮತ್ತು ಯಜ್ಞೋಪವೀತಗಳು ಬ್ರಾಹ್ಮಣಾದಿ ವರ್ಣಕ್ರಮದಿಂದ ಹತ್ತಿ ಮತ್ತು ರೇಷ್ಮೆ, ಮತ್ತು ಉಣ್ಣೆ, ಇವುಗಳಿಂದ ಮಾಡಿದುದಾಗಿರಬೇಕು. ಭಿಕ್ಷೆ ಮಾಡುವ

ವಾಸೋಪವೀತಕಾರ್ಪಾಸಕ್ಷೌಮೋರ್ಣಾನಾಂ ಯಥಾಕ್ರಮಂ ।
ಆದಿಮಧ್ಯಾವಸಾನೇಷು ಭವಚ್ಛಬ್ದೋಪಲಕ್ಷಿತಂ || ೨೬ ||

ಪ್ರಥಮಂ ತತ್ರ ಭಿಕ್ಷೇತ ಯತ್ರ ಭಿಕ್ಷಾ ಧ್ರುವಂ ಭವೇತ್ ।
ಪೂಜಯೇದ್ವಾಸುದೇವಂ ಚ ತತ್ರ ದೇವಂ ವಿಶೇಷತಃ || ೨೭ ||

ಹೃಷೀಕೇಶಂ ವ್ರತೇಶಂ ಚ ಸರ್ವವಿಘ್ನೇಶ್ವರಂ ಪ್ರಭುಂ ।
ಯಥೋಕ್ತೇಷು ಚ ಋಕ್ಷೇಷು ತ್ರೈವಿದ್ಯಾಂ ಕಾರಯೇದ್ಗುರುಃ || ೨೮ ||

ನೈವಾಧಿಕಾರೀ ವೇದೇ ಸ್ಯಾದ್ವಿನಾ ತ್ರೈವಿದ್ಯಕೇನ ತು ।
ಸ್ತ್ರೀಣಾಂ ಸಂಸ್ಕಾರಮುತ್ರೋಕ್ತಂ ಸಕೃತ್ಕಾರ್ಯಂ ವಿಜಾನತಾ ||
ಕ್ಷೇತ್ರಸಂಸ್ಕಾರಮೇತದ್ಧಿ ಸಕೃದೇವ ವಿಜಾಯತೆ || ೨೯ ||

ಸಂಸ್ಕಾರಾಣಿ ಪಿತಾ ಕುರ್ಯಾನ್ಮೇಖಲಾಬಂಧನಾತ್ಪ್ರನಃ ।
ಮೇಖಲಾಬಂಧನಾದ್ಯಾನಿ ಕಾರ್ಯಾಣಿ ಗುರುಣಾ ತಥಾ || ೩೦ ||

---

ಕಾಲದಲ್ಲಿ ಬ್ರಾಹ್ಮಣನು ಭವಚ್ಛಬ್ದವನ್ನು ಮೊದಲಿನಲ್ಲಿಯೂ ಕ್ಷತ್ರಿಯನು ಮಧ್ಯ ದಲ್ಲಿಯೂ ವೈಶ್ಯನು ಕೊನೆಯಲ್ಲಿಯೂ ಉಚ್ಚರಿಸಿ ಭಿಕ್ಷೆಮಾಡಬೇಕು. ಎಲ್ಲಿ ಭಿಕ್ಷೆಯು ಸಿಕ್ಕಿಯೇ ಸಿಕ್ಕುವುದೋ ಅಲ್ಲಿಯೇ ಮೊದಲು ಭಿಕ್ಷೆಮಾಡಬೇಕು.

೨೭-೨೯. ಇಂತಹ ಉಪನಯನ ಕರ್ಮದಲ್ಲಿಯೂ ಸಹ ಸರ್ವೇಂದ್ರಿಯ ನಿಯಾಮಕನಾಗಿಯೂ ಸರ್ವವಿಘ್ನನಾಶಕನಾಗಿಯೂ ಇರುವ ವ್ರತಸಿಧಿಯಾದ ವಾಸುದೇವನನ್ನು ವಿಶೇಷವಾಗಿ ಪೂಜಿಸಬೇಕು. ಅನಂತರ ವಿಹಿತವಾಗಿರುವ ನಕ್ಷತ್ರ ಗಳಲ್ಲಿ ಗುರುವು ತ್ರೈವಿದ್ಯವೆಂಬ ವೇದಾರಂಭವ್ರತವನ್ನು ಮಾಡಬೇಕು. ತ್ರೈವಿದ್ಯ ದಿಂದ ಬಿಡಲ್ಪಟ್ಟವನಿಗೆ ವೇದದಲ್ಲಿ ಅಧಿಕಾರವೇ ಇರುವುದಿಲ್ಲ ಪಂಡಿತನಾದವನು ಇಂತಹ ಸಂಸ್ಕಾರವನ್ನು ಸ್ತ್ರೀಗಳಿಗೆ ಒಂದೇ ಆವರ್ತಿ (ವಿವಾಹಕಾಲದಲ್ಲಿ)ನಡೆಸಬೇಕು ಇದರಿಂದ ಉಂಟಾಗಬಹುದಾದ ಕ್ಷೇತ್ರಸಂಸ್ಕಾರವು ಒಂದಾವರ್ತಿ ಮಾಡುವುದ ರಿಂದಲೇ ಉಂಟಾಗುತ್ತದೆ.

೩೦-೩೧. ಉಪನಯನಕ್ಕಿಂತಲೂ ಮೊದಲು ಮಾಡಬೇಕಾದ ಜಾತ ಕರ್ಮಾದಿ ಸಂಸ್ಕಾರಗಳನ್ನು ತಂದೆಯೇ ಮಾಡಬೇಕು. ಉಪನಯನವೇ ಮೊದಲಾದ ಮುಂದಿನ ಸಂಸ್ಕಾರಗಳನ್ನು ಗುರುವಾದವನೇ ನಡೆಸಬೇಕು. ಎಲೈ ಭಾರ್ಗವೋ

ಸರ್ವಾಣಿ ಕಾರ್ಯಾಣಿ ಹಿ ಲೌಕಿಕೇಽಗ್ನೌ
ಸ್ವಕಲ್ಪಮಾಲೋಕ್ಯ ಭೃಗುಪ್ರಧಾನ ।
ಸರ್ವೇಷು ಪೂಜಾ ಚ ತಥಾ ವಿಧೇಯಾ
ತಸ್ಯಾಪ್ರಮೇಯಸ್ಯ ಜನಾರ್ದನಸ್ಯ ॥ ೩೧ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಸಂಸ್ಕಾರವರ್ಣನೋ ನಾಮ ಪಂಚಾಶೀತಿತಮೋಽಧ್ಯಾಯಃ**

---

ತ್ತಮನೇ ಈ ಸಂಸ್ಕಾರಗಳೆಲ್ಲವನ್ನೂ ತನಗೆ ವಿಹಿತವಾಗಿರುವ ಕಲ್ಪಕ್ಕೆ ತಕ್ಕಂತೆ ಲೌಕಿಕಾಗ್ನಿಯಲ್ಲಿಯೇ ಆಚರಿಸಬೇಕು. ಎಲ್ಲಾ ಸಂಸ್ಕಾರಗಳನ್ನು ಮಾಡುವಾಗಲೂ ಅಪರಿಚ್ಛಿನ್ನ ಸ್ವರೂಪನಾದ ಆ ಜನಾರ್ದನನ ಪೂಜೆಯನ್ನು ಮಾತ್ರ ತಪ್ಪದೆ ಮಾಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಎರಡನೆಯ ಖಂಡದಲ್ಲಿ ರಾಮ ಮಾರ್ಕಂಡೇಯ ಸಂವಾದದ ಪುಷ್ಕರೋಪಾಖ್ಯಾನದಲ್ಲಿ ಸಂಸ್ಕಾರ ವರ್ಣನವೆಂಬ ಎಂಭತ್ತೈದನೆಯ ಅಧ್ಯಾಯ ಮುಗಿದಿದೆ.



## ಎಂಭತ್ತೈದನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಧರ್ಮಸ್ವರೂಪವನ್ನು ತಿಳಿಯಬೇಕೆಂಬ ಭಾರ್ಗವನ ಪ್ರಶ್ನೆಗೆ ಉತ್ತರವಾಗಿ "ನಿಷೇಕಾದಿಶ್ಮಶಾನಾಂತಾಃ" ಎಂಬ ಮನುಸ್ಮೃತಿಯನ್ನನುಸರಿಸಿ ನಿಷೇಕ ಮೊದಲುಗೊಂಡು ಉಪನಯನದವರಿಗಿನ ಆಯಾಯ ಸಂಸ್ಕಾರಗಳನ್ನು ಅದಕ್ಕೆ ತಕ್ಕ ಕಾಲ ವಿಶೇಷ ನಿರ್ಣಯದೊಡನೆ ಸ್ಥೂಲವಾಗಿ ನಿರೂಪಿಸಿರುವರು.



*

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷಡಶೀತಿತಮೋಽಧ್ಯಾಯಃ

|| ಪುಷ್ಕರ ಉವಾಚ ||

**ಉಪನೀಯ ಗುರುಃ ಶಿಷ್ಯಂ ಶಿಕ್ಷಯೇಚ್ಛೌಚಮಾದಿತಃ |**
**ಆಚಾರಮಗ್ನಿಕಾರ್ಯಂ ಚ ಸಂಧ್ಯೋಪಾಸನಮೇವ ಚ || ೧ ||**

**ಪ್ರಯತಃ ಕಲ್ಯಮುತ್ಥಾಯ ಸ್ನಾತೋ ಹುತಹುತಾಶನಃ |**
**ಭಕ್ತ್ಯಾ ಗುರೋಸ್ತು ಕುರ್ವೀತ ಅಭಿಗಮ್ಯಾಭಿವಾದನಂ || ೨ ||**

**ಗುರೋಸ್ತು ವಾಮಂ ಚರಣಂ ವಾಮಹಸ್ತೇನ ಸಂಸ್ಪೃಶೇತ್ |**
**ದಕ್ಷಿಣಂ ದಕ್ಷಿಣೇನೈವ ಸ್ವನಾಮ ಪರಿಕೀರ್ತಯನ್ || ೩ ||**

---

### ಎಂಭತ್ತಾರನೆಯ ಅಧ್ಯಾಯ.

೧-೨. ಗುರುವು ಶಿಷ್ಯನಿಗೆ ಉಪನಯನ ಮಾಡಿದೊಡನೆಯೇ ಶೌಚಾದಿಗಳನ್ನೂ, ಆಚಾರ, ಅಗ್ನಿಕಾರ್ಯ, ಸಂಧ್ಯಾವಂದನ ಇವುಗಳನ್ನು ಶಿಕ್ಷಿಸಬೇಕು. ಶಿಷ್ಯನೂ ಸಹ ಶುಚಿಯಾಗಿದ್ದು ಬೆಳಗಿನ ಜಾವದಲ್ಲೇ ಎದ್ದು ಸ್ನಾನಾದಿಗಳನ್ನೂ, ಅಗ್ನಿಕಾರ್ಯವನ್ನೂ ಮಾಡಿ ಗುರುವಿನ ಸಮೀಪಕ್ಕೆ ಬಂದು ಶಾಸ್ತ್ರೋಕ್ತರೀತಿಯಲ್ಲಿ ಅಭಿವಾದನವನ್ನು ಮಾಡಬೇಕು.

೩-೪. ಅಭಿವಾದನ ಮಾಡುವಾಗ ಗುರುವಿನ ಎಡಗಾಲನ್ನು ತನ್ನ ಎಡಗೈಯಿಂದಲೂ, ಬಲಗಾಲನ್ನು ಬಲಗೈಯಿನಿಂದಲೂ, ಮುಟ್ಟಬೇಕು. ಆಗ ತನ್ನ ಹೆಸರನ್ನೂ ಉಚ್ಚರಿಸಿ ವಂದಿಸಬೇಕು. ಗುರುವಿನ ಅಪ್ಪಣೆಯನ್ನು ಹೊಂದಿ ಅನಂತರ

ಅನುಜ್ಞಾತಸ್ತು ಗುರುಣಾ ತತೋಽಧ್ಯಯನಮಾಚರೇತ್ ।
ಕೃತ್ವಾ ಬ್ರಹ್ಮಾಂಜಲಿಂ ಪಶ್ಯನ್ಗುರೋರ್ವದನಮಾನತಃ ॥ ೪ ॥

ಬ್ರಹ್ಮಾವಸಾನೇ ಪ್ರಾರಂಭೇ ಪ್ರಣವಂ ಚೈವ ಕೀರ್ತಯೇತ್ ।
ಅನಧ್ಯಾಯೇಷ್ವಧ್ಯಯನಂ ವರ್ಜಯೇತ್ತು ಪ್ರಯತ್ನತಃ ॥ ೫ ॥

ಭೈಕ್ಷ್ಯಚರ್ಯಾಂ ತತಃ ಕುರ್ಯಾದ್ಬ್ರಾಹ್ಮಣೇಷು ಯಥಾವಿಧಿ ।
ಗುರೋಃ ಕುಲೇ ನ ಭಿಕ್ಷೇತ ಭುಂಜೀತ ತದನುಜ್ಞಯಾ ॥ ೬ ॥

ಆಯುಷ್ಯಂ ಪ್ರಾಙ್ಮುಖೋ ಭುಙ್ಕ್ತೇ ಯಶಸ್ಯಂ ದಕ್ಷಿಣಾಮುಖಃ ।
ಶ್ರಿಯಃ ಪ್ರತ್ಯಙ್ಮುಖೋ ಭುಙ್ಕ್ತೇ ಋತಂ ಭುಙ್ಕ್ತೇಹ್ಯುದಙ್ಮುಖಃ ॥ ೭ ॥

ಹಿತಂ ಪ್ರಿಯಂ ಗುರೋಃ ಕುರ್ಯಾದ್ಭಕ್ತ್ಯಾಹಂಕಾರವರ್ಜಿತಃ ।
ಅನ್ವಾಸ್ಯ ಪಶ್ಚಿಮಾಂ ಸಂಧ್ಯಾಂ ಪೂಜಯಿತ್ವಾ ಹುತಾಶನಂ ॥ ೮ ॥

---

ಅಧ್ಯಯನವನ್ನು ಪ್ರಾರಂಭಿಸಬೇಕು. ಅಧ್ಯಯನಮಾಡುವಾಗ ಎರಡು ಕೈಗಳಿಂದಲೂ ಬ್ರಹ್ಮಾಂಜಲಿಯನ್ನು ಮಾಡಿಕೊಂಡು ಗುರುವಿನ ಮುಖವನ್ನೇ ನೋಡುತ್ತಾ ಭಕ್ತಿಯಿಂದ ತಲೆಬಾಗಿ ಕುಳಿತು ಅಧ್ಯಯನ ಮಾಡಬೇಕು.

೫–೬. ಅಧ್ಯಯನ ಮಾಡುವಾಗ ವೇದದ ಪ್ರಾರಂಭದಲ್ಲಿಯೂ ಮುಗಿಸುವಾಗ ಕೊನೆಯಲ್ಲಿಯೂ ಪ್ರಣವವನ್ನು ಉಚ್ಚರಿಸಬೇಕು. ಅನಧ್ಯಯನ ದಿನಗಳಲ್ಲಿ ಅಧ್ಯಯನವನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು. ಆ ರೀತಿಯಾದ ಬ್ರಹ್ಮಚರ್ಯವ್ರತಕಾಲದಲ್ಲಿ ಬ್ರಾಹ್ಮಣರ ಮನೆಯಲ್ಲಿ ಯಥಾವಿಧಿಯಾಗಿ ಭಿಕ್ಷಾಟನವನ್ನೇ ಮಾಡಬೇಕು. ಗುರುವಿನ ಮನೆಗೆ ಭಿಕ್ಷೆಗಾಗಿ ಹೋಗಬಾರದು. ಅವನ ಅಪ್ಪಣೆಯಿಂದ ಭೋಜನವನ್ನು ಮಾತ್ರ ಮಾಡಬಹುದು.

೭–೮ ಭೋಜನವನ್ನು ಮಾಡುವಾಗ ಆಯುಸ್ಸನ್ನು ಅಪೇಕ್ಷಿಸುವವನು ಪೂರ್ವಾಭಿಮುಖನಾಗಿ ಭುಂಜಿಸಬೇಕು. ಯಶಸ್ಸನ್ನು ಅಪೇಕ್ಷಿಸುವವನು ದಕ್ಷಿಣಾಭಿಮುಖನಾಗಿಯೂ, ಐಶ್ವರ್ಯವನ್ನು ಅಪೇಕ್ಷಿಸುವವನು ಪಶ್ಚಿಮಾಭಿಮುಖನಾಗಿಯೂ, ಸತ್ಯಧರ್ಮಗಳನ್ನಪೇಕ್ಷಿಸುವವನು ಉತ್ತರಾಭಿಮುಖನಾಗಿಯೂ ಭುಂಜಿಸಬೇಕು. ಅಹಂಕಾರವಿಲ್ಲದೆ ಭಕ್ತಿಯಿಂದ ತನ್ನ ಗುರುವಿಗೆ ಹಿತವಾಗಿಯೂ, ಪ್ರಿಯವಾಗಿಯೂ ಇರುವ ಕಾರ್ಯವನ್ನೇ ಮಾಡಬೇಕು. ಹಗಲು ಕಳೆದ ಮೇಲೆ ಸಾಯಂಕಾಲದ ಸಂಧ್ಯಾವಿಧಿಯನ್ನು ನೆರವೇರಿಸಿ ಅಗ್ನಿಕಾರ್ಯವನ್ನೂ ಮಾಡಿ ಗುರುವಿಗೆ ನಮಸ್ಕಾರ ಮಾಡಿ ಅನಂತರ ಅವನ ಮಾತಿನಂತೆ ನಡೆದುಕೊಳ್ಳಬೇಕು.

ಅಭಿವಾದ್ಯ ಗುರುಂ ಪಶ್ಚಾದ್ಗುರೋರ್ವಚನಕೃದ್ಭವೇತ್ ।
ಮಧುಮಾಂಸಾಂಜನಂ ಶ್ರಾದ್ಧಂ ಗೀತಂ ನೃತ್ಯಂ ಚ ವರ್ಜಯೇತ್ ॥ ೯ ॥

ಹಿಂಸಾಂ ಪರಾಪವಾದಂ ಚ ಅಶ್ಲೀಲಂ ಚ ವಿಶೇಷತಃ ।
ಮೇಖಲಾಮಜಿನಂ ದಂಡಂ ಧಾರಯೇತ್ಪ್ರಯತಃ ಸದಾ ॥ ೧೦ ॥

ವಿನಷ್ಟಾನಪ್ಸು ನಿಕ್ಷಿಪ್ಯ ತಥಾನ್ಯಾನ್ಧಾರಯೇತ್ಪುನಃ ।
ಆದಿಷ್ಟೀನೋದಕಂ ಕುರ್ಯಾದಾವ್ರತಸ್ಯ ಸಮಾಪನಾತ್ ॥ ೧೧ ॥

ಸಮಾಪ್ತೇ ತು ವ್ರತೇ ಕುರ್ಯಾತ್ತ್ರಿರಾತ್ರೇಣೈವ ಶುಧ್ಯತಿ ।
ಅಧಃ ಶಾಯೀ ಭವೇನ್ನಿತ್ಯಂ ಬ್ರಹ್ಮಚಾರೀ ಸಮಾಹಿತಃ ॥ ೧೨ ॥

ಏವಂ ವ್ರತಂ ತು ಕುರ್ವೀತ ವೇದಸ್ವೀಕರಣಂ ದ್ವಿಜಃ ।
ಗುರವೇ: ದಕ್ಷಿಣಾಂ ದತ್ವಾ ಸ್ನಾಯೊಚ್ಚ ತದನಂತರಂ ॥ ೧೩ ॥

---

೯–೧೦. ಬ್ರಹ್ಮಚರ್ಯದಲ್ಲಿರುವವನು ಜೇನು, ಮಾಂಸ ಮುಂತಾದುವುಗಳ ಸೇವನವನ್ನೂ, ಅಭ್ಯಂಜನ, ಶ್ರಾದ್ಧಭೋಜನ, ಗಾನ, ನರ್ತನ ಇವುಗಳನ್ನೂ ಸಹ ಬಿಡಬೇಕು. ಇತರರನ್ನು ಹಿಂಸಿಸುವುದು, ನಿಂದಿಸುವುದು, ಅಮಂಗಲಕರವಾದ ವಾಕ್ಕು ಇವುಗಳನ್ನೂ ಸಹ ವಿಶೇಷವಾಗಿಯೂ ಬಿಡಬೇಕು. ಯಾವಾಗಲೂ ಪರಿಶುದ್ಧ ನಾಗಿರುತ್ತಾ ಮೌಂಜಿ, ಕೃಷ್ಣಾಜಿನ, ದಂಡ ಇವುಗಳನ್ನು ಧರಿಸಿಯೇ ಇರಬೇಕು. ಅವುಗಳು ಜೀರ್ಣವಾದಲ್ಲಿ ಅವುಗಳನ್ನು ನೀರಿನಲ್ಲಿ ಹಾಕಿ ಹೊಸದಾಗಿ ಬೇರೆ ಧರಿಸಬೇಕು.

೧೧–೧೨. ವೇದಸ್ವೀಕರಣ ವ್ರತದಲ್ಲಿ ಇರುವಾಗ ಉದಕದಾನ ಪ್ರಸಂಗವು ಬಂದಲ್ಲಿ ಆಗ ಉದಕದಾನವನ್ನು ಮಾಡಕೂಡದು. ಆ ವ್ರತವು ಮುಗಿದ ಮೇಲೆ ಉದಕದಾನಾದಿಗಳನ್ನು ಮಾಡಬೇಕು. ಹಾಗೆ ಮಾಡಿದವನು ಮೂರು ದಿನಗಳಲ್ಲಿಯೇ ಶುದ್ಧನಾಗುತ್ತಾನೆ ಬ್ರಹ್ಮಚಾರಿಯು ಯಾವಾಗಲೂ ಶಾಂತಚಿತ್ತತೆಯಿಂದ ಭೂಮಿಯ ಮೇಲೆಯೇ ಮಲಗಬೇಕು. ವೇದವನ್ನು ಗುರುವಿನಿಂದ ಸ್ವೀಕರಿಸುವ ಕಾಲದಲ್ಲಿ ಬ್ರಹ್ಮಚಾರಿಯಾದವನು ಈ ರೀತಿಯಾದ ವ್ರತದಲ್ಲಿರಬೇಕು.

೧೩–೧೪. ಅನಂತರ ಗುರುವಿಗೆ ದಕ್ಷಿಣೆಯನ್ನು ಕೊಟ್ಟು ಸ್ನಾತಕನಾಗಬೇಕು (ವಿದ್ಯಾವ್ರತಗಳಿಗಾಗಿ ಸ್ನಾನವೆಂಬ ಸಂಸ್ಕಾರ ಹೊಂದಬೇಕು) ಅಥವಾ ದೇಹವಿರುವ ಪರ್ಯಂತವೂ ಬ್ರಹ್ಮಚರ್ಯ ವ್ರತದಲ್ಲಿಯೇ ಗುರುಕುಲದಲ್ಲಿ ವಾಸಮಾಡಬೇಕು.

ಆಶರೀರವಿಮೋಕ್ಷಾದ್ವಾ ವಸೇದ್ಗುರುಕುಲೇ ಸದಾ ।
ನೈಷ್ಠಿಕೋ ಬ್ರಹ್ಮಚಾರೀ ಚ ವಾಯುಭೂತಃ ಸ್ವಮೂರ್ತಿಮಾನ್ ॥ ೧೪ ॥

ತತ್ಪದಂ ಸಮವಾಪ್ನೋತಿ ಯತ್ರ ಗತ್ವಾ ನ ಶೋಚತಿ ।
ಸ್ನಾನೇ ಚೈವ ಸಗೋದಾನೇ ಕಾಲಃ ಪೂರ್ವೋ ವಿಧೀಯತೇ ।
ಪೂಜನಂ ವಾಸುದೇವಸ್ಯ ಸರ್ವತ್ರ ಚ ವಿಧೀಯತೇ ॥ ೧೫ ॥

ಸಂಪೂಜ್ಯ ದೇವಂ ಗುರವೇ ಚ ದತ್ವಾ
ಧನಂ ಯಥಾವತ್ಪರಿಪೂರ್ಣವಿದ್ಯಃ ।
ಗೃಹಾಶ್ರಮೀ ಸ್ಯಾದ್ವಿಧಿವನ್ನೃಸಿಹ್ಮ
ಯತ್ರಾಸ್ಯಲೋಕದ್ವಿತಯಂ ಪ್ರದಿಷ್ಟಂ ॥ ೧೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಬ್ರಹ್ಮಚರ್ಯ ವರ್ಣನೋ ನಾಮ ಷಡಶೀತಿತಮೋಽಧ್ಯಾಯಃ

---

ಇವನೇ ನೈಷ್ಠಿಕಬ್ರಹ್ಮಚಾರಿ, ಇವನು ವಾಯುರೂಪವಾದ ತನ್ನ ಶರೀರದಿಂದ ಶೋಕಸಂಬಂಧವೇ ಇಲ್ಲದಿರುವ ಸುಖಸ್ಥಾನವನ್ನು ಹೊಂದುತ್ತಾನೆ.

೧೫-೧೬. ಹಾಗೆ ನೈಷ್ಠಿಕ ಬಹ್ರಚಾರಿಯಾಗಿರದೆ ಗೃಹಸ್ಥಾಶ್ರಮವನ್ನು ಅಪೇಕ್ಷಿಸುವ ಉಪಕುರ್ವಾಣನೆಂಬ ಬ್ರಹ್ಮಚಾರಿಗೆ ಸ್ನಾನ ಗೋ[1]ದಾನವೇ ಮೊದಲಾದ ಕರ್ಮಗಳಿಗೆ ಮೊದಲು ಹೇಳಿರುವ ಕಾಲವೇ ಪ್ರಶಸ್ತವಾಗಿದೆ. ಈ ವಿಧವಾದ ಎಲ್ಲಾ ಕರ್ಮಗಳಲ್ಲಿಯೂ ವಾಸುದೇವನ ಪೂಜೆಯನ್ನು ನಿಯತವಾಗಿ ಮಾಡಬೇಕು. ಎಲೈ, ನರೋತ್ತಮನೇ ಹೀಗೆ ವಾಸುದೇವನನ್ನು ಪೂಜಿಸಿ ಗುರುವಿಗೂ ಯಥಾಶಕ್ತಿ ಧನವನ್ನೂ ಕೊಟ್ಟು ವಿದ್ಯೆಯಿಂದ ಪರಿಪೂರ್ಣನಾಗಿ ಗೃಹಸ್ಥಾಶ್ರಮವನ್ನು ಹೊಂದಿದವನಿಗೆ ಇಹಪರ ಲೋಕಗಳೆರಡೂ ಸುಖಕರಗಳಾಗಿ ಆಗುತ್ತವೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ಬ್ರಹ್ಮಚರ್ಯ ವರ್ಣನವೆಂಬ ಎಂಭತ್ತಾರನೇ ಅಧ್ಯಾಯ ಮುಗಿದಿದೆ.

---

1 ಇಲ್ಲಿ ಗೋದಾನವೆಂದರೆ ಶಾಸ್ತ್ರೀಯವಾದ ಕ್ಷೌರ.

## ಎಂಭತ್ತಾರನೇ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ವಿಶೇಷ ಧರ್ಮಗಳ ಪ್ರಸಂಗದಲ್ಲಿ ಬ್ರಹ್ಮಚರ್ಯದ ಧರ್ಮಗಳನ್ನೂ ಆದರ ಭೇದಗಳನ್ನೂ ವಿವರಿಸಿ ನೈಷ್ಠಿಕನನ್ನು ಬಿಟ್ಟು ಉಪಕುರ್ವಾಣ ಬ್ರಹ್ಮಚಾರಿಗೆ ವಿವಾಹಾರ್ಹತೆಯನ್ನು ನಿರೂಪಿಸಿರುವರು.



|| ಓಂ ||

—: ಶ್ರೀ ಹಯಗ್ರೀವಾಯ ನಮಃ : —

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಸಪ್ತಾಶೀತಿತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ವಿಪ್ರಶ್ಚತಸ್ರೋ ವಿಂದೇತ ಭಾರ್ಯಾಸ್ತಿಸ್ರಸ್ತು ಭೂಮಿಪಃ ।**
**ದ್ವೇ ಚ ವೈಶ್ಯಸ್ತಥಾ ಕಾಮಂ ಭಾರ್ಯೈಕಾಮಪಿ ಚಾಂತ್ಯಜಃ || ೧ ||**

**ಬ್ರಾಹ್ಮಣೀ ಕ್ಷತ್ರಿಯಾ ವೈಶ್ಯಾ ಶೂದ್ರೀ ವಿಪ್ರಸ್ಯ ಕೀರ್ತಿತಾಃ ।**
**ಕ್ರಮೇಣ ಕಾಮಸಕ್ತಸ್ಯ ವಿವಾಹಾಃ ಪರಿಕೀರ್ತಿತಾಃ || ೨ ||**

---

### ಎಂಭತ್ತೇಳನೆಯ ಅಧ್ಯಾಯ.

೧-೨. ಬ್ರಾಹ್ಮಣನು ಕಾಮಸುಖದಲ್ಲಿ ಆಸಕ್ತಿ ಹೊಂದಿದ್ದಲ್ಲಿ ನಾಲ್ಕುವರ್ಣದಲ್ಲಿಯೂ ನಾಲ್ಕು ಪತ್ನಿಯರನ್ನು ಮದುವೆಯಾಗಬಹುದು. ಕ್ಷತ್ರಿಯನಾದವನು ಆ ರೀತಿಯಾದ ಆಸಕ್ತಿಇದ್ದಲ್ಲಿ ತನಗಿಂತ ಕೆಳಗಿನ ಮತ್ತು ತನ್ನವರ್ಣದ ಮೂರು ಪತ್ನಿಯರನ್ನು ಮದುವೆಯಾಗಬಹುದು. ಹಾಗೆಯೇ ವೈಶ್ಯನೂ ಸಹ ತನ್ನ ಮತ್ತು ಶೂದ್ರವರ್ಣದ ಇಬ್ಬರು ಪತ್ನಿಯರನ್ನು ಮದುವೆಯಾಗಬಹುದು. ಶೂದ್ರನಾದವನು ಅಂತಹ ಆಸಕ್ತಿಇದ್ದರೂ ತನ್ನ ವರ್ಣದಲ್ಲಿಮಾತ್ರ ಒಬ್ಬಳನ್ನು ಮದುವೆಯಾಗಬಹುದು. (ಇಲ್ಲಿ ಹೇಳಿರುವ ಸಂಖ್ಯೆಯು ವ್ಯಕ್ತಿಸಂಖ್ಯೆಗೆ ನಿಯಾಮಕವಲ್ಲ ವರ್ಣಸಂಖ್ಯೆಗೆ ತಕ್ಕಂತೆ ಪರಿಗಣಿಸಲಾಗಿದೆ.) ಬ್ರಾಹ್ಮಣನಿಗೆ ಬ್ರಾಹ್ಮಣಿಯಾಗಿಯೂ ಕ್ಷತ್ರಿಯೆಯಾಗಿಯೂ ವೈಶ್ಯೆಯಾಗಿಯೂ ಶೂದ್ರೆಯಾಗಿಯೂ ನಾಲ್ಕು ಜನ ಪತ್ನಿಯರು ಇರಬಹುದು. ಹೀಗೆಯೇ ಕ್ರಮವಾಗಿ ಕ್ಷತ್ರಿಯಾದಿಗಳಿಗೂ ವಿವಾಹಕ್ಕೆ ಅವಕಾಶವುಂಟು. ಈ ವಿಧವಾದ ವಿವಾಹ ನಿಯಮದಿಂದಲೇ ಗೃಹಸ್ಥಾಶ್ರಮವನ್ನು ಹೊಂದಿರಬೇಕೆಂದು ತಾತ್ಪರ್ಯ. ಇದರಿಂದ ಕ್ಷತ್ರಿಯಾದಿಗಳಿಗೆ ಕಾಮಾಭಿಲಾಷೆ ಇದ್ದರೂ ಬ್ರಾಹ್ಮಣೀಯ ವಿವಾಹವು ನಿಷಿದ್ಧವೆಂದು ಹೇಳಿದಂತಾಗುತ್ತದೆ.

ವಿವಾಹಮುತ್ಕ್ರಮಾತ್ಕೃತ್ವಾ ನರಕಂ ಪ್ರತಿಪದ್ಯತೇ ।
ಧರ್ಮಕಾರ್ಯಾಣಿ ಸರ್ವಾಣಿ ನ ಕಾರ್ಯಾಣ್ಯಸವರ್ಣಯಾ ॥ ೩ ॥

ಅಸವರ್ಣಾ ತು ಯಾ ನಾರೀ ರತ್ಯರ್ಥೇ ಸಾ ಪ್ರಕೀರ್ತಿತಾ ।
ಆಧಾನಂ ತಸ್ಯ ಧರ್ಮಾರ್ಥಂ ನ ಪ್ರಶಂಸಂತಿ ಸಾಧವಃ ॥ ೪ ॥

ಪಾಣಿಗ್ರಾಹ್ಯಃ ಸವರ್ಣಾಸು ಗೃಹ್ಣೀಯಾತ್ಕ್ಷತ್ರಿಯಾ ಶರಂ ।
ವೈಶ್ಯಾ ಪ್ರತೋದಮಾದದ್ಯಾದ್ದಶಾಂ ಚೈವಾನ್ತ್ಯಜಾ ತಥಾ ॥ ೫ ॥

ಉತ್ಕೃಷ್ಟವೇದನೇಷ್ವೇತದ್ವಿಧಾನಂ ಪರಿಕೀರ್ತಿತಂ ।
ಸಕೃತ್ಕನ್ಯಾ ಪ್ರದಾತವ್ಯಾ ಹರಂಸ್ತಾಂ ಚೌರದಂಡಭಾಕ್ ॥ ೬ ॥

---

೩-೪. ಈ ಕ್ರಮವನ್ನು ಬಿಟ್ಟು ತನಗಿಂತ ಉತ್ತಮವರ್ಣದ ಸ್ತ್ರೀಯನ್ನು ಹೊಂದಿದ್ದೇ ಆದರೆ ಅವನು ನರಕವನ್ನು ಹೊಂದುತ್ತಾನೆ. ಹೀಗೆ ಹಿಂದೆ ಹೇಳಿದ ನಿಯಮಕ್ಕೆ ತಕ್ಕಂತೆ ಅಪಕೃಷ್ಟವರ್ಣದ ಸ್ತ್ರೀಯನ್ನು ವಿವಾಹಮಾಡಿಕೊಂಡರೂ ಅಗ್ನಿಯ ಆಧಾನವೇ ಮೊದಲಾದ ಶಾಸ್ತ್ರೀಯಕರ್ಮಗಳನ್ನು ಅಸವರ್ಣಸ್ತ್ರೀಯೊಡನೆ ಮಾಡಬಾರದು. ಸವರ್ಣಸ್ತ್ರೀಯೊಡನೆಯೇ ಮಾಡಬೇಕೆಂದು ತಾತ್ಪರ್ಯ. ಅಸವರ್ಣಳಾದ (ಬೇರೆ ಜಾತಿಯವಳಾದ) ಸ್ತ್ರೀಯ ವಿವಾಹವು ಕೇವಲ ರತಿಪ್ರೀತಿಗಾಗಿಯೇ ಹೊರತು ಶಾಸ್ತ್ರೀಯ ಕರ್ಮಾಚರಣೆಗೆ ಅವಳಿಂದ ಉಪಕಾರವಿಲ್ಲ. ಅವಳೊಡನೆ ಆಧಾನವೇ ಮೊದಲಾದ ಶ್ರೌತಧರ್ಮಗಳ ಆಚರಣವು ಪ್ರಶಸ್ತವಲ್ಲವೆಂದು ಶಾಸ್ತ್ರಜ್ಞರು ಹೇಳಿರುವರು.

೫-೬. ಸವರ್ಣರಾದ ವಧೂವರರ ವಿವಾಹವು ಪಾಣಿಗ್ರಹಣಪೂರ್ವಕವಾಗಿಯೇ ನಡೆಯಬೇಕು. ಕ್ಷತ್ರಿಯಸ್ತ್ರೀಯು ವಿವಾಹಕಾಲದಲ್ಲಿ ವರನಿಂದ ಹಿಡಿಯಲ್ಪಟ್ಟ ಬಾಣದ ಅಗ್ರಭಾಗವನ್ನು ತಾನು ಹಿಡಿದುಕೊಂಡು ವಿವಾಹಹೊಂದಬೇಕು. ವೈಶ್ಯಸ್ತ್ರೀಯು ಹಾಗೆಯೇ ವರನಿಂದ ಗ್ರಹಿಸಲಾದ ಚಾವಟಿಯ ಅಗ್ರಭಾಗವನ್ನು ತಾನುಹಿಡಿದುಕೊಂಡು ವಿವಾಹಹೊಂದಬೇಕು ಶೂದ್ರಸ್ತ್ರೀಯು ವರನ ವಸ್ತ್ರದ ಕೊನೆಯನ್ನು ಹಿಡಿದು ವಿವಾಹಿತೆಯಾಗಬೇಕು. ಇಲ್ಲಿ ಸವರ್ಣಸ್ತ್ರೀಪುರುಷರ ವಿವಾಹವು ಎಲ್ಲಾವರ್ಣದಲ್ಲೂ ಪಾಣಿಗ್ರಹಣಪೂರ್ವಕವೆಂದೇ ಹೇಳಿದಂತಾಗುತ್ತದೆ. ಅಸವರ್ಣವಿವಾಹದಲ್ಲಿ ಮಾತ್ರ ಕ್ಷತ್ರಿಯಕನ್ಯಕೆಯು ಬ್ರಾಹ್ಮಣನನ್ನೂ ವೈಶ್ಯಕನ್ಯಕೆಯು ಬ್ರಾಹ್ಮಣ ಕ್ಷತ್ರಿಯರನ್ನೂ, ಶೂದ್ರಿಯು ಬ್ರಾಹ್ಮಣ ಕ್ಷತ್ರಿಯ ವೈಶ್ಯರನ್ನೂ ವಿವಾಹ

ನ ಕನ್ಯಾವಿಕ್ರಯಂ ಕಾರ್ಯಂ ಕದಾಚಿದಪಿ ಕೇನಚಿತ್ ।
ಕೇಶವಿಕ್ರಯಿಣೋ ಯಾಂತಿ ನರಕಾನೇಕವಿಂಶತೀನ್ ॥ ೭ ॥

ಅಪತ್ಯವಿಕ್ರಯಾತ್ತಸ್ಯ ನಿಷ್ಕೃತಿರ್ನ ವಿಧೀಯತೇ ।
ಕನ್ಯಾಪ್ರಜೀವನಾತ್ಕಿಂಚಿನ್ನೋಪಜೀವತಿ ಯಃ ಪುಮಾನ್ ॥ ೮ ॥

ನ ತಚ್ಛುಲ್ಕಂ ಸಮುದ್ದಿಷ್ಟಮಾನೃಶಂಸ್ಯಂ ಹಿ ತತ್ಸ್ಮೃತಂ ।
ಕನ್ಯಾದಾನಂ ಶಚೀಯಾಗೋ ವಿವಾಹೋಥ ಚತುರ್ಥಿಕಾ ॥ ೯ ॥

ಮಾಡಿಕೊಳ್ಳುವ ಸಂದರ್ಭದಲ್ಲಿ ಇಲ್ಲಿ ಹೇಳಿರುವ ಕ್ರಮವು ಅವರವರ ಉತ್ಕರ್ಷಕ್ಕೆ ಕಾರಣವಾಗುತ್ತದೆಂದು ತಾತ್ಪರ್ಯ. ಕನ್ಯಕೆಯನ್ನು ಒಂದೇಸಲ ದಾನಮಾಡಬೇಕು. (ಎರಡುಮೂರುಬಾರಿ ಅನೇಕ ವರರಿಗೆ ದಾನಮಾಡಬಾರದೆಂದು ತಾತ್ಪರ್ಯ) ಮಾತಾ ಪಿತೃಗಳಿಂದ ದಾನವಾಗಿ ಕೊಡದಿರುವ ಕನ್ಯೆಯನ್ನು ಅಪಹರಿಸಿದವನು ಚೋರತನದ ಶಿಕ್ಷೆಗೆ ಗುರಿಯಾಗತಕ್ಕವನು.

೭-೮. ಯಾರೂ ಯಾವಾಗಲೂ ಸಹ ಕನ್ಯೆಯನ್ನು ವಿಕ್ರಯಿಸಬಾರದು ಕೇಶಗಳನ್ನು ವಿಕ್ರಯಮಾಡುವವರೂ ಸಹ ಇಪ್ಪತ್ತೊಂದು ನರಕವನ್ನು ಹೊಂದುವ ಸಂಭವವಿರುವಾಗ ಮಕ್ಕಳನ್ನು ವಿಕ್ರಯಿಸುವವರಿಗೆ ಯಾವ ಪ್ರಾಯಶ್ಚಿತ್ತವೂ ಇಲ್ಲ ಶಾಸ್ತ್ರವು ವಿಧಿಸಿಯೂ ಇಲ್ಲ ಯಾವನು ಕನ್ಯೆಯರನ್ನು ಕೊಟ್ಟು ಮಾಡುವ ಜೀವನ ವನ್ನೇ ಆಶ್ರಯಿಸಿ ಬೇರೆ ಯಾವ ವೃತ್ತಿಯನ್ನೂ ಜೀವನಕ್ಕಾಗಿ ಹೊಂದದಿರುವನೋ ಅವನು ಕನ್ಯಾಪ್ರದಾನಕ್ಕಾಗಿ ಹೊಂದುವ ದ್ರವ್ಯವು ಶುಲ್ಕವಾಗುವುದಿಲ್ಲ ಆ ದ್ರವ್ಯವು ಅದುಷ್ಟವೆಂದೇ ಹೇಳಲ್ಪಟ್ಟಿದೆ.

೯-೧೧. ಕನ್ಯೆಯ ದಾನ (ವಾಗ್ದಾನವೆಂದು ತಾತ್ಪರ್ಯ) ಶಚೀದೇವಿಯನ್ನು ಮಂಗಳವೃದ್ಧಿಗಾಗಿ ಪೂಜಿಸುವುದು. ವಿವಾಹ (ಅಗ್ನಿಸಾಕ್ಷಿಕವಾಗಿ ನಡೆಯುವ ಉದ್ವಾಹ ಹೋಮ ಮೊದಲಾದ ಕರ್ಮಗಳು.) ನಾಲ್ಕನೆಯ ದಿವಸದಲ್ಲಿ ನಡೆಯುವ ಶೇಷಹೋಮ ನಾಕಬಲಿಮೊದಲಾದ ಕರ್ಮ ಈ ನಾಲ್ಕು ಕರ್ಮಗಳೂಸೇರಿ ವಿವಾಹ ವೆಂದು ಹೇಳಲ್ಪಟ್ಟಿದೆ ಹೀಗೆ ನಾಲ್ಕು ಅಂಗಗಳಿಂದ ಕೂಡಿರುವ ವಿವಾಹವೆಂಬ ಪ್ರಧಾನಕರ್ಮದಲ್ಲಿ ವಾಗ್ದಾನ ಮಾತ್ರವೇ ಉಂಟಾಗಿದ್ದರೆ ಆಗಲೂ ವರನಲ್ಲಿ ದೋಷವು ಕಂಡುಬಂದಲ್ಲಿ ಕನ್ಯೆಯನ್ನು ಅಂತಹ ದುಷ್ಟವರನಿಗೆ ಕೊಡದೆ ಬೇರೆ ಕೊಟ್ಟು ವಿವಾಹಮಾಮಾಡಬಹುದು ಅಂತಹ ಕಾರಣಗಳಾವುವೆಂದರೆ ವಾಗ್ದಾನ ಹೊಂದಿದ ವರನು ದೇಶಾಂತರಗತನಾಗಿ ನಷ್ಟವಾದಲ್ಲಿ, ಅಥವಾ ಮೃತನಾದಲ್ಲಿ,

**ವಿವಾಹಮೇತತ್ಕಥಿತಂ ರಾಮ ಕರ್ಮಚತುಷ್ಟಯಂ ।**
**ದತ್ತಾಮಪಿ ಹರೇತ್ಕನ್ಯಾಂ ವರಶ್ಚೇದ್ದೋಷಭಾಗ್ಭವೇತ್ ॥ ೧೦ ॥**

**ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇಥ ಪತಿತೇಽಪತೌ ।**
**ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ॥ ೧೧ ॥**

---

ಅಥವಾ ಸನ್ಯಾಸಹೊಂದಿದಲ್ಲಿ, ಅಥವಾ ನಪುಂಸಕನೆಂದು ತಿಳಿದುಬಂದಲ್ಲಿ, ಅಥವಾ ಪತಿತನಾದಲ್ಲಿ, ಈ ಐದು ಕಾರಣಗಳಿಂದ ವರನು ದೋಷಿಯೆಂದು ತಿಳಿದು ಬಂದಲ್ಲಿ ಇದರಿಂದುಂಟಾದ ವಿಪತ್ತಿನಿಂದ ಕನ್ಯೆಯನ್ನು ಬಿಡಿಸಲು ಮತ್ತೊಬ್ಬನಿಗೆ ವಿವಾಹಮಾಡಿಕೊಡಬಹುದು. (ಇಲ್ಲಿ ಅಪತೌ ಎಂದು ಹೇಳಿರುವುದರಿಂದ ವಾಗ್ದಾನ ಹೊಂದಿದ್ದವನು ಪತಿ ಸದೃಶನೇ ಹೊರತು ಪತಿಯಲ್ಲ. ಪತಿಪತ್ನೀಭಾವವು ಸಿದ್ಧ ವಾಗಬೇಕಾದರೆ ಮೇಲೆ ಹೇಳಿರುವ ನಾಲ್ಕು ಅಂಗಗಳುಳ್ಳ ವಿವಾಹವು ನಡೆದಿರಬೇಕು ಅದಕ್ಕೆ ಮೊದಲು ವಾಗ್ದಾನಮಾತ್ರದಿಂದ ಅವನು ಪತಿಯಾಗಲು ಅರ್ಹತೆಯುಳ್ಳವ ನಾಗುತ್ತಾನೆಯೇ ಹೊರತು ಪತಿಯಾಗಿಲ್ಲ. ಈ ತಾತ್ಪರ್ಯದಿಂದಲೇ ಅಪತೌ ಎಂದು ಹೇಳಿರುವರೆಂದು ತಿಳಿಯಬೇಕು. ಅವನ ದೋಷವು ತಿಳಿಯದಿರುವ ಕಾಲದಲ್ಲಿ ಪತಿಯಾಗುವ ಅರ್ಹತೆಯು ಅವನಿಗೆ ಇದ್ದುದರಿಂದ ಪತಿಸದೃಶನನ್ನಾಗಿ ವ್ಯವ ಹರಿಸಿರುವರು (ಇಲ್ಲಿ ವಿವಾಹಕ್ಕೆ ಅಂಗವಾಗಿ ಹೇಳಿರುವ ಮೂರನೆಯ ವಿವಾಹ ಕರ್ಮದಲ್ಲಿ ಸಪ್ತಪದಿಯೂ ಸೇರಿರುವುದರಿಂದ ಸಪ್ತಪದಿಗಿಂತ ಮೊದಲು ವಿವಾಹ ಸಿದ್ಧಿ ಇಲ್ಲವೆಂದು ಹೇಳಿರುವ ಬೇರೆ ಸ್ಮೃತಿಗಳ ಅವಲಂಬನದಿಂದ ದತ್ತಾಮಪಿ ಎಂಬ ಪದಕ್ಕೆ ಉದಕದಾನ ಪೂರ್ವಕವಾದ ಕನ್ಯಾದಾನವು ನಡೆದಿದ್ದರೂ ಇಂತಹ ದೋಷಗಳು ಕಂಡು ಬಂದಲ್ಲಿ ಮತ್ತೊಬ್ಬನಿಗೆ ಕೊಡಬಹುದು ಎಂದೂ ಕೆಲವರು ಅರ್ಥವನ್ನು ಹೇಳಲಾಗಬಹುದು. ಆದರೂ ಇಂತಹ ಕನ್ಯಾದಾನ ನಡೆದ ಒಂದೆರಡು ಮುಹೂರ್ತಗಳಲ್ಲಿ ವಿವಾಹ ಹೋಮಾದಿಗಳು ನಡೆಯುವ ಸಂಭವವಿರುವುದರಿಂದ ಕನ್ಯಾದಾನಕ್ಕೂ ಸಪ್ತಪದಿಗೂ ಮಧ್ಯದಲ್ಲಿ ನಷ್ಟ ಪ್ರವ್ರಜಿತ ಎಂಬ ದೋಷಗಳಿಗೆ ಅವಕಾಶವಿಲ್ಲದುದರಿಂದ ಕನ್ಯಾದಾನವೆಂದರೆ ಇಲ್ಲಿ ವಾಗ್ದಾನವೆಂದೇ ಹೇಳುವುದು ಸೂಕ್ತವೆಂದು ತೋರುತ್ತದೆ. ಈ ವಿಷಯದಲ್ಲಿ ಪ್ರಾಜ್ಞರಾದ ಪಂಡಿತೋತ್ತಮರೇ ನಿರ್ಣಯ ಸ್ಥಾನವೆಂದು ನಿರೀಕ್ಷಿಸಲಾಗಿದೆ.) ಇಲ್ಲಿ ಅಪತೌ ಎಂಬ ಪದವನ್ನು ಬಿಟ್ಟು ಪತೌ ಎಂಬ ಅಶುದ್ಧ ಪಾಠವನ್ನೇ ಸ್ವೀಕರಿಸಿ ಈ ವಚನವು ಸ್ತ್ರೀಯರ (ವಿಧವೆಯರ) ಪುನರ್ವಿವಾಹಕ್ಕೆ ಸಾಧಕವೆಂದೂ ಕೆಲವರು ವಾದಿಸುವರು. ಇಲ್ಲಿರುವ ಪಾಠದಲ್ಲಿ ಆ ವಿಧವಾದ ವಿವಾದಕ್ಕೆ ಅವಕಾಶವೇ ಇಲ್ಲವೆಂದು ತಿಳಿಯಬೇಕು—

ಮೃತೇ ತು ದೇವರೇ ದೇಯಾ ತದಭಾವೇ ಯದೃಚ್ಛಯಾ ।
ಪೂರ್ವಾ ತ್ರಿತಯಮಾಗ್ನೇಯಂ ವಾಯುವ್ಯಂ ಚೋತ್ತರಾತ್ರಯಂ ॥ ೧೨ ॥

ರೋಹಿಣೀ ಚೇತಿ ವರುಣಂ ಭಗಣಃ ಶಸ್ಯತೇ ಸದಾ ।
ನೈಕಗೋತ್ರಾಂ ಚ ವರಾಯೇನ್ನೈಕಾರ್ಷೇಯಾಂ ಚ ಭಾರ್ಗವ ॥ ೧೩ ॥

ಪಿತೃತಃ ಸಪ್ತಮಾದೂರ್ಧ್ವಂ ಮಾತೃತಃ ಪಂಚಮಾತ್ತಥಾ ।
ವರಯೇಲ್ಲಕ್ಷಣೋಪೇತಾಂ ಸದಾ ಲೋಕದ್ವಯೇಚ್ಛಯಾ ॥ ೧೪ ॥

ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ ।
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮಃ ಸ್ಮೃತಃ ॥ ೧೫ ॥

---

ಇತರ ಗ್ರಂಥಗಳಲ್ಲಿ ಪತೌ ಎಂಬ ಪಾಠವಿದ್ದರೂ ಆ ಪತಿ ಶಬ್ದವು ಮುಖ್ಯಪತಿಯನ್ನು ಬೋಧಿಸುವುದಿಲ್ಲ. ಪತಿಸದೃಶನಾದ ಗೌಣಪತಿಯನ್ನೇ ಬೋಧಿಸುತ್ತದೆ. ಪತ್ಯೌ ಎಂಬ ಪದವೇ ವ್ಯಾಕರಣ ಶಾಸ್ತ್ರದ ಪ್ರಕ್ರಿಯೆಗೆ ತಕ್ಕಂತೆ ಮುಖ್ಯಪತಿಗೆ ಬೋಧಕವಾಗುತ್ತದೆ. ಅಂತಹ ಪಾಠವು ಎಲ್ಲಿಯೂ ಇಲ್ಲ.

೧೨ ಮೃತನಾದಲ್ಲಿ ಹಾಗೆ ವಾಗ್ದಾನ ಹೊಂದಿ ಮೃತನಾದವನ ತಮ್ಮನಿಗೆ ಆ ಕನ್ಯೆಯನ್ನು ಕೊಡಬೇಕು. ಅವನಿಲ್ಲದಿದ್ದರೆ ಇಚ್ಛೆ ಬಂದಂತೆ ಇತರರಿಗೆ ಕೊಡ ಬಹುದು—ಪೂರ್ವಾಭಾದ್ರಾದಿ ಮೂರು ನಕ್ಷತ್ರಗಳು ಕೃತ್ತಿಕಾ, ಸ್ವಾತಿ, ಉತ್ತರಾ ಭಾದ್ರಾದಿ ಮೂರು ನಕ್ಷತ್ರಗಳು ರೋಹಿಣಿ, ಶತಭಿಷೆ, ಈ ನಕ್ಷತ್ರಗಳು ವಿವಾಹಕ್ಕೆ ಪ್ರಶಸ್ತಗಳು—

೧೩–೧೫. ಎಲೈ ಭಾರ್ಗವನೇ, ಇಹಲೋಕದ ಮತ್ತು ಪರಲೋಕದ ಸೌಖ್ಯವನ್ನು ಅಪೇಕ್ಷಿಸುವವನು ಗೋತ್ರದಿಂದ ಸಮಾನಳಾಗಿಯೂ (ಸಗೋತ್ರ ಳೆಂದರ್ಥ) ಪ್ರವರದಲ್ಲಿರುವ ಋಷಿಗಳ ಸಾಮ್ಯವುಳ್ಳವಳಾಗಿಯೂ ಇರುವ ಕನ್ಯೆಯನ್ನು ವಿವಾಹಕ್ಕೆ ಅಪೇಕ್ಷಿಸಬಾರದು. ತಂದೆಯಿಂದ ಏಳು ತಲೆ ದೂರವಾಗಿಯೂ ತಾಯಿ ಯಿಂದ ಐದು ತಲೆ ದೂರವಾಗಿಯೂ ಇರುವ ಸಲ್ಲಕ್ಷಣಗಳಿಂದ ಕೂಡಿದ ಕನ್ಯೆಯನ್ನು ವರಿಸಬೇಕು. (ಇಲ್ಲಿ ಸಮಾನ ಗೋತ್ರವಾದ ಗೋತ್ರಜ್ಞಾತಿಗಳಲ್ಲೂ, ಹಾಗೆಯೇ ತಂದೆಯಿಂದ ಏಳು ತಲೆಯುವರಿಗಿನ ದಶರಾತ್ರಜ್ಞಾತಿಗಳಲ್ಲೂ ತಾಯಿಯಿಂದ ಐದು ತಲೆಯವರಿಗಿನ ಮಾತೃಸಪಿಂಡರಲ್ಲೂ ಕನ್ಯೆಯನ್ನು ಗ್ರಹಿಸಬಾರದೆಂದು ತಾತ್ಪರ್ಯ

ಆಹುಃ ಪ್ರಧಾನಂ ಬ್ರಾಹ್ಮೇಣ ಕುಲಶೀಲಯುತಾಯ ತು ।
ತಜ್ಜಃ ಪುನಾತ್ಯುಭಯತಃ ಪುರುಷಾನೇಕವಿಂಶತೀನ್ ॥ ೧೬ ॥

ದೈವಶ್ಚ ಋತ್ವಿಜೇ ದಾನಂ ಸ ತು ಯಜ್ಞಃ ಪ್ರಕೀರ್ತಿತಃ ।
ತಜ್ಜಃ ಪುನಾತಿ ಧರ್ಮಜ್ಞ ಸ್ವಕುಲೇ ಪುರುಷತ್ರಯಾನ್ ॥ ೧೭ ॥

ಶುಲ್ಕೇನ ಚಾಸುರಂ ವಿದ್ಯಾತ್ಸತು ಧರ್ಮಾದೃತೇ ಮತಃ ।
ಪರಸ್ಪರೇಚ್ಛಯಾ ರಾಮ ಕನ್ಯಕಾವರಯೋಸ್ತಥಾ ॥ ೧೮ ॥

ಗಾಂಧರ್ವೋ ನಾಮ ನಿರ್ದಿಷ್ಟಃ ಸ ತು ಮನ್ಮಥಲಕ್ಷಣಃ ।
ರಾಕ್ಷಸೋ ಯುದ್ಧಹರಣಾತ್ಪೈಶಾಚಃ ಕನ್ಯಕಾಚ್ಛಲಾತ್ ॥ ೧೯ ॥

---

ಮಾತೃಸಗೋತ್ರವೂ ನಿಷೇಧಿಸಲ್ಪಟ್ಟಿದೆ ಆದರೆ ಐದು ತಲೆಗಿಂತಲೂ ಹಿಂದೆ ಮಾತೃ ವಂಶ ಸಂಬಂಧವು ತಿಳಿಯದಿದ್ದಲ್ಲಿ ಅಂತಹ ಮಾತೃಸಗೋತ್ರ ಕನ್ಯೆಯು ವಿವಾಹಕ್ಕೆ ಅರ್ಹಳೆಂದೇ ಧರ್ಮಶಾಸ್ತ್ರಕಾರರ ವಚನಗಳಿವೆ) ವಿವಾಹದಲ್ಲಿ ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ, ಪೈಶಾಚ, ಎಂದು ಎಂಟು ವಿಧವುಂಟು.

೧೬-೧೭. ವಂಶ ಮತ್ತು ಶೀಲಸ್ವಭಾವಗಳಿಂದ ಸದೃಶನಾದ ವರನಿಗೆ ಬ್ರಾಹ್ಮ ವಿವಾಹಕ್ರಮದಿಂದ ಕನ್ಯಾಪ್ರದಾನ ಮಾಡಬೇಕೆಂದು ಪ್ರಾಜ್ಞರು ಹೇಳುತ್ತಾರೆ. ಅವರಲ್ಲಿ ಹುಟ್ಟಿದವನು ಉಭಯತ್ರ ಇಪ್ಪತ್ತೊಂದು ತಲೆಯ ಪುರುಷರನ್ನೂ ಪವಿತ್ರ ಗೊಳಿಸುತ್ತಾನೆ ಯಜ್ಞದಲ್ಲಿರುವ ಋತ್ವಿಕ್ಕಿಗೆ ಮಾಡುವ ಕನ್ಯಾದಾನವು ದೈವವಿವಾಹ ವೆಂದು ಕರೆಯಲ್ಪಡುತ್ತದೆ. ಅದೂ ಒಂದು ಯಜ್ಞರೂಪವೇ ಆಗುತ್ತದೆ. ಅವಳಲ್ಲಿ ಹುಟ್ಟಿದವನು ತನ್ನ ವಂಶಕ್ಕೆ ಸೇರಿದ ಮೂರು ಪುರುಷರನ್ನು ಉದ್ಧರಿಸುತ್ತಾನೆ.

೧೮-೧೯. ಶುಲ್ಕವನ್ನು ತೆಗೆದುಕೊಂಡು ಮಾಡುವ ಕನ್ಯಾಪ್ರದಾನವು ಆಸುರವಿವಾಹವೆಂದು ಕರಯಲ್ಪಡುತ್ತದೆ. ಅದು ಧರ್ಮಬಾಹಿರವಾದುದು. ಕನ್ಯೆಯೂ ವರನೂ ಸಹ ಪರಸ್ಪರೇಚ್ಛೆಯಿಂದ ಹೊಂದುವ ವಿವಾಹವು ಗಾಂಧರ್ವವೆನಿಸುತ್ತದೆ. ಅದು ಅವರ ಮನ್ಮಥಾಭಿಲಾಷಾಮೂಲಕವಾದದ್ದು. ಯುದ್ಧದಲ್ಲಿ ಕನ್ಯಾಪಿತೃವನ್ನು ಜಯಿಸಿ ಕನ್ಯಕೆಯನ್ನು ಅಪಹರಿಸುವುದು ರಾಕ್ಷಸವಿವಾಹವೆನಿಸುತ್ತದೆ. ಕನ್ಯೆ ಇರುವ ಸ್ಥಲಕ್ಕೆ ಹೋಗಿ ಮೋಸದಿಂದ ಅವಳನ್ನು ಅಪಹರಿಸುವ ವಿವಾಹವು ಪೈಶಾಚ ವೆನಿಸುತ್ತದೆ.

ಪ್ರಾಜಾಪತ್ಯಸ್ತಥಾ ಬ್ರಾಹ್ಮಃ ಸಮವರ್ಣೇಷು ಪೂಜ್ಯತೇ ।
ದೈವಸ್ತು ಬ್ರಾಹ್ಮಣಸ್ಯೈವ ನೈವಚಾನ್ಯಸ್ಯ ಕಸ್ಯಚಿತ್ ॥ ೨೦ ॥

ಗಾಂಧರ್ವರಾಕ್ಷಸೌ ಶ್ರೇಷ್ಠೌ ಕ್ಷತ್ರಿಯಸ್ಯೈವ ಭಾರ್ಗವ ।
ಪೂರ್ವಂ ವಿವಾಹಾತ್ಕರ್ತವ್ಯಃ ಶಚೀಯಾಗೋ ಭೃಗೂತ್ತಮ ॥ ೨೧ ॥

ವೈವಾಹಿಕೇಂದೌ ಕುರ್ವೀತ ಕುಂಭಕಾರಮೃದಾ ಶಚೀಂ ।
ಸರ್ವಲಕ್ಷಣಸಂಯುಕ್ತಾಂ ಕುಶಲೇನ ಚ ಶಿಲ್ಪಿನಾ ॥ ೨೨ ॥

ತಾಂ ನಯೇತ್ಸರಸ್ತಸ್ತೀರಂ ನದೀತೀರಮಥಾಪಿ ವಾ ।
ಸರ್ವಭೂಷಣಸಂಪನ್ನಾಃ ಸರ್ವಾಸ್ತ್ವವಿಧವಾಃ ಸ್ತ್ರಿಯಃ ॥ ೨೩ ॥

ಕೌಸುಂಭರಕ್ತವಸನಾಃ ಸರ್ವಾಃ ಸ್ಯುಃ ಶಸ್ತ್ರಪಾಣಯಃ ।
ಮಾಲ್ಯಾನುಲೇಪನೈರ್ಭಕ್ಷ್ಯೈಃ ದೀಪೈರ್ಧೂಪೈಸ್ತಥೈವ ಚ ॥ ೨೪ ॥

೨೦-೨೧. ಸವರ್ಣರಾದ ವಧೂವರರ ವಿವಾಹವಿಷಯದಲ್ಲಿ ಪ್ರಾಜಾಪತ್ಯವೆಂಬ ವಿವಾಹಕ್ರಮವೇ ಪ್ರಶಸ್ತ. ದೈವವೆಂಬ ವಿವಾಹಕ್ರಮವು ಬ್ರಾಹ್ಮಣನಿಗೇ ಅನ್ವಯಿಸುವುದೇ ಹೊರತು ಇತರರಾರಿಗೂ ಸಂಬಂಧಿಸುವುದಿಲ್ಲ. ಗಾಂಧರ್ವ, ರಾಕ್ಷಸವೆಂಬ ವಿವಾಹಭೇದಗಳು ಕ್ಷತ್ರಿಯನಿಗೇ ಸೇರಿದುವು. ಇತರರಿಗೆ ಇಲ್ಲ. ಎಲೈ ಭಾರ್ಗವನೇ, ಈ ರೀತಿಯಾದ ವಿವಾಹವಿಧಿಯನ್ನನುಸರಿಸಿ ವಿವಾಹಮಾಡಬೇಕಾದ ಸಂದರ್ಭದಲ್ಲಿ ಈ ವಿವಾಹಕ್ಕಿಂತಲೂ ಮೊದಲು ಶಚೀಯಾಗವೆಂಬ ಕರ್ಮವನ್ನು ಮಾಡಬೇಕು.

೨೨-೨೩. ವಿವಾಹವು ನಡೆಯಬೇಕಾದ ಆ ತಿಥಿಯಲ್ಲಿ ಕುಂಬಾರನ ಮನೆಯ ಮಣ್ಣಿನಿಂದ ಸರ್ವವಿಧವಾದ ಶುಭಲಕ್ಷಣಗಳಿಂದ ಕೂಡಿದ ಶಚೀದೇವಿಯ ವಿಗ್ರಹವನ್ನು ಬುದ್ಧಿಶಾಲಿಯಾದ ಶಿಲ್ಪಿಯಿಂದ ಮಾಡಿಸಬೇಕು. ಆ ಶಚೀದೇವಿಯ ವಿಗ್ರಹವನ್ನು ಅಲಂಕಾರಗಳಿಂದ ರಮ್ಯರಾದ ಮುತ್ತೈದೆಯರು ಕೊಳದ ತೀರಕ್ಕೋ ಅಥವಾ ನದಿಯ ತೀರಕ್ಕೋ ತೆಗೆದುಕೊಂಡು ಹೋಗಬೇಕು.

೨೪-೨೫. ಹಾಗೆ ಹೋಗುವ ಮುತ್ತೈದೆಯರೆಲ್ಲರೂ ಕುಸುಂಭದಂತೆ ಕೆಂಪಾದ ವಸ್ತ್ರಗಳನ್ನುಟ್ಟು ಎಲ್ಲರೂ ಶಸ್ತ್ರಪಾಣಿಗಳಾಗಿಯೇ ಹೋಗಬೇಕು. ಆ ನದಿಯ ತೀರದಲ್ಲಿ ಕುಸುಂಭದಂತೆ ಕೆಂಪಾದ ವಸ್ತ್ರದಿಂದಲೂ ಶಕ್ತಿಗೆ ತಕ್ಕಂತೆ

ಕೌಸುಂಭರಕ್ತೈರ್ವಸ್ತ್ರೈಶ್ಚ ಭೂಷಣೈಶ್ಚೈವ ಶಕ್ತಿತಃ ।
ತತಃ ಶೂರ್ಪೇಣ ತಾಃ ಸಾಧ್ವ್ಯೋ ದಿಕ್ಷು ದತ್ವಾ ಬಲಿಂ ಶುಭಂ ॥ ೨೫ ॥

ಸಂಯಮ್ಯ ಕೇಶಾನ್ ಪ್ರಯತಾಃ ಗೃಹೀತ್ವಾ ಚ ತಥಾ ಶಚೀಂ ।
ವಾದ್ಯಗೀತೇನ ಮಹತಾ ದ್ವಿಜವಾಚನಿಕೇನ ಚ ॥ ೨೬ ॥

ಗೃಹೇ ಪ್ರವೇಶಯೇತ್ಪುಂಸಾಂ ಶಕ್ರಪತ್ನೀಮನಿಂದಿತಾಂ ।
ತ್ರಿಸಂಧ್ಯಂ ತತ್ರ ಸಾ ಪೂಜ್ಯಾ ಗಂಧಮಾಲ್ಯಾನ್ನಸಂಪದಾ ॥ ೨೭ ॥

ವಂದನೀಯೋದ್ವಾಹಸಮಯೇ ತತ್ರ ಕಾಲಂ ನಿಬೋಧ ಮೇ ।
ಪ್ರಸುಪ್ತೇ ಕೇಶವೇ ರಾಮ ನತು ಕಾರ್ಯಂ ಕಥಂಚನ ॥ ೨೮ ॥

ನ ಪೌಷೇ ನ ತಥಾ ಚೈತ್ರೇ ನಚಾರ್ಕಕುಜವಾಸರೇ ।
ಕೃಷ್ಣತ್ರಿಭಾಗೇ ನೈವಾಂತ್ಯೇ ನಾದ್ಯೇ ಶುಕ್ಲಸ್ಯ ಭಾರ್ಗವ ॥ ೨೯ ॥

---

ಆಭರಣಗಳಿಂದಲೂ ಶಚೀದೇವಿಯನ್ನು ಅಲಂಕರಿಸಿ ಗಂಧ ಪುಷ್ಪಧೂಪ ದೀಪ ನೈವೇದ್ಯಾದಿಗಳಿಂದ ಪೂಜಿಸಬೇಕು. ಅನಂತರ ಆ ಮುತ್ತೈದೆಯರು ಎಲ್ಲಾ ದಿಕ್ಕುಗಳಲ್ಲಿಯೂ ಮಂಗಲಪ್ರದವಾದ ಬಲಿಹರಣವನ್ನು (ಮೊರದಿಂದ) ಮಾಡಬೇಕು.

೨೬–೨೭. ಅನಂತರ ಮುತ್ತೈದೆಯರೆಲ್ಲರೂ ತಮ್ಮ ತಲೆಯ ಕೇಶಗಳನ್ನು ಸರಿಯಾಗಿ ಗಂಟುಹಾಕಿಕೊಂಡು ಪರಿಶುದ್ಧರಾಗಿ ಆ ಶಚಿಯನ್ನು ತೆಗೆದುಕೊಂಡು ಗೀತ ವಾದ್ಯಗಳೊಡನೆಯೂ ಬ್ರಾಹ್ಮಣರ ಸ್ವಸ್ತಿವಾಚನದೊಡನೆಯೂ ವರನ ಮನೆಗೆ ಬಂದು ಮಂಗಳ ವಾದ್ಯದೊಡನೆ ಆ ಶಚೀದೇವಿಯನ್ನು ವರನ ಮನೆಯಲ್ಲಿಡಬೇಕು. ಅಲ್ಲಿ ಮೂರುಕಾಲಗಳಲ್ಲಿಯೂ ಆ ಶಚೀದೇವಿಯನ್ನು ಗಂಧಪುಷ್ಪ ಧೂಪ ನೈವೇದ್ಯಾದಿಗಳಿಂದ ಪೂಜಿಸಬೇಕು. ವಿವಾಹಕಾಲದಲ್ಲಿಯೂ ನಮಸ್ಕರಿಸಬೇಕು. ಇದಕ್ಕೆ ತಕ್ಕಕಾಲವನ್ನು ಹೇಳುತ್ತೇನೆ ಕೇಳು.

೨೮–೩೦. ಕೇಶವನು ಮಲಗಿರುವಾಗ (ದಕ್ಷಿಣಾಯನದಲ್ಲಿ) ಈ ಕಾರ್ಯವಾವುದನ್ನೂ ಮಾಡಬಾರದು. ಪುಷ್ಯಮಾಸದಲ್ಲಿಯೂ, ಚೈತ್ರಮಾಸದಲ್ಲಿಯೂ, ಶನಿವಾರ ಮತ್ತು ಮಂಗಳವಾರಗಳಲ್ಲಿಯೂ ಕೃಷ್ಣಪಕ್ಷದ ಮೂರನೆಯ ಭಾಗದಲ್ಲಿಯೂ ಅದರಲ್ಲಿಯೂ ಅಂತ್ಯಭಾಗದಲ್ಲಿಯೂ ಶುಕ್ಲಪಕ್ಷದ ಆದಿಭಾಗದಲ್ಲಿಯೂ ರಿಕ್ತತಿಥಿ

ತಥಾ ರಿಕ್ತತಿಥೌ ನೈವ ನ ವಿಷ್ಟ್ಯಾ ಕರಣೇ ತಥಾ ।
ನ ಶುಕ್ರೇಽಸ್ತಮನಂ ಪ್ರಾಪ್ತೇ ತಥಾ ಚಾಸ್ತೇ ಬೃಹಸ್ಪತೌ ॥ ೩೦ ॥

ಶಶಾಂಕೇಽನ್ಯಗ್ರಹಾಶ್ಚೈವ ವಿವಾಹೋ ನ ಪ್ರಶಸ್ಯತೇ ।
ಅರ್ಕಾರ್ಕಿಭೌಮಯುಕ್ತೇ ಭೇ ವ್ಯತೀಪಾತಹತೇ ತಥಾ ॥ ೩೧ ॥

ದಿವ್ಯಾಂತರಿಕ್ಷಭೌಮೇನ ತಥೋತ್ಪಾತೇನ ಘಾತಿತೇ ।
ತಥಾ ಶಿಖಿಶಿಖಾಧ್ವಸ್ತೇ ಸೈಂಹಿಕೇಯಯುತೇ ತಥಾ ॥ ೩೨ ॥

ವೈವಾಹಿಕಾನ್ಯತೋ ವಕ್ಷ್ಯೇ ನಕ್ಷತ್ರಾಣಿಭೃಗೂತ್ತಮ ।
ಸೌಮ್ಯಂ ಪಿತ್ರ್ಯಂ ಚ ವಾಯುವ್ಯಂ ಸಾವಿತ್ರಂ ರೌಹಿಣಂ ತಥಾ ॥ ೩೩ ॥

ಉತ್ತರಾತ್ರಿತಯಂ ಮೂಲಂ ಮೈತ್ರಂ ಪೌಷ್ಣಂ ತಥೈವ ಚ ।
ಮುಹೂರ್ತಾಶ್ಚ ತಥೈತೇಷಾಂ ಶುಭಾ ಅಭಿಜಿತಾ ಸಹ ॥ ೩೪ ॥

---

ಯಲ್ಲಿಯೂ, ವಿಷ್ಟಿಕರಣದಲ್ಲಿಯೂ, ಗುರುಶುಕ್ರರು ಅಸ್ತಹೊಂದಿರುವಾಗಲೂ ಮಾಡಬಾರದು.

೩೧-೩೨. ಚಂದ್ರನೂ ಇತರ ಗ್ರಹಗಳೂ ಸಹ ಅಸ್ತವಾಗಿರುವಾಗಲೂ ವಿವಾಹವು ಪ್ರಶಸ್ತವಲ್ಲ. ಮತ್ತು ಭಾನು, ಶನಿ, ಮಂಗಳವಾರದಿಂದ ಕೂಡಿದ ನಕ್ಷತ್ರ, ವ್ಯತೀಪಾತದಿಂದ ಕೂಡಿದ ನಕ್ಷತ್ರ, ದಿವ್ಯ ಮತ್ತು ಅಂತರಿಕ್ಷ ಭೂಮಿ ಇವುಗಳಲ್ಲಿ ಉತ್ಪಾತ ವುಂಟಾಗುವ ಸಮಯ, ಕೇತುವಿನ ಜ್ವಲನಕಾಲಗಳು ರಾಹು ಗ್ರಸ್ತವಾದ ನಕ್ಷತ್ರ ಇವನ್ನೂ ಬಿಡಬೇಕು.

೩೩-೩೪. ಎಲೈ ಭಾರ್ಗವನೇ ವಿವಾಹಕ್ಕೆ ಸಿದ್ಧವಾದ ಕಾಲವನ್ನು ಹೇಳಿದ್ದಾಯಿತು. ಇನ್ನು ಮುಂದೆ ವಿಹಿತವಾಗಿರುವ ನಕ್ಷತ್ರಗಳನ್ನು ಹೇಳುತ್ತೇನೆ ಕೇಳು. ಮೃಗಶಿರಾ, ಮಖಾ, ಸ್ವಾತಿ, ಉತ್ತರಾ, ರೋಹಿಣೀ, ಉತ್ತರಾಷಾಢಾ, ಉತ್ತರಾಭಾದ್ರಾ, ಉತ್ತರಫಲ್ಗುನೀ, ಮೂಲ, ಅನೂರಾಧಾ, ರೇವತಿ. ಈ ನಕ್ಷತ್ರಗಳೂ ಇವುಗಳಿಂದ ಕೂಡಿದ ಮುಹೂರ್ತಗಳೂ ಅಭಿಜಿತ್ತೂ ಸಹ ಪ್ರಶಸ್ತಗಳು.

ಮಾನುಷ್ಯಾಖ್ಯಸ್ತಥಾಲಗ್ನೋ ಮಾನುಷ್ಯಾಖ್ಯಸ್ತಥಾಂಶಕಃ ।
ಅಮಾನುಷ್ಯಾಖ್ಯೇ ಲಗ್ನೇಽಪಿ ಮಾನುಷ್ಯಾಖ್ಯೋಽಂಶಕೋಹಿತಃ ॥ ೩೫ ॥

ತೃತೀಯೇ ಚ ತಥಾ ಷಷ್ಠೇ ದಶಮ್ಯೈಕಾದಶಾಷ್ಟಮೇ ।
ಅರ್ಕಾರ್ಕಿಭೌಮತನಯಾಃ ಪ್ರಶಸ್ತಾ ನ ಕುಜೋಽಷ್ಟಮಃ ॥ ೩೬ ॥

ಸಪ್ತಾನ್ತ್ಯಾಷ್ಟಮವರ್ಜ್ಯೇಷು ಶೇಷಾಃ ಶಸ್ತಾಃ ಗ್ರಹೋತ್ತಮಾಃ ।
ತೇಷಾಮಪಿ ತಥಾ ಸೂರ್ಯಶ್ಚಂದ್ರಃ ಷಷ್ಠೋ ನ ಶಸ್ಯತೇ ॥ ೩೭ ॥

ಸಂಕಲ್ಪವಿಧಿನಾ ಕಾರ್ಯೋ ವಿವಾಹಸ್ತದನಂತರಂ ।
ವೈವಾಹಿಕೇಽಹ್ನಿ ಕರ್ತವ್ಯಾಸ್ತಥೈವ ಚ ಚತುರ್ಥಿಕೇ ॥ ೩೮ ॥

ನ ದಾತವ್ಯಾ ಗ್ರಹಾಸ್ತತ್ರ ಚತುರಾದ್ಯಾಸ್ತಥೈಕಗಾಃ ।
ಅತಃ ಪರಂ ಗೃಹೇ ಗಚ್ಛೇದೃತುಕಾಲೇ ಸದಾ ಸ್ತ್ರಿಯಂ ॥ ೩೯ ॥

---

೩೫-೩೬. ಮಿಥುನವೇ ಮೊದಲಾದ ಮನುಷ್ಯ ಲಗ್ನಗಳೇ ಪ್ರಶಸ್ತ. ಆ ಲಗ್ನಗಳಲ್ಲಿಯೂ ಮಾನುಷ್ಯಾಂಶವು ಉತ್ತಮ. ಮೇಷವೇ ಮೊದಲಾದ ಅಮನುಷ್ಯ ಲಗ್ನದಲ್ಲಿಯೂ ಮಾನುಷಾಂಶವೇ ಉತ್ತಮ. ಲಗ್ನಕ್ಕೆ ಮೂರನೆಯ ಸ್ಥಾನದಲ್ಲಿಯೂ ಆರನೆಯ ಸ್ಥಾನದಲ್ಲೂ, ಹತ್ತು ಹನ್ನೊಂದನೆಯ ಸ್ಥಾನದಲ್ಲಿಯೂ ಎಂಟನೆಯ ಸ್ಥಾನದಲ್ಲಿಯೂ ಸೂರ್ಯ, ಶನಿ, ಅಂಗಾರಕ ಇವರು ಇದ್ದರೆ ಪ್ರಶಸ್ತ. ಕುಜನು ಅಷ್ಟಮದಲ್ಲಿರಕೂಡದು.

೩೭-೩೮. ಇತರ ಶುಭಗ್ರಹಗಳು ಏಳು, ಹನ್ನೆರಡು, ಎಂಟು, ಮತ್ತು ವರ್ಜ್ಯವಾಗಿರುವ ಸ್ಥಾನಗಳನ್ನು ಬಿಟ್ಟು ಉಳಿದ ಸ್ಥಾನಗಳಲ್ಲಿ ಪ್ರಶಸ್ತಗಳಾಗುತ್ತವೆ. ಆ ಗ್ರಹಗಳಲ್ಲಿಯೂ ಸಹ ಸೂರ್ಯ ಚಂದ್ರರು ಆರನೆಯ ಸ್ಥಾನದಲ್ಲಿ ಪ್ರಶಸ್ತರಲ್ಲ ವಿವಾಹವನ್ನು ವಿಹಿತವಾಗಿರುವ ಸಂಕಲ್ಪ ಪೂರ್ವಕವಾಗಿ ಆ ದಿನದಲ್ಲಿಯೇ ಮಾಡಬೇಕು. ನಾಲ್ಕನೆಯದಿನದ ಶೇಷ ಹೋಮವೇ ಮೊದಲಾದವನ್ನೂ ಹಾಗೆಯೇ ಮಾಡಬೇಕು.

೩೯-೪೦. ನಾಲ್ಕು ಮೊದಲಾದ ಹೆಚ್ಚು ಗ್ರಹಗಳು ಒಂದೇ ಲಗ್ನದಲ್ಲಿ ಒಟ್ಟುಗೂಡಿ ಇದ್ದದ್ದೇ ಆದರೆ ಆ ಲಗ್ನದಲ್ಲಿ ಕನ್ಯೆಯನ್ನು ದಾನಮಾಡಬಾರದು. ಹೀಗೆ ವಿಹಿತಕ್ರಮದಿಂದ ವಿವಾಹವು ನಡೆದ ಮೇಲೆ ತನ್ನ ಮನೆಗೆ ಕರೆತಂದ ವಧುವಿನೊ

ಪರ್ವವರ್ಜಂ ಸದಾ ಗಚ್ಛೇತ್ ಸ್ತ್ರೀಣಾಂ ವಾ ಸಂಸ್ಮರನ್ನರಂ ।
ಸರ್ವಕಾಲಂ ರತಿರ್ದತ್ತಾ ತಾಸಾಂ ಸತ್ಯಂ ಭೃಗೂತ್ತಮ ॥ ೪೦ ॥

ಪರಸ್ಪರಾತಿಕ್ರಮಣಂ ದಂಪತ್ಯೋಃ ಪರಿವರ್ಜಯೇತ್ ।
ನಿಷ್ಕಾರಣಂ ತಥಾ ರಾಮ ನ ಕಾರ್ಯಮಧಿವೇದನಂ ॥ ೪೧ ॥

ಅಪ್ರಜಾರೋಹಿಣೀ ಮೂಢಾ ತಥಾ ಚ ಕಲಹಪ್ರಿಯಾ ।
ಕನ್ಯಾಪ್ರಜಾ ತಥಾ ಯಾ ಚ ಯಾ ಚೈವಾಪ್ರಿಯವಾದಿನೀ ॥ ೪೨ ॥

ಏತಾಃ ಖಲ್ವಧಿವೇತ್ತವ್ಯಾಃ ಗೃಹಕಾರ್ಯಪರಾಙ್ಮುಖೀಃ ।
ಅಧಿವಿನ್ನಾ ವಿಶೇಷೇಣ ಪಾಲನೀಯಾ ಸುತಂ ಭವೇತ್ ॥ ೪೩ ॥

---

ಡನೆ ಋತುಕಾಲದಲ್ಲಿ ಪರ್ವದಿನಗಳನ್ನು ಬಿಟ್ಟು ಯಾವಾಗಲೂ ಸಮಾಗಮಹೊಂದುತ್ತಿರಬೇಕು. (ಇಲ್ಲಿ ಸರ್ವಕಾಲದಲ್ಲೂ ಎಂದು ಅರ್ಥವಲ್ಲ. ಋತುಕಾಲದಲ್ಲಿ ವಿಹಿತ ವೇಳೆಯಲ್ಲಿ ಎಂದು ತಾತ್ಪರ್ಯ. ಋತುಕಾಲದಲ್ಲೂ ಸಂತತಿ ಇಲ್ಲದಿರುವವನಿಗೆ ಇದು ನಿಯಮ ರೂಪವೆಂದೂ ಸಂತತಿ ಇರುವವನಿಗೆ ಅಭ್ಯನುಜ್ಞಾಮಾತ್ರವೆಂದೂ ಧರ್ಮಶಾಸ್ತ್ರಕಾರರ ವಚನಗಳಿವೆ) ಸ್ತ್ರೀಯರ ಅಭಿಲಾಷೆಗೆ ತಕ್ಕಂತೆ ಋತುಕಾಲನಿಯಮವಿಲ್ಲದೆ ಇತರ ಕಾಲದಲ್ಲೂ ಸಮಾಗಮನವನ್ನು ಹೊಂದಬಹುದು. ಆದರೆ ದಂಪತಿಗಳಿಬ್ಬರೂ ತಮ್ಮ ತಮ್ಮ ರತ್ಯಭಿಲಾಷೆಯನ್ನು ತಮ್ಮ ತಮ್ಮಲ್ಲೇ ಪೂರ್ತಿಗೊಳಿಸಿಕೊಳ್ಳಬೇಕೇ ಹೊರತು ಅತಿಕ್ರಮಣ ಮಾಡಕೂಡದು.

೪೧–೪೩. ಎಲೈ ಭಾರ್ಗವನೇ ಮದುವೆಯಾದ ಹೆಂಡತಿಯನ್ನು ನಿಷ್ಕಾರಣವಾಗಿ ಸಪತ್ನಿಯನ್ನಾಗಿ ಮಾಡಬಾರದು (ಮತ್ತೊಂದು ವಿವಾಹದಿಂದ ಇವಳು ಸವತಿಯಾಗುವಂತೆ ಮಾಡಬಾರದು) ಆದರೆ ಆವಳು ಬಂಜೆಯಾಗಿದ್ದರೆ ಅಥವಾ ದುಷ್ಟರೋಗಿಣಿಯಾದಲ್ಲಿ ಅಥವಾ ಬೆಪ್ಪುತನದಿಂದ ಇದ್ದಲ್ಲಿ ಅಥವಾ ಜಗಳಗಂಟಿಯಾದಲ್ಲಿ ಅಥವಾ ಬರೀ ಹೆಣ್ಣುಮಕ್ಕಳುಳ್ಳವಳಾಗಿದ್ದಲ್ಲಿ, ಕ್ರೂರಭಾಷಿಣಿಯಾಗಿದ್ದಲ್ಲಿಯೂ ಮನೆಯ ಕೆಲಸದಲ್ಲಿ ಪರಾಙ್ಮುಖಿಯಾಗಿದ್ದಲ್ಲಿಯೂ ಬೇರೆ ಮದುವೆಮಾಡಿಕೊಂಡು ಇವಳನ್ನು ಸವತಿಯಾಗುವಂತೆ ಮಾಡಬಹುದು. ಹಾಗೆ ಬೇರೆ ವಿವಾಹವನ್ನು ಹೊಂದಿದರೂ ಸಹ ಮೊದಲನೆಯ ಹೆಂಡತಿಯು ಪುತ್ರವತಿಯಾಗಿದ್ದಲ್ಲಿ ಅವಳನ್ನು ಅನ್ನವಸ್ತ್ರಾದಿಗಳಿಂದ ರಕ್ಷಿಸಬೇಕು.

ಧರ್ಮಕಾರ್ಯೇಷು ಸರ್ವೇಷು ತಥಾ ಜ್ಯೇಷ್ಠಾಂ ನಿಯೋಜಯೇತ್ ।
ಧರ್ಮಾಧರ್ಮೌ ಸಮೌ ರಾಮ ದಂಪತ್ಯೋರುಭಯಾತ್ಮಕೌ ॥ ೪೪ ॥

ಪೋಷ್ಯಾ ಚ ನಿತ್ಯಂ ಪರಿಪಾಲನೀಯಾ
ಭಾರ್ಯಾ ಭವೇದ್ಧರ್ಮಪರಾಯಣಸ್ಯ ।
ಧರ್ಮಾರ್ಥಕಾಮಾನ್ ಸತತಂ ದ್ವಿಜೇಂದ್ರ
ತಾನ್ರಕ್ಷಯೇತ್ಸಮ್ಯಗಥಾನಯಾಸ್ಮಾನ್ ॥ ೪೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಧರ್ಮವರ್ಣನಂ
ನಾಮ ಸಪ್ತಾಶೀತಿತಮೋಽಧ್ಯಾಯಃ

---

೪೪-೪೫. ಯಜ್ಞಯಾಗವೇ ಮೊದಲಾದ ಧರ್ಮಕಾರ್ಯವನ್ನು ನಡೆಸುವಾಗ ಜ್ಯೇಷ್ಠಪತ್ನಿಯೊಡನೆಯೇ ಅವನು ನಡೆಸಬೇಕು. ಎಲೈ ಭಾರ್ಗವನೇ ಧರ್ಮಾಧರ್ಮಗಳು ದಂಪತಿಗಳಿಬ್ಬರನ್ನೂ ಸೇರಿವೆ. ಬೇರೆ ಪತ್ನಿಯನ್ನು ಕಾರಣಾಂತರದಿಂದ ಹೊಂದಿದರೂ ಸಹ ಧರ್ಮಕ್ಕೆ ಅಡ್ಡಿಬರದಂತೆ ಜ್ಯೇಷ್ಠಪತ್ನಿಯನ್ನು ಪುರಸ್ಕರಿಸಬೇಕು ಧರ್ಮಪರನಾದವನಿಗೆ ಭಾರ್ಯೆಯಾದವಳು ನಿತ್ಯವೂ ಪೋಷ್ಯವರ್ಗಕ್ಕೆ ಸೇರಿದವಳು. ಅವಳನ್ನು ರಕ್ಷಿಸುವುದೂ ಮುಖ್ಯವಾದ ಕಾರ್ಯ. ಈ ದೃಷ್ಟಿಯಿಂದ ಪತ್ನಿಯಿಂದುಂಟಾಗಬಹುದಾದ ತನ್ನ ಧರ್ಮಾರ್ಥಗಳನ್ನು ಧಾರ್ಮಿಕನಾದವನು ರಕ್ಷಿಸಿಕೊಳ್ಳಲೇಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಧರ್ಮವರ್ಣನವೆಂಬ ಎಂಭತ್ತೇಳನೆಯ ಅಧ್ಯಾಯವು ಮುಗಿದಿದೆ.



## ಎಂಭತ್ತೇಳನೇ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಗೃಹಸ್ಥಾಶ್ರಮ ಧರ್ಮಗಳನ್ನು ಹೇಳಲುಪಕ್ರಮಿಸಿ ಬ್ರಾಹ್ಮಣಾದಿ ವರ್ಣಕ್ರಮದಿಂದ ಕಾಮಾಸಕ್ತರಾದವರಿಗೆ ವಿವಾಹಕ್ಕೆ ಅರ್ಹರಾದ ಕನ್ಯೆಯರನ್ನೂ ಅವರೊಡನೆ ಮಾಡಿಕೊಳ್ಳಬಹುದಾದ ವಿವಾಹದ ಕ್ರಮವನ್ನೂ ವಿವಾಹಿತರಾದ ಆ ಯುವತಿಯರಿಗೆ ಧರ್ಮಾರ್ಥಗಳ ಸಂಬಂಧವನ್ನೂ ವಿವರಿಸಲಾಗಿದೆ. ನಾಲ್ಕು ಅಂಗಗಳೊಡನೆ ಕೂಡಿದ ವಿವಾಹವನ್ನು ನಿರೂಪಿಸಿ ವಾಗ್ದಾನವೆಂಬ ಮೊದಲನೆಯ ಅಂಗವು ನಡೆದಿದ್ದರೂ ವಿವಾಹದ ಸಿದ್ಧಿಗೆ ಮೊದಲು ಕೆಲವು ಕಾರಣಗಳಿಂದ ಆ ಕನ್ಯೆಯನ್ನು ಬೇರೆ ಕೊಟ್ಟು ವಿವಾಹ ನಡೆಸಬಹುದೆಂದೂ ವಿಶೇಷವಿಧಿಯನ್ನು ಹೇಳಲಾಗಿದೆ. ಎರಡನೆಯ ಅಂಗವಾದ ಶಚೀಯಾಗದ ಸ್ವರೂಪವನ್ನು ಹೇಳಿ ಅದಕ್ಕೂ ವಿವಾಹಕ್ಕೂ ಅರ್ಹವಾದ ನಕ್ಷತ್ರಮಾಸಲಗ್ನಾದಿಗಳನ್ನೂ ಸಾದಕಬಾಧಕ ವಿಚಾರಗಳೊಡನೆ ವಿವರಿಸಿರುವರು. ಪುರುಷನು ಎರಡನೆಯ ವಿವಾಹ ಹೊಂದಲು ಶಾಸ್ತ್ರಸಂಮತವಾದ ಕಾರಣಗಳನ್ನು ನಿರೂಪಿಸಿ ಈ ಕಾರಣ ಹೊರತು ಮತ್ತಾವ ಕಾರಣದಿಂದಲೂ ಬೇರೆ ಪತ್ನಿಯನ್ನು ಹೊಂದಕೂಡದೆಂದೂ ಹೇಳಿರುವರು. ಹಾಗೆ ಸಕಾರಣವಾಗಿ ಬೇರೆ ಪತ್ನಿಯನ್ನು ಹೊಂದಿದರೂ ಧರ್ಮಕ್ಕೆ ವಿರೋಧವಿಲ್ಲದಂತೆ ಜ್ಯೇಷ್ಠಪತ್ನಿಯನ್ನೂ ಪುರಸ್ಕರಿಸಬೇಕೆಂದೂ ವಿವರಿಸಿರುವರು.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಅಷ್ಟಾಶೀತಿತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ನಿದ್ರಾಂ ಜಹ್ಯಾದ್ಗೃಹೀ ರಾಮ ನಿತ್ಯಮೇವಾರುಣೋದಯೇ ।**
**ವೇಗೋತ್ಸರ್ಗಂ ತತಃ ಕೃತ್ವಾ ದಂತಧಾವನಪೂರ್ವಕಂ || ೧ ||**

**ಸ್ನಾನಂ ಸಮಾಚರೇತ್ಪ್ರಾತಃ ಸರ್ವಕಲ್ಮಷನಾಶನಂ ।**
**ವೇಗೋತ್ಸರ್ಗಂ ನ ಕುರ್ವೀತ ಫಾಲಕೃಷ್ಟೇ ತಥಾ ಶುಚೌ || ೨ ||**

**ಗೋಷ್ಠೇ ನ ಚಾಗ್ನೌ ನ ತಟೇ ದ್ರುಮಚ್ಛಾಯಾಸು ಶಾದ್ವಲೇ ।**
**ಪಥಿ ಭಸ್ಮನಿ ತೋಯೇ ಚ ನಾಂಗಣೇ ನ ಚ ಗೋಪಥೇ || ೩ ||**

---

### ಎಂಭತ್ತೆಂಟನೆಯ ಅಧ್ಯಾಯವು.

೧-೩. ಪುಷ್ಕರನು ಮುಂದಿನ ಗೃಹಸ್ಥಧರ್ಮಗಳನ್ನೂ ಹೇಳುತ್ತಾನೆ. ಎಲೈ ಭಾರ್ಗವನೇ ಗೃಹಸ್ಥಧರ್ಮವನ್ನು ಹೊಂದಿದ ಧಾರ್ಮಿಕನು ಹೆಚ್ಚಾದ ನಿದ್ರೆಯನ್ನು ಬಿಡಬೇಕು. ನಿತ್ಯವೂ ಅರುಣೋದಯಕಾಲಕ್ಕೆ ಎದ್ದು ಮಲಮೂತ್ರ ವಿಸರ್ಜನೆಗಳನ್ನು ತ್ವರೆಯಿಂದ ಮುಗಿಸಿಕೊಂಡು ದಂತಧಾವನವನ್ನು ಮಾಡಿ ಸರ್ವಪಾಪನಾಶಕವಾದ ಪ್ರಾತಃಸ್ನಾನವನ್ನು ಮಾಡಬೇಕು. ತ್ವರೆಯಿಂದ ಮಲವಿಸರ್ಜನೆ ಮಾಡುವ ಕಾಲದಲ್ಲಿ ಉತ್ತಿರುವ ಪ್ರದೇಶದಲ್ಲಿಯೂ, ಶುಚಿಯಾದ ಪ್ರದೇಶದಲ್ಲಿಯೂ ಹಸುವಿನ ಕೊಟ್ಟಿಗೆಯಲ್ಲಿಯೂ, ಅಗ್ನಿಯ ಎದುರಿಗೂ, ನದಿಯ ದಡದಲ್ಲಿಯೂ, ಇತರರ ವಿಶ್ರಾಂತಿಗೆ ಅರ್ಹವಾದ ಮರದ ನೆರಳಿನಲ್ಲಿಯೂ, ಹಸಿರುಹುಲ್ಲು ಬೆಳೆದಿರುವ ಕಡೆಯಲ್ಲಿಯೂ, ಮಾರ್ಗದಲ್ಲಿಯೂ, ಬೂದಿಯ ರಾಶಿಯಲ್ಲಿಯೂ, ನೀರಿನ ಮಧ್ಯದಲ್ಲಿಯೂ, ಅಂಗಳಗಳಲ್ಲಿಯೂ, ಹಸುಗಳ ಮಾರ್ಗದಲ್ಲಿಯೂ ಮಲವಿಸರ್ಜನೆಗೆ ಕೂಡಬಾರದು.

ನಾಗ್ನ್ಯರ್ಕಾನ್ನಗತೋಯೇಷು ಪ್ರತಿವಾತೇ ತಥೈವ ಚ ।
ನ ವೇಗಿತೋ ನ ಕಾರ್ಯಸ್ಥೋ ವೇಗೋತ್ಸರ್ಗಂ ಸಮಾಚರೇತ್ ॥ ೪ ॥

ಉದಙ್ಮುಖಸ್ತು ಸಂಧ್ಯಾಸು ದಿವಾ ಚ ಭೃಗುನಂದನ ।
ದಕ್ಷಿಣಾಭಿಮುಖೋ ರಾತ್ರೌ ನಾಕಾಶೇ ತು ಕಥಂಚನ ॥ ೫ ॥

ಕರ್ಣಸ್ಥಬ್ರಹ್ಮಸೂತ್ರಸ್ತು ವಸ್ತ್ರಾಚ್ಛಾದಿತಮಸ್ತಕಃ ।
ಅಭ್ಯುದ್ಧೃತಾಭಿರದ್ಭಿಸ್ತು ಮೃದ್ಭಿಃ ಶೌಚಂ ಸಮಾಚರೇತ್ ॥ ೬ ॥

ಕೃತಶೌಚಃ ಶುಚೌ ದೇಶೇ ಪ್ರಾಙ್ಮುಖಃ ಸುಸಮಾಹಿತಃ ।
ಉದಙ್ಮುಖಸ್ತು ಧರ್ಮಜ್ಞ ತಥಾಂತರ್ಜಾನುರೇವ ಚ ॥ ೭ ॥

---

೪–೫. ಅಗ್ನಿ, ಸೂರ್ಯರ ಎದುರಿಗೂ, ಬೆಟ್ಟದ ಝರಿಯಲ್ಲಿಯೂ, ಎದರು ಗಾಳಿ ಬೀಸುವಸ್ಥಳದಲ್ಲಿಯೂ, ಮತ್ತು ಬಹಳವೇಗದಿಂದಲೂ, ಕಾರ್ಯಾಂತರಾಸಕ್ತನಾಗಿಯೂ ಸಹ ಉತ್ಸರ್ಗವನ್ನುಮಾಡಬಾರದು, ಹಗಲಿನಲ್ಲಿ, ಮತ್ತು ಸಂಧ್ಯಾಕಾಲಗಳಲ್ಲಿಯೂ ಉತ್ತರಾಭಿಮುಖನಾಗಿ ಕುಳಿತೂ ರಾತ್ರಿಯಲ್ಲಿ ಮಾತ್ರ ದಕ್ಷಿಣಾಭಿಮುಖನಾಗಿ ಕುಳಿತೂ ಮಲವಿಸರ್ಜನೆ ಮಾಡಬೇಕು. ಆಕಾಶಾಭಿಮುಖನಾಗಿ ಕುಳಿತು ಯಾವಾಗಲೂ ವಿಸರ್ಜನೆ ಮಾಡಬಾರದು.

೬–೭. ಈ ರೀತಿ ಉತ್ಸರ್ಗವನ್ನು ಮಾಡುವಾಗ ಯಜ್ಞೋಪವೀತವನ್ನು ಕಿವಿಯಲ್ಲಿ ಸುತ್ತಿ, ವಸ್ತ್ರದಿಂದ ತಲೆಯನ್ನು ಮುಚ್ಚಿ ಹೊದ್ದುಕೊಂಡು ಮಾಡಬೇಕು. ಅನಂತರ ಮೇಲಕ್ಕೆ ಬೇರೆಯಾಗಿ ತೆಗೆದ ನೀರಿನಿಂದ ಮೃತ್ತಿಕೆಯೊಡನೆ ಶೌಚವನ್ನು ಮಾಡಿಕೊಳ್ಳಬೇಕು. (ಇಲ್ಲಿ ಅಭ್ಯುದ್ಧೃತಾಭಿಃ ಎಂದು ಹೇಳಿರುವುದರಿಂದ ಮಹಾನದಿಯ ಅಥವಾ ಮಹಾತಟಾಕದ ನೀರಿನಲ್ಲಿ ಸಾಕ್ಷಾತ್ತಾಗಿ ಶೌಚಮಾಡಬಾರದೆಂದು ಹೇಳಿದಂತಾಗುತ್ತದೆ. ಪ್ರವಾಹದಿಂದ ಬೇರೆಯಾಗಿರುವ ನದಿಯ ನೀರಿನಲ್ಲಿಯೂ ಹಾಗೆಯೇ ಬೇರೆಮಾಡಲ್ಪಟ್ಟ ತಟಾಕದ ನೀರಿನಿಂದಲೋ ಶೌಚವು ಈಗಲೂ ಪದ್ಧತಿಯಲ್ಲಿದೆ) ಹೀಗೆ ಶೌಚಮಾಡಿಕೊಂಡವನು ಶುಚಿಯಾದ ಸ್ಥಳದಲ್ಲಿ ಪೂರ್ವ ಅಥವಾ ಉತ್ತರಾಭಮುಖನಾಗಿ ಕುಳಿತು ಮನಃಶುದ್ಧಿಯಿಂದ ಮಂಡಿಯೊಳಗೆ ಕೈಯನ್ನಿಟ್ಟುಕೊಂಡು ಆಚಮನಮಾಡಬೇಕು. ಇಂತಹ ಆಚಮನಮಾಡುವಾಗಲೆಲ್ಲಾ ಹಸ್ತಪಾದಗಳನ್ನು ತೊಳೆದುಕೊಂಡು ಶುಚಿಯಾಗಿದ್ದು ಮಾಡಬೇಕು.

ಉಪಸ್ಪೃಶೇಚ್ಚ ಧರ್ಮಜ್ಞ ಶುದ್ಧಪಾದಕರಃ ಸದಾ ।
ಏಕಹಸ್ತಾರ್ಪಿತೇನಾಥ ಫೇನಬುದ್ಬುದಿನಾ ತಥಾ ॥ ೮ ॥

ಅಗ್ನಿಪಕ್ವೇನ ತೋಯೇನ ನನು ನೋಪಸ್ಪೃಶೇದ್ಬುಧಃ ।
ಅಂಗುಲ್ಯಗ್ರೇ ಭವೇದ್ದೈವಂ ಬ್ರಾಹ್ಮಮಂಗುಲಿಮೂಲಕೆ ॥ ೯ ॥

ಪೈತ್ರ್ಯಂ ತರ್ಜನಿಮೂಲೇ ಸ್ಯಾತ್ಕನಿಷ್ಠಾಯಾಶ್ಚ ಮಾನುಷಂ ।
ಬ್ರಾಹ್ಮೇಣ ತ್ರಿಃ ಪಿಬೇದಾಪಃ ಪ್ರಮೃಜ್ಯಾತ್ತು ತತೋ ಮುಖಂ ॥ ೧೦ ॥

ಖಾನ್ಯದ್ಭಿಃ ಸಂಸ್ಪೃಶೇತ್ಪಶ್ಚಾನ್ಮೂರ್ಧಾನಂ ನಾಭಿಮೇವ ಚ ।
ಉಪಸ್ಪೃಶ್ಯ ತತಃ ಪಶ್ಚಾದ್ಭಕ್ಷಯೇದ್ದಂತಧಾವನಂ ॥ ೧೧ ॥

---

೮-೯. ಒಂದೇ ಕೈಯಿನಲ್ಲಿ(ಅಂದರೆ ಬಲಗೈಯ್ಯಿನಲ್ಲಿ) ಹಾಕಿದ ನೀರಿನಿಂದಲೂ, ನೊರೆಗುಳ್ಳೆಗಳಿಂದ ಕೂಡಿದ ನೀರಿನಿಂದಲೂ, ಕಾಯಿಸಿದ ನೀರಿನಿಂದಲೂ ಆಚಮನ ಮಾಡಬಾರದು. (ಏಕಹಸ್ತಾರ್ಪಿತೇನಾಥ ಎಂಬುದರಿಂದ ಹೀಗೆ ತಾತ್ಪರ್ಯವನ್ನು ಗ್ರಹಿಸಬೇಕು. ಬಲಗೈಯ್ಯಿನಲ್ಲಿ ನೀರನ್ನಿಟ್ಟುಕೊಂಡು ಆಚಮನಮಾಡುವಾಗ ಕೇವಲ ಬಲಗೈ ಒಂದಕ್ಕೇ ಜಲದ ಸಂಬಂಧವಿರಬಾರದು ಎಡಗೈಯಿಗೂ ತಂಬಿಗೆ ಮೊದಲಾದ ನೀರುತುಂಬಿದ ಪಾತ್ರೆಯೊಡನೆಯಾಗಲಿ, ಸಾಕ್ಷಾತ್ತಾಗಿ ನದೀ ತಟಾಕಗಳ ನೀರಿನ ಸ್ಪರ್ಶವಾಗಲಿ ಇರಬೇಕು, ಹಾಗಿರದೆ ಜಲಸಂಬಂಧವುಳ್ಳ ಬಲಗೈಯೊಂದರಿಂದಲೇ ಆಚಮನಮಾಡಬಾರದು.) ಹೀಗೆ ಆಚಮನಮಾಡುವಾಗ ಬೆರಳುಗಳ ಅಗ್ರಭಾಗದಲ್ಲಿ ಸಂಬಂಧಿಸಿದ ನೀರಿನಿಂದ ಮಾಡುವ ಆಚಮನವು ದೈವ ತೀರ್ಥಕ್ಕೆ ಸೇರಿದುದೆಂದೂ, ಆ ನೀರಿಗೆ ಬೆರಳುಗಳ ಬುಡದಲ್ಲಿ ಸಂಬಂಧವಿದ್ದಲ್ಲಿ ಬ್ರಾಹ್ಮತೀರ್ಥಕ್ಕೆ ಸೇರಿದುದೆಂದೂ, ತರ್ಜನಿಯ ಮೂಲಭಾಗದಲ್ಲಿ ಸಂಬಂಧಿಸಿದ ನೀರಿಗೆ ಪಿತೃತೀರ್ಥವೆಂದೂ, ಕಿರುಬೆರಳಿನ ಸಂಬಂಧವಿದ್ದಲ್ಲಿ ಮಾನುಷ ತೀರ್ಥ ವೆಂದೂ ವ್ಯವಹಾರ.

೧೦-೧೧. ಮೇಲೆ ಹೇಳಿರುವ ಬ್ರಾಹ್ಮ ತೀರ್ಥದಲ್ಲಿ ಮೂರಾವರ್ತಿ ಜಲವನ್ನು ಪಾನಮಾಡಬೇಕು. ಅನಂತರ ಬಾಯನ್ನು ಮಾರ್ಜನಮಾಡಿ ಕಣ್ಣು ಮೊದಲಾದ ವಿಹಿತವಾದ ಇಂದ್ರಿಯಗಳನ್ನೂ ತಲೆ ಮತ್ತು ನಾಭಿಪ್ರದೇಶವನ್ನೂ ಸ್ಪರ್ಶಮಾಡಬೇಕು ಹೀಗೆ ಆಚಮನಮಾಡಿದ ನಂತರ ದಂತಧಾವನ ಮಾಡಿಕೊಳ್ಳ ಬೇಕು. ದಂತಧಾವನಕ್ಕಾಗಿ ಮುಂದೆ ಹೇಳುವ ಕೆಲವು ಕಾಷ್ಠಗಳನ್ನು ಅಗಿದು ಅದನ್ನು ಹೊರಗೆ ಹಾಕಬೇಕು.

ಭುಕ್ತ್ವಾ ಚ ನಿಕ್ಷಿಪೇದ್ಧಾಮ ನಿತ್ಯಮೇವ ಸಮಾಹಿತಃ ।
ಉದಙ್ಮುಖಃ ಪ್ರಾಙ್ಮುಖೋ ವಾ ನ ಯಾಮ್ಯಾಪರಾಙ್ಮುಖಃ ॥ ೧೨ ॥

ಮಾಂಸನ್ನ ಭಕ್ಷಯೇಚ್ಚೈವ ನೋರ್ಧ್ವಶುಷ್ಕಂ ನ ಪಿಚ್ಛಿಲಂ ।
ಸುಶಿರಂ ಮಧುರಂ ಚಾಮ್ಲಂ ವಿಶ್ವಚಂ ಪತ್ರಸಂಯುತಂ ॥ ೧೩ ॥

ಸಮಪೂರ್ವಮತಿಸ್ಥೂಲಂ ಕುಬ್ಜ ಕೀಟವಿನಾಶಿತಂ ।
ಶಾಲ್ಮಲ್ಯಶ್ವತ್ಥಭವ್ಯಾನಾಂ ಧವಕಿಂಶುಕಯೋರಪಿ ॥ ೧೪ ॥

ಕೋವಿದಾರಶಮೀಪೀಲುಶ್ಲೇಷ್ಮಾತಕವಿಭೀತಕಾನ್ ।
ವರ್ಜಯೇದ್ದಂತಕಾಷ್ಠೇಷು ಗುಗ್ಗುಲಂ ಕ್ರಮುಕಂ ತಥಾ ॥ ೧೫ ॥

ವಟಾಸನಾರ್ಕಖದಿರಕರವೀರಾಂಶ್ಚ ಭಕ್ಷಯೇತ್ ।
ಜಾತ್ಯಶ್ವಬಿಲ್ವಬದರಂ ಮೂಲಂ ಚ ಕಕುಭಸ್ಯ ಚ ॥ ೧೬ ॥

೧೨–೧೫. ಉತ್ತರ ಮತ್ತು ಪೂರ್ವಾಭಿಮುಖನಾಗಿ ದಂತಧಾವನಮಾಡಿಕೊಳ್ಳಬೇಕು. ದಕ್ಷಿಣಪಶ್ಚಿಮಾಭಿಮುಖನಾಗಿ ಮಾಡಿಕೊಳ್ಳಬಾರದು. ಮಾಂಸ ಭಕ್ಷಣವನ್ನೂ ಮಾಡಬಾರದು (ಇದು ಇಲ್ಲಿ ಪ್ರಸಕ್ತವಲ್ಲಾ ಆದರೂ ದೇಶವಿಶೇಷದ ಮರಾಚಾರವನ್ನು ಈ ರೀತಿ ನಿಷೇಧಿಸಿರುವರು) ದಂತಧಾವನ ಮಾಡಿಕೊಳ್ಳುವಾಗ ಅರ್ಧಮಟ್ಟಿಗೆ ಒಣಗಿಯೂ, ಜಿಡ್ಡಿನಿಂದ ಕೂಡಿಯೂ ಇರುವ ಕಾಷ್ಠಗಳನ್ನೂ ಮತ್ತು ಚಿತ್ತ, ಕಾಡು ಅಗಸೆ, ಹುಣಸೆ, ಇವುಗಳ ಕಾಷ್ಠಗಳನ್ನೂ, ತೊಕ್ಕು ಎಡೆದು ಹೋಗಿರುವ ಕಾಷ್ಠವನ್ನೂ, ಎಲೆಗಳೊಡನೆ ಇರುವ ಕಾಷ್ಠವನ್ನೂ, ಮತ್ತು ಮೊದಲಿನಿಂದ ಕೊನೆಯುವರಿಗೂ ಸಮನಾಗಿರುವ ಮತ್ತು ಬಹಳ ದಪ್ಪವಾಗಿರುವ ಮತ್ತು ಕುಳ್ಳಾಗಿಯೂ, ಕ್ರಿಮಿಗಳಿಂದ ನಾಶವಾಗಿಯೂ ಇರುವ ಕಾಷ್ಠಗಳನ್ನೂ ತ್ಯಜಿಸಬೇಕು. ಮತ್ತು ಬೂರಗ, ಅರಳಿ ಮೊದಲಾದ ಶುಭವೃಕ್ಷಗಳ ಮತ್ತು ಧವ, ಮುತ್ತುಗ ಕಂಚುವಾಳ, ಬನ್ನಿ, ಬೆಟ್ಟಗೋಣಿ, ಚಳ್ಳೆ, ತಾರೆ, ಗುಗ್ಗುಳಗಿಡ, ಅಡಕೆಗಿಡ, ಇವುಗಳ ಕಾಷ್ಠಗಳನ್ನೂ ತ್ಯಜಿಸಬೇಕು.

೧೬–೧೭. ಆಲ, ಹೊನ್ನೆ, ಎಕ್ಕ, ಕಗ್ಗಲಿ, ಕಣಿಗಲೆ, ಇವುಗಳ ಕಾಷ್ಠಗಳನ್ನು ದಂತಧಾವನದಲ್ಲಿ ಉಪಯೋಗಿಸಬೇಕು. ಜಾಜಿ, ಕರಿಯಮತ್ತಿ, ಬಿಲ್ವ, ಎಲಚಿ, ಮಡ್ಡಿಯ ಮರದಬೇರು. ದುರ್ಗಂಧವುಳ್ಳ ಕಗ್ಗಲಿ, ಪ್ರೇಂಕಣವೆಂಬ ಗಿಡ,

ಅರಿಮೇದಂ ಪ್ರಿಯಂಗುಂ ಚ ಕಂಟಕಿನ್ಯಾಶ್ಚ ಭಾರ್ಗವ ।
ಪ್ರಕ್ಷಾಲ್ಯ ಭಕ್ಷಯೇತ್ಪೂರ್ವಂ ಪ್ರಕ್ಷಾಲ್ಯೈವ ಚ ಸಂತ್ಯಜೇತ್ ॥ ೧೭ ॥

ಪತಿತೇಽಭಿಮುಖಂ ಶಸ್ತಂ ಶಾಂತಾಶಾಭಿಮುಖೇ ದಿನಂ ।
ಸೌಭಾಗ್ಯಕಾಮೋ ವಾಮೇನ ಭಕ್ಷಯೇತ್ಪ್ರಾಕ್ ಸುಸಂಯತಃ ॥ ೧೮ ॥

ಮುಖಭಾಗೇನ ಧರ್ಮಜ್ಞ ವಾಗ್ಯತಶ್ಚೈವ ಭಕ್ಷಯೇತ್ ।
ಮಲಶೌಚಂ ತತಃ ಕೃತ್ವಾ ಸಮ್ಯಕ್ ಸ್ನಾನಮಥಾಚರೇತ್ ॥ ೧೯ ॥

ನ ಸ್ನಾನಮಾಚರೇದ್ಭುಕ್ತ್ವಾ ನಾವಿಜ್ಞಾತೇ ಜಲಾಶಯೇ ।
ನಾತುರೋ ನಾರುಣಕರೈರನಾಕ್ರಾಂತೇ [1]ನಭಸ್ಥಲೇ ॥ ೨೦ ॥

ಅಪ್ರಶಸ್ತಂ ನಿಶಿ ಸ್ನಾನಂ ರಾಹೋರನ್ಯತ್ರ ದರ್ಶನಾತ್ ।
ಪರಾಂಭಸಿ ತಥೈವಾಲ್ಪೇ ನಾಶಿರಸ್ಕಃ ಕಥಂಚನ ॥ ೨೧ ॥

---

ಇವುಗಳ ಕಾಷ್ಠಗಳನ್ನು ಉಪಯೋಗಿಸುವ ಸಂದರ್ಭದಲ್ಲಿ ಮೊದಲು ತೊಳೆದು ಉಪಯೋಗಿಸಬೇಕು. ಅನಂತರ ತೊಳೆದು ತ್ಯಜಿಸಬೇಕು.

೧೮-೧೯. ಅನಂತರ ಬಾಯಿನಕೊಳೆ ಮೊದಲಾದುವನ್ನು ತೊಳೆದುಕೊಂಡು ಚನ್ನಾಗಿ ನಂತರ ಸ್ನಾನಮಾಡಬೇಕು.

೨೦-೨೧. ಭೋಜನಮಾಡಿದನಂತರ ಸ್ನಾನಮಾಡಬಾರದು. ಮತ್ತು ಇಂತಹುದೆಂದು ತಿಳಿಯದಿರುವ ಜಲಾಶಯದಲ್ಲಿಯೂ ಸ್ನಾನಮಾಡಬಾರದು. ವ್ಯಾಧಿಗ್ರಸ್ತನಾಗಿರುವವನೂ, ಸ್ನಾನಮಾಡಬಾರದು. ಸೂರ್ಯನ ಕಿರಣಸ್ಪರ್ಶವಿಲ್ಲದಿರುವ ಜಲದಲ್ಲಿಯೂ, ಭೂಮಿಯ ಸಂಪರ್ಕವಿಲ್ಲದೆ ಆಕಾಶದಲ್ಲೇ ಇರುವ ನೀರಿನಲ್ಲಿಯೂ ಸ್ನಾನಮಾಡಬಾರದು. ಗ್ರಹಣಕಾಲದಲ್ಲಿ ಹೊರತು ಇತರ ರಾತ್ರಿಗಳಲ್ಲಿ ಸ್ನಾನ ಮಾಡುವುದು ಪ್ರಶಸ್ತವಲ್ಲ. ಮತ್ತೊಬ್ಬರ ಅಧೀನಕ್ಕೆ ಸೇರಿರುವ ಜಲಾಶಯದಲ್ಲಿಯೂ ಅತ್ಯಲ್ಪವಾದ ನೀರಿನಲ್ಲಿಯೂ ಸ್ನಾನಮಾಡಬಾರದು, ಮತ್ತು ತಲೆಯನ್ನು ಬಿಟ್ಟು ಕೇವಲ ದೇಹಸ್ನಾನವನ್ನೂ ಮಾಡಕೂಡದು.

---

1 ಇಲ್ಲಿ ಅರುಣೋದಯದಿಂದ ಆಕಾಶವು ಕಂಗೊಳಿಸುವುದಕ್ಕೆ ಮುಂಚೆ ಸ್ನಾನಮಾಡಕೂಡದು ಎಂದೂ ಅರ್ಥ ಹೇಳಬಹುದು.

ನಿತ್ಯಂ ನೈಮಿತ್ತಿಕಂ ಕಾಮ್ಯಂ ಕ್ರಿಯಾಂಗಂ ಮಲಕರ್ಷಣಂ ।
ಕ್ರಿಯಾಸ್ನಾನಂ ತಥಾ ಷಷ್ಠಂ ಷೋಢಾ ಸ್ನಾನಂ ಪ್ರಕೀರ್ತಿತಂ ॥ ೨೨ ॥

ಖಾನಿ ರಾತ್ರೌ ಶಯಾನಸ್ಯ ಸ್ರವಂತಿ ಪುರುಷಸ್ಯ ಚ ।
ತಸ್ಮಾತ್ಸರ್ವಪ್ರಯತ್ನೇನ ಪ್ರಾತಃ ಸ್ನಾನಂ ಸಮಾಚರೇತ್ ॥ ೨೩ ॥

ಪ್ರಾತಃ ಸ್ನಾಯೀ ಸದಾ ರಾಮ ನರಕಂ ನ ಚ ಪಶ್ಯತಿ ।
ಯಃ ಕರೋತಿ ಸದಾ ರಾಮ ಸ್ನಾನಂ ತು ಸವನದ್ವಯಂ ॥ ೨೪ ॥

ಸತು ಸ್ವರ್ಗಮನುಪ್ರಾಪ್ಯ ತ್ರಿದಶೈರಪಿ ಪೂಜ್ಯತೇ ।
ತಥಾ ತ್ರಿಷವಣಸ್ನಾಯೀ ಸ್ವರ್ಗಲೋಕೇ ಮಹೀಯತೇ ॥ ೨೫ ॥

---

೨೨-೨೩. ನಿತ್ಯ, ನೈಮಿತ್ತಿಕ, ಕಾಮ್ಯ, ಕ್ರಿಯಾಂಗ, ಮಲನಾಶಕ, ಕ್ರಿಯಾಸ್ನಾನ ಎಂದು ಸ್ನಾನವು ಆರುವಿಧವಾಗಿ ಹೇಳಲ್ಪಟ್ಟಿದೆ. ರಾತ್ರಿಯಲ್ಲಿ ಮಲಗಿ ನಿದ್ರೆಹೊಂದುವ ಮನುಷ್ಯನಿಗೆ ಆಯಾಯ ಇಂದ್ರಿಯದ್ವಾರಗಳು ಸ್ರವಿಸುವುದು ಸ್ವಭಾವ. ಈ ಕಾರಣದಿಂದಲೇ ಸರ್ವಪ್ರಯತ್ನದಿಂದಲೂ ಪ್ರಾತಃಸ್ನಾನವನ್ನು ಮಾಡಿಯೇ ಮಾಡಬೇಕು. ಎಲೈ ಭಾರ್ಗವನೇ ನಿತ್ಯವೂ ತಪ್ಪದೆ ಪ್ರಾತಃಸ್ನಾನವನ್ನು ಮಾಡುವವನು ನರಕವನ್ನು ನೋಡುವುದೇ ಇಲ್ಲ.

೨೪-೨೫ ಎಲೈ ಭಾರ್ಗವನೇ ಯಾವನು ನಿತ್ಯದಲ್ಲಿಯೂ ಎರಡುವೇಳೆ (ಪ್ರಾತಃ ಮಧ್ಯಾಹ್ನ) ಸ್ನಾನಮಾಡುತ್ತಾನೆಯೋ ಆವನು ಸ್ವರ್ಗವನ್ನು ಹೊಂದಿ ದೇವತೆಗಳಿಂದಲೂ ಪೂಜಿಸಲ್ಪಡುತ್ತಾನೆ. ಹಾಗೆಯೇ ಯಾವನು ಮೂರುವೇಳೆಗಳಲ್ಲೂ (ಪ್ರಾತಃ ಮಧ್ಯಾಹ್ನ, ಸಾಯಂ) ನಿಯತವಾಗಿ ಸ್ನಾನಮಾಡುತ್ತಾನೆಯೋ ಅವನು ಸ್ವರ್ಗಲೋಕದಲ್ಲಿಯೂ ಪೂಜಾರ್ಹನಾಗುತ್ತಾನೆ. ಒಂದುವೇಳೆ ಅಂತಹವನು ಕರ್ಮವಶದಿಂದ ಮನುಷ್ಯನಾಗಿ ಹುಟ್ಟಿದರೂ ಒಳ್ಳೆಯ ರೂಪ ಯೌವನಗಳಿಂದ ಉತ್ಕೃಷ್ಟನಾಗುತ್ತಾನೆ.

ಮಾನುಷ್ಯಂ ಪ್ರಾಪ್ಯ ಭವತಿ ರೂಪಯೌವನಸಂಯುತಃ ।
ಧನಧಾನ್ಯವತಿ ಸ್ಫೀತೇ ಕುಲೇ ಚೈವ ಪ್ರಸೂಯತೇ ॥ ೨೬ ॥

ರೂಪೌದಾರ್ಯಗುಣೋಪೇತಾಃ ಸ್ತ್ರೀಯಶ್ಚಾಪ್ಯೋತ್ಯನಿಂದಿತಾಃ ।
ಧರ್ಮೇ ಮತಿಶ್ಚಾಸ್ಯ ಭವೇದ್ಯಶಸಾ ಚ ವಿರಾಜತೇ ॥ ೨೭ ॥

ತಸ್ಮಾತ್ಸದಾ ಧರ್ಮಪರೇಣ ರಾಮ
ತೀರ್ಥೇಷು ಮುಖ್ಯೇಷು ಸರಸ್ಸು ಚೈವ ।
ಸ್ನಾನಂ ಚ ಕಾರ್ಯಂ ಸುಮಲಾಪಹರ್ತೃ
ನಾಕಪ್ರದಂ ಕಾಮಕರಂ ಸುಖಾಯ ॥ ೨೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಸ್ನಾನವರ್ಣನೋ ನಾಮಾಷ್ಟಾಶೀತಿತಮೋಽಧ್ಯಾಯಃ

---

೨೬–೨೭. ಧನಧಾನ್ಯಾದಿಗಳಿಂದ ಸಮೃದ್ಧವಾದ ಕುಲದಲ್ಲಿಯೂ ಅವನು ಹುಟ್ಟುತ್ತಾನೆ. ಸೌಂದರ್ಯ ಗುಣಾದಿಗಳಿಂದ ಕೂಡಿದ ಒಳ್ಳೆಯ ಪತ್ನಿಯನ್ನೂ ಹೊಂದುತ್ತಾನೆ. ಅವನಿಗೆ ಧರ್ಮದಲ್ಲಿ ಬುದ್ಧಿಯೂ ಉಂಟಾಗುತ್ತದೆ. ಯಶಸಿನಿಂದಲೂ ಅವನು ಹೊಳೆಯುತ್ತಾನೆ. ಎಲೈ ಭಾರ್ಗವನೇ ಈ ಕಾರಣಗಳಿಂದ ಧರ್ಮದಲ್ಲಿ ಆಸಕ್ತಿಯುಳ್ಳ ಮನುಷ್ಯನು ಪ್ರಮುಖವಾದ ತೀರ್ಥಗಳಲ್ಲಿಯೂ, ಸರೋವರಗಳಲ್ಲಿಯೂ, ಯಾವಾಗಲೂ ಸ್ನಾನಮಾಡಬೇಕು. ಅಂತಹ ಸ್ನಾನವು ಇವನಿಗೆ ದೃಷ್ಟಾದೃಷ್ಟಮಲನಾಶಕವಾಗಿಯೂ ಸ್ವರ್ಗಸುಖಪ್ರದವಾಗಿಯೂ ಇಹಲೋಕದ ಇಷ್ಟಸಿದ್ಧಿಗೂ ಸುಖಕ್ಕೂ ಕಾರಣವಾಗಿಯೂ ಆಗುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದ ಸ್ನಾನವರ್ಣನವೆಂಬ ಎಂಭತ್ತೆಂಟನೆಯ ಅಧ್ಯಾಯವು ಮುಗಿದಿದೆ.



## ಎಂಭತ್ತೆಂಟನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಪ್ರಾತಃಕಾಲದಲ್ಲಿ ಎದ್ದವನು ನಡೆಸಬೇಕಾದ ಶೌಚಾದಿ ವಿಧಿಗಳನ್ನೂ ಆಚಮನ ಪೂರ್ವಕವಾದ ದಂತಧಾವನಕ್ರಮವನ್ನೂ ಹೇಳಿ ಸ್ನಾನ ವಿಧಿಯನ್ನೂ ನಿರೂಪಿಸಿ ಪ್ರಾತಃಸ್ನಾನವು ಪ್ರಶಸ್ತವಾದುದರಿಂದ ನಿತ್ಯವೂ ತಪ್ಪದೆ ನೆರವೇರಿಸಬೇಕೆಂಬ ನಿಯಮದಿಂದ ಉಪಸಂಹರಿಸಿರುವರು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕೋನನವತಿತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಮಾಲ್ಯಂ ಲಕ್ಷ್ಮೀಕರಂ ನಾಮ ನಿತ್ಯಂ ಶಿರಸಿ ಧಾರಯೇತ್ |**
**ನಾನ್ಯತ್ರ ಧಾರಯೇತ್ಪ್ರಾಜ್ಞಃ ಬಹಿರ್ಗಂಧಂ ನ ಧಾರಯೇತ್** || ೧ ||

**ಯಚ್ಚ ಕಂಟಕಿಸಂಭೂತಂ ಕೃಷ್ಣಂ ರಕ್ತಂ ಚ ಭಾರ್ಗವ |**
**ಕಂಟಕಿಭ್ಯೋಽಪಿ ಯಜ್ಜಾತಂ ಶುಕ್ಲಂ ಧಾರ್ಯಂ ತು ತದ್ಭವೇತ್** || ೨ ||

**ಕೃಷ್ಣರಕ್ತೇ ತಥಾ ಧಾರ್ಯೇ ಯದಿ ಸ್ಯಾತಾಂ ಜಲೋದ್ಭವೇ |**
**ಚಂದನೇನಾನುಲಿಪ್ತೇನ ಕುಂಕುಮಾಗುರುಭಿಸ್ತಥಾ** || ೩ ||

---

### ಎಂಭತ್ತೊಂಭತ್ತನೆಯ ಅಧ್ಯಾಯವು.

೧–೨. ಎಲೈ ಭಾರ್ಗವನೇ ಹೂವಿನ ಮಾಲಿಕೆಯು ಮಂಗಲಕರವಾದುದು ಅದನ್ನು ತಲೆಯಲ್ಲಿಯೇ ಧರಿಸಿರಬೇಕು. ಶಾಸ್ತ್ರಜ್ಞನಾದವನು ಆ ಹೂವನ್ನು ಇತರ ಅವಯವಗಳಲ್ಲಿ ಧರಿಸಬಾರದು. ಧರಿಸುವಾಗಲೂ ಸಹ ಹೊರಗೆ ಅದರ ವಾಸನೆಯು ಹೋಗುವಂತೆ ಧರಿಸಬಾರದು, ಮುಳ್ಳಿನ ಗಿಡದಲ್ಲಿ ಉಂಟಾವ ಹೂವನ್ನೂ ಕಪ್ಪಾದ ಮತ್ತು ಕೆಂಪಾದ ಹೂವನ್ನೂ ಧರಿಸಬಾರದು. ಬಿಳುಪಿಂದ ಹೂವುಮಾತ್ರ ಮುಳ್ಳಿನಗಿಡದಲ್ಲಿ ಉಂಟಾಗಿದ್ದರೂ ಅದನ್ನು ಧರಿಸಬಹುದು.

೩–೪. ಕಪ್ಪು ಮತ್ತು ಕೆಂಪು ಬಣ್ಣದಿಂದ ಮಿಶ್ರವಾಗಿರುವ ಹೂವುಗಳು ನೀರಿನಲ್ಲಿಯೇ ಹುಟ್ಟಿ ಬೆಳೆದಿದ್ದಲ್ಲಿ ಅವನ್ನೂ ಧರಿಸಬಹುದು. ಕುಂಕುಮದಹೂವು (ಕೇಸರೀ) ಅಗರು, ಶ್ರೀಗಂಧ, ಪಚ್ಚಕರ್ಪೂರ ಇತರ ಶುಭಕರವಾದ ಸುಗಂಧಿ

**ಕರ್ಪೂರೇಣ ತಥಾಂಗಾನಿ ಶುಭೇನ ಚ ಪ್ರಿಯಂಗುನಾ ।**
**ವಸ್ತ್ರಂ ನಾನ್ಯಧೃತಂ ಧಾರ್ಯಂ ನ ರಕ್ತಂ ಮಲಿನಂ ತಥಾ　　॥ ೪ ॥**

**ಜೀರ್ಣಂ ನಾಪಶದಂ ಚೈವ ಶ್ವೇತಂ ಧಾರ್ಯಂ ಪ್ರಯತ್ನತಃ ।**
**ಉಪಾನಹಂ ನಾನ್ಯಧೃತಂ ಬ್ರಹ್ಮಸೂತ್ರಂ ಚ ಧಾರಯೇತ್　　॥ ೫ ॥**

**ಹೀನಾಂಗೈರಧಿಕಾಂಗೈಶ್ಚ ಬಾಲೈರ್ವೃದ್ಧೈರ್ಬುಭುಕ್ಷಿತೈಃ ।**
**ವ್ಯಾಲೈರದಾಂತೈರ್ಬಾಹ್ಯೈಶ್ಚ ನ ವ್ರಜೇಚ್ಛ ಕದಾಚನ　　॥ ೬ ॥**

**ಸ್ನಾನಭೋಜನಪಾನಾದಿ ತೇಷಾಮಾದ್ಯೋ ನ ಚಾಚರೇತ್ ।**
**ನೈಕಃ ಪ್ರಪದ್ಯೇದಧ್ವಾನಂ ನಾಧಾರ್ಮಿಕಸಹಾಯವಾನ್　　॥ ೭ ॥**

**ನ ರಾತ್ರೌ ನ ಚ ಮಧ್ಯಾಹ್ನೇ ನ ಚ ದೇವೇ ಪ್ರವರ್ಷತಿ ।**
**ನ ಚಾತಿ ವಿಷಮೇ ವಾತೇ ಸಂಧ್ಯಯೋಶ್ಚ ತಥಾ ದ್ವಿಜ　　॥ ೮ ॥**

---

ಪ್ರಸ್ಯಗಳಿಂದಲೂ ಅಂಗಗಳಿಗೆ ಲೇಪನ ಮಾಡಿಕೊಳ್ಳಬಹುದು ಇತರರು ಉಟ್ಟವಸ್ತ್ರವನ್ನು ಧರಿಸಬಾರದು. ಹಾಗೆಯೇ ಕೆಂಪಾಗಿಯೂ ಕೊಳೆಯಿಂದ ಕಪ್ಪಾಗಿಯೂ ಇರುವ ವಸ್ತ್ರಗಳನ್ನೂ ಧರಿಸಬಾರದು.

೫-೬. ಹಾಗೆಯೇ ಬಹಳ ಜೀರ್ಣವಾಗಿಯೂ ಅಸಹ್ಯವಾಗಿಯೂ ಇರುವ ವಸ್ತ್ರವನ್ನೂ ತ್ಯಜಿಸಬೇಕು. ಬಿಳುಪಾದ ವಸ್ತ್ರವನ್ನೇ ಪ್ರಯತ್ನದಿಂದ ಧರಿಸಬೇಕು. ಮತ್ತೊಬ್ಬನು ಉಪಯೋಗಿಸಿದ ಪಾದರಕ್ಷೆಯನ್ನೂ, ಮತ್ತು ಇತರರಿಂದ ಧರಿಸಲ್ಪಟ್ಟ ಯಜ್ಞೋಪವೀತವನ್ನೂ ಉಪಯೋಗಿಸಬಾರದು. ಕೃಶವಾದ ಅಂಗಗಳುಳ್ಳ ಅಥವಾ ಅಂಗವೈಕಲ್ಯವುಳ್ಳ ಮತ್ತು ಅಧಿಕವಾಗಿ ಸ್ಥೂಲಾಂಗಗಳುಳ್ಳವರೊಡನೆಯೂ, ಬಾಲಕರೊಡನೆಯೂ, ವೃದ್ಧರೊಡನೆಯೂ, ಹಸುವಿಂದ ಕೂಡಿರುವವರೊಡನೆಯೂ, ದುಷ್ಟರೊಡನೆಯೂ. ಜಿತೇಂದ್ರಿಯರಲ್ಲದವರೊಡನೆಯೂ, ಧರ್ಮಬಾಹ್ಯರೊಡನೆಯೂ ಸಹ ಯಾವಾಗಲೂ ಸಂಚರಿಸಬಾರದು.

೭-೮. ಅಂತಹ ಹೀನಾಂಗರೇ ಮೊದಲಾದವರೊಡನೆ ಸ್ನಾನ ಭೋಜನ ಪಾನಾದಿಗಳನ್ನು ಮೊದಲು ಮಾಡಬಾರದು, ಒಬ್ಬನೇ ಮಾರ್ಗಸಂಚಾರಿಯಾಗಿ ಹೊರಡಬಾರದು. ಅಧರ್ಮಿಷ್ಠನ ಸಹಾಯದಿಂದಲೂ ಹೊರಡಬಾರದು, ಮತ್ತು

ನಾಸನ್ನಿಹಿತಪಾನೇ ವಾ ನ ವೇಗಾನ್ನ ಚ ಸಂತತಂ ।
ನಾತಪತ್ರಪದತ್ರಾಣಃ ನೋಷ್ಣೀಷಶ್ಚ ತಥಾ ಚರೇತ್ ॥ ೯ ॥

ಚತುಷ್ಪಥಂ ನ ಸಃ ಕುರ್ಯಾದ್ವಿಖ್ಯಾತಾಂಶ್ಚ ವನಸ್ಪತೀನ್ ।
ಮಂಗಲ್ಯಾನಿ ಚ ಸರ್ವಾಣಿ ಪಥಿ ಕುರ್ಯಾತ್ಪ್ರದಕ್ಷಿಣಂ ॥ ೧೦ ॥

ಅಮಂಗಲ್ಯಾನಿ ವಾಮಾನಿ ಕರ್ತವ್ಯಾನಿ ವಿಜಾನತಾ ।
ವರಸ್ಯ ಭೂಮಿಪಾಲಸ್ಯ ಸ್ನಾತಕಸ್ಯಾಥ ಚಕ್ರಿಣಃ ॥ ೧೧ ॥

ಭಾರಾಕ್ರಾಂತಸ್ಯ ಗುರ್ವಿಣ್ಯಾಃ ಪನ್ಥಾ ದೇಯಃ ಪ್ರಯತ್ನತಃ ।
ವ್ಯಾಲಯುದ್ಧಂ ನ ಚೇಕ್ಷೇತ ವಿನಾ ವಿಷಮಮಾಸ್ಥಿತಃ ॥ ೧೨ ॥

---

ರಾತ್ರಿಯ ಕಾಲದಲ್ಲಿಯೂ ಮಧ್ಯಾಹ್ನ ಸಮಯದಲ್ಲಿಯೂ, ಮಳೆ ಬರುತ್ತಿರುವಾಗಲೂ ಪ್ರಯಾಣ ಮಾಡಬಾರದು. ಬಹಳ ಬಿರುಸಾದ ಗಾಳಿಬೀಸುವಾಗಲೂ ಸಂಧ್ಯಾ ಕಾಲಗಳಲ್ಲಿಯೂ ಸಹ ಪ್ರಯಾಣ ಮಾಡಬಾರದು.

೯-೧೦. ಸಮೀಪದಲ್ಲಿ ನೀರಿಲ್ಲದಿರುವ ಮಾರ್ಗದಲ್ಲಿಯೂ ಸಂಚರಿಸಬಾರದು. ವೇಗದಿಂದಲೂ, ವಿಶ್ರಾಂತಿ ಇಲ್ಲದೆಯೂ ನಡೆಯಬಾರದು. ನಡೆಯುವಾಗ ಛತ್ರಿ ಪಾದರಕ್ಷೆಗಳಿಲ್ಲದೆಯೂ, ಇರಬಾರದು, ಸಂಚರಿಸುವಾಗಲೆಲ್ಲ ಛತ್ರಿ ಪಾದರಕ್ಷೆ ತಲೆಗೆ ರುಮಾಲು ಇವುಗಳೊಡಗೂಡಿಯೆ ಇರಬೇಕು. ವ್ಯರ್ಥವಾಗಿ ಚತುಷ್ಪಥಗಳನ್ನು (ನಾಲ್ಕು ಬೀದಿಗಳೂ ಸೇರುವಸ್ಥಲ) ಅತಿಕ್ರಮಿಸಬಾರದು ಪ್ರಸಿದ್ಧವಾದಮರಗಳನ್ನೂ ಮಂಗಲಾರ್ಹವಾದ ವಸ್ತುಗಳನ್ನೂ ದಾರಿಯಲ್ಲಿಯೇ ನೋಡಿದ್ದಾದರೆ ಅವುಗಳನ್ನು ಪ್ರದಕ್ಷಿಣೆಮಾಡಿ ಮುಂದೆ ಹೋಗಬೇಕು.

೧೧-೧೨. ಅಮಂಗಲಪ್ರದವಾದ ವಸ್ತುಗಳನ್ನು ದಾರಿಯಲ್ಲಿ ನೋಡಿದ್ದೇ ಆದರೆ ಅವನ್ನು ತನ್ನ ಎಡಭಾಗಕ್ಕೆ ಮಾಡಿಕೊಂಡು ಮುಂದೆ ನಡೆಯಬೇಕು. ಮಹಾ ಪುರುಷ, ದೊರೆ, ಸ್ನಾತಕವ್ರತವನ್ನು ಹೊಂದಿರುವವನು, ಗಾಡಿ, ಭಾರವನ್ನು ಹೊತ್ತಿರುವವನು, ಗರ್ಭಿಣಿ ಇವರು ಎದುರಿಗೆ ಬಂದಲ್ಲಿ ಪ್ರಯತ್ನಪೂರ್ವಕವಾಗಿಯೂ ಇವರಿಗೆ ದಾರಿಯನ್ನು ಬಿಟ್ಟುಕೊಡಬೇಕು. ಸರ್ಪಗಳ ದ್ವಂದಯುದ್ಧವನ್ನು ನೋಡಬಾರದು ತಾನು ತೊಂದರೆಗೆ ಸಿಕ್ಕಿ ನಿರ್ವಾಹವಿಲ್ಲದಿರುವಾಗ ಇದು ದೋಷವಲ್ಲ.

ನಪಶ್ಯೇಚ್ಚಾರ್ಕಮುದ್ಯಂತಂ ನಾಸ್ತಂ ಯಾಂತಂ ನ ಚಾಂಭಸಿ ।
ತಿರಸ್ಕೃತಂ ತು ವಸ್ತ್ರೇಣ ನ ಕ್ರುದ್ಧಸ್ಯ ಗುರೋರ್ಮುಖಂ ॥ ೧೩ ॥

ನ ಸ್ತ್ರೀಂ ಸವಂತೀಂ ನೋದಕ್ಯಾಂ ನ ನಗ್ನಾಂ ನಾನ್ಯಸಂಗತಾಂ ।
ನ ಪತ್ನೀಂ ಭೋಜನಸ್ವಪ್ನಸ್ನಾನಾಸಕ್ತಾಂ ವಿಭೂಷಣಾಂ ॥ ೧೪ ॥

ನಾಂಜಯಂತೀಂ ಸ್ವಕೇ ನೇತ್ರೇ ನಾಶ್ಲೀಲಂ ಕಿಂಚಿದೇವ ತು ।
ನಾನಾಸ್ಥಾನಂ ನ ಪಶ್ಯೇಚ್ಚ ನ ಪಶ್ಯೇಚ್ಚ ಮಹಾನಸಂ ॥ ೧೫ ॥

ಜಲಾಶಯೆತಟಸ್ಥಾಂಶ್ಚ ನಪಶ್ಯೇತ್ತು ಕದಾಚನ ।
ಹೀನಾಂಗೈರಧಿಕಾಂಗೈಶ್ಚ ಜಾಲ್ಯೈರ್ವೃದ್ಧೈಃ ಬುಭುಕ್ಷಿತೈಃ ॥ ೧೬ ॥

ವ್ಯಾಲೈರದಾಂತೈರ್ಬಾಹ್ಯೈಶ್ಚ ನ ವ್ರಜೇತ್ತು ಕದಾಚನ ।
ಸ್ನಾನಭೋಜನಪಾನಾದಿ ತೇಷಾಮಾದೌ ನ ಚಾಚರೇತ್ ॥ ೧೭ ॥

---

೧೩-೧೪. ಉದಯಿಸುತ್ತಿರುವ ಮತ್ತು ಅಸ್ತಹೊಂದುತ್ತಿರುವ ಸೂರ್ಯನನ್ನು ನೋಡಬಾರದು. ನೀರಿನಲ್ಲಿ ವಸ್ತ್ರವಿಲ್ಲದೆ ಇರುವವನನ್ನು ನೋಡಬಾರದು. ಕುಪಿತನಾದ ಗುರುವಿನ ಮುಖವನ್ನೂ ನೋಡಬಾರದು. ಪ್ರಸವಿಸುತ್ತಿರುವ ಸ್ತ್ರೀಯನ್ನೂ, ಋತುಮತಿಯಾಗಿರುವ ಸ್ತ್ರೀಯನ್ನೂ, ವಸ್ತ್ರವಿಲ್ಲದೆ ಬೆತ್ತಲೆ ಇರುವ ಸ್ತ್ರೀಯನ್ನೂ, ಮತ್ತೊಬ್ಬನೊಡನೆ ಸಮಾಗಮ ಹೊಂದುತ್ತಿರುವ ಸ್ತ್ರೀಯನ್ನೂ ಸಹ ನೋಡಬಾರದು. ಭೋಜನ ಕಾಲದಲ್ಲಿಯೂ, ಮಲಗಿ ನಿದ್ರಿಸುತ್ತಿರುವಾಗಲೂ, ಸ್ನಾನಮಾಡುತ್ತಿರುವಾಗಲೂ ಒಡವೆಯನ್ನು ತೆಗೆಯುತ್ತಿರುವಾಗಲೂ ಸಹ ತನ್ನ ಪತ್ನಿಯನ್ನು ನೋಡಬಾರದು.

೧೫-೧೭. ಕಣ್ಣಿಗೆ ಕಪ್ಪನ್ನು ಹಚ್ಚಿಕೊಳ್ಳುತ್ತಿರುವಾಗಲೂ ಇತರ ಜುಗುಪ್ಸಿತವಾದ ವ್ಯಾಪಾರದಲ್ಲಿರುವಾಗಲೂ ಸಹ ತನ್ನ ಪತ್ನಿಯನ್ನು ನೋಡಬಾರದು. ಅವಳ ದೇಹದ ಅವಯವಗಳನ್ನೂ ನೋಡಬಾರದು. ಅಡಿಗೆಯ ಮನೆಯನ್ನೂ ನೋಡಬಾರದು. ಕೆರೆ, ನದಿ, ಮೊದಲಾದ ಜಲಾಶಯಗಳ ದಡದಲ್ಲಿರುವವರನ್ನೂ ಸಹ ಯಾವಾಗಲೂ ನೋಡಬಾರದು. (ಹೀನಾಂಗೈಃ ಎಂಬ ಮೂರು ಪಾದಗಳು ಹಿಂದೆ ಆರನೆಯ ಸಂಖ್ಯೆಯಲ್ಲಿಯೂ ಬಂದಿವೆ. ಅಲ್ಲಿ ಅವುಗಳ ಅರ್ಥವನ್ನು ಬರೆಯಲಾಗಿದೆ)

ಚತುಷ್ಪಥಸ್ತುಷಾಂಗಾರಶೂನ್ಯವೇಶ್ಮಾಟವೀಸ್ತಥಾ ॥ ೧೮ ॥

ಕಾರ್ಪಾಸಾಸ್ಥಿ ತಥಾ ಭಸ್ಮ ನಾಕ್ರಾಮೇದ್ಯಚ್ಚ ಕುತ್ಸಿತಂ ।
ಅಂತಃಪುರಂ ಋತುಗೃಹಂ ಪರದೂತಗೃಹಂ ತಥಾ ॥ ೧೯ ॥

ನಾರೋಹೇದ್ವಿಷಮಾಂ ನಾವಂ ನ ವೃಕ್ಷಂ ನ ಚ ಪರ್ವತಂ ।
ನ ಲೋಷ್ಟೇನ ನ ಕಾಷ್ಠೇನ ನಾಶ್ಮನಾ ಚ ಫಲದ್ರುಮಾನ್ ॥ ೨೦ ॥

ನ ಪಾತಯೇನ್ನ ಕುರ್ವೀತ ಸರ್ವತ್ರ ಚ ಕುತೂಹಲಂ ।
ಅರ್ಥಾಯತನಶಾಸ್ತ್ರೇಷು ಸರ್ವತ್ರ ಸ್ಯಾತ್ಕುತೂಹಲೀ ॥ ೨೧ ॥

ದಂಡೇನ ಕರಪಾತ್ರೈರ್ವಾ ನ ಕುರ್ಯಾದಂಬುವಾದನಂ ।
ತೃಣಚ್ಛೇದಂ ನ ಕುರ್ವೀತ ನ ಚ ಲೋಷ್ಟಾಭಿಮರ್ದನಂ ॥ ೨೨ ॥

---

೧೮–೧೯. ದಾರಿಗಳ ಚೌಕವನ್ನೂ ಹೊಟ್ಟಿನಲ್ಲಿ ಉರಿಯುತ್ತಿರುವ ಅಗ್ನಿಯನ್ನೂ, ಶೂನ್ಯವಾದ ಮನೆಯನ್ನೂ, ಕಾಡನ್ನೂ, ಹತ್ತಿ, ಮೂಳೆ, ಬೂದಿ ಇವನ್ನೂ ಕುತ್ಸಿತವಾದ ಮಲಾದಿಗಳನ್ನೂ ಸಹ ಮಾರ್ಗವಶದಿಂದ ಪ್ರವೇಶಿಸಬಾರದು. ಹಾಗೆಯೇ ಅಂತಃಪುರ, ಋತುಮತಿಯ ಮನೆ, ಮತ್ತೊಬ್ಬನ ಭೃತ್ಯನಾಗಿರುವವನ ಮನೆ ಇವನ್ನೂ ಪ್ರವೇಶಿಸಬಾರದು. ಮುರಿದಿರುವ ಅಪಾಯ ಶಂಕೆಯುಳ್ಳ ದೋಣಿಯನ್ನೂ ಮರವನ್ನೂ, ಪರ್ವತಾದಿಗಳನ್ನೂ ಹತ್ತಬಾರದು.

೨೦–೨೧. ಮಣ್ಣಿನ ಹೆಂಟೆಯಿಂದಾಗಲೀ, ಮರದ ತುಂಡಿದಿಂದಾಗಲೀ, ಕಲ್ಲಿನಿಂದಾಗಲಿ ಫಲವೃಕ್ಷಗಳಿರುವ ಹಣ್ಣುಕಾಯಿ ಮೊದಲಾದುವನ್ನು ಕೆಡಹಬಾರದು. ಇಂತಹ ವ್ಯರ್ಥವಾದ ಯಾವಕೆಲಸದಲ್ಲಿಯೂ ಕುತೂಹಲಪಡಬಾರದು. ಅರ್ಥಶಾಸ್ತ್ರ ಗೃಹಶಾಸ್ತ್ರ ಮೊದಲಾದ ಶಾಸ್ತ್ರಜ್ಞಾನದಲ್ಲಿ ಕುತೂಹಲಿಯಾಗಿಯೇ ಇರಬೇಕು. ಕಟ್ಟಿಗೆಯ ತುಂಡಿನಿಂದಾಗಲಿ ಕೈಯ್ಯಿನಿಂದಾಗಲಿ ನೀರನ್ನು ಹೊಡೆದು ಶಬ್ದಮಾಡಬಾರದು.

೨೨–೨೪ ವ್ಯರ್ಥವಾಗಿ ಉಗುರುಗಳಿಂದ ಹುಲ್ಲನ್ನು ಕತ್ತರಿಸುವುದು, ಮಣ್ಣು ಹೆಂಟೆಗಳನ್ನು ಪುಡಿಮಾಡುವುದು, ಉಗುರುಗಳನ್ನು ಕಚ್ಚುವುದು, ಹಲ್ಲುಗಳ ಘಟ್ಟನೆಯಿಂದ ಶಬ್ದಮಾಡುವುದು, ಉಗುರುಗಳಿಂದ ರೋಮವನ್ನು ಕತ್ತರಿಸುವುದು,

ನಖಾನಾಂ ಭಕ್ಷಣಂ ಚೈವ ದಂತಾನಾಂ ಕುಟ್ಟನಂ ತಥಾ ।
ಛೇದನಂ ಚ ನಖೈರ್ಲೋಮ್ನಾಂ ವೃಥಾ ಚೇಷ್ಟಾಂ ವಿವರ್ಜಯೇತ್ ॥೨೩॥

ಮುಖಾಂಗವಾದನಂ ಚೈವ ಕ್ಷ್ವೇಡೋತ್ಕೃಷ್ಟಂ ತಥಾ ವೃಥಾ ।
ಅವಗುಂಠ್ಯ ಶಿರೋ ರಾತ್ರೌ ನ ಶಯೀತ ಕದಾಚನ ॥ ೨೪ ॥

ಪರ್ಯಟೇನ್ನ ತಥಾ ರಾತ್ರೌ ವಿನಾ ರಾಮ ಪ್ರದೀಪಿಕಾಂ ।
ನಾದ್ವಾರೇಣ ಪಶುಗೃಹೇ ನಾದ್ವಾರೇಣ ರಿಪೋರ್ಗೃಹಂ ॥ ೨೫ ॥

ಪ್ರವಿಶೇನ್ನ ಚ ತಿಷ್ಠೇಚ್ಚ ನಿದ್ರಿತಂ ನ ಚ ಬೋಧಯೇತ್ ।
ನಾಕ್ಷಿಪೇತ್ಪರವಾಕ್ಯಂತು ನ ಚ ರಕ್ತಂ ವಿರಾಗಯೇತ್ ॥ ೨೬ ॥

ಕಥಾಭಂಗಂ ನ ಕುರ್ವೀತ ನ ಚ ವಾಸೋವಿಪರ್ಯಯಂ ।
ನೋರ್ಧ್ವಜಾನುಶ್ಚಿರಂ ತಿಷ್ಠೇದುತ್ಪತಂತೀಂ ನ ಲಂಘಯೇತ್ ॥ ೨೭ ॥

---

ಇವೇ ಮೊದಲಾದ ದುಶ್ಚೇಷ್ಟೆಗಳನ್ನು ಬಿಡಬೇಕು, ಬಾಯಿನಿಂದಲೂ, ಅವಯವ ಗಳಿಂದಲೂ ವಾದ್ಯವನ್ನು ಮಾಡಬಾರದು. ವ್ಯರ್ಥವಾಗಿ ಸಿಂಹನಾದದಿಂದ ಕೂಗ ಬಾರದು ರಾತ್ರಿಯಲ್ಲಿ ತಲೆಗೆ ಮುಸುಕು ಹಾಕಿಕೊಂಡು ಮಲಗಬಾರದು.

೨೫-೨೬. ಎಲೈ ಭಾರ್ಗವನೇ ರಾತ್ರಿಯಲ್ಲಿ ದೀಪವಿಲ್ಲದೆ ಸಂಚರಿಸಲೂ ಬಾರದು, ಪಶುಗಳಿರುವ ಮನೆಗೂ, ಶತ್ರುಗಳ ಗೃಹಕ್ಕೂ ಬಾಗಲಿಲ್ಲದಿರುವ ಬೇರೆ ಮಾರ್ಗದಲ್ಲಿ ಪ್ರವೇಶಿಸಬಾರದು, ಅಲ್ಲಿ ನಿಲ್ಲಲೂ ಬಾರದು. ಮಲಗಿ ನಿದ್ರಿಸುತ್ತಿರು ವವನನ್ನು ಎಬ್ಬಿಸಬಾರದು, ಮತ್ತೊಬ್ಬನ ಮಾತನ್ನು ವ್ಯರ್ಥವಾಗಿ ನಿರಾಕರಿಸ ಬಾರದು, ಪ್ರೀತಿಯಿಂದಿರುವವನನ್ನು ನಿಷ್ಠುರವ್ಯಾಪಾರದಿಂದ ವಿರಕ್ತನನ್ನಾಗಿ (ಪ್ರೀತಿ ರಹಿತನನ್ನಾಗಿ) ಮಾಡಬಾರದು.

೨೭-೨೮. ಕಥೆಯು ನಡೆಯುವಾಗ ಮಧ್ಯದಲ್ಲಿ ಅದಕ್ಕೆ ಭಂಗತರಬಾರದು, ಉಡುವ ಮತ್ತು ಹೊದಿಯುವ ವಸ್ತ್ರಗಳಿಗೆ ಪರಸ್ಪರ ಬದಲಾವಣೆ ಮಾಡಬಾರದು ಮಂಡಿಯನ್ನೆತ್ತಿಕೊಂಡು ಬಹುಕಾಲವಿರಬಾರದು, ಎದುರಾಗಿ ಬರುತ್ತಿರುವ ಗೋವನ್ನು ಆಕ್ರಮಿಸಬಾರದು, ಮತ್ತೊಬ್ಬನ ಕ್ಷೇತ್ರದಲ್ಲಿ ಮೇಯುತ್ತಿರುವ ಗೋವನ್ನೂ

ಪರಕ್ಷೇತ್ರೇ ಚರಂತೀಂ ಗಾಂ ಪಾಯಯಂತೀಂ ಚ ವತ್ಸಕಂ ।
ನಾಚಕ್ಷೀತ ತಥಾನ್ಯಸ್ಯ ಶಕ್ರಚಾಪಂ ನ ದರ್ಶಯೇತ್ ॥ ೨೮ ॥

ಭದ್ರಂ ಭದ್ರಮಿತಿ ಬ್ರೂಯಾನ್ನಾನಿಷ್ಟಂ ವರ್ತಯೇತ್ಕ್ವಚಿತ್ ।
ಪಾಲಾಶಮಾಸನಂ ವರ್ಜ್ಯಂ ಪಾದಪೀಠಂ ಚ ಪಾದುಕೇ ॥ ೨೯ ॥

ಸುರಾರ್ಚಾ ಗುರುಭೂಪಾನಾಂ ಬ್ರಾಹ್ಮಣಾನಾಂ ವಿಶೇಷತಃ ।
ನಾಕ್ರಮೇಚ್ಚ ತಥಾ ಛಾಯಾಂ ಶ್ವಪಚಸ್ಯ ಚ ಭಾರ್ಗವ ॥ ೩೦ ॥

ದ್ವಿಜಯೋಶ್ಚೈವ ದಂಪತ್ಯೋರ್ಭೂಪಯೋರ್ಯುಧ್ಯಮಾನಯೋಃ ।
ಅಗ್ನಿಬ್ರಾಹ್ಮಣಯೋಶ್ಚೈವ ದ್ವಿಜಭೂಪಾಲಯೋಸ್ತಥಾ ॥ ೩೧ ॥

ಶಿಷ್ಯೋಪಾಧ್ಯಾಯಯೋಶ್ಚೈವ ನ ಚ ಮಧ್ಯೇನ ಪೂಜ್ಯಯೋಃ ।
ತೈಲೇ ಜಲೇ ತಥಾ ವಕ್ತ್ರಮಾದರ್ಶೇ ಚ ಮಲಾನ್ವಿತೇ ॥ ೩೨ ॥

---

ಕರುವಿಗೆ ಹಾಲನ್ನು ಕೊಡುತ್ತಿರುವ ಗೋವನ್ನೂ ಸಹ ಹೇಳಬಾರದು, ಕಾಮನ ಬಿಲ್ಲನ್ನು ಮತ್ತೊಬ್ಬನಿಗೆ ನಿರ್ದೇಶಿಸಿ ತೋರಿಸಬಾರದು.

೨೯-೩೦. ಯಾವಾಗಲೂ ಒಳ್ಳೆಯದು ಒಳ್ಳೆಯದು ಎಂಬ ಮಂಗಲ ಪ್ರದವಾದ ಮಾತನ್ನೇ ಆಡಬೇಕು, ಅನಿಷ್ಟವಾದ ಮಾತನ್ನು ಯಾವಾಗಲೂ ಆಡಬಾರದು, ಮುತ್ತುಗದ ಮರದಿಂದ ಆಸನ, ಕಾಲಿನಮಣೆ, ಪಾದುಕೆ, ಇವನ್ನು ಮಾಡಬಾರದು, ದೇವತೆಗಳ ಪೂಜೆ, ಮತ್ತು ಗುರು ದೊರೆ ಇವರ ಪೂಜೆ ವಿಶೇಷ ವಾಗಿ ಬ್ರಾಹ್ಮಣರ ಪೂಜೆಯೂ ಅವಶ್ಯಕ. ತನ್ನ ನೆರಳನ್ನೂ, ಹೀನ ಜಾತಿಯವರ ನೆರಳನ್ನೂ ಸಹ ದಾಟಬಾರದು.

೩೧-೩೨. ಬ್ರಾಹ್ಮಣಯುಗ್ಮದ ಮಧ್ಯದಲ್ಲಿಯೂ, ದಂಪತಿಗಳ ಮಧ್ಯ ದಲ್ಲಿಯೂ, ಯುದ್ಧದಲ್ಲಿರುವ ರಾಜರ ಮಧ್ಯದಲ್ಲಿಯೂ, ಬ್ರಾಹ್ಮಣ ಮತ್ತು ಅಗ್ನಿ ಇವರ ಮಧ್ಯದಲ್ಲಿಯೂ ಬ್ರಾಹ್ಮಣ ಮತ್ತು ದೊರೆ ಇವರ ಮಧ್ಯದಲ್ಲಿಯೂ, ಶಿಷ್ಯ ಉಪಾಧ್ಯಾಯ ಇವರ ಮಧ್ಯದಲ್ಲಿಯೂ, ಪೂಜ್ಯರಾದವರ ಮಧ್ಯದಲ್ಲಿಯೂ ಪ್ರವೇಶಿಸ ಬಾರದು. ಎಣ್ಣೆಯಲ್ಲಿಯೂ, ಜಲದಲ್ಲಿಯೂ, ಕೊಳೆಯಾಗಿರುವ ಕನ್ನಡಿಯಲ್ಲಿಯೂ ಸಹ ತನ್ನ ಮುಖವನ್ನು ನೋಡಬಾರದು. ರಾಹುಗ್ರಸ್ತನಾದ ಸೂರ್ಯನನ್ನೂ ನೋಡಬಾರದು.

**ನ ಪಶ್ಯೇನ್ನ ತಥಾ ಪಶ್ಯೇದುಪರಕ್ತಂ ದಿವಾಕರಂ ।**
**ನೋಚ್ಛಿಷ್ಟಸ್ತಾರಕಾರಾಹುಃ ಸ್ತುತಿನಾಶಂ ಹುತಾಶನಂ ॥ ೩೩ ॥**

**ನ ತಿಷ್ಠೇತ್ಪ್ರತಿವಾತಂ ಚ ತಥಾ ಚ ಪ್ರತಿಭಾಸ್ಕರಂ ।**
**ನ ಸಂಹತಾಭ್ಯಾಂ ಪಾಣಿಭ್ಯಾಂ ಕಂಡೂಯೇದಾತ್ಮನಃ ಶಿರಃ ॥ ೩೪ ॥**

**ರೋದನಂ ಚ ತಥಾ ನಗ್ನಃ ಕುರ್ಯಾತ್ತೋಯಾವಗಾಹನಂ ।**
**ನಿಷ್ಕಾರಣಂ ನದೀಪಾರಂ ಬಾಹುಭ್ಯಾಂ ನ ತರೇತ್ತಥಾ ॥ ೩೫ ॥**

**ನ ಪ್ರಶಂಸೇನ್ನದೀತೋಯೇ ನದೀಮನ್ಯಾಂ ಕಥಂಚನ ।**
**ನ ಗಿರೌ ಪರ್ವತಂ ರಾಮ ನ ರಾಜ್ಞಃ ಪುರತೋ ನೃಪಂ ॥ ೩೬ ॥**

**ಅಸಂತರ್ಪ್ಯ ಪಿತುರ್ದೇಯಂ ನದೀಪಾರಂ ನ ಚ ವ್ರಜೇತ್ ।**
**ಭೋಜನಂ ವರ್ಜಯೇನ್ನಾವಿ ಷ್ಠೀವನಂ ಚ ತಥಾಂಭಸಿ ॥ ೩೭ ॥**

---

೩೩–೩೪. ಹಾಗೆಯೇ ಅಶುಚಿಯಲ್ಲಿರುವಾಗ ನಕ್ಷತ್ರಗಳನ್ನೂ, ರಾಹುವನ್ನೂ ನೋಡಕೂಡದು. ಸ್ತೋತ್ರಮಾಡದೆ ಅಗ್ನಿಯನ್ನೂ ನೋಡಬಾರದು. ಗಾಳಿಗೆ ಎದುರಾಗಿಯೂ ಸೂರ್ಯನಿಗೆ ಎದುರಾಗಿಯೂ ನಿಲ್ಲಬಾರದು. ಎರಡು ಕೈಗಳನ್ನೂ ಒಟ್ಟುಗೂಡಿಸಿ ತನ್ನ ತಲೆಯನ್ನು ಕೆರೆಯಬಾರದು, ಅಳಲೂಬಾರದು ಮತ್ತು ವಸ್ತ್ರವಿಲ್ಲದೆ ಬೆತ್ತಲೆಯಾಗಿ ಸ್ನಾನಕಕ್ಕಾಗಿ ನೀರಿನಲ್ಲಿಳಿಯಬಾರದು.

೩೫–೩೭. ಯಾವ ಕಾರಣವೂ ಇಲ್ಲದೆ ಕೈಗಳಿಂದಲೇ (ಈಜುವುದರಿಂದ) ನದಿಯ ಆಚೆದಡವನ್ನು ದಾಟಿ ಸೇರಬಾರದು. ನದಿಯ ಜಲದಲ್ಲಿ ಸ್ನಾನಮಾಡುವಾಗ ಬೇರೆ ನದಿಯನ್ನು ಸ್ತೋತ್ರಮಾಡಬಾರದು. ಸಾಮಾನ್ಯವಾದ ಬೆಟ್ಟದಲ್ಲಿರುವಾಗ ಮತ್ತೊಂದು ಉತ್ಕೃಷ್ಟಪರ್ವತವನ್ನೂ ಹೊಗಳಬಾರದು. ಹಾಗೆಯೇ ದೊರೆಯ ಎದುರಿಗೆ ಮತ್ತೊಬ್ಬ ಸಮಾನಸ್ಕಂಧನಾದ ದೊರೆಯನ್ನೂ ಹೊಗಳಬಾರದು. ನದಿಯನ್ನು ಸೇರಿದವನು ತರ್ಪಣಾದಿಗಳಿಂದ ಪಿತೃಗಳನ್ನು ತೃಪ್ತಿಪಡಿಸದೆ ಆ ನದಿಯ ಮತ್ತೊಂದು ದಡವನ್ನು ಸೇರಬಾರದು. ದೋಣಿಯಲ್ಲಿ ಭೋಜನಾದಿಗಳನ್ನು ಮಾಡಬಾರದು. ನೀರಿನಲ್ಲಿ ಉಗುಳಲೂಬಾರದು.

ನೈವಾಪ್ಸು ಪ್ರಕ್ಷಿಪೇದ್ವಿದ್ವಾನಮೇಧ್ಯಂ ರುಧಿರಂ ವಿಷಂ |
ಸಮಾಲ್ಯೋ ನಾಚರೇತ್ಸ್ನಾನಂ ನ ದ್ವಿವಾಸಾ ವಿಕಾರಣಂ || ೩೮ ||

ಆತ್ಮನಶ್ಚ ತಥಾ ರಾಮ ನೈವತ್ಸಪನಯೇತ್ಸ್ರಜಂ |
ಸ್ನಾತಃ ಶಿರೋ ನಾವಧುನೇನ್ನಾಂಗೇಭ್ಯಸ್ತೋಯಮುದ್ಧರೇತ್ || ೩೯ ||

ತದ್ದಿನೇ ಚಾನುಲಿಪ್ತಾಂಗಂ ತಥಾ ಸ್ನಾನಂ ವಿವರ್ಜಯೇತ್ |
ಶಿರಃಸ್ನಾತಶ್ಚ ತೈಲೇನ ಸ್ಪೃಶೇದಂಗಂ ನ ಕಿಂಚನ || ೪೦ ||

ವಾಸಸಾ ವಾಮಭಾಗಸ್ಯ ರಜಸಾ ಪೂರ್ವವಾಸಸಾ |
ಸಂಮಾರ್ಜನಂ ರಜೋ ವರ್ಜ್ಯಃ ಖರಾಶ್ವಾದೇಸ್ತಥೈವ ಚ || ೪೧ ||

ಮೇಧ್ಯಾನಿ ಚ ತಥಾ ರಾಮ ಗೋಗಜಾಶ್ವರಜಾಂಸಿ ಚ |
ನಾಧಃಕುರ್ವೀತ ದಹನೇ ನ ಚ ಪಾದೌ ಪ್ರತಾಪಯೇತ್ || ೪೨ ||

---

೩೮–೩೯. ಪ್ರಾಜ್ಞನಾದವನು ನೀರಿನಲ್ಲಿ ಅಮೇಧ್ಯ, ರಕ್ತ, ವಿಷ ಮುಂತಾದುವನ್ನು ಹಾಕಬಾರದು. ತಾನು ಧರಿಸಿರುವ ಹೂವಿನೊಡನೆ ಸ್ನಾನಮಾಡಬಾರದು. ಮತ್ತು ಕಾರಣವಿಲ್ಲದೆ ಎರಡು ವಸ್ತ್ರದೊಡನೆ ಸ್ನಾನಮಾಡಲೂಬಾರದು. (ಸಚೇಲ ಸ್ನಾನಕ್ಕೆ ಬೇರೆ ನಿಮಿತ್ತಗಳನ್ನು ಹೇಳಿರುವರು. ಅಂತಹ ಕಾರಣವಿಲ್ಲದೆ ಎಂದು ತಾತ್ಪರ್ಯ) ತಾನು ಧರಿಸಿರುವ ಹೂಮಾಲೆಯನ್ನೂ ಸಹ ನೀರಿನಲ್ಲಿ ತೆಗೆದು ಹಾಕಬಾರದು. ಸ್ನಾನಮಾಡಿದವನು ಕೂದಲುಗಳನ್ನು ಹೆಚ್ಚಾಗಿ ಕೊಡಹಬಾರದು. ಮೈಮೇಲಿರುವ ಜಲಬಿಂದುಗಳನ್ನು ಸುತ್ತಲೂ ಕೊಡಹಬಾರದು.

೪೦–೪೧. ಶ್ರಾದ್ಧದಿನದಲ್ಲಿ ಮೈಯಿನ ಕೊಳೆ ಹೋಗಲು ಉಪಯೋಗಿಸಬಹುದಾದ ಚೂರ್ಣಲೇಪಾದಿಗಳನ್ನು ಸ್ನಾನಕಾಲದಲ್ಲಿ ತ್ಯಜಿಸಬೇಕು, ಶಿರಃಸ್ನಾನ ಮಾಡಿದವನು ಪುನಃ ಎಣ್ಣೆಯಿಂದ ಯಾವ ಅವಯವವನ್ನೂ ಮುಟ್ಟಬಾರದು, ಉಟ್ಟಿರುವ ವಸ್ತ್ರದಿಂದ ದೇಹದ ಎಡಭಾಗವನ್ನೂ ಹೊದ್ದಿರುವ ಮಲಿನ ವಸ್ತ್ರದಿಂದ ಮೈಯನ್ನು ಉಜ್ಜಿ ಒರಸಿಕೊಳ್ಳಬಾರದು, ಕತ್ತೆ, ಕುದುರೆ ಮುಂತಾದವುಗಳ ಧೂಳನ್ನು ತ್ಯಜಿಸಬೇಕು.

೪೨-೪೩. ಗೋವು, ಆನೆ, ಕುದುರೆ ಇವುಗಳ ಧೂಳಿಯು ಪವಿತ್ರವಾದದ್ದು ಅವನ್ನು ಪಾದಾಕ್ರಮಣದಿಂದ ತಿರಸ್ಕರಿಸಬಾರದು. ಕಾಲುಗಳನ್ನು ಬೆಂಕಿಯಲ್ಲಿ

ದರ್ಭೈರ್ನರ್ಮಾರ್ಜಯೇತ್ಪಾದೌ ನ ಚ ಕಾಂಸ್ಯೇ ಪ್ರಧಾವಯೇತ್ ।
ಗೋಗಜಾಶ್ವಾಜಿಪುಚ್ಛೇಷು ಖರಸ್ಯ ಚ ವಿಶೇಷತಃ ॥ ೪೩ ॥

ಯಲ್ಲಗ್ನಮುದಕಂ ತಸ್ಮಾದ್ವಿಪ್ರುಷೋ ದೂರತಸ್ತ್ಯಜೇತ್ ।
ಅಕಸ್ಮಾದಪ್ಯಶಸ್ತಾಸ್ತಾಃ ಖಂಜಾಂಗಸ್ಪರ್ಶನಂ ತಥಾ ॥ ೪೪ ॥

ಹೀನಂ ವಾ ನ ವಹೇದ್ರಾಮ ಶ್ರುತರೂಪಧನಾದಿಭಿಃ ।
ಹೀನೈಃ ನ ಚ ವಸೇತ್ಸಾರ್ಥಂ ನ ದೇಶೇ ವೈದ್ಯವರ್ಜಿತೇ ॥ ೪೫ ॥

ನ ಭೂಪಾಲವಿಹೀನೇ ಚ ನ ಸಾಂವತ್ಸರವರ್ಜಿತೇ ।
ದುಷ್ಟಕೂಪಾನ್ವಿತೇ ರಾಮ ತಥಾ ಚ ಬಹುನಾಯಕೇ ॥ ೪೬ ॥

ಸ್ತ್ರೀನಾಯಕೇ ಬಾಲಪತೌ ಶೂದ್ರರಾಜ್ಯೇ ತಥೈವ ಚ ।
ಮ್ಲೇಚ್ಛವೇಷೋ ನ ಕರ್ತವ್ಯಃ ಮ್ಲೇಚ್ಛಭಾಷಾ ತಥೈವ ಚ ॥ ೪೭ ॥

---

ಕಾಯಿಸಬಾರದು ದರ್ಭೆಗಳಿಂದಲೂ ಮಾರ್ಜನಮಾಡಬಾರದು. ಕಂಚಿನಪಾತ್ರೆ ಯಲ್ಲಿ ಕಾಲನ್ನು ತೊಳೆಯಲೂ ಬಾರದು. ಹಸು, ಆನೆ, ಕುದುರೆ, ಆಡು ಇವುಗಳ ಮತ್ತು ವಿಶೇಷವಾಗಿ ಕತ್ತೆಯ ಬಾಲದಲ್ಲಿ ಸಂಬಂಧಿಸಿದ ನೀರಿನ ತುಂತುರುಗಳನ್ನು ತನ್ನ ಮೈಮೇಲೆ ಬೀಳಿದಂತೆ ದೂರದಲ್ಲಿಯೇ ತ್ಯಾಗಮಾಡಬೇಕು.

೪೪-೪೬. ಇಲ್ಲಿ ಹೇಳಿರುವ ಧೂಳಿಗಳು ಅಕಸ್ಮಿಕವಾಗಿ ಉಂಟಾದರೂ ಅವು ಅಪ್ರಶಸ್ತವೆಂದೇ ತಿಳಿಯಬೇಕು. ಕುಂಟನಾದವನ ಮೈಯನ್ನು ಮುಟ್ಟಬಾರದು ವಿದ್ಯಾ, ರೂಪ, ಧನ, ಇವುಗಳಿಂದ ಬಹಳ ಅಪಕೃಷ್ಟನಾಗಿರುವವನೊಡನೆ ಸಂಚರಿಸ ಬಾರದು ಅಂತಹವರೊಡನೆ ವಾಸಮಾಡಬಾರದು, ವೈದ್ಯನಿಲ್ಲದೆಯೂ, ಧೊರೆ ಇಲ್ಲದೆಯೂ, ಜ್ಯೋತಿಷಿಕನಿಲ್ಲದೆಯೂ ಇರುವ ದೇಶದಲ್ಲಿ ವಾಸಮಾಡಬಾರದು, ಮತ್ತು ಸರಿಯಾದ ಜಲಾಶಯುಗಳಿಲ್ಲದೆ ಕೆಟ್ಟ ಭಾವಿಗಳಿಂದ ಕೂಡಿರುವ ದೇಶ ದಲ್ಲಿಯೂ ಅನೇಕ ನಾಯಕರುಳ್ಳ ದೇಶದಲ್ಲಿಯೂ ಸಹ ವಾಸಮಾಡಬಾರದು.

೪೭-೪೮. ಸ್ತ್ರೀಗೆ ಯಜಮಾನ್ಯವಿರುವ ದೇಶದಲ್ಲಿಯೂ, ಹುಡುಗ ಧೊರೆಯ ರಾಜ್ಯದಲ್ಲಿಯೂ, ಶೂದ್ರ ರಾಜ್ಯದಲ್ಲಿಯೂ ಸಹ ವಾಸಮಾಡಬಾರದು. ಮ್ಲೇಚ್ಛರ ವೇಷವನ್ನು ಧರಿಸಬಾರದು. ಅವರ ಭಾಷೆಯನ್ನೂ ಆಡಬಾರದು. ಚಂಡಾಲ, ಪತಿತ,

ಚಂಡಾಲೈಃ ಪತಿತೈಃ ಮ್ಲೇಚ್ಛೈರ್ಭಾಷಣಂ ನ ಕದಾಚನ ।
ನಕಾರ್ಯಂ ಕಾರ್ಯತಃ ಕೃತ್ವಾ ಕೀರ್ತಯೇತ್ಕೇಶವಂ ವಿಭುಂ ॥ ೪೮ ॥

ನಾ ಸಂವೃತಮುಖಃ ಕುರ್ಯಾದ್ಧಾಸಂ ಜೃಂಭಾಂ ತಥಾ ಕ್ಷುತಂ ।
ಗೋಪಯೇಜ್ಜನ್ಮನಕ್ಷತ್ರಮೃಣಸಾರಂ ಗೃಹೇ ಮಲಂ ॥ ೪೯ ॥

ಪ್ರಭೋರಪ್ಯವಮಾನಂ ಸ್ವಂ ತಸ್ಯ ದುಶ್ಚರಿತಂ ಚ ಯತ್ ।
ನಾನುಕೂಲ್ಯಂ ತಥಾ ಕಾರ್ಯಮಿಂದ್ರಿಯಾಣಾಂ ಸುಖೇಪ್ಸುನಾ ॥ ೫೦ ॥

ಯುಕ್ತ್ಯಾ ಚ ಕಾಮಸೇವೀ ಸ್ಯಾನ್ನಾಕಸ್ಮಾನ್ನಿಃಸುಖೀ ಭವೇತ್ ।
ವೇಗರೋಧಂ ನ ಕರ್ತವ್ಯಮನ್ಯತ್ರ ಕ್ರೋಧವೇಗತಃ ॥ ೫೧ ॥

---

ಮ್ಲೇಚ್ಛ, ಇವರೊಡನೆ ಯಾವಾಗಲೂ ಮಾತನಾಡಬಾರದು. ಈ ನಿಷೇಧಗಳನ್ನು ಆಕಸ್ಮಿಕವಾಗಿ ಕಾರ್ಯರೂಪದಿಂದ ಅನುಭವಿಸಿದುದೇ ಆದರೆ ಅಂತಹ ಪಾಪ ನಿವೃತ್ತಿಗಾಗಿ ಪ್ರಭುವಾದ ಕೇಶವನನ್ನು ಸ್ತೋತ್ರಮಾಡಬೇಕು.

೪೯-೫೦. ನಗುವಕಾಲದಲ್ಲಿಯೂ ಆಕಳಿಸುವ ಮತ್ತು ಶೀನುವಕಾಲದಲ್ಲಿಯೂ ವಸ್ತ್ರಾದಿಗಳಿಂದ ಮುಖವನ್ನು ಮರೆಮಾಡಿಕೊಳ್ಳಬೇಕು. ಹಾಗೆ ಮರೆಮಾಡದೆ ಇವನ್ನು ಪ್ರಕಾಶಗೊಳಿಸಬಾರದು. ತನ್ನ ಜನ್ಮನಕ್ಷತ್ರವನ್ನೂ ಗೃಹಕ್ಕೆ ಸಂಬಂಧಿಸಿದ ಸಾಲಸೋಲಗಳನ್ನೂ ಕಶ್ಮಲವಾದ ಮನೆಯ ಮಾತನ್ನೂ ಗೋಪ್ಯವಾಗಿಡಬೇಕೇ ಹೊರತು ಪ್ರಕಾಶ ಪಡಿಸಬಾರದು, ಪ್ರಭುವಿನಿಂದ ತನಗೆ ಅವಮಾನ ಉಂಟಾದಲ್ಲಿ ಅದನ್ನೂ ಸಹ ಗೋಪ್ಯವಾಗಿಯೇ ಇಡಬೇಕು, ಅಂತಹ ಪ್ರಭುವಿನ ದುರಾಚಾರ ಗಳನ್ನೂ ಸಹ ಪ್ರಕಾಶಗೊಳಿಸಬಾರದು. ಸುಖಿಯಾಗಿರಬೇಕೆಂಬ ಆಶೆಯುಳ್ಳವನು ಇಂದ್ರಿಯಗಳಿಗೆ ಆಯಾಯ ವಿಷಯ ಸಮರ್ಪಣದಿಂದ ಹೆಚ್ಚಾದ ತೃಪ್ತಿಯನ್ನುಂಟು ಮಾಡಬಾರದು (ವಿಷಯಗಳನ್ನು ಯಥಾಶಕ್ತಿ ತಡೆದು ಇಂದ್ರಿಯಗಳ ಹತೋಟಿ ಯನ್ನು ಹೊಂದಬೇಕೇಹೊರತು ಯಥೇಷ್ಟ ವಿಷಯೋಪಭೋಗದಿಂದ ಅವುಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಸಾಧ್ಯವಿಲ್ಲವೆಂದು ತಾತ್ಪರ್ಯ.)

೫೧-೫೨. ಇಂದ್ರಿಯಗಳ ಸರ್ವಪ್ರಕಾರವಾದ ನಿಗ್ರಹಗಳಿಂದ ತನ್ನಸುಖಕ್ಕೆ ಕುಂದಕವನ್ನೂ ಉಂಟುಮಾಡಿಕೊಳ್ಳಬಾರದು. ಶಾಸ್ತ್ರಾವಿರುದ್ಧವಾದ ಕಾಮಸೇವೆ ಯಿಂದ ಸುಖಿಯಾಗಿರಬೇಕು. (ಅಂದರೆ ಮೇಲೆ ಹೇಳಿರುವ ಇಂದ್ರಿಯ ತೃಪ್ತಿಯು

ನೋಪೇಕ್ಷಿತವ್ಯೋ ವ್ಯಾಧಿಃ ಸ್ಯಾದ್ರಿಪುರಲ್ಪೋಽಪಿ ಭಾರ್ಗವ ।
ಸ್ನಾತ್ವಾ ಭುಕ್ತ್ವಾ ಚ ಧರ್ಮಜ್ಞ ಭಕ್ತಿಕಾಮಃ ಸುರಾರ್ಚನೇ ॥ ೫೨ ॥

ಮಲಾಯನಾನಾಂ ಸಂಸ್ಪರ್ಶೇ ಮಲಾನಾಂ ಚೈವ ಭಾರ್ಗವ ।
ವಾಸಸಶ್ಚ ಪರೀಧಾನೇ ರಥ್ಯಾಚಂಕ್ರಮಣೇ ತಥಾ ॥ ೫೩ ॥

ಆಚಾಮೇಚ್ಚ ತಥಾ ರಾಮ ತಥಾ ಸ್ವಪ್ನೋತ್ಥಿತೋ ನರಃ ।
ನ ಹುಂಕುರ್ಯಾಚ್ಛಿವಂ ಪೂಜ್ಯಂ ಬಿಭೃಯಾನ್ನಾ[1]ಗ್ನಿಚಾರಿಣೀಂ ॥ ೫೪ ॥

ನ ಭುಕ್ತಮಾತ್ರಂ ಪ್ರಾಯಸ್ಯೇನ್ನೀಚಸೇವಾಂ ವಿವರ್ಜಯೇತ್ ।
ಪಾದೇನ ನಾಕ್ರಮೇತ್ಪಾದಂ ನ ಕಂಡೂಯೇನ್ನ ಶೌಚಯೇತ್ ॥ ೫೫ ॥

---

ಕಾಮಾತ್ಮತಾ ನಪ್ರಶಸ್ತಾ ಎಂಬ ವಚನದಂತೆ ಇಂದ್ರಿಯೋಪಭೋಗದಲ್ಲೇ ಪರ್ಯವಸಾನವಾಗಕೂಡದೆಂದು ತಾತ್ಪರ್ಯ) ಕೋಪವೇಗವನ್ನು ಮಾತ್ರ ಸದ್ಯಃ ತಡೆಯಬೇಕೇ ಹೊರತು ಮತ್ತಾವವೇಗವನ್ನೂ ತಡೆಯಲು ಯತ್ನಿಸಬಾರದು. ವ್ಯಾಧಿಯು ಅತ್ಯಲ್ಪವಾಗಿದ್ದರೂ ಅದನ್ನು ಉಪೇಕ್ಷಿಸಬಾರದು (ತಕ್ಕ ಪ್ರತೀಕಾರವನ್ನು ಆಗಲೇ ಕೈಗೊಳ್ಳಬೇಕೆಂದು ತಾತ್ಪರ್ಯ) ಹಾಗೆಯೇ ಶತ್ರುವೂ ಸಹ ಅಲ್ಪನಾಗಿರುವನೆಂದು ನಿಗ್ರಹಿಸದೆ ಉಪೇಕ್ಷಿಸಬಾರದು.

೫೨–೫೩. ಸ್ನಾನ ಮಾಡಿದ ನಂತರವೂ, ಭೋಜನ ಮತ್ತು ಭಕ್ತಿಯಿಂದ ಸ್ವಾಮಿಯ ಪೂಜೆ, ಇವನ್ನು ಮಾಡಿದಾಗಲೂ ಮಲಗಳಿಗೆ ಮಾರ್ಗವಾದ ಇಂದ್ರಿಯ ಭಾಗದ ಸ್ಪರ್ಶ ಉಂಟಾದಲ್ಲಿಯೂ, ಮಲಗಳ ಸ್ಪರ್ಶ ಉಂಟಾದಲ್ಲಿಯೂ, ವಸ್ತ್ರಗಳನ್ನು ಉಟ್ಟುಕೊಂಡ ಮೇಲೆಯೂ, ಬೀದಿಯಲ್ಲಿ ಸಂಚಾರಮಾಡಿ ಬಂದರೂ, ಮಲಗಿದ್ದು ಎದ್ದು ಬಂದ ನಂತರವೂ ಕೂಡ ಶುದ್ಧಿಗಾಗಿ ಆಚಮನ ಮಾಡಬೇಕು.

೫೪–೫೬. ಪೂಜ್ಯನಾದ ಸತ್ಪುರುಷನನ್ನು ಧಿಕ್ಕರಿಸಿ ಅವಮಾನಪಡಿಸಬಾರದು, ಎಲ್ಲಾ ಕಾರ್ಯಗಳಲ್ಲೂ ಮುಂದಾಳಾಗಿ ಹೊರಡುವ ಧೃಷ್ಟಳಾದ ಸ್ತ್ರೀಯನ್ನು ವಹಿಸಬಾರದು, ಊಟಮಾಡಿದ ಒಡನೆಯೇ ಪ್ರಯಾಸಸಾಧ್ಯವಾದ ಕಾರ್ಯದಲ್ಲಿ ಯಾರನ್ನೂ ನಿಯಮಿಸಬಾರದು. (ಇಲ್ಲಿ ಭುಕ್ತಿ ಪಾತ್ರಂ ಎಂದು ಪಾಠವಿದ್ದಲ್ಲಿ ಭೋಜನಮಾಡಿದ ಪಾತ್ರವನ್ನು ಎಲೆ ಮೊದಲಾದುವನ್ನು ತಾನೇ ಎತ್ತಬಾರದೆಂದು

---

1 ಇಲ್ಲಿ ನಾಗ್ರಚಾರಿಣೀಂ ಎಂದು ಬೇರೆ ಪಾಠವಿರಬೇಕೆಂದು ತೋರುತ್ತದೆ.

ವರ್ಜಯೇಚ್ಛವಧೂಮಂ ಚ ಗಿರಂ ಚಾಶ್ಲೀಲಸಂಯುತಾಂ ।
ಪ್ರತ್ಯಕ್ಷಂ ವಾ ಪರೋಕ್ಷಂ ವಾ ಕಸ್ಯಚಿನ್ನಾಪ್ರಿಯಂ ವದೇತ್ ॥ ೫೬ ॥

ವೇದಶಾಸ್ತ್ರನರೇಂದ್ರರ್ಷಿದೇವನಿಂದಾಂ ವಿವರ್ಜಯೇತ್ ।
ನಾಸ್ತಿಕ್ಯಮನೃತಂ ಚೈವ ಚೇತಸೋ ದೂಷಣಂ ತಥಾ ॥ ೫೭ ॥

ಸ್ತ್ರೀಣಾಮೀರ್ಷ್ಯಾ ನ ಕರ್ತವ್ಯಾ ವಿಶ್ವಾಸಂ ತಾಸು ವರ್ಜಯೇತ್ ।
ಲಾಲಿತಾಃ ತಾಡಿತಾಃ ಕಾರ್ಯಾಃ ಗೇಹೇ ಸ್ವೇ ಸ್ತ್ರೀಕುಮಾರಿಕಾಃ ॥ ೫೮ ॥

ಸರ್ವೇಷಾಮೇವ ಧರ್ಮಾಣಾಂ ಕರ್ತವ್ಯಂ ಶ್ರವಣಂ ತಥಾ ।
ನಮಸ್ಕಾರಂ ಚ ದೇವಾನಾಂ ಸರ್ವೇಷಾಮೇವ ಕಾರಯೇತ್ ॥ ೫೯ ॥

---

ಅರ್ಥವಾಗುತ್ತದೆ) ನೀಚಸೇವೆಯನ್ನು ಯಾವಾಗಲೂ ಮಾಡಬಾರದು, ಒಂದು ಕಾಲಿನಿಂದ ಮತ್ತೊಂದು ಕಾಲನ್ನು ಮೆಟ್ಟಬಾರದು, ಕೆರೆಯಲ್ಲೂ ಬಾರದು ಮತ್ತು ಕಾಲಿನಿಂದಲೇ ಕಾಲನ್ನು ಉಜ್ಜಿ ಶೌಚಮಾಡಿಕೊಳ್ಳಬಾರದು, ಶವಧೂಮವನ್ನು ಸೇವಿಸಬಾರದು, ಅಮಂಗಲವಾದ ಮಾತನ್ನು ಯಾವಾಗಲೂ ಆಡಬಾರದು, ಪ್ರತ್ಯಕ್ಷದಲ್ಲಾಗಲಿ ಪರೋಕ್ಷದಲ್ಲಾಗಲಿ ಅಪ್ರಿಯವಾದ ಯಾರ ಮಾತನ್ನೂ ಆಡಬಾರದು.

೫೭–೫೮. ನಾಸ್ತಿಕತನದಿಂದ ಹಾಗೂ ಸುಳ್ಳು ಹೇಳುವುದರಿಂದ ಮತ್ತು ಇತರ ಕಾರಣಗಳಿಂದಲೂ ಮನಸ್ಸಿಗೆ ದೋಷ ಉಂಟಾಗದಂತೆ ಇವನ್ನೂ ಪರಿಹರಿಸಬೇಕು, ಸ್ತ್ರೀಯರ ವಿಷಯದಲ್ಲಿ ಅಸೂಯೆಯಿಂದಿರಬಾರದು, (ಅಂದರೆ ಇದ್ದ ಗುಣಗಳಿಂದಲೇ ತೃಪ್ತಿಪಡಬೇಕೇ ಹೊರತು ಅದರಲ್ಲಿಯೂ ದೋಷದೃಷ್ಟಿಯಿಂದ ಕೋಪತಾಪಾದಿಗಳನ್ನು ಮಾಡಕೂಡದೆಂದು ತಾತ್ಪರ್ಯ) ಆದರೆ ಸ್ತ್ರೀಯರಲ್ಲಿ ವಿಶ್ವಾಸವನ್ನು ಮಾತ್ರ ಎಂದಿಗೂ ಮಾಡಬಾರದು, ಮನೆಯಲ್ಲಿ ವಯಸ್ಕರಾದ ಸ್ತ್ರೀಯರ ವಿಷಯದಲ್ಲಿ ಅವರ ಸಂತೋಷಕ್ಕೆ ತಕ್ಕಂತೆ ಲಾಲನೆಗಳಿಂದಲೂ, ಸಣ್ಣ ಹೆಣ್ಣುಮಕ್ಕಳ ವಿಷಯದಲ್ಲಿ ಆವರ ಶಿಕ್ಷಣಕ್ಕೆ ತಕ್ಕಂತೆ ತಾಡನಗಳಿಂದಲೂ ಅವರನ್ನು ಭರಿಸಬೇಕು.

೫೯-೬೦. ಎಲ್ಲಾ ಆಶ್ರಮಗಳ ಮತ್ತು ವರ್ಣಗಳ, ಧರ್ಮಗಳನ್ನೂ ಕೇಳಿ ತಿಳಿಯಬೇಕು ಎಲ್ಲಾ ದೇವತೆಗಳಿಗೂ ನಮಸ್ಕಾರಮಾಡಬೇಕು, ದೇವತೆಗಳ ಆಯಾಯ ಚರಿತ್ರೆಯನ್ನು ತಿಳಿದು ಧರ್ಮದೃಷ್ಟಿಯಿಂದ ಅದು ವಿರುದ್ಧವೆಂದು ಭಾವಿಸಿ ಅವರ ಚರಿತ್ರೆಯನ್ನು ಹಳಿಯಬಾರದು, ಅವರು ಮಾಡಿರುವರೆಂದು ತಿಳಿದು ಅವರಂತೆ ತಾನೂ ಮಾಡಲು ಪ್ರಯತ್ನಿಸಬಾರದು, ಏತಕ್ಕೆಂದರೆ ಅಂತಹ ದೇವತೆಗಳು ತೇಜಸ್ವಿ

ಸರ್ವೇಷಾಂ ಚರಿತಂ ರಾಮ ಧರ್ಮತೋ ನ ವಿಕುತ್ಸಯೇತ್ ।
ನ ಚಾಚರೇಚ್ಚ ಧರ್ಮಜ್ಞ ತೇ ಹಿ ತೇಜೋ[1]ಪಹಾಹತಾಃ ॥ ೬೦ ॥

ಧರ್ಮಸ್ಯಾರ್ಥಸ್ಯ ಕಾಮಸ್ಯ ಪೀಡಾ ವರ್ಜ್ಯಾ ಪರಸ್ಪರಂ ।
ದೇಹಸ್ಯ ವಯಸಶ್ಚೈವ ಶಿಲ್ಪಸ್ಯ ಸ್ವಕುಲಸ್ಯ ಚ ॥ ೬೧ ॥

ಆಚರೇತ್ಸದೃಶಂ ವೇಷಂ ವ್ಯವಸಾಯಾನುರೂಪತಃ ।
ಸ್ನಾತ ಏವಾಶು ಬಿಭೃಯಾತ್ಸ್ನೇಷ್ಟೀಷೇ ಧೌತವಾಸಸೀ ॥ ೬೨ ॥

ಅನುಲಿಂಪೇತ್ತಥಾಂಗಾನಿ ಸಿತಂ ಮಾಲ್ಯಂ ಚ ಧಾರಯೇತ್ ।
ನಾ ಸಂಸ್ಕೃತಂ ಚ ಬಿಭೃಯಾತ್ಕಾಂಚನಂ ಪುರುಷೋತ್ತಮ ॥ ೬೩ ॥

ಗಳಾದುದರಿಂದ ಅದರಿಂದುಂಟಾದ ಇಷ್ಟಾನಿಷ್ಟಗಳನ್ನು ನಿರ್ವಹಿಸಲು ಸಮರ್ಥರು, ಅಲ್ಪಶಕ್ತರಾದ ಮಾನವರಿಂದ ಅದು ಸಾಧ್ಯವಲ್ಲ, ಧರ್ಮದೃಷ್ಟಿಯುಳ್ಳವನು ಇಂತಹ ವಿವೇಚನೆಯಿಂದ ತಾನು ವರ್ತಿಸಬೇಕು.

೬೧. ಇಹಲೋಕದಲ್ಲಿ ಅನುಭವಿಸಬಹುದಾದ ಧರ್ಮಾರ್ಥಕಾಮಗಳೆಂಬ ತ್ರಿವರ್ಗದಲ್ಲಿ ಪರಸ್ಪರ ಬಾಧೆಯುಂಟಾಗುವಂತೆ ವರ್ತಿಸಬಾರದು. (ಅಂದರೆ ಧರ್ಮಕ್ಕೆ ವಿರೋಧಿಯಲ್ಲದ ಅರ್ಥಕಾಮಗಳಿಂದಲೂ, ಧರ್ಮಾರ್ಥಗಳಿಗೆ ವಿರೋಧವಲ್ಲದ ಕಾಮದಿಂದಲೂ ವರ್ತಿಸಬೇಕೆಂದು ತಾತ್ಪರ್ಯ) ತನ್ನ ದೇಹ ಮತ್ತು ವಯಸ್ಸು, ಬುದ್ಧಿಕುಶಲತೆ, ಮತ್ತು ವಂಶ, ಮುಖ್ಯವಾದ ಕೆಲಸ ಇವಕ್ಕೆ ತಕ್ಕ ವೇಷವನ್ನು ಧರಿಸಬೇಕು. (ಅಂದರೆ ಅಂಗಹೀನರೂ, ಕುರೂಪಿಯೂ ಆಗಿರುವವರು ಸುರೂಪಿಯ ವೇಷವನ್ನು ಧರಿಸಬಾರದು. ಬಾಲ್ಯವೇ ಮೊದಲಾದ ವಯೋಧರ್ಮಕ್ಕೆ ವಿರುದ್ಧವಾದ ವೇಷವನ್ನೂ ಹೊಂದಬಾರದು. ಮತ್ತು ಕುಶಲಬುದ್ಧಿಯುಳ್ಳವನು ಜಡನ ವೇಷವನ್ನೂ ಸದ್ವಂಶದಲ್ಲಿ ಹುಟ್ಟಿದವನು ವ್ರಾತ್ಯನ ವೇಷವನ್ನೂ, ತಾನು ಮಾಡುವ ವ್ಯಾಪಾರಕ್ಕೆ ವಿರುದ್ಧವಾದ ವೇಷವನ್ನೂ ಸಹ ಆಶ್ರಯಿಸಬಾರದೆಂದು ತಾತ್ಪರ್ಯ.)

೬೨-೬೩. ಸ್ನಾನಮಾಡಿದೊಡನೆಯೇ ಮಡಿಯಾದ ವಸ್ತ್ರಗಳನ್ನೂ, ರುಮಾಲನ್ನೂ ಧರಿಸಬೇಕು. ಚಂದನಾದಿಗಳಿಂದ ಅಂಗಗಳನ್ನು ಲೇಪಿಸಿ ಬಿಳುಪಾದ ಹೂವನ್ನು ಮುಡಿಯಬೇಕು. ಚಿನ್ನವೇ ಮೊದಲಾದ ಆಭರಣಗಳನ್ನು ಅವುಗಳಿಗೆ ಶುದ್ಧಿಸಂಸ್ಕಾರವಿಲ್ಲದಿರುವಾಗ ಧರಿಸಬಾರದು.

1 ಇಲ್ಲಿ ತೇಜೋಧಿಕಾಸ್ಸ್ಮೃತಾಃ ಎಂದು ಪಾಠವಿರಬೇಕು.

ನಿರಾಶನಸ್ಯ ಸುಪ್ತಸ್ಯ ಶಯಾನಸ್ಯ ತಥೈವ ಚ ।
ತಥಾ ಭುಕ್ತವತೋ ರಾಮ ಸ್ನಾತಸ್ಯಾಭೂಷಿತಸ್ಯ ಚ ॥ ೬೪ ॥

ಯಾತ್ರಾ ಯುದ್ಧೋತ್ಸುಕಸ್ಯಾಪಿ ಶ್ಮಶ್ರುಕರ್ಮ ವಿವರ್ಜಯೇತ್ ।
ವೈಷ್ಣವಂ ವಾರುಣಂ ತ್ವಾಷ್ಟ್ರಂ ಸಾವಿತ್ರಂ ವಾಸವಂ ತಥಾ ॥ ೬೫ ॥

ವಾಯವ್ಯಮಿಂದ್ರಿಕಂ ಪೌಷ್ಣಂ ಶಾಕ್ರಮಾಶ್ವಿನಮೇವ ಚ ।
ಮೈತ್ರಾದಿತ್ಯೇ ತಥಾಪುಷ್ಯಃ ಶಂಖಚಕ್ರಗಣಂ ಭವೇತ್ ॥ ೬೬ ॥

ನಕ್ಷತ್ರಾಣಾಮಥೈತೇಷಾಂ ಮುಹೂರ್ತಾಶ್ಚ ಹಿತಪ್ರದಾಃ ।
ಅರ್ಕಾರ್ಕಿಭೌಮವಾರಾಶ್ಚ ರಿಕ್ತಾಶ್ಚ ತಿಥಯಸ್ತಥಾ ॥ ೬೭ ॥

ಪ್ರತಿಪಚ್ಚ ತಥಾ ಷಷ್ಠೀ ವರ್ಜಯೇತ್ ಕ್ಷೌರಕರ್ಮಣಿ ।
ವರ್ಜಯೇಜ್ಜನ್ಮನಕ್ಷತ್ರಂ ನಾನುಕೂಲಂ ತಥೈವ ಚ ॥ ೬೮ ॥

ಜನ್ಮನಕ್ಷತ್ರಗೇ ಸೌಮ್ಯೇ ಶಿರಃಸ್ನಾತೇನ ಯತ್ನತಃ ।
ಪೂಜಾ ಸೋಮಸ್ಯ ಕರ್ತವ್ಯಾ ನಕ್ಷತ್ರಸ್ಯ ತಥಾತ್ಮನಃ ॥ ೬೯ ॥

---

೬೪-೬೫. ವ್ರತನಿಯಮದಿಂದ ಉಪವಾಸವಿರುವವನಿಗೂ, ಮಲಗಿರುವಾಗಲೂ, ನಿದ್ದೆಮಾಡುವಾಗಲೂ, ಊಟಮಾಡಿದ ಮೇಲೆಯೂ, ಸ್ನಾನಮಾಡಿದ ನಂತರವೂ, ಯಾವ ಭೂಷಣಗಳೂ ಇಲ್ಲದಿರುವಾಗಲೂ, ಯಾತ್ರೆಗೆ ಹೊರಡುವಾಗಲೂ, ಯುದ್ಧಕ್ಕೆ ಹೊರಡುವಾಗಲೂ ಸಹ ಕ್ಷೌರವು ಪ್ರಶಸ್ತವಲ್ಲ.

೬೬. ಶ್ರವಣ, ಶತಭಿಷೆ, ಚಿತ್ತಾ, ಹಸ್ತ, ಧನಿಷ್ಠಾ, ಸ್ವಾತಿ, ರೇವತಿ, ಜ್ಯೇಷ್ಠ, ಅಶ್ವಿನಿ, ಅನೂರಾಧಾ, ಪುನರ್ವಸು, ಪುಷ್ಯ ಈ ನಕ್ಷತ್ರಗಳೂ ಇವುಗಳ ಮುಹೂರ್ತಗಳೂ ಸಹ ಕ್ಷೌರಕ್ಕೆ ಪ್ರಶಸ್ತವಾಗುತ್ತವೆ.

೬೭-೬೯. ಭಾನುವಾರ, ಶನಿವಾರ, ಮಂಗಲವಾರಗಳನ್ನೂ, ರಿಕ್ತತಿಥಿಗಳನ್ನೂ, ಪ್ರಥಮೆ, ಷಷ್ಠೀ ಈ ತಿಥಿಗಳನ್ನೂ ಸಹ ಕ್ಷೌರಕರ್ಮದಲ್ಲಿ ವರ್ಜಿಸಬೇಕು. ಮತ್ತು ಜನ್ಮನಕ್ಷತ್ರವನ್ನೂ ತ್ಯಜಿಸಬೇಕು. ಚಂದ್ರನು ಜನ್ಮನಕ್ಷತ್ರಕ್ಕೆ ಬಂದಲ್ಲಿ ಶಿರಃಸ್ನಾನ ಮಾಡಿ ಯತ್ನಪೂರ್ವಕವಾಗಿ ಚಂದ್ರನನ್ನು ಪೂಜಿಸಬೇಕು. ತನ್ನ ನಕ್ಷತ್ರಕ್ಕೂ ಪೂಜಾದಿಗಳನ್ನು ಮಾಡಬೇಕು.

ಶ್ರಾದ್ಧಂ ಕುರ್ಯಾತ್ಪ್ರಯತ್ನೇನ ವಹ್ನಿಬ್ರಾಹ್ಮಣಪೂಜನಂ ।
ವಾಹನಾಯುಧ ಛತ್ರಾದ್ಯಂ ಪೂಜನೀಯಂ ಪ್ರಯತ್ನತಃ ॥ ೭೦ ॥

ಸುರಾಣಾಮರ್ಚನಂ ಕಾರ್ಯಂ ಕೇಶವಸ್ಯ ವಿಶೇಷತಃ ।
ಸಮಂ ಸ್ವಲಂಕೃತಸ್ತಿಷ್ಠೇಚ್ಛಿರಸ್ನಾತಶ್ಚ ಮಾನವಃ ॥ ೭೧ ॥

ನಿರ್ಮಲಾನಿ ಚ ಕಾರ್ಯಾಣಿ ದಂತಕೇಶನಖಾನಿ ಚ ।
ಅಷ್ಟಮೀಂ ಚ ತಥಾ ಷಷ್ಠೀಂ ನವಮೀಂ ಚ ಚತುರ್ದಶೀಂ ॥ ೭೨ ॥

ಶಿರೋಭ್ಯಂಗಂ ನ ಕುರ್ವೀತ ಪರ್ವಸಂಧೌ ತಥೈವ ಚ ।
ತಥೈವಾಮಲಕಸ್ನಾನಂ ಸಪ್ತಮೀಷು ವಿವರ್ಜಯೇತ್ ॥ ೭೩ ॥

ವಿನಾ ತು ಸತತಂ ಸ್ನಾನಂ ನ ಸ್ನಾಯಾದ್ದಶಮೀಷು ಚ ।
ಅಮಾವಾಸ್ಯಾಂ ಸುರಾರ್ಚಾಸು ನವವಸ್ತ್ರಂ ನ ಧಾರಯೇತ್ ॥ ೭೪ ॥

---

೭೦-೭೧. ಶ್ರಾದ್ಧವನ್ನು ಪ್ರಯತ್ನದಿಂದಾದರೂ ಮಾಡಬೇಕು. ಅದರಲ್ಲಿ ಅಗ್ನಿ ಮತ್ತು ಬ್ರಾಹ್ಮಣರ ಪೂಜೆಯನ್ನೂ ಮಾಡಲೇಬೇಕು. ವಾಹನಗಳು, ಆಯುಧಗಳು, ಛತ್ರಿ ಮುಂತಾದವು ಇವನ್ನೂ ಸಹ ಪ್ರಯತ್ನದಿಂದ ಪೂಜಿಸಬೇಕು. (ಇದು ಕ್ಷತ್ರಿಯ ಮಾತ್ರ ವಿಷಯ) ದೇವತೆಗಳ ಪೂಜೆಯನ್ನೂ, ಅದರಲ್ಲಿಯೂ ಕೇಶವನ ಪೂಜೆಯನ್ನು ವಿಶೇಷ ರೂಪದಿಂದಲೂ ಮಾಡಬೇಕು. ಯಾವಾಗಲೂ ಶಿರಸ್ನಾನಾದಿಗಳಿಂದ ಶುದ್ಧನಾಗಿ ಅಲಂಕಾರಭೂಷಿತನಾಗಿಯೇ ಇರಬೇಕು.

೭೨-೭೩. ಹಲ್ಲುಗಳನ್ನೂ, ಕೇಶಗಳನ್ನೂ, ಉಗುರುಗಳನ್ನೂ ಯಾವಾಗಲೂ ಸ್ವಚ್ಛವಾಗಿ ಇಟ್ಟುಕೊಂಡಿರಬೇಕು. ಅಷ್ಟಮಿ, ಷಷ್ಠೀ, ನವಮಿ, ಚತುರ್ದಶಿ ತಿಥಿಗಳಲ್ಲಿ ಅಭ್ಯಂಗಸ್ನಾನವನ್ನು ಮಾಡಕೂಡದು. ಪರ್ವಕಾಲದ ಸಂಧಿಯಲ್ಲೂ ಮಾಡಕೂಡದು. ಮತ್ತು ಆಮಲಕಸ್ನಾನವನ್ನು (ಭೃಂಗಾಮಲಕ) ಸಪ್ತಮಿಯಲ್ಲಿಯೂ ಮಾಡಬಾರದು.

೭೪. ನಿತ್ಯಸ್ನಾನಹೊರತು ಅಭ್ಯಂಗವೇ ಮೊದಲಾದ ನೈಮಿತ್ತಿಕಸ್ನಾನವನ್ನು ದಶಮಿಯಲ್ಲಿಯೂ ಮಾಡಬಾರದು, ಅಮಾವಾಸ್ಯಾದಿನದಲ್ಲಿಯೂ, ದೇವಾರ್ಚನೆಯ ಕಾಲದಲ್ಲಿಯೂ ಸಹ ಹೊಸವಸ್ತ್ರವನ್ನು ಧರಿಸಬಾರದು. ಮಂಗಳವಾರದಲ್ಲಿಯೂ ಧರಿಸಕೂಡದು. ಆದರೆ ರಾತ್ರಿಯಲ್ಲಿ ದೋಷವಿಲ್ಲ.

ನ ಚ ಭೌಮದಿನೇ ರಾಮ ತೇಷ್ವನಕ್ಷತ್ರೇಷು ಚಾಪ್ಯಥ ।
ಸಾವಿತ್ರಂ ರೌಹಿಣಂ ಮೈತ್ರಮಾದಿತ್ಯಂ ತಿಷ್ಯಮಾಶ್ವಿನಂ ॥ ೭೫ ॥

ಉತ್ತರಾತ್ರಿತಯಂ ಚಿತ್ರಾ ವಾಯವ್ಯಂ ವಸುದೈವತಂ ।
ಇಂದ್ರಾಗ್ನಿದೈವತಂ ಪೌಷ್ಣಂ ತಾನಿ ಶಸ್ತಾನಿ ನಿರ್ದಿಶೇತ್ ॥ ೭೬ ॥

ನಕ್ಷತ್ರಾಣಾಮಥೈತೇಷಾಂ ಮುಹೂರ್ತಾಶ್ಚ ಹಿತಪ್ರದಾಃ ।
ಪರದ್ರೋಹಂ ತಥಾ ಹಿಂಸಾಂ ಪ್ರಯತ್ನೇನ ವಿವರ್ಜಯೇತ್ ॥ ೭೭ ॥

ಕೇಶಗ್ರಹಾನ್ಪ್ರಹಾರಾಂಶ್ಚ ಶಿರಸ್ಯೇತಾಂ ತಥೈವ ಚ ।
ದೂರಾದಾವಸಥಾನ್ಮೂತ್ರಂ ಪುರೀಷಂ ಚ ಸಮುತ್ಸೃಜೇತ್ ॥ ೭೮ ॥

ಪಾದಪ್ರಕ್ಷಾಲನಂ ಚೈವ ಭಿನ್ನಭಾಂಡಾದಿಕಂ ಚ ಯತ್ ।
ಸರ್ವಮೇತತ್ತ್ಯಜೇತ್ಪ್ರಾಜ್ಞೋ ಯೇನ ಸ್ಯಾದರಿಮರ್ದನಂ ॥ ೭೯ ॥

---

೭೫–೭೬. ಹಸ್ತ, ರೋಹಿಣೀ, ಅನೂರಾಧಾ, ಪುನರ್ವಸು, ಪುಷ್ಯ, ಅಶ್ವಿನೀ, ಉತ್ತರಾಭಾದ್ರಾ, ಉತ್ತರಾಷಾಢಾ, ಉತ್ತರಫಲ್ಗುನೀ, ಚಿತ್ರಾ, ಸ್ವಾತಿ, ಧನಿಷ್ಠೆ, ವಿಶಾಖೆ, ರೇವತಿ, ಈ ನಕ್ಷತ್ರಗಳೂ ಇವುಗಳ ಮುಹೂರ್ತಗಳೂ ಸಹ ನೂತನ ವಸ್ತ್ರಧಾರಣಕ್ಕೆ ಪ್ರಶಸ್ತಗಳು.

೭೭-೭೯. ಪರದ್ರೋಹವನ್ನೂ ಪರಹಿಂಸೆಯನ್ನೂ ಪ್ರಯತ್ನಪಟ್ಟು ತ್ಯಜಿಸಬೇಕು. ಹಾಗೆಯೇ ಮತ್ತೊಬ್ಬನೊಡನೆ ಕೇಶಗ್ರಹಣಪೂರ್ವಕವಾದ ಕಲಹವನ್ನೂ ತಲೆಯಮೇಲೆ ಪ್ರಹರಿಸುವಿಕೆಯನ್ನೂ ಬಿಡಬೇಕು. ವಾಸಗೃಹಕ್ಕೆ ದೂರದಲ್ಲಿಯೇ ಮಲಮೂತ್ರಾದಿಗಳನ್ನು ವಿಸರ್ಜಿಸಬೇಕು. ಮನೆಯೊಳಗೆ ಕಾಲುಗಳನ್ನು ತೊಳೆಯುವಿಕೆ, ಒಡೆದುಹೋದ ಮಡಕೆಗಳನ್ನು ಉಪಯೋಗಿಸುವುದು ಇವನ್ನು ಪ್ರಾಜ್ಞನಾದವನು ಮಾಡಬಾರದು. ಇದನ್ನು ಪರಿತ್ಯಾಗಮಾಡುವುದರಿಂದ ಮನುಷ್ಯನು ಶತ್ರುನಾಶ ಹೊಂದಿ ಸುಖಿಯಾಗುವನು.

ತಂಡುಲೋದಕನಿಕ್ಷೇಪಂ ವಿಪರೀತಂ ತು ಕಾರಯೇತ್ ।
ತಥೈಕಮನಸಾ ಕಾರ್ಯಂ ದೇವತಾನಾಂ ಚ ಪೂಜನಂ ॥ ೮೦ ॥

ವಹ್ನಿಸಂಪೂಜನಂ ಚೈವ ನ ಚಾಸ್ನಾನೇನ ಭಾರ್ಗವ ।
ಮಾಲ್ಯಾನುಲೇಪನಾದೀನಿ ನ ಪ್ರಪದ್ಯಾತ್ತು ಕಸ್ಯಚಿತ್ ॥ ೮೧ ॥

ಅನ್ಯೇ ಚ ದೇವತಾ ವಿಪ್ರಗುರೂಣಾಂ ಭೃಗುನಂದನ ।
ಕೋವಿದಾರಗಣಾಃ ಶಾಕಂ ಚತುರ್ಥೀ ಪಿಪ್ಪಲೀ ತಥಾ ॥ ೮೨ ॥

ವರ್ಜಯೇ............[1]ನ್ಮಾಂಸಂ ಸುಖಾರ್ಥೀ ಸರ್ವಮೇವ ತು ।
ರಾಜದ್ವಿಷ್ಟಂ ನ ಕರ್ತವ್ಯಂ ವಿರೋಧಂ ಚ ಮಹಾಜನೈಃ ॥ ೮೩ ॥

ಶುಷ್ಕವೈರಂ ವಿವಾದಂ ಚ ಪ್ರಯತ್ನೇನ ವಿವರ್ಜಯೇತ್ ।
ನ ವಸೇಚ್ಚ ತಥಾವಾಸಂ ವಾಸ್ತುವಿದ್ಯಾವಿಗರ್ಹಿತಂ ॥ ೮೪ ॥

---

೮೦–೮೧. ಅಕ್ಕಿ, ನೀರು, ಧನಾದಿಗಳ ನಿಕ್ಷೇಪ ಇವನ್ನು ಮೇಲೆ ಹೇಳಿದುದಕ್ಕೆ ವ್ಯತ್ಯಸ್ತವಾಗಿ ಮನೆಯೊಳಗೇ ಇಡಬೇಕು. ದೇವತೆಗಳ ಪೂಜಾದಿಗಳನ್ನು ಏಕಮನಸ್ಕತೆಯಿಂದ ನಡೆಸಬೇಕು. ಮತ್ತು ದೇವಪೂಜಾ, ಅಗ್ನಿಕಾರ್ಯ ಇವನ್ನು ಸ್ನಾನಮಾಡದೆ ಮಾಡಬಾರದು.

೮೨. ಹೂವು, ಗಂಧ ಇತ್ಯಾದಿಗಳನ್ನು ದೇವತೆಗಳ ಮತ್ತು ಬ್ರಾಹ್ಮಣರ ಮತ್ತು ಗುರುಗಳ ಪೂಜೆಗಾಗಿ ಉಪಯೋಗಿಸಿದುದನ್ನು ಹೊರತು ಮತ್ತಾರಿಂದಲೂ ತೆಗೆದು ತಾನು ಉಪಯೋಗಿಸಬಾರದು. (ಅಂದರೆ ದೇವತಾದಿಗಳ ಪೂಜೆಯಿಂದ ಲಬ್ಧವಾದುದನ್ನೇ ತೆಗೆದುಕೊಳ್ಳಬೇಕೇಹೊರತು ಇತರರಿಂದ ಕೊಡಲ್ಪಟ್ಟ ಗಂಧಾದಿಗಳನ್ನು ತೆಗೆದುಕೊಳ್ಳಬಾರದೆಂದು ತಾತ್ಪರ್ಯ). ಕಂಚುವಾಳವೇ ಮೊದಲಾದ ಹೂವುಗಳು, ಶಾಕಗಳು, ಹಿಪ್ಪಲಿ ಇತ್ಯಾದಿಗಳನ್ನು ವರ್ಜಿಸಬೇಕು.

೮೩–೮೪. ರಾಜನಿಗೆ ಅಪ್ರೀತಿಯುಂಟಾಗುವ ಯಾವ ಕಾರ್ಯವನ್ನೂ ಮಾಡಬಾರದು. ದೊಡ್ಡ ಜನಸಮೂಹದೊಡನೆ ವಿರೋಧವನ್ನೂ ಹೊಂದಬಾರದು. ನಿಷ್ಫಲವಾದ ವೈರ ಮತ್ತು ವಿವಾದಗಳನ್ನು ಸರ್ವಪ್ರಯತ್ನದಿಂದಲೂ ಬಿಡಬೇಕು. ವಾಸ್ತುಶಾಸ್ತ್ರಕ್ಕೆ ವಿರುದ್ಧವಾಗಿ ಕಟ್ಟಲ್ಪಟ್ಟಿರುವ ಮನೆಯಲ್ಲಿ ವಾಸಮಾಡಬಾರದು. (ಬ್ರಾಹ್ಮಣಾದಿ ವರ್ಣಗಳಿಗೆ ತಕ್ಕಂತೆ ಆಯವ್ಯವಸ್ಥೆಯನ್ನೂ ಆಕಾರವ್ಯವಸ್ಥೆಯನ್ನೂ ವಾಸ್ತುಶಾಸ್ತ್ರದಲ್ಲಿ ಹೇಳಲಾಗಿದೆ.)

---

1 ಇಲ್ಲಿ ಮೂಲದಲ್ಲಿ ಶ್ಲೋಕವು ಸ್ಖಲಿತವಾಗಿದೆ.

ಅಗಾರಾದಾಖುಘಾತಾಚ್ಚ ಪರೋಚ್ಛಿಷ್ಟಾಂ ತಥೈವ ಚ ।
ಊಷರಾಚ್ಚೈವ ವಲ್ಮೀಕಾನ್ಮೃದಂ ಶೌಚೇ ವಿವರ್ಜಯೇತ್ ॥ ೮೫ ॥

ಯೇನೇಚ್ಛೇದ್ವಿಪುಲಾಂ ಪ್ರೀತಿಂ ತೇನ ಸಾರ್ಥಮರಿಂದಮ ।
ನ ಕುರ್ಯಾದರ್ಥಸಂಬಂಧಂ ದಾರಸಂದರ್ಶನಂ ತಥಾ ॥ ೮೬ ॥

ಆತ್ಮಾಭಿಷ್ಟವನಂ ನಿಂದಾಂ ಪರಸ್ಯ ಚ ವಿವರ್ಜಯೇತ್ ।
ದೃಢಭಕ್ತೋ ಭವೇನ್ನಿತ್ಯಂ ಕೃತಜ್ಞಶ್ಚ ವಿಶೇಷತಃ ॥ ೮೭ ॥

ಇಂದ್ರಿಯಾಣಾಂ ಜಯೇ ಯೋಗಮಾತಿಷ್ಠೇಚ್ಚ ಸದಾ ನರಃ ।
ಇಂದ್ರಿಯಾಣಾಂ ಜಯಾಚ್ಚೈವ ಲೋಕಯೋಃ ಸುಖಮಾಪ್ನುಯಾತ್ ॥

ಅಭಿಗತ್ವಾ ತು ಧರ್ಮಜ್ಞೋ ಯೋಗಕ್ಷೇಮಾರ್ಥಮೀಶ್ವರಂ ।
ಗೃಹಂ ಪ್ರವಿಶ್ಯ ಕುರ್ವೀತ ಸ್ವಾಧ್ಯಾಯಂ ಸತತಂ ಬುಧಃ ॥ ೮೯ ॥

---

೮೫–೮೬. ಮನೆಯ ಮತ್ತು ಇಲಿಯ ಬಿಲದ ಮೃತ್ತಿಕೆಯನ್ನೂ, ಮತ್ತೊಬ್ಬರು ಉಪಯೋಗಿಸಿ ಉಳಿದಿರುವ ಮೃತ್ತಿಕೆಯನ್ನೂ, ಚೌಳುನೆಲದ ಮಣ್ಣನ್ನೂ, ಹುತ್ತದ ಮಣ್ಣನ್ನೂ ಸಹ ಶೌಚಕ್ಕೆ ಉಪಯೋಗಿಸಬಾರದು. ಯಾವನೊಡನೆ ದೃಢವಾದ ಪ್ರೀತಿಸಂಬಂಧವನ್ನು ಅಪೇಕ್ಷಿಸುತ್ತಾನೆಯೋ ಅವನೊಡನೆ (ಲೇವಾದೇವಿ ಮೊದಲಾದ) ಅರ್ಥಸಂಬಂಧವನ್ನು ಮಾಡಬಾರದು, ಅವರ ಪತ್ನಿಯರ ದರ್ಶನಾದಿಗಳನ್ನೂ ಮಾಡಬಾರದು.

೮೭–೮೮. ತನ್ನನ್ನು ತಾನೇ ಸ್ತೋತ್ರಮಾಡಿಕೊಳ್ಳುವದನ್ನೂ ಮತ್ತೊಬ್ಬರನ್ನು ನಿಂದಿಸುವುದನ್ನೂ ಬಿಡಬೇಕು. ಉಪಕಾರಿಗಳಲ್ಲಿ ಕೃತಜ್ಞನಾಗಿಯೂ, ಸ್ವಾಮಿಯಲ್ಲಿ ದೃಢವಾದ ಭಕ್ತಿಯುಳ್ಳವನಾಗಿಯೂ ಇರಬೇಕು ಮನುಷ್ಯನಾದವನು ಇಂದ್ರಿಯಗಳನ್ನು ಜಯಿಸುವ ವಿಷಯದಲ್ಲಿ ಯಾವಾಗಲೂ ಅಭ್ಯಾಸಹೊಂದುತ್ತಿರಬೇಕು. ಏತಕ್ಕೆಂದರೆ ಇಂದ್ರಿಯಗಳ ಜಯವೇ ಇವನ ಲೋಕದ್ವಯದ ಸುಖಕ್ಕೂ ಕಾರಣವಾದುದು.

೮೯–೯೦. ಧರ್ಮದ ತತ್ತ್ವವನ್ನು ತಿಳಿದು ಆದರಲ್ಲಿ ಆದರಹೊಂದಿರುವ ಮನುಷ್ಯನು ಪ್ರಾತಃಕಾಲದ ಕೃತ್ಯಗಳನ್ನು ಮುಗಿಸಿಕೊಂಡು ಸ್ನಾನಾದಿಗಳನ್ನು ಮಾಡಿ ಮನೆಗೆ ಬಂದು ತನ್ನ ಯೋಗಕ್ಷೇಮಕ್ಕಾಗಿ ಭಗವಂತನನ್ನು ಅಭಿಗಮನವೆಂಬ

ಅರ್ಥಲಾಭೇಽಪಿ ಮಹತಿ ಸ್ವಾಧ್ಯಾಯಂ ನ ಸಮುತ್ಸೃಜೇತ್ ।
ಕುಲಾನ್ಯಕುಲತಾಂ ಯಾಂತಿ ಸ್ವಾಧ್ಯಾಯಸ್ಯ ವಿವರ್ಜನಾತ್ ॥ ೯೦ ॥

ಯಸ್ತು ವರ್ಷಶತಂ ಪೂರ್ಣಂ ತ್ವರಣ್ಯೇ ತಪತೇ ತಪಃ ।
ಋಚಮೇಕಾಂ ಚ ಯೋಽಧ್ಯೇತಿ ಸಮೌ ಸ್ಯಾತಾಂ ನ ಚಾಧಿಕಃ ।
ಸ್ವಾಧ್ಯಾಯಾನಂತರಂ ಸ್ನಾತಃ ಕೃತಜಪ್ಯಃ ಸಮಾಹಿತಃ ॥ ೯೧ ॥

ಸಂಪೂಜನಂ ದೇವವರಸ್ಯ ಕುರ್ಯಾತ್ತಸ್ಯಾಪ್ರಮೇಯಸ್ಯ ಜನಾರ್ದನಸ್ಯ ।
ಸಂಪೂಜನಾದ್ಯಸ್ಯ ಸಮಸ್ತಯಜ್ಞೈಃ ಕೃತೈಃ ಫಲಂ ಶೀಘ್ರಮವಾಪ್ನುವಂತಿ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಆಚಾರಾಧ್ಯಾಯೋ ನಾಮೈಕೋನ ನವತಿತಮೋಽಧ್ಯಾಯಃ

---

ಪ್ರಾತಃಕಾಲದ ಆರಾಧನದಿಂದ ಪೂಜಿಸಿ ಅನಂತರ ಸ್ವಾಧ್ಯಾಯಕಾಲದಲ್ಲಿ ವೇದಾಧ್ಯಯನವನ್ನು ತಪ್ಪದೆ ಮಾಡಬೇಕು. ಹೆಚ್ಚಾದ ಅರ್ಥಸಮೃದ್ಧಿ ಇದ್ದರೂ ವೇದಾಧ್ಯಯನವನ್ನು ಮಾತ್ರ ಬಿಡಬಾರದು. ವೇದಾಧ್ಯಯನವನ್ನು ಪರಿತ್ಯಾಗ ಮಾಡಿದುದೇ ಆದರೆ ಸತ್ಕುಲಗಳೂ ಕೂಡ ದುಷ್ಕುಲಗಳಾಗಿ ಪರಿಣಮಿಸುತ್ತವೆ.

೯೧-೯೩. ಯಾವನು ನೂರುವರ್ಷಪರ್ಯಂತ ಪೂರ್ತಿಯಾಗಿ ಅರಣ್ಯದಲ್ಲಿದ್ದು ತಪಸ್ಸಿನಲ್ಲಿ ನಿರತನಾಗುವನೋ ಒಂದೇ ಒಂದು ಋಕ್ಕನ್ನು ಯಥಾವಿಧಿಯಾಗಿ ಮನೆಯಲ್ಲಿದ್ದುಕೊಂಡೇ ಯಾವನು ಅಧ್ಯಯನಮಾಡುತ್ತಾನೆಯೋ ಅವರಿಬ್ಬರೂ ಸಮವಾಗುತ್ತಾರೆಯೋ ಹೊರತು ತಪಸ್ವಿಯು ಅಧಿಕನಾಗಲಾರನು. ಹೀಗೆ ಅಧ್ಯಯನವನ್ನು ಮಾಡಿದನಂತರ ಮಾಧ್ಯಾಹಿಕ ಸ್ನಾನಮಾಡಿ ಶಾಂತಮನಸ್ಕತೆಯಿಂದ ಜಪಾದಿಗಳನ್ನೂ ಮಾಡಿ ಮಹಾಮಹಿಮನಾದ ಜನಾರ್ದನನನ್ನು ಆರಾಧಿಸಬೇಕು. (ಇದು ಇಜ್ಯಾರಾಧನವೆಂದು ವ್ಯವಹರಿಸಲ್ಪಡುತ್ತದೆ). ಈ ರೀತಿಯಾಗಿ ಭಗವಂತನನ್ನು ಪೂಜಿಸಿದುದೇ ಆದರೆ ಎಲ್ಲಾ ಮಹಾಯಜ್ಞಗಳ ಆಚರಣದಿಂದ ಲಭಿಸಬಹುದಾದ ಫಲವನ್ನೂ ಸಹ ಈ ಆರಾಧನದಿಂದ ಜಾಗ್ರತೆಯಾಗಿಯೇ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಆಚಾರಾಧ್ಯಾಯವೆಂಬ ಎಂಭತ್ತೊಂಭತ್ತನೆಯ ಅಧ್ಯಾಯವು ಮುಗಿದಿದೆ.

## ಎಂಭತ್ತೊಂಭತ್ತನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ವರ್ಣಸಾಮಾನ್ಯಕ್ಕೂ ವರ್ಣವಿಶೇಷಗಳಿಗೂ ಯಥಾರ್ಹವಾಗಿ ಅನ್ವಯಿಸುವ ಆಚಾರವಿಶೇಷಗಳನ್ನು ನಿರೂಪಿಸಿರುವರು. ಮಾಲ್ಯಧಾರಣ, ಪ್ರಯಾಣ, ಅಭ್ಯಂಗ, ನೂತನವಸ್ತ್ರಧಾರಣ ಇತ್ಯಾದಿ ಆಚಾರಗಳು ವಿಶದವಾಗಿ ಇಲ್ಲಿ ನಿರೂಪಿಸಲ್ಪಟ್ಟವೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ನವತಿತಮೋಽಧ್ಯಾಯಃ

॥ ಪುಷ್ಕರ ಉವಾಚ ॥

**ಸ್ವಾಚಾಂತಃ ಪ್ರಯತಃ ಸ್ನಾತಃ ಪ್ರವಿಶೇದ್ದೇವತಾಗೃಹಂ ।**
**ನಮಸ್ಕಾರಂ ತು ಕುರ್ವೀತ ತತ್ರ ಭಕ್ತ್ಯಾ ಸಮಾಹಿತಃ ॥ ೧ ॥**

**ಆಪೋಹಿಷ್ಠೇತಿ ತಿಸೃಭಿಃ ತತೋಽರ್ಘ್ಯಂ ವಿನಿವೇದಯೇತ್ ।**
**ಹಿರಣ್ಯವರ್ಣಾ ಇತಿ ಚ ಪಾದ್ಯಂ ಚ ತಿಸೃಭಿರ್ದ್ವಿಜಃ ॥ ೨ ॥**

**ಶನ್ನ ಆಪ ಇತ್ಯನೇನ ದೇಯಂ ಸೌದಾಮನಂ ಭವೇತ್ ।**
**ಇದಮಾಪಃ ಪ್ರವಹತ ಸ್ನಾನಮಂತ್ರಃ ಪ್ರಕೀರ್ತಿತಃ ॥ ೩ ॥**

---

### ತೊಂಭತ್ತನೆಯ ಅಧ್ಯಾಯ.

೧-೨. ಆಚಮನಸ್ನಾನಾದಿಗಳಿಂದ ಶುದ್ಧನಾಗಿ ದೇವತಾಗೃಹಕ್ಕೆ ಪ್ರವೇಶಿಸಬೇಕು. ಅಲ್ಲಿ ಭಕ್ತಿಯಿಂದಲೂ, ಶಾಂತಮನಸ್ಕತೆಯಿಂದಲೂ ನಮಸ್ಕರಿಸಬೇಕು. ಅನಂತರ ಆಪೋಹಿಷ್ಠಾ ಎಂಬ ಮೂರು ಮಂತ್ರಗಳಿಂದ ಅರ್ಘ್ಯವನ್ನು ಭಗವಂತನಲ್ಲಿ ಅರ್ಪಿಸಬೇಕು. ಹಿರಣ್ಯವರ್ಣಾ ಎಂಬ ಮೂರು ಋಕ್ಕುಗಳಿಂದ ಪಾದ್ಯವನ್ನು ಸಮರ್ಪಿಸಬೇಕು.

೩-೪. ಶನ್ನ ಆಪಃ ಎಂಬ ಮಂತ್ರದಿಂದ ಆಚಮನವನ್ನು ಅರ್ಪಿಸಬೇಕು. ಇದಮಾಪಃ ಪ್ರವಹತ ಎಂಬ ಮಂತ್ರವನ್ನು ಸ್ನಾನಕಾಲದಲ್ಲಿ ವಿನಿಯೋಗಿಸಬೇಕು.

ರಥೇ ಅಕ್ಷೇಷು ಚ ತಥಾ ಚತಸ್ರಸ್ತ್ವನುಲೇಪನೇ ।
ಯುವಾಸುವಾಸ ಇತಿ ಚ ಮಂತ್ರೋ ವಾಸಸ ಈರಿತಃ ॥ ೪ ॥

ಪುಷ್ಪಂ ಪುಷ್ಪವತೀತ್ಯೇವ ಧೂಪಂ ಧೂರಸಿ ಚಾಪ್ಯಥ ।
ತೇಜೋಸಿ ಶುಕ್ರಮಸಿ ದೀಪಂ ದದ್ಯಾದ್ವಿಚಕ್ಷಣಃ ॥ ೫ ॥

ದಧಿಕ್ರಾವ್ಣೋ ಇತಿ ತಥಾ ಮಧುಪರ್ಕಂ ನಿವೇದಯೇತ್ ।
ಹಿರಣ್ಯಗರ್ಭ ಇತ್ಯಷ್ಟೌ ಋಚಃ ಪ್ರೋಕ್ತಾ ನಿವೇದನೇ ॥ ೬ ॥

ಅನ್ನಸ್ಯ ಮನುಜಶ್ರೇಷ್ಠ ಪಾನಸ್ಯ ಚ ಸುಗಂಧಿನಃ ।
ಚಾಮರವ್ಯಜನೇ ಮಾತ್ರಾಂ ಛತ್ರಂ ಯಾನಾಸನೇ ತಥಾ ॥ ೭ ॥

ಯತ್ಕಿಂಚಿದೇವಮಾದಿಃ ಸ್ಯಾತ್ಸಾವಿತ್ರೇಣ ನಿವೇದಯೇತ್ ।
ಪೌರುಷಂ ಚ ಜಪೇತ್ಸೂಕ್ತಂ ತದೇವ ಜುಹುಯಾತ್ತಥಾ ॥ ೮ ॥

---

ರಥೇ, ಅಕ್ಷೇಷು ಎಂಬ ನಾಲ್ಕು ಋಕ್ಕುಗಳು ಗಂಧಾದಿಗಳ ಲೇಪನ ಕಾಲದಲ್ಲಿ ವಿನಿಯೋಗಿಸತಕ್ಕವುಗಳು. ಯುವಾಸುವಾಸಃ ಎಂಬ ಮಂತ್ರದಿಂದ ವಸ್ತ್ರವನ್ನು ಅರ್ಪಿಸಬೇಕು.

೫-೬. ಪುಷ್ಪವತೀ ಎಂಬ ಮಂತ್ರದಿಂದ ಪುಷ್ಪಗಳನ್ನೂ, ಧೂರಸಿ ಎಂಬ ಮಂತ್ರದಿಂದ ಧೂಪವನ್ನೂ, ತೇಜೋಸಿ, ಶುಕ್ರಮಸಿ ಎಂಬ ಮಂತ್ರಗಳಿಂದ ದೀಪವನ್ನೂ ಸಮರ್ಪಿಸಬೇಕು. ದಧಿಕ್ರಾವ್ಣಃ ಎಂಬ ಮಂತ್ರದಿಂದ ಮಧುಪರ್ಕವನ್ನು ಸಮರ್ಪಿಸಬೇಕು. ಹಿರಣ್ಯಗರ್ಭಃ ಎಂಬ ಎಂಟು ಋಕ್ಕುಗಳಿಂದ ನೈವೇದ್ಯವನ್ನು ಸಮರ್ಪಿಸಬೇಕು.

೭-೮. ಎಲೈ ನರಶ್ರೇಷ್ಠನೇ, ಅನ್ನ, ಪಾನೀಯ, ಸುಗಂಧಾದಿಗಳಾದ ಪುಷ್ಪಾದಿಗಳು, ಛತ್ರ, ಚಾಮರ, ಬೀಸಣಿಗೆ, ಮಾತ್ರಾದಾನಃ ಯಾನಗಳು, ಆಸನಗಳು ಇವನ್ನು ಸಮರ್ಪಿಸುವಾಗ ಸಾವಿತ್ರಮಂತ್ರವನ್ನೇ ಉಚ್ಚರಿಸಬೇಕು. ಇತರ ಉಪಚಾರಸಮರ್ಪಣ ಕಾಲದಲ್ಲಿಯೂ ಈ ಮಂತ್ರವನ್ನೇ ಉಪಯೋಗಿಸಬೇಕು. ಪುರುಷಸೂಕ್ತವನ್ನು ಜಪಿಸಬೇಕು. ಅದರಿಂದಲೇ ಹೋಮವನ್ನೂ ಮಾಡಬೇಕು.

ಅರ್ಚಾಭಾವೆ ತಥಾ ವೇದ್ಯಾಂ ಸ್ಥಲೇ ಪೂರ್ಣಘಟೇ ತಥಾ ।
ನದೀತೀರೇಽಥ ಕಮಲೇ ಕೇಶವಂ ಪೂಜಯೇನ್ನರಃ　　॥ ೯ ॥

ಸರ್ವಾಶುಭಾನಾಂ ಪರಿಘಾತಕಾರಿ
ಸಂಪೂಜನಂ ದೇವವರಸ್ಯ ವಿಷ್ಣೋಃ ।
ಕೃತ್ವಾನಘಾನ್ ಕ್ಷಿಪ್ರಮುಪೈಯಾತಿ
ಯತ್ರೈಕ್ಯತಾಂ ಯಾತಿ ಪಿತಾಮಹಸ್ಯ　　॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ
ದೇವಕರ್ಮಾಧ್ಯಾಯೋನಾಮ
ನವತಿತಮೋಽಧ್ಯಾಯಃ

---

೯–೧೦. ಪೂಜೆಗೆ ಅರ್ಹವಾದ ವಿಗ್ರಹವು ಇಲ್ಲದಿದ್ದಲ್ಲಿ ಪರಿಷ್ಕೃತವಾದ ಜಗಲಿಯಲ್ಲಿ ಜಲಪೂರ್ಣವಾದ ಕಲಶವನ್ನಿಟ್ಟು ಆ ಕಲಶದಲ್ಲಾಗಲಿ, ಅಥವಾ ಮಹಾನದಿಯ ತೀರದಲ್ಲಾಗಲಿ, ಕಮಲದಲ್ಲಾಗಲಿ ಕೇಶವನನ್ನು ಭಾವಿಸಿ ಪೂಜಿಸಬೇಕು. ದೇವತಾಶ್ರೇಷ್ಠನಾದ ವಿಷ್ಣುವನ್ನು ಈರೀತಿ ಪೂಜಿಸಿದಲ್ಲಿ ಆ ಪೂಜೆಯು ಎಲ್ಲಾ ಅಶುಭಗಳನ್ನೂ ಹೋಗಲಾಡಿಸುತ್ತದೆ. ನಿರ್ದೋಷಿಯಾಗಿ ಹೀಗೆ ಪೂಜೆ ಮಾಡಿದವನೂ ಸಹ ಜಾಗ್ರತೆಯಾಗಿ ಬ್ರಹ್ಮಭಾವನೆಯಿಂದ ಪರಿಶುದ್ಧನಾಗಿರುವ ಚತುರ್ಮುಖನ ಸಾಮ್ಯವನ್ನೇ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ದೇವಕರ್ಮಾಧ್ಯಾಯವೆಂಬ ತೊಂಭತ್ತನೆಯ ಅಧ್ಯಾಯವು ಮುಗಿದಿದೆ.



## ತೊಂಭತ್ತನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಪ್ರಸಕ್ತವಾದ ದೇವತಾರ್ಚನೆಯನ್ನು ನಿರೂಪಿಸಲು ಪೂಜಾ ಕಾಲದಲ್ಲಿ ಆಯಾಯ ಧೂಪದೀಪಾದಿ ಉಪಚಾರಗಳಿಗೆ ವಿನಿಯೋಗಿಸಲು ವಿಹಿತ ವಾಗಿರುವ ಮಂತ್ರಗಳನ್ನು ಸಂಗ್ರಹವಾಗಿ ನಿರೂಪಿಸಿರುತ್ತಾರೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕನವತಿತಮೋಽಧ್ಯಾಯಃ

**॥ ಪುಷ್ಕರ ಉವಾಚ ॥**

**ನಕ್ತಂ ಗೃಹೀತಮುದಕಂ ದೇವಕರ್ಮಣಿ ವರ್ಜಯೇತ್ ।**
**ಚಂದನಾಗರುಕರ್ಪೂರಂ ಮೃಗದರ್ಪಂ ತಥೈವ ಚ ॥ ೧ ॥**

**ಜಾತೀಫಲಂ ತಥಾ ದದ್ಯಾದನುಲೇಪಸ್ಯ ಕಾರಣಾತ್ ।**
**ಅತೋಽನ್ಯಂ ನೈವ ದಾತವ್ಯಂ ಕಿಂಚಿದೇವಾನುಲೇಪನಂ ॥ ೨ ॥**

**ದಾರಿದ್ರ್ಯಂ ಪದ್ಮಕಃ ಕುರ್ಯಾದಸ್ವಾಸ್ಥ್ಯಂ ರಕ್ತಚಂದನಂ ।**
**ಉಶೀರಶ್ಚ ತು ವಿಭ್ರಂಶಂ ಮನ್ಯೇ ಕುರ್ಯುರುಪದ್ರವಂ ॥ ೩ ॥**

---

### ತೊಂಭತ್ತೊಂದನೆಯ ಅಧ್ಯಾಯ.

೧–೨. ಮೊದಲಿನ ದಿನದ ರಾತ್ರಿಯಲ್ಲಿ ಸಂಗ್ರಹಿಸಿದ ಜಲವನ್ನು ದೇವ ಪೂಜೆಯಲ್ಲಿ ಉಪಯೋಗಿಸಕೂಡದು. ಶ್ರೀಗಂಧ, ಅಗುರು, ಪಚ್ಚಕರ್ಪೂರ, ಕಸ್ತೂರಿ ಮತ್ತು ಜಾಜೀಕಾಯಿ ಇವನ್ನೇ ಲೇಪನಾರ್ಹವಾದ ಗಂಧಕ್ಕೆ ಉಪಯೋಗಿಸಬೇಕು. ಇದನ್ನು ಬಿಟ್ಟು ಮತ್ತಾವುದನ್ನೂ ಲೇಪನಕ್ಕೆ ಉಪಯೋಗಿಸಲೇ ಕೂಡದು.

೩–೪. ಪದ್ಮದಿಂದ ಮಾಡಿದ ಚಂದನವು ದಾರಿದ್ರ್ಯವನ್ನುಂಟುಮಾಡುತ್ತದೆ. ರಕ್ತಚಂದನವು ಪೂಜಿಸುವವನಿಗೆ ಅಸ್ವಸ್ಥತೆಯನ್ನುಂಟುಮಾಡುತ್ತದೆ. ಲಾಮಂಚವು ಭ್ರಂಶವನ್ನೇ ಉಂಟುಮಾಡುತ್ತದೆ. ಆದುದರಿಂದ ಇವೆಲ್ಲವೂ ಉಪದ್ರವ ಕಾರಣಗಳೇ ಹೊರತು ಶ್ರೇಯಸ್ಕರವಲ್ಲ. ಕೊಳೆಯಾದ ವಸ್ತ್ರವನ್ನು ಹರಿಗೆ ಅರ್ಪಿಸಬಾರದು.

ನ ವಸ್ತ್ರಂ ಮಲಿನಂ ದೇಯಂ ನೀಲಂ ರಕ್ತಂ ತು ಯದ್ಭವೇತ್ ।
ತೌ ದತ್ವಾ ದೇವದೇವಾಯ ಶೋಕಮಾಪ್ನೋತ್ಯಸಂಶಯಂ ॥ ೪ ॥

ಕೃತ್ರಿಮಂ ತು ನ ದಾತವ್ಯಂ ತಥೈವಾಭರಣಂ ದ್ವಿಜ ।
ಪ್ರತಿರೂಪಕೃತಂ ದತ್ವಾ ಕ್ಷಿಪ್ರಂ ಪುಷ್ಟ್ಯಾ ವಿಯುಜ್ಯತೇ ॥ ೫ ॥

ಪುಷ್ಪಂ ಕಂಟಕಿಸಂಜಾತಂ ತಥಾ ಗಂಧವಿವರ್ಜಿತಂ ।
ಉಗ್ರಗಂಧಂ ನ ದಾತವ್ಯಂ ತ್ವನ್ಯದೇವಗೃಹೋದ್ಭವಂ ॥ ೬ ॥

ಶ್ಮಶಾನಚೈತ್ಯದ್ರುಮಜಂ ಭೂಮಾವಶನಿಪಾತಿತಂ ।
ಕಲಿಕಾ ನ ತು ದಾತವ್ಯಾ ದೇವದೇವಸ್ಯ ಚಕ್ರಿಣಃ ॥ ೭ ॥

ಶುಕ್ಲಾನ್ಯವರ್ಣಂ ಕುಸುಮಂ ನ ದೇಯಂ ಚ ತಥಾ ಭವೇತ್ ।
ಸುಗಂಧಿ ಶುಕ್ಲಂ ದೇಯಂ ಸ್ಯಾಜ್ಜಾತಂ ಕಂಟಕಿತೇ ದ್ರುಮೇ ॥ ೮ ॥

---

ಹಾಗೆಯೇ ಕಪ್ಪಾದ ಮತ್ತು ಕೆಂಪಾದ ವಸ್ತ್ರವನ್ನೂ ಸಮರ್ಪಿಸಬಾರದು. ಇಂತಹ ವಸ್ತ್ರಗಳನ್ನು ಸಮರ್ಪಿಸಿದಲ್ಲಿ ಅಂತಹವನು ದುಃಖವನ್ನೇ ಹೊಂದುತ್ತಾನೆ. ಇದರಲ್ಲಿ ಸಂದೇಹವಿಲ್ಲ.

೫-೬. ಒಳ್ಳೆಯ ಆಭರಣದಂತೆ ತೋರುವ ಕೃತ್ರಿಮವಾದ ಆಭರಣವನ್ನು ಹರಿಗೆ ಸಮರ್ಪಿಸಬಾರದು. ಹಾಗೆ ಅರ್ಪಿಸಿದುದೇ ಆದರೆ ಅದು ತನ್ನ ಪುಷ್ಟಿಗೆ ಕುಂದಕವನ್ನೇ ಉಂಟುಮಾಡುತ್ತದೆ ಮುಳ್ಳುಗಿಡಗಳಲ್ಲಿ ಬೆಳೆದ ಹೂವುಗಳನ್ನೂ ಮತ್ತು ವಾಸನೆ ಇಲ್ಲದಿರುವ ಹೂವುಗಳನ್ನೂ, ಕಟುತರವಾದ ವಾಸನೆಯುಳ್ಳ ಹೂವುಗಳನ್ನೂ ಪೂಜೆಮಾಡುವಾಗ ಹರಿಗೆ ಅರ್ಪಿಸಬಾರದು. ಮತ್ತು ಮತ್ತೊಂದು ದೇವಸ್ಥಾನದಲ್ಲಿ ಉಂಟಾದ ಹೂವುಗಳನ್ನು ತನ್ನ ಅರ್ಚಾಪೂಜೆಗೆ ಉಪಯೋಗಿಸಬಾರದು.

೭-೮. ಶ್ಮಶಾನ ಮತ್ತು ಬೌದ್ಧರ ವಿಹಾರ ಇಲ್ಲಿರುವ ಮರಗಳಿಂದ ಉಂಟಾದ ಹೂವುಗಳನ್ನು ಸಿಡಿಲು ಮುಂತಾದುದರಿಂದ ಭೂಮಿಯಲ್ಲಿ ಉದುರಿದ ಹೂವುಗಳನ್ನೂ ಸಮರ್ಪಿಸಕೂಡದು. ಮತ್ತು ಅರಳದಿರುವ ಮೊಗ್ಗನ್ನು ಚಕ್ರಪಾಣಿಯಾದ ಪ್ರಭುವಿಗೆ ಅರ್ಪಿಸಲೇ ಕೂಡದು. ಹಾಗೆಯೇ ಬಿಳಿಯ ಹೂವುಗಳನ್ನು ಹೊರತು ಇತರ ವರ್ಣದ ಹೂವುಗಳನ್ನೂ ಉಪಯೋಗಿಸಬಾರದು. ಬಿಳುಪಾದ ಹೂವು ಸುವಾಸನೆಯಾಗಿದ್ದಲ್ಲಿ ಅದು ಮುಳ್ಳುಗಿಡದಲ್ಲಿ ಬೆಳೆದಿದ್ದರೂ ಉಪಯೋಗಿಸಬಹುದು.

ದತ್ವಾ ಕಂಟಕಿಸಂಭೂತಂ ಕುಸುಮಂ ಪರಿಭೂಯತೇ ।
ಶುಕ್ಲಾನ್ಯವರ್ಣಂ ದಾತವ್ಯಂ ಕುಸುಮಂ ಕುಂಕುಮಸ್ಯ ಯತ್ ॥ ೯ ॥

ಪದ್ಮೋತ್ಪಲೇ ಚ ಧರ್ಮಜ್ಞ ತಥಾ ವೈ ಪೀತಯೂಥಿಕಾಂ ।
ತಥಾ ಚ ವನ್ಯಕಂ ದದ್ಯಾಚ್ಛತಕೇತಕಿಜಂ ಚ ಯತ್ ॥ ೧೦ ॥

ರಕ್ತಾಶೋಕಸ್ಯ ಕುಸುಮಮುತಸೀಕುಸುಮಂ ತಥಾ ।
ವೃಕ್ಷಾಯುರ್ವೇದವಿದ್ಭಿಶ್ಚ ಶುಕ್ಲಂ ರಕ್ತೀಕೃತಂ ಚ ಯತ್ ॥ ೧೧ ॥

ತದ್ರಕ್ತಮಪಿ ದಾತವ್ಯಂ ಬಿಲ್ವಪತ್ರಂ ತಥೈವ ಚ ।
ದೂರ್ವಾಗ್ರಂ ಚ ತಥಾ ದೇಯಂ ಪತ್ರಂ ಭೃಂಗಿರಜಸ್ಯ ತು ॥ ೧೨ ॥

ಪತ್ರಾಣಿ ಚ ಸುಗಂಧೀನಿ ತಥಾ ದೇಯಾನಿ ಚಕ್ರಿಣಃ ।
ಮಧ್ಯೇಽನ್ಯವರ್ಣೋ ಯಸ್ಯ ಸ್ಯಾಚ್ಛುಕ್ಲಸ್ಯ ಕುಸುಮಸ್ಯ ಚ ॥ ೧೩ ॥

---

೯–೧೦. ಮುಳ್ಳಿನ ಗಿಡಗಳ ಹೂವನ್ನು ಹರಿಗೆ ಅರ್ಪಿಸಿದಲ್ಲಿ ಅವನು ಅವಮಾನಕ್ಕೆ ಈಡಾಗುತ್ತಾನೆ. ಬಿಳಿಯ ಹೂವುಗಳಿಗಿಂತ ಬೇರೆಯಾದ ಹೂವುಗಳಲ್ಲಿ ಕುಂಕುಮದ ಹೂವನ್ನು ಮಾತ್ರ ಅರ್ಪಿಸಬಹುದು. ಪದ್ಮಗಳು ನೈದಿಲೆಯ ಹೂವುಗಳು, ಹಾಗೆಯೇ ಹಳದಿಯ ಕಾಡುಮಲ್ಲಿಗೆ, ಹಾಗೆಯೇ ಅರಣ್ಯದಲ್ಲಿ ಬೆಳೆದ ಸಿಹಿಮಾವಿನ ಮತ್ತು ಕೇದಗೆಯ ಹೂವುಗಳನ್ನು ಅರ್ಪಿಸಬಹುದು.

೧೧–೧೨. ಮತ್ತು ಕೆಂಪು ಅಶೋಕದ ಮತ್ತು ಅಗಸೆಯ ಹೂವುಗಳನ್ನೂ ಅರ್ಪಿಸಬಹುದು. ಮತ್ತು ಮರಗಳಿಗೆ ಆಯುರ್ವೇದಚಿಕಿತ್ಸೆಯಿಂದ ಅದನ್ನು ತಿಳಿದಿರುವವರು ಕೆಂಪಾಗಿ ಮಾಡಿರುವ ಬಿಳಿಯ ಹೂವುಗಳು, ಇವು ಕೆಂಪಾಗಿ ಮಾಡಲ್ಪಟ್ಟದ್ದರೂ ಹರಿಯ ಪೂಜೆಗೆ ಯೋಗ್ಯವೆಂದೇ ತಿಳಿಯಬೇಕು. ಹಾಗೆಯೇ ಬಿಲ್ವಪತ್ರ ಮತ್ತು ಗರಿಕೆಯ ಚಿಗುರು ಮತ್ತು ಭೃಂಗಿಯೆಂಬ ಔಷಧಿ ವಿಶೇಷದ ಎಲೆಗಳು, ಇವನ್ನೂ ಉಪಯೋಗಿಸಬಹುದು.

೧೩–೧೪. ಸುಗಂಧವುಳ್ಳ ಪತ್ರೆಗಳನ್ನೂ ಹರಿಪೂಜೆಗೆ ಉಪಯೋಗಿಸಬಹುದು, ಬಿಳಿದಾದ ಹೂವುಗಳಲ್ಲಿ ಮಧ್ಯಭಾಗವು ಬೇರೆ ವರ್ಣದಿಂದ ಕೂಡಿದ್ದರೂ

ಪುಷ್ಪಂ ಶುಕ್ಲಂ ತು ತದ್ವಿದ್ಯಾನ್ಮನೋಜ್ಞಂ ಕೇಶವಪ್ರಿಯಂ ।
ಬಂಧುಜೀವಕಪುಷ್ಪಾಣಿ ರಕ್ತಾನ್ಯಪಿ ಚ ದಾಪಯೇತ್ ॥ ೧೪ ॥

ಅನುಕ್ತರಕ್ತಕುಸುಮದಾನಾದ್ದೌರ್ಭಾಗ್ಯಮಾಪ್ನುಯಾತ್ ।
ಸುಗಂಧಿ ದತ್ವಾ ನಾಪ್ನೋತಿ ಶುಭಂ ವಾ ಯದಿ ವಾಶುಭಂ ॥ ೧೫ ॥

ಮೃಗದರ್ಪಂ ವಿನಾ ಕಿಂಚಿದಥ ಚೇಜ್ಜೀವಸಂಭವಂ ।
ದೇವದೇವಸ್ಯ ದಾತವ್ಯಂ ದೀಪೇ ಮಜ್ಜಾನಮೇವ[1] ವಾ ॥ ೧೬ ॥

ನೀಲಾಂ ರಕ್ತಾಂ ದಶಾಂ ದೀಪೇ ಪ್ರಯತ್ನೇನ ವಿವರ್ಜಯೇತ್ ।
ಅನ್ಯ ಚ್ಚ ದೀಪಮಾತ್ರಂ ತು ತಥಾ ವರ್ಜ್ಯಂ ಪ್ರಯತ್ನತಃ ॥ ೧೭ ॥

ಕೃಷ್ಣಾಗರುಸ್ತಥಾ ದೇವಧೂಪಂ ದೇವಸ್ಯ ಯತ್ನತಃ ।
ಅಭಕ್ಷಂ ಚಾಪ್ಯಹೃದ್ಯಂ ಚ ನೈವೇದ್ಯಂ ನ ನಿವೇದಯೇತ್ ॥ ೧೮ ॥

ಕೇಶಕೀಟಾವಪನ್ನಂ ಚ ನಖಾಂಶವಿಹಿತಂ ಚ ಯತ್ ।
ಮೂಷಿಕಾಲಾಂಗಲೋಪೇತಮವಧೂತಮವಕ್ಷುತಂ ॥ ೧೯ ॥

---

ಅದು ಕೇಶವನಿಗೆ ಅತ್ಯಂತ ಪ್ರಿಯವಾದ ಬಿಳಿಯಹೂವೆಂದು ಭಾವಿಸಬೇಕು. ಬಂದೂಕ ಪುಷ್ಪವು (ಕೆಂಪುದಾಸವಾಳ) ಕೆಂಪಾಗಿದ್ದರೂ ಅದನ್ನು ಹರಿಗೆ ಅರ್ಪಿಸಬಹುದು.

೧೫-೧೬. ಇಲ್ಲಿ ಹೇಳದಿರುವ ಕೆಂಪು ಕುಸುಮಗಳನ್ನು ಸಮರ್ಪಿಸಿದುದೇ ಆದರೆ ಅವನು ದರಿದ್ರನಾಗುತ್ತಾನೆ. ಹೂವುಗಳು ಸುವಾಸನೆಯುಳ್ಳವುಗಳಾದಲ್ಲಿ ಈ ಶುಭಾಶುಭ ದೋಷವಿಲ್ಲ. ಕಸ್ತೂರಿಯೊಂದು ಹೊರತು ಮತ್ತಾವ ಸುಗಂಧದ್ರವ್ಯವನ್ನೂ ಹರಿಗೆ ಅರ್ಪಿಸಬಾರದು. ಹರಿಯ ದೀಪಕ್ಕೆ ಕೊಬ್ಬನ್ನು ಉಪಯೋಗಿಸಬಾರದು.

೧೭-೧೮. ಹರಿಯ ದೀಪಕ್ಕೆ ಕಪ್ಪಾದ ಮತ್ತು ಕೆಂಪಾದ ಬತ್ತಿಯನ್ನು ಉಪಯೋಗಿಸಬಾರದು. ಕಾಲಾಗುರು, ದೇವಧೂಪ ಇವನ್ನು ಪ್ರಯತ್ನಪೂರ್ವಕವಾಗಿ ಉಪಯೋಗಿಸಬೇಕು. ಭಕ್ಷಣೆಗೆ ಅನರ್ಹವಾಗಿಯೂ, ಅಸ್ವಾದುವಾಗಿಯೂ ಇರುವ ಭಕ್ಷ್ಯಗಳನ್ನು ನೈವೇದ್ಯಕ್ಕೆ ಅರ್ಪಿಸಬಾರದು.

೧೯-೨೦. ಕೂದಲು, ಹುಳುಗಳು ಇವುಗಳ ಸಂಪರ್ಕದಿಂದ ದುಷ್ಟವಾಗಿರುವ ಮತ್ತು ಉಗುರುಗಳ ಚೂರುಗಳಿಂದಲೂ, ಇಲಿ ಮೊದಲಾದವುಗಳ ರೋಮಾದಿ

---

1 ಇಲ್ಲಿ ಮಜ್ಜಾನ ಚೈವವಾ ಎಂದು ಪಾಠವಿರಬೇಕು.

ನ ಭಕ್ಷ್ಯಮನ್ನಮಕ್ಷೀರಂ ಮಾಹಿಷಂ ಕ್ಷೀರಮೇವ ಚ ।
ವರಾಹಮತ್ಸ್ಯಮಾಂಸಂ ಚ ಮಾಂಸಂ ಪಂಚನಖಸ್ಯ ಚ ।
ದುರಾಮೋದೌ ತಥಾ ವರ್ಜ್ಯಾ ದೇವಕರ್ಮಣಿ ಪಂಡಿತೈಃ ॥ ೨೦ ॥

ನಿವೇಶ್ಯ ಚಿತ್ತಂ ಪುರುಷೋತ್ತಮಸ್ಯ
ಭಕ್ತಿಂ ಸಮಾಸ್ಥಾಯ ತಥಾ ವಿಶುದ್ಧಾಂ ।
ಕರೋತಿ ಶ್ರದ್ಧಾಂ ಸತತಂ ಯಥೋಕ್ತಾಂ
ಸಯಾತಿ ಲೋಕಂ ಮಧುಸೂದನಸ್ಯ ॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಪುಷ್ಪಾದಿ ದೇಯಾದೇಯಕಥನಂ ನಾಮ
ಏಕನವತಿತಮೋಽಧ್ಯಾಯಃ

---

ಗಳಿಂದಲೂ ಕೂಡಿ ಅಶುಚಿಯಾಗಿರುವ ಮತ್ತು ಬಟ್ಟೆಯೇ ಮೊದಲಾದುವನ್ನು ಕೊಡಹುವುದರಿಂದ ಧೂಳಿ ಹೊಂದಿಯೂ ಮತ್ತು ಶೀನಿನ ಸಂಪರ್ಕದಿಂದ ಕೂಡಿ ಅಶುದ್ಧವಾಗಿಯೂ ಇರುವ ಅನ್ನವನ್ನೂ ನೈವೇದ್ಯಕ್ಕೆ ಸಮರ್ಪಿಸಬಾರದು. ಹಾಲಿನ ಸಂಬಂಧವಿಲ್ಲದಿರುವ ಅನ್ನವನ್ನೂ, ಎಮ್ಮೆಯ ಹಾಲನ್ನೂ, ಹಂದಿ, ಮೀನು ಇವುಗಳ ಮತ್ತು ಐದು ಉಗುರುಗಳುಳ್ಳ ಪ್ರಾಣಿಗಳ ಮಾಂಸವನ್ನೂ, ದುರ್ಗಂಧವುಳ್ಳ ಪದಾರ್ಥಗಳನ್ನೂ ದೇವ ಕಾರ್ಯದಲ್ಲಿ ವರ್ಜಿಸಬೇಕು.

೨೧. ಮನಸ್ಸನ್ನು ಪುರುಷೋತ್ತಮನಾದ ಹರಿಯಲ್ಲಿಯೇ ಇಟ್ಟು ಶುದ್ಧವಾದ ಭಕ್ತಿಯನ್ನು ಹೊಂದಿ ಯಾವಾಗಲೂ ಪರಮಾತ್ಮನಲ್ಲಿ ಶ್ರದ್ಧೆಯಿಂದಿರುವವನಿಗೆ ಆ ಮಧುಸೂದನನ ಲೋಕವೇ ಲಭಿಸುತ್ತದೆ.

ಇಲ್ಲಿಗೆ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮರ್ಕಂಡೇಯ ಭಾರ್ಗವ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದ ಹೂವುಗಳೇ
ಮೊದಲಾದ ವರ್ಜ್ಯಾವರ್ಜ್ಯ ನಿರೂಪಣವೆಂಬ ತೊಂಭತ್ತೊಂದನೆಯ
ಅಧ್ಯಾಯವು ಮುಗಿದಿದೆ.



## ತೊಂಭತ್ತೊಂಭನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಹರಿಪೂಜಾ ವಿಧಾನಕ್ಕೆ ಅನುಬಂಧಿಸುವ ಹೂವುಗಳ ಗ್ರಾಹ್ಯಾಗ್ರಾಹ್ಯ ವಿಚಾರವನ್ನೂ ಧೂಪದೀಪ ನೈವೇದ್ಯಾದಿಗಳಲ್ಲಿಯೂ ಸಹ ತ್ಯಾಜ್ಯೋಪಾದೇಯ ವಿವೇಚನೆಯನ್ನು ವಿವರಿಸಿರುವರು.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ದ್ವಿನವತಿತಮೋಽಧ್ಯಾಯಃ

|| ಪುಷ್ಕರ ಉವಾಚ ||

**ತತೋಽಗ್ನಿಶರಣಂ ಗತ್ವಾ ಸ್ಮಾರ್ತೇಽಗ್ನೌ ವಿಧಿಪೂರ್ವಕಂ |**
**ವೈಶ್ವದೇವಂ ತು ಕರ್ತವ್ಯಂ ಹುತೋತ್ಸೃಷ್ಟಂ ತು ಲೌಕಿಕೇ || ೧ ||**

**ಯತ್ರ ಕ್ವಚನ ವಾ ರಾಮ ದೀಪ್ಯಮಾನೇಽಥ ಚೋದಕೇ |**
**ಪರಿಸಮೂಹ್ಯ ಪರ್ಯುಕ್ಷ್ಯ ಪರಿಸ್ತೀರ್ಯ ಪರಿಸ್ತರೇತ್ || ೨ ||**

**ಸರ್ವಾನ್ನಮಗ್ರ್ಯಾದುದ್ಧೃತ್ಯ ಜುಹುಯಾತ್ಪ್ರಯತಸ್ತತಃ |**
**ವಾಸುದೇವಾಯ ದೇವಾಯ ಪ್ರಭವೇನಾವ್ಯಯೇನ ಚ || ೩ ||**

**ಅಗ್ನಯೇ ಚೈವ ಸೋಮಾಯ ಮಿತ್ರಾಯ ವರುಣಾಯ ಚ |**
**ಇಂದ್ರಾಯ ಚ ಮಹಾಭಾಗ ಇಂದ್ರಾಗ್ನಿಭ್ಯಾಂ ತಥೈವ ಚ || ೪ ||**

---

### ತೊಂಭತ್ತೆರಡನೇ ಅಧ್ಯಾಯ.

೧–೨. ಅನಂತರ ಅಗ್ನಿಗೃಹಕ್ಕೆ ಹೋಗಿ ಅಲ್ಲಿ ಸ್ಮಾರ್ತಾಗ್ನಿಯಲ್ಲಿ ಯಥಾ ವಿಧಿಯಾಗಿ ವೈಶ್ವದೇವವನ್ನು ಮಾಡಬೇಕು ಹೋಮಮಾಡಿ ಪಾತ್ರೆಯಲ್ಲಿ ಉಳಿದಿರುವ ಅನ್ನದಿಂದ ಎಲ್ಲಾದರೂ ಜಲವಿರುವ ಶುದ್ಧವಾದ ಪ್ರದೇಶದಲ್ಲಿ ಪ್ರೋಕ್ಷಣೆ ಮಾಡಿ ದರ್ಭೆಯನ್ನು ಹರಡಿ ಲೌಕಿಕಾಗ್ನಿಯನ್ನು ಜ್ವಲಿಸುವಂತೆ ಮಾಡಬೇಕು.

೩–೪. ಎಲ್ಲಾ ಅನ್ನವನ್ನೂ ಉದ್ಧರಿಸಿ ಪರಿಶುದ್ಧನಾಗಿದ್ದು ಅಗ್ನಿಯಲ್ಲಿ ಹೋಮಮಾಡಬೇಕು. ಅಗ್ನಿಗೂ, ಸೋಮನಿಗೂ, ಮಿತ್ರನಿಗೂ, ವರುಣನಿಗೂ, ಇಂದ್ರನಿಗೂ, ಇಂದ್ರಾಗ್ನಿಗಳಿಗೂ ಮತ್ತು,

**ವಿಶ್ವೇಭ್ಯಶ್ಚೈವ ದೇವೇಭ್ಯಃ ಪ್ರಜಾನಾಂ ಪತಯೇ ತಥಾ ।**
**ಅನುಮತ್ಯೈ ತಥಾ ರಾಮ ಧನ್ವಂತರಿಣ ಏವ ಚ ॥ ೫ ॥**

**ವಾಸ್ತೋಷ್ಪತ್ಯೈ ತಥಾ ದೇವ್ಯೈ ತತಃ ಸ್ವಿಷ್ಟಕೃತೇಽಗ್ನಯೇ ।**
**ಚತುರ್ಥ್ಯಂತೇನ ನತ್ವಾ ಚ ಹುತ್ವೈತೇಭ್ಯೋ ಬಲಿಂ ಹರೇತ್ ॥ ೬ ॥**

**ತಕ್ಷೋಪತಕ್ಷಾವಭಿತಃ ಪೂರ್ವೇಣಾಗ್ನಿಮತಃ ಪರಂ ।**
**ಅಂಬಾನಾಮಾನಿ ಧರ್ಮಜ್ಞ ದುರ್ಗಾನಾಮಾನಿ ಚಾಪ್ಯಥ ॥ ೭ ॥**

**ನಿವಂತೀ ಚ ಪನೀಕಾ ಚ ಪ್ರಭವಂತೀ ತಥೈವ ಚ ।**
**ಮೇಧವಂತೀ ಚ ನಾಮಾನಿ ಸರ್ವೇಷಾಮೇವ ಭಾರ್ಗವ ॥ ೮ ॥**

**ಆಗ್ನೇಯಾದ್ಯಾಃ ಕ್ರಮೇಣಾಥ ತತಃ ಸೂಕ್ತೇಷು ನಿಕ್ಷಿಪೇತ್ ।**
**ನಿರ್ದಿಶ್ಯೈ ವಸುಭಾಗ್ಯೈ ಚ ಸುಮಂಗಲ್ಯೈ ಚ ಭಾರ್ಗವ ॥ ೯ ॥**

**ಭದ್ರಂಕರ್ಯೈ ತತೋ ದತ್ವಾ ಸ್ಥೂಣಾಯೈ ಚ ತಥಾ ಶ್ರಿಯೈ ।**
**ಹಿರಣ್ಯಕೇಶ್ಯೈ ಚ ತಥಾ ವನಸ್ಪತಯ ಏವ ಚ ॥ ೧೦ ॥**

---

೫-೬. ವಿಶ್ವೇದೇವತೆಗಳಿಗೂ, ದೇವತೆಗಳಿಗೂ, ಪ್ರಜಾಪತಿಗೂ, ಅನುಮತಿಗೂ ಮತ್ತು ಧನ್ವಂತರಿಗೂ, ವಾಸ್ತೋಷ್ಪತಿಗೂ, ದೇವಿಗೂ, ಸ್ವಿಷ್ಟಕೃದ್ರೂಪನಾದ ಅಗ್ನಿಗೂ ಸಹ ಅವರವರ ನಾಮದ ಚತುರ್ಥೀವಿಭಕ್ತಿಯಿಂದ ನಿರ್ದೇಶಿಸಿ ನಮಸ್ಕಾರ ಪೂರ್ವಕವಾಗಿ ಹೋಮಮಾಡಬೇಕು. ಅನಂತರ ಮುಂದೆ ನಿರೂಪಿಸುವವರಿಗೆ ಬಲಿಹರಣವನ್ನೂ ಮಾಡಬೇಕು.

೭-೮. ಅಗ್ನಿಗೆ ಪೂರ್ವದಿಕ್ಕಿನ ಎರಡು ಕಡೆಗಳಲ್ಲಿಯೂ ತಕ್ಷೋಪತಕ್ಷರಿಗೆ ಬಲಿಹರಣ ಮಾಡಬೇಕು. ಅನಂತರ ನಿವಂತೀ, ಪನೀಕಾ, ಪ್ರಭವಂತೀ, ಮೇಧವಂತೀ ಮೊದಲಾದ ದುರ್ಗೆಯ ಎಲ್ಲಾ ನಾಮಗಳಿಂದಲೂ ಬಲಿಹರಣ ಮಾಡಬೇಕು.

೯-೧೦. ಅಗ್ನಿ ಮೊದಲಾದ ದೇವತೆಗಳನ್ನುದ್ದೇಶಿಸಿ ಮಾಡುವ ಬಲಿಹರಣವನ್ನೂ ಆಯಾಯ ಸೂಕ್ತಗಳನ್ನು ಹೇಳಿ ನಾಮ ನಿರ್ದೇಶದಿಂದಲೇ ಮಾಡಬೇಕು. ನಿರ್ದಿತಿ, ವಸುಭಾಗಿ, ಸುಮಂಗಲೀ, ಭದ್ರಂಕರೀ, ಸ್ಥೂಣಾ, ಶ್ರೀ, ಹಿರಣ್ಯಕೇಶಿ, ವನಸ್ಪತಿ ಇವರಿಗೂ ನಾಮನಿರ್ದೇಶಪೂರ್ವಕವಾಗಿ ಬಲಿಹರಣವನ್ನು ಮಾಡಬೇಕು.

ಧರ್ಮಾಧರ್ಮಾಭ್ಯಾಂ ಚ ದ್ವಾರೇ ಗೃಹಮಧ್ಯೇ ಧ್ರುವಾಯ ಚ ।
ಮೃತ್ಯವೇ ಚ ಬಹಿರ್ದದ್ಯಾದ್ವರುಣಾಯೋದಕಾಶಯೇ ॥ ೧೧ ॥

ಭೂತೇಭ್ಯಶ್ಚ ಬಹಿರ್ದದ್ಯಾಚ್ಚರಣೇ ಧನದಾಯ ಚ ।
ಇಂದ್ರಾಯೇಂದ್ರಪುರುಷೇಭ್ಯೋ ದದ್ಯಾತ್ಪೂರ್ವೇಣ ಮಾನವಃ ॥ ೧೨ ॥

ಯಮಾಯ ತತ್ಪುರುಷೇಭ್ಯೋ ದದ್ಯಾದ್ದಕ್ಷಿಣತಸ್ತತಃ ।
ವರುಣಾಯ ತತ್ಪುರುಷೇಭ್ಯೋ ದದ್ಯಾತ್ಪಶ್ಚಿಮತಸ್ತತಃ ॥ ೧೩ ॥

ಸೋಮಾಯ ಸೋಮಪುರುಷೇಭ್ಯ ಉದಗ್ದದ್ಯಾದನಂತರಂ ।
ಬ್ರಹ್ಮಣೇ ಬ್ರಹ್ಮಪುರುಷೇಭ್ಯೋ ಮಧ್ಯೇ ದದ್ಯಾತ್ತಥೈವಚ ॥ ೧೪ ॥

ಆಕಾಶೇ ಚ ತಥೈವೋರ್ಧ್ವಂ ಸ್ಥಂಡಿಲೇ ಚ ತಥಾ ಕ್ಷಿತೌ ।
ದಿವಾಚರೇಭ್ಯಶ್ಚ ದಿವಾ ರಾತ್ರೌ ರಾತ್ರಿಂಚರಾಯ ಚ ॥ ೧೫ ॥

---

೧೧-೧೨. ಧರ್ಮಾಧರ್ಮಗಳಿಗೆ ಮನೆಯ ಬಾಗಿಲಿನಲ್ಲಿಯೂ, ಧ್ರುವನಿಗೆ ಮನೆಯ ಮಧ್ಯದಲ್ಲಿಯೂ, ಮೃತ್ಯುವಿಗೆ ಮನೆಯಿಂದ ಹೊರಗಡೆಯಲ್ಲಿಯೂ, ವರುಣನಿಗೆ ಜಲಾಶಯದಲ್ಲಿಯೂ, ಭೂತಗಳಿಗೆ ಮನೆಯ ಹೊರಗಿನ ಸ್ಥಳದಲ್ಲಿಯೂ ಕುಬೇರನಿಗೆ ಮನೆಯೊಳಗೂ, ಇಂದ್ರ ಮತ್ತು ಇಂದ್ರನ ಪುರುಷರಿಗೆ ಮನೆಯ ಪೂರ್ವದಿಕ್ಕಿನಲ್ಲಿಯೂ ಬಲಿಪ್ರದಾನ ಮಾಡಬೇಕು.

೧೩-೧೪. ಅನಂತರ ಯಮನಿಗೂ ಯಮನ ಪುರುಷರಿಗೂ ಮನೆಯ ದಕ್ಷಿಣ ಭಾಗದಲ್ಲಿಯೂ, ವರುಣನಿಗೂ ವರುಣ ಪುರುಷರಿಗೂ ಸಹ ಮನೆಯ ಪಶ್ಚಿಮ ಭಾಗದಲ್ಲಿಯೂ, ಬಲಿಪ್ರದಾನ ಮಾಡಬೇಕು. ಅನಂತರ ಸೋಮನಿಗೂ ಅವನ ಪುರುಷರಿಗೂ ಮನೆಯ ಉತ್ತರ ಭಾಗದಲ್ಲಿಯೂ, ಬ್ರಹ್ಮನಿಗೂ ಅವನ ಪುರುಷರಿಗೂ ಮನೆಯ ಮಧ್ಯದಲ್ಲಿಯೂ ಬಲಿಪ್ರದಾನ ಮಾಡಬೇಕು

೧೫-೧೬. ಆಕಾಶವನ್ನು ಕುರಿತು ಊರ್ಧ್ವ ಭಾಗದಲ್ಲಿಯೂ, ಭೂಮಿಯನ್ನು ಕುರಿತು, ದರ್ಭೆಗಳಿಂದ ಸಂಸ್ಕರಿಸಲ್ಪಟ್ಟ ಭೂಮಿಯ ಮೇಲೆಯೂ, ಬಲಿಪ್ರದಾನ ಮಾಡಬೇಕು. ದಿವಾಚರವಾದ ಭೂತಗಳಿಗೆ ಹಗಲಿನಲ್ಲಿಯೂ, ರಾತ್ರಿಯಲ್ಲಿ

ಬಲಿಂ ಬಹಿಸ್ತಥಾ ದದ್ಯಾತ್ಸಾಯಂ ಪ್ರಾತಸ್ತು ಪ್ರತ್ಯಹಂ ।
ಪಿಂಡನಿರ್ವಾಪಣಂ ಕಾರ್ಯಂ ಸಾಯಂ ಪ್ರಾತರ್ನಕಾರಯೇತ್ ॥ ೧೬ ॥

ಪಿತ್ರೇ ತು ಪ್ರಥಮಂ ಪಿಂಡಂ ತತ್ಪಿತ್ರೇ ತದನಂತರಂ ।
ತತೋ ದದ್ಯಾಚ್ಚ ತತ್ಪಿತ್ರೇ ಮಾತ್ರೇ ಚ ತದನಂತರಂ ॥ ೧೭ ॥

ಪಿತೃಮಾತ್ರೇ ತತೋ ದದ್ಯಾಚ್ಛ್ವಶ್ರ್ವ್ಯೈ ಚ ತದನಂತರಂ ।
ದಕ್ಷಿಣಾಗ್ರೇಷು ದರ್ಭೇಷು ಸಲಿಲೇಷು ವಿಶೇಷತಃ ॥ ೧೮ ॥

ಯತ್ಕಿಂಚಿತ್ಪಚ್ಯತೇ ಗೇಹೇ ಭಕ್ಷ್ಯಂ ವಾ ಭೋಜ್ಯಮೇವ ವಾ ।
ನಿವೇದಯೇಚ್ಚ ತತ್ಸರ್ವಂ ಶುಭಂ ಪಾನಂ ವಿಶೇಷತಃ ॥ ೧೯ ॥

ಪುಷ್ಪೈಃ ಧೂಪೇನ ದೀಪೇನ ಪೂಜಯೇತ್ಸತತಂ ಪಿತೄನ್ ।
ನಾಮಗೋತ್ರೇ ಸದಾವಾಚ್ಯೇ ಪಿಂಡನಿರ್ವಾಪಣೇ ತಥಾ ॥ ೨೦ ॥

---

ಸಂಚರಿಸುವ ಭೂತಗಳಿಗೆ ರಾತ್ರಿಯಲ್ಲಿಯೂ ಎರಡು ಕಾಲದಲ್ಲಿಯೂ ಮನೆಯಿಂದ ಹೊರಗೆ ಬಲಿಪ್ರದಾನವನ್ನು ಮಾಡಬೇಕು.

೧೭-೧೮. ಪೈತೃಕವಾದ ಪಿಂಡಪ್ರದಾನಕಾಲದಲ್ಲಿ ತಂದೆಗೆ ಮೊದಲೂ ಅನಂತರ ಪಿತಾಮಹನಿಗೂ ಅನಂತರ ಪ್ರಪಿತಾಮಹನಿಗೂ, ಅನಂತರ ತಾಯಿಗೂ, ಅನಂತರ ತಂದೆಯ ತಾಯಿಗೂ, ಅನಂತರ ಅತ್ತೆಗೂ (ಹೆಂಡತಿಯ ತಾಯಿ) ದಕ್ಷಿಣಾಗ್ರವಾದ ದರ್ಭೆಗಳಲ್ಲಿ ಜಲದಲ್ಲಿಯೂ ಪ್ರದಾನ ಮಾಡಬೇಕು.

೧೯-೨೦. ಮನೆಯಲ್ಲಿರುವ ಭಕ್ಷ್ಯ ಭೋಜ್ಯಾದಿಗಳೆಲ್ಲವನ್ನೂ ನೈವೇದ್ಯಕ್ಕಾಗಿ ಸಮರ್ಪಿಸಿ ಒಳ್ಳೆಯ ಪಾನೀಯವನ್ನೂ ಅರ್ಪಿಸಬೇಕು. ಹೂವುಗಳಿಂದಲೂ ಧೂಪ ದೀಪಾದಿಗಳಿಂದಲೂ ಪಿತೃಗಳನ್ನು ಯಾವಾಗಲೂ ಪೂಜಿಸಬೇಕು. ಪಿಂಡಪ್ರದಾನ ಮಾಡುವಾಗಲೆಲ್ಲಾ ಹೆಸರು ಮತ್ತು ಗೋತ್ರಗಳನ್ನು ಉಚ್ಚರಿಸಬೇಕು.

ಪಿಂಡಂ ದದ್ಯಾಚ್ಚ ಕಾಕಾನಾಂ ತತ್ರ ಮಂತ್ರಮಿಮಂ ಪಠೇತ್ |
ಐಂದ್ರಾವರುಣವಾಯವ್ಯಾ ಯಾಮ್ಯಾ ವೈನೈರ್ಋತಾ ಸ್ತಥಾ || ೨೧ ||

ತೇ ಕಾಕಾಃ ಪ್ರತಿಗೃಹ್ಣಂತು ಇಮಂ ಪಿಂಡಂ ಮಯೋದ್ಧೃತಂ |
ತತಃ ಪಿಂಡಂ ಶುನಾಂ ದದ್ಯಾನ್ಮಂತ್ರಂ ತತ್ರ ನಿಬೋಧ ಮ || ೨೨ ||

ವೈವಸ್ವತಕುಲೇ ಜಾತೌ ದ್ವೌ ಶ್ಯಾಮಶಬಲೌ ಶುನೌ |
ತಾಭ್ಯಾಂ ಪಿಂಡಂ ಪ್ರದಾಸ್ಯಾಮಿ ಪಥಿ ರಕ್ಷಂತು ಮಾಂ ಸದಾ || ೨೩ ||

ತತೋ ಗ್ರಾಸಂ ಗವಾಂ ದದ್ಯಾದತ್ರ ಮಂತ್ರಂ ನಿಬೋಧ ಮೇ |
ಸೌರಭೇಯ್ಯಃ ಸರ್ವಹಿತಾಃ ಪವಿತ್ರಾಃ ಪಾಪನಾಶಿನೀಃ || ೨೪ ||

ಪ್ರತಿಗೃಹ್ಣಂತು ಮೇ ಗ್ರಾಸಂ ಗಾವಸ್ತ್ರೈಲೋಕ್ಯಮಾತರಃ |
ತತಃ ಸ್ವಸ್ತ್ಯಯನಂ ಕಾರ್ಯಂ ಭಿಕ್ಷಾ ದೇಯಾ ಚ ಭಿಕ್ಷವೇ || ೨೫ ||

---

೨೧-೨೨. ಕಾಗೆಗಳಿಗೂ ಪಿಂಡಪ್ರದಾನ ಮಾಡಬೇಕು. ಆಗ ಈ ಮಂತ್ರವನ್ನು ಉಚ್ಚರಿಸಬೇಕು. ಇಂದ್ರ, ವರುಣ, ವಾಯು, ಯಮ, ನಿಋಋತಿ ಇವರಿಗೆ ಸಂಬಂಧಿಸಿರುವ ಯಾವ ಯಾವ ಕಾಗೆಗಳುಂಟೋ ಅವೆಲ್ಲವೂ ನನ್ನಿಂದ ಕೊಡಲ್ಪಟ್ಟಿರುವ ಈ ಪಿಂಡವನ್ನು ಸ್ವೀಕರಿಸಲಿ. ಅನಂತರ ನಾಯಿಗಳಿಗೆ ಪಿಂಡಪ್ರದಾನ ಮಾಡಬೇಕು. ಆಗ ಉಚ್ಚರಿಸಬೇಕಾದ ಈ ಮಂತ್ರವನ್ನೂ ನಾನು ಹೇಳುತ್ತೇನೆ ತಿಳಿದುಕೋ.

೨೩-೨೪. ವೈವಸ್ವತ ವಂಶದಲ್ಲಿ ಹುಟ್ಟಿರುವ ಶಾಮವರ್ಣದ ಮತ್ತು ಶಬಲ (ಚುಂಚುಮಿಂಚು) ವರ್ಣದ ಎರಡು ನಾಯಿಗಳಿಗೂ ನಾನು ಇಲ್ಲಿ ಪಿಂಡವನ್ನು ಕೊಡುತ್ತೇನೆ. ಅವು ಮಾರ್ಗದಲ್ಲಿ ನನ್ನನ್ನು ರಕ್ಷಿಸಲಿ. ಇದಾದ ಮೇಲೆ ಗೋವುಗಳಿಗೆ ಗ್ರಾಸವನ್ನು ಕೊಡಬೇಕು. ಆಗ ಹೇಳುವ ಮಂತ್ರವನ್ನೂ ಹೇಳುತ್ತೇನೆ ಕೇಳು, ಕಾಮಧೇನುವಿನಿಂದ ಹುಟ್ಟಿ ಸರ್ವಹಿತಗಳಾಗಿಯೂ, ಪವಿತ್ರಗಳಾಗಿಯೂ, ಪಾಪ ನಾಶಕಗಳಾಗಿಯೂ, ಮೂರು ಲೋಕಗಳಿಗೂ ತಾಯಿಗಳಂತಿರುವ ಈ ಗೋವುಗಳು ನನ್ನ ಈ ಗ್ರಾಸವನ್ನು ಸ್ವೀಕರಿಸಲಿ.

೨೫-೨೬. ಅನಂತರ ದೇವತಾವಿಷಯವಾದ ಮಂಗಲಾ ಶಾಸನವನ್ನು ಮಾಡಿ ಭಿಕ್ಷುಕರಿಗೆ ಭಿಕ್ಷೆಯನ್ನು ನೀಡಬೇಕು. ವೈಶ್ವದೇವದಿಂದ ಸಂಸ್ಕರಿಸಲ್ಪಟ್ಟ ಅನ್ನವನ್ನು

ದತ್ವಾ ತು ಸಂಸ್ಕೃತಾಂ ಭಿಕ್ಷಾಂ ಗೋದಾನಫಲಮಾಪ್ನುಯಾತ್ ।
ಬಾಲಃ ಸುವಾಸಿನೀ ವೃದ್ಧಾ ಗರ್ಭಿಣ್ಯಾತುರಕನ್ಯಕಾಃ ॥ ೨೬ ॥

ಭೃತ್ಯಾಂಶ್ಚ ಭೋಜಯೇದ್ರಾಮ ಪೂಜಯಿತ್ವಾ ತಥಾತಿಥೀನ್ ।
ನೈಕಗ್ರಾಮೀಣಮತಿಥಿಂ ವಿದ್ಯಾನ್ನಾಬ್ರಾಹ್ಮಣಂ ತಥಾ ॥ ೨೭ ॥

ಅತಿಥಿಂ ಭೋಜಯೇತ್ಪೂರ್ವಂ ತತೋ ಭೃತ್ಯಾಂಶ್ಚ ಪೂಜಯೇತ್ ।
ರಾಜನ್ಯಮಥವಾ ವೈಶ್ಯಂ ಶೂದ್ರಂ ವಾ ದ್ವಿಜಸತ್ತಮ ॥ ೨೮ ॥

ವೈಶ್ವದೇವೇ ಚ ಸಂಪ್ರಾಪ್ತಂ ಭೃತ್ಯೈಃ ಸಹ ಚ ಭೋಜಯೇತ್ ।
ವಯೋಭ್ಯಶ್ಚ ತಥಾ ದದ್ಯಾಚ್ಚಂಡಾಲೇಭ್ಯಸ್ತಥಾ ಭುವಿ ॥ ೨೯ ॥

ಸಾಧಾರಣಂ ತತ್ಸರ್ವೇಷಾಂ ಶೇಷಕಂ ಗೃಹಿಣಾಂ ಗೃಹೇ ।
ವೈಶ್ವದೇವೇ ಚ ಸಂಪ್ರಾಪ್ತೇನ ಕಥಂಚಿದವಮಾನಯೇತ್ ॥ ೩೦ ॥

---

ಭಿಕ್ಷುಕರಿಗೆ ದಾನಮಾಡಿದವನು ಗೋದಾನದ ಫಲವನ್ನೇ ಹೊಂದುತ್ತಾನೆ. ಅನಂತರ ಅತಿಥಿಗಳನ್ನು ಪೂಜಿಸಿ ಬಾಲಕರು, ಮುತ್ತೈದೆಯರು, ವೃದ್ಧರು, ಗರ್ಭಿಣೀಸ್ತ್ರೀ, ರೋಗಿಗಳು, ಕನ್ಯೆಕೆಯರು, ಭೃತ್ಯರು ಎಲ್ಲರನ್ನೂ ಊಟಮಾಡಿಸಬೇಕು.

೨೭-೨೮. ಒಂದೇ ಊರಿನಲ್ಲಿ ವಾಸಿಸುತ್ತಿರುವವನನ್ನೂ, ಅಬ್ರಾಹ್ಮಣನನ್ನೂ ಸಹ ಅತಿಥಿ ಎಂದು ಭಾವಿಸಕೂಡದು. ಅತಿಥಿಗೆ ಮೊದಲು ಭೋಜನಮಾಡಿಸಿ ಅನಂತರ ಭೃತ್ಯರನ್ನು ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ವೈಶ್ವದೇವ ಕಾಲದಲ್ಲಿ ಬಂದದ್ದೇ ಆದರೆ ಅವನನ್ನು ಭೃತ್ಯರೊಡನೆ ಭೋಜನಮಾಡಿಸಬೇಕು. (ಅತಿಥಿಗೆ ಭೋಜನವಾದ ಅನಂತರ ಎಂದು ತಾತ್ಪರ್ಯ.)

೨೯-೩೦. ಪಕ್ಷಿಗಳಿಗೂ, ಚಂಡಾಲಾದಿಗಳಿಗೂ ಸಹ ಭೂಮಿಯಲ್ಲೇ ಅನ್ನವನ್ನು ಕೊಡಬೇಕು. ಗೃಹಸ್ಥನಾಗಿರುವ ಸಂಸಾರಿಯ ಮನೆಯಲ್ಲಿ ಯಾವಾಗಲೂ ಅನ್ನವು ಶೇಷವಾಗಿ ಇರುವುದು ಸ್ವಭಾವ. ಯಾವಾಗಲೂ ಉಳಿದಿರುವ ಅನ್ನದಲ್ಲಿ ಪ್ರಾಣಿಗಳ ತೃಪ್ತಿಯು ಅನಿವಾರ್ಯವೆಂದು ತಾತ್ಪರ್ಯ. ವೈಶ್ವದೇವ ಕಾಲದಲ್ಲಿ ಬಂದ ಯಾರನ್ನೂ ಸಹ ಅನ್ನವಿಲ್ಲದೆ ಅವಮಾನಪಡಿಸಿ ಕಳುಹಬಾರದು ಹಾಗೆ ಆಶಾಭಂಗದಿಂದ ಹಿಂದೆ ತಿರುಗಿಹೋದ ಅತಿಥಿಯು ಈ ಗೃಹಸ್ಥನ ಪುಣ್ಯವನ್ನು ತಾನೇ ಆಪಹರಿಸಿ ಹೊರಟುಹೋದಾನು.

ಆದಾಯ ಸುಕೃತಂ ಯಾತಿ ಭಗ್ನಾಶಶ್ಚಾತಿಥಿರ್ಗತಃ ।
ಅಧ್ವನಾ ಯಸ್ತು ಭಗ್ನಾಯ ಬ್ರಾಹ್ಮಣಾಯ ತಥಾ ದಿವಿ ॥ ೩೧ ॥

ಸತ್ಕೃತ್ಯ ಭೋಜನಂ ದದ್ಯಾತ್ತೇನ ಸ್ವರ್ಗೇ ಮಹೀಯತೇ ।
ದೇವಾ ಬ್ರಾಹ್ಮಣರೂಪೇಣ ಚರಂತಿ ಪೃಥಿವೀಮಿಮಾಂ ॥ ೩೨ ॥

ತಸ್ಮಾತ್ಸಂಪ್ರಾಪ್ತಮತಿಥಿಂ ಪ್ರಯತ್ನೇನ ತು ಪೂಜಯೇತ್ ।
ಅತಿಥಿಂ ಪೂಜಯೇಚ್ಚಾಗ್ರೇ ದಶಗೋದಫಲಂ ಲಭೇತ್ ॥ ೩೩ ॥

ಪಾದಶೌಚಂ ತತೋ ದತ್ವಾ ಪ್ರಾಪ್ತಾಯಾತಿಥಯೇ ಗೃಹೇ ।
ಗೋಧಾನ ಫಲಮಾಪ್ನೋತಿ ವಾಯುಲೋಕಂ ಸಗಚ್ಛತಿ ॥
ತಾಲವ್ಯಜನಹಸ್ತಸ್ತು ಕೃತ್ವಾ ತದಭಿಚಾರಣಂ ।
ಗೋದಾನಫಲಮಾಪ್ನೋತಿ ದತ್ವಾ ಚೈವ ತಥಾಸನಂ ॥ ೩೪ ॥

೩೧-೩೨. ವೈಶ್ವದೇವವಾದ ಮೇಲೆಯೂ ಸಹ, ಬ್ರಾಹ್ಮಣನು ದಾರಿತಪ್ಪಿ ಹಗಲಿನಲ್ಲಿ ಮನೆಗೆ ಬಂದದ್ದೇ ಆದರೆ ಅವನಿಗೂ ಸತ್ಕಾರಪೂರ್ವಕವಾಗಿ ಭೋಜನವನ್ನು ಕೊಡಬೇಕು. ಹೀಗೆ ಸತ್ಕರಿಸಿದ ಗೃಹಸ್ಥನು ಪುಣ್ಯಲೋಕವನ್ನು ಸೇರುತ್ತಾನೆ. ದೇವತೆಗಳೇ ಬ್ರಾಹ್ಮಣರೂಪದಿಂದ ಭೂಮಿಯಲ್ಲಿ ಸಂಚರಿಸುತ್ತಿರುವರು. ಆದುದರಿಂದ ಬ್ರಾಹ್ಮಣನಾದವನು ಅತಿಥಿಯಾಗಿ ಬಂದಲ್ಲಿ ಸರ್ವಪ್ರಯತ್ನದಿಂದಲೂ ಅವನನ್ನು ಸತ್ಕರಿಸಲೇಬೇಕು.

೩೩-೩೪. ಅತಿಥಿಯನ್ನು ಮೊದಲು ಪೂಜಿಸಿದವನು ಹತ್ತು ಗೋದಾನ ಮಾಡಿದವನ ಫಲವನ್ನೇ ಹೊಂದುತ್ತಾನೆ. ಮನೆಗೆ ಬಂದ ಅತಿಥಿಗೆ ಪಾದೋದಕವನ್ನು ಕೊಟ್ಟು ಸಂತೋಷ ಪಡಿಸಿದವನು, ಮತ್ತು ಆಸನಾದಿಗಳಿಂದ ಉಪಚರಿಸಿದವನೂ ಸಹ ಗೋದಾನದ ಫಲವನ್ನೇ ಹೊಂದುತ್ತಾನೆ. ಹಾಸಿಗೆಯೇ ಮೊದಲಾದ ವಿಶ್ರಾಂತಿಗೆ ತಕ್ಕ ಉಪಚಾರಗಳಿಂದ ಆ ಗೃಹಸ್ಥನು ಸ್ವರ್ಗದಲ್ಲಿಯೂ ಪೂಜ್ಯನಾದಾನು.

ಪ್ರತಿಶ್ರಯಪ್ರದಾನೇನ ನಾಕಪೃಷ್ಠೇ ಮಹೀಯತೇ ।
ತಾಲವೃಂತಾನಿಲಂ ಕೃತ್ವಾ ತಥಾ ಪ್ರಾಪ್ತಾಯ ಮಾನವಃ ॥ ೩೫ ॥

ಗೋದಾನಫಲಮಾಪ್ನೋತಿ ವಾಯುಲೋಕಂ ಸ ಗಚ್ಛತಿ ।
ತಾಲವ್ಯಜನಹಸ್ತಸ್ತು ಕೃತ್ವಾ ತದಭಿಚಾರಣಂ ॥ ೩೬ ॥

ಅತಿಥಿಃ ಭೋಜನಂ ಪ್ರಾಪ್ತೇ ಗೋದಾನಫಲಮಾಪ್ನುಯಾತ್ ।
ಶೀತಾಹತಾತಿಥಿಂ ಪ್ರಾಪ್ಯ ಕಾಷ್ಠಾನ್ಪ್ರಜ್ವಾಲಯೇನ್ನರಃ ॥ ೩೭ ॥

ಪ್ರತಾಪಯೇನ್ಮಹಾಭಾಗ ದಶಧೇನುಫಲಂ ಲಭೇತ್ ।
ಕಾಯಾಗ್ನಿದೀಪ್ತಿಮಾಪ್ನೋತಿ ಪ್ರಾಕಾಶ್ಯಂ ಪರಮಂ ತಥಾ ॥ ೩೮ ॥

ತೃಷ್ಣಾರ್ತಾಯೋದಕಂ ದತ್ವಾ ಪಾನೇ ಗೋದಾನಮಾಪ್ನುಯಾತ್ ।
ಶ್ರಾಂತಸಂವಾಹನಂ ಕೃತ್ವಾ ಧೇನುದಾನಫಲಂ ಲಭೇತ್ ॥ ೩೯ ॥

---

೩೬–೩೭. ಹಾಗೆಯೇ ಬಂದ ಅತಿಥಿಯನ್ನು ಬೀಸಣಿಗೆಯಿಂದ ಬೀಸಿ ಸಂತೋಷ ಪಡಿಸಿದಲ್ಲಿ ಅವನು ಗೋದಾನದ ಫಲವನ್ನು ಹೊಂದಿ ವಾಯುಲೋಕ ವನ್ನು ಸೇರುತ್ತಾನೆ. ಬೀಸಣಿಗೆಯನ್ನು ಕೈಯಲ್ಲಿ ಹಿಡಿದು ಅತಿಥಿಯ ಶುಶ್ರೂಷೆಮಾಡಿ ಅವನಿಗೆ ಭೋಜನ ಮಾಡಿಸಿದ್ದೇ ಆದರೆ ಅಂತಹ ಗೃಹಸ್ಥನು ಗೋದಾನ ಫಲವನ್ನೇ ಹೊಂದುತ್ತಾನೆ.

೩೭–೩೮. ಛಳಿಯಿಂದ ದುಃಖಪಡುತ್ತಿರುವ ಅತಿಥಿಯು ಬಂದದ್ದೇ ಆದರೆ ಒಡನೆಯೇ ಕಾಷ್ಠಕಗಳಿಂದ ಬೆಂಕಿಯನ್ನು ಹತ್ತಿಸಿ ಆ ಅತಿಥಿಯನ್ನು ಯಾವನು ಕಾಯಿಸುವನೋ ಅಂತಹ ಗೃಹಸ್ಥನು ಹತ್ತು ಗೋದಾನದ ಫಲವನ್ನೇ ಹೊಂದು ತ್ತಾನೆ. ಹಾಗೆಯೇ ತನ್ನ ಶರೀರದ ಸರಿಯಾದ ಶಾಖವನ್ನೂ ಹೊಂದುತ್ತಾನೆ. (ತನ್ನ ದೇಹದಲ್ಲಿ ಅಗ್ನಿಮಾಂದ್ಯವೇ ಅವನಿಗೆ ಉಂಟಾಗುವುದಿಲ್ಲವೆಂದು ತಾತ್ಪರ್ಯ) ಹಾಗೆಯೇ ಪ್ರಸಿದ್ಧಪುರುಷನೂ ಆಗುತ್ತಾನೆ. ಮತ್ತು ಬಾಯಾರಿಕೆಯಿಂದ ದುಃಖ ಪಡುತ್ತಿರುವ ಅತಿಥಿಗೆ ಕುಡಿಯುವ ನೀರನ್ನು ಕೊಟ್ಟು ಪಾನಮಾಡಿಸಿ ಸತ್ಕರಿಸಿ ದವನು ಗೋದಾನಫಲವನ್ನೇ ಹೊಂದುತ್ತಾನೆ.

೩೯–೪೦. ಆಯಾಸದಿಂದ ಬಳಲಿದ ಅತಿಥಿಗೆ ಕೈಕಾಲುಗಳನ್ನು ಅಮುಕು ವುದೇ ಮೊದಲಾದ ಸತ್ಕಾರದಿಂದ ಗೋಧಾನಫಲವನ್ನು ಹೊಂದುತ್ತಾನೆ. ರೋಗಿ ಯಾದ ಅಂತಹ ಅತಿಥಿಗೆ ಪರಿಚರ್ಯೆಯನ್ನು ಮಾಡಿದಲ್ಲಿ ಇದಕ್ಕೆ ಹತ್ತರಷ್ಟು

**ರೋಗಿಣಃ ಪರಿಚರ್ಯಾಂ ಚ ಕೃತ್ವಾ ದಶಗುಣಂ ಲಭೇತ್ ।**
**ಪಾದಾಭ್ಯಂಗಂ ನರಃ ಕೃತ್ವಾ ಸ್ವಾಪ್ಸ್ಯಾಯಾತಿಥಯೇ ಗೃಹೇ ॥ ೪೦ ॥**

**ಗೋದಾನಫಲಮಾಪ್ನೋತಿ ನಾಗಲೋಕಂ ಚ ಗಚ್ಛತಿ ।**
**ಪ್ರತಿಶ್ರಯಂ ತಥಾ ದೀನಂ ದತ್ವಾ ಚಾತಿಥಯೇ ನರಃ ॥ ೪೧ ॥**

**ಧೇನುದಾನಫಲಂ ಪ್ರಾಪ್ಯ ಸೂರ್ಯಲೋಕೇ ಮಹೀಯತೇ ।**
**ಚಕ್ಷುಷ್ಮಾಂಶ್ಚ ಪ್ರಕಾಶಶ್ಚ ವಿರೋಧಶ್ಚೈವ ಜಾಯತೇ ॥ ೪೨ ॥**

**ಶಯನೀಯಪ್ರದಾನೇನ ವಸುದಾನಫಲಂ ಲಭೇತ್ ।**
**ದಂತಕಾಷ್ಠಪ್ರದಾನೇನ ಸೌಭಾಗ್ಯಂ ಮಹದಾಪ್ನುಯಾತ್ ॥ ೪೩ ॥**

**ಶೌಚೋದಕಪ್ರದಾನೇನ ಗೋದಾನಫಲಮಾಪ್ನುಯಾತ್ ।**
**ಮೃತ್ಪ್ರದಾನೇನ ಧರ್ಮಜ್ಞ ವಿರೋಧೋ ನಾಭಿಜಾಯತೇ ॥ ೪೪ ॥**

---

ಫಲವನ್ನೇ ಹೊಂದುತ್ತಾನೆ. ಮನೆಗೆ ಬಂದ ಅತಿಥಿಗೆ ಪಾದಗಳ ಅಭ್ಯಂಗದಿಂದ ಸಂತೋಷ ಉಂಟುಮಾಡಿದುದೇ ಆದರೆ ಅಂತಹ ಗೃಹಸ್ಥನು ಗೋದಾನಫಲವನ್ನು ಹೊಂದಿ ನಾಗಲೋಕಕ್ಕೂ ಹೋಗಿ ಸೇರುತ್ತಾನೆ

೪೧–೪೨. ದೀನನಾಗಿ ಬಂದ ಅತಿಥಿಗೆ ಆಶ್ರಯವನ್ನು ಕೊಟ್ಟು ಸಂತೈಸಿದುದೇ ಆದರೆ ಆ ರೀತಿ ಉಪಚರಿಸಿದ ಗೃಹಸ್ಥನು ಗೋದಾನಫಲವನ್ನು ಹೊಂದಿ ಸೂರ್ಯಲೋಕದಲ್ಲಿ ಪ್ರಕಾಶಿಸುತ್ತಾನೆ. ಅವನು ಒಳ್ಳೆಯ ನೇತ್ರಪಾಟವ ಉಳ್ಳವನಾಗಿಯೂ, ಪ್ರಕಾಶರೂಪನಾಗಿಯೂ, ಸೂರ್ಯನಂತೆ ಇತರರ ಕಣ್ಣನ್ನು ಚುಚ್ಚುವಷ್ಟು ತೇಜಸ್ವಿಯಾಗಿಯೂ ಆಗುತ್ತಾನೆ. ಹಾಸಿಗೆಯನ್ನು ಕೊಟ್ಟಲ್ಲಿ ದ್ರವ್ಯವನ್ನು ದಾನಮಾಡಿದವರ ಫಲವನ್ನು ಹೊಂದುತ್ತಾನೆ.

೪೩–೪೪. ದಂತಧಾವನಕ್ಕೆ ವಿಹಿತವಾಗಿರುವ ಕಾಷ್ಠವನ್ನು ಕೊಟ್ಟು ಅತಿಥಿಯನ್ನು ಸತ್ಕರಿಸಿದವನು ಹೆಚ್ಚಾದ ಭಾಗ್ಯವನ್ನು ಹೊಂದುತ್ತಾನೆ. ಶೌಚಕ್ಕಾಗಿ ಜಲವನ್ನು ಒದಗಿಸಿ ಅವನ ಆಚಾರಕ್ಕೆ ಸಹಕರಿಸಿದವನಿಗೆ ಗೋದಾನಫಲವೇ ಉಂಟಾದೀತು. ಶೌಚಾದಿಗಳಿಗೆ ಮೃತ್ತನ್ನು ದಾನಮಾಡಿದಲ್ಲಿ ಅವನಿಗೆ ಯಾರೊಡನೆಯೂ ವಿರೋಧವು ಬರುವುದಿಲ್ಲ. ಗಂಧ, ಮೂಲಿಕೆ ಮುಂತಾದುವನ್ನು ದಾನಮಾಡಿದವನು ಹೆಚ್ಚಾದ ಸಂಪತ್ತನ್ನು ಹೊಂದುತ್ತಾನೆ.

ದತ್ವಾನುಲೇಪನಂ ಮಾಲಾಂ ಪರಾಂ ಲಕ್ಷ್ಮೀಮುಪಾಸತೇ ।
ತಥೌಷಧಿಪ್ರದಾನೇನ ವಿರೋಗಸ್ತ್ವಭಿಜಾಯತೇ ॥ ೪೫ ॥

ಸ್ನಾನಾಭ್ಯಂಗಪ್ರದಾನೇನ ರೂಪವಾನಭಿಜಾಯತೇ ।
ತಥಾ ಸ್ನಾನೀಯದಾನೇನ ಗಂಧರ್ವೈಸ್ಸಹ ಮೋದತೇ ॥ ೪೬ ॥

ಸ್ನಾನೋದಕಪ್ರದಾನೇನ ವಾರುಣಂ ಲೋಕಮಾಪ್ನುಯಾತ್ ।
ಉಪಾನಹಃ ಪ್ರದಾನೇನ ವಿಮಾನಮಧಿರೋಹತಿ ॥ ೪೭ ॥

ತಥಾ ಛತ್ರಪ್ರದಾನೇನ ಗಾಣಪತ್ಯಮವಾಪ್ನುಯಾತ್ ।
ವಸ್ತ್ರಪ್ರದಾನಾದ್ಭವತಿ ರೂಪವಾನ್ ಸುಭಗಸ್ತಥಾ ॥ ೪೮ ॥

---

೪೫-೪೭. ಅತಿಥಿಗೆ ಔಷಧಗಳನ್ನು ಕೊಟ್ಟು ಸೇವಿಸಿದಲ್ಲಿ ಆ ಗೃಹಸ್ಥನು ರೋಗವಿಲ್ಲದೆ ದೃಢಾಂಗನಾಗಿ ಆಗುತ್ತಾನೆ. ಅಭ್ಯಂಗಸ್ನಾನ ಮಾಡಿಸಿದಲ್ಲಿ ತಾನೂ ರೂಪವಂತನಾಗಿ ಆಗುತ್ತಾನೆ. ಮತ್ತು ಸ್ನಾನಕ್ಕೆ ಉಪಯೋಗಿಸುವ ಚೂರ್ಣವನ್ನು ಕೊಟ್ಟು ಸಹಕರಿಸಿದವನು ಗಂಧರ್ವರೊಡನೆ ಸಂತೋಷಪಡುತ್ತಾನೆ. ಸ್ನಾನಕ್ಕಾಗಿ ಜಲವನ್ನು ಕೊಟ್ಟು ಉಪಚರಿಸಿದವನು ವರುಣಲೋಕವನ್ನು ಹೊಂದಿ ಸಂತೋಷ ಪಡುತ್ತಾನೆ. ಪಾದರಕ್ಷೆಯನ್ನು ದಾನಮಾಡಿದಲ್ಲಿ ಅವನು ವಿಮಾನವನ್ನು ಹೊಂದಿ ದಿವ್ಯಲೋಕಕ್ಕೆ ಸೇರುತ್ತಾನೆ.

೪೮-೪೯. ಹಾಗೆಯೇ ಅತಿಥಿಗೆ ಛತ್ರಿಯನ್ನು ದಾನಮಾಡಿದಲ್ಲಿ ಅವನು ಗಣಪತಿತ್ವವನ್ನು ಹೊಂದುತ್ತಾನೆ. ವಸ್ತ್ರವನ್ನು ದಾನಮಾಡಿದಲ್ಲಿ ಅವನು ರೂಪವಂತನೂ, ಸೌಭಾಗ್ಯಶಾಲಿಯೂ ಆಗುತ್ತಾನೆ. ಅತಿಥಿಗೆ ಭೂಮಿಯನ್ನು ದಾನ ಮಾಡಿದವನು ಅಶ್ವಮೇಧಯಾಗದ ಫಲವನ್ನು ಹೊಂದುತ್ತಾನೆ. ಯಾನಗಳನ್ನು ದಾನಮಾಡಿದವನು ಪೌಂಡರೀಕಯಾಗದ ಫಲವನ್ನು ಹೊಂದಿ ಸ್ವರ್ಗಗಾಮಿಯಾಗುತ್ತಾನೆ.

ಅಶ್ವಮೇಧಮವಾಪ್ನೋತಿ ತಥಾ ಭೂಮಿಪ್ರದೋ ನರಃ ।
ಯಾನದಃ ಸ್ವರ್ಗಮಾಪ್ನೋತಿ ಪೌಂಡರೀಕಪದಂ ತಥಾ || ೪೯ ||

ವಾರಿಧಾನೀಃ ತಥಾ ದತ್ವಾ ಪೂರ್ಣಾಃ ಶೀತೇನ ವಾರಿಣಾ ।
ಸರ್ವಾಃ ಸಭಕ್ಷಾಃ ಪ್ರಾಪ್ನೋತಿ ಗೋಲೋಕಂ ಮಾನುಷೋತ್ತಮ || ೫೦ ||

ತ್ರಪುಷ್ಯೈರ್ವಾರುಕಾಯುಕ್ತೈಃ ಶರ್ಕರಾಘೃತಸಂಯುತೈಃ ।
ಸಕ್ತುಭಿರ್ಲವಣೋಪೇತೈಘೃತೈರ್ಹರಿತಸಂಯುತೈಃ || ೫೧ ||

ತರ್ಪಯಿತ್ವಾ ತಿಥಿಂ ಸಮ್ಯಗ್ವಾರಿಧಾನ್ಯೈಶ್ಚ ಗೋರಸೈಃ ।
ಗೋಲೋಕಂ ಚಿರಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ || ೫೨ ||

ತೃಪ್ತಿಮಾಪ್ನೋತಿ ಚ ತಥಾ ಯತ್ರಯತ್ರಾಭಿಜಾಯತೇ ।
ಕಿಮಿಚ್ಛಕೇನ ಸಂಯೋಜ್ಯ ಚಾಶ್ವಮೇಧಫಲಂ ಲಭೇತ್ || ೫೩ ||

---

೫೦-೫೨. ತಣ್ಣಗಿರುವ ಸಿಹಿನೀರಿನಿಂದ ತುಂಬಿರುವ ನೀರಿನ ಪಾತ್ರೆಯನ್ನು ಅತಿಥಿಗಳಿಗೆ ದಾನಮಾಡಿದ ಗೃಹಸ್ಥನು ಸಮಸ್ತ ಭಕ್ಷ್ಯಗಳಿಂದ ತುಂಬಿದ ಅಂತಹ ಪಾತ್ರೆಗಳನ್ನೇ ಪುನಃ ಹೊಂದುತ್ತಾನೆ. ಅವನಿಗೆ ಗೋಲೋಕದ ಪ್ರಾಪ್ತಿಯೂ ಆಗುತ್ತದೆ. ಪರಿಕರಗಳೊಡನೆಕೂಡಿದ ಎಳೆಯಸೌತೆಕಾಯಿ ಮತ್ತು ಸಕ್ಕರೆ ತುಪ್ಪ ಇವುಗಳಿಂದಕೂಡಿದ ಹುರಿಟ್ಟು ಮತ್ತು ಉಪ್ಪಿನಿಂದಲೂ ಹಸಿಮೆಣಸಿನಕಾಯಿ ಮೊದಲಾದುವುಗಳಿಂದಕೂಡಿದ ಹುರಿಟ್ಟಿನಿಂದಲೂ ಸಹ ಅತಿಥಿಯನ್ನು ಸತ್ಕರಿಸಿ ಒಳ್ಳೆಯ ಮಜ್ಜಿಗೆಯಿಂದ ತುಂಬಿದ ಪಾತ್ರೆಗಳಿಂದಲೂ ಸಂತೋಷಪಡಿಸಿದಲ್ಲಿ ಅಂತಹ ಗೃಹಸ್ಥನು ಬಹುಕಾಲ ಗೋಲೋಕದಲ್ಲಿ ವಾಸಿಸುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

೫೩-೫೪. ಯಾವ ಯಾವ ವಸ್ತುವಿನಲ್ಲಿ ಆ ಅತಿಥಿಗೆ ಇಚ್ಛೆಯುಂಟಾಗುತ್ತದೆಯೋ ಅಂತಹ ವಸ್ತುಗಳಿಂದ ಅತಿಥಿಯು ತೃಪ್ತಿಹೊಂದಿದಲ್ಲಿ ತೃಪ್ತಿಪಡಿಸಿದ

**ತಾಂಬೂಲಸ್ಯಪ್ರದಾನೇನ ಗಂಧರ್ವೈಸ್ಸಹ ಮೋದತೇ ।**
**ಉಷ್ಟಿಮಾಸಾವ್ರತಂ ಕೃತ್ವಾ ಸ್ವರ್ಗಲೋಕೇ ಮಹೀಯತೇ ॥ ೫೪ ॥**

**ಇತಿಹಾಸಾನಥಾಶ್ರಾವ್ಯ ಗೋದಾನಫಲಮಾಪ್ನುಯಾತ್ ।**
**ಗೋಪ್ರದಾನೇನ ವಿತ್ತೇನ ತೋಷಯಿತ್ವಾ ತಥಾತಿಥಿಂ ॥ ೫೫ ॥**

**ಮಹತ್ಫಲಮವಾಪ್ನೋತಿ ಗಂಧರ್ವೈಸ್ಸಹ ಮೋದತೇ ।**
**ಅನುವ್ರಜ್ಯಾತಿಥಿಂ ರಾಮ ಗೋದಾನಫಲಮಾಪ್ನುಯಾತ್ ॥ ೫೬ ॥**

**ತಸ್ಮಾತ್ಸರ್ವಪ್ರಯತ್ನೇನ ಪೂಜಯೇದತಿಥಿಂ ಸದಾ ।**
**ರಾಜನ್ಯಾ ವಿಪ್ರದೈವತ್ಯಾಃ ನಾರ್ಯಶ್ಚ ಪತಿದೇವತಾಃ ।**
**ಗೃಹಸ್ಥೋತಿಥಿದೈವತ್ಯಸ್ತಸ್ಮಾತ್ತಂ ಪೂಜಯೇತ್ಸದಾ ॥ ೫೭ ॥**

---

ಗೃಹಸ್ಥನು ಅಶ್ವಮೇಧದ ಫಲವನ್ನೇ ಹೊಂದುತ್ತಾನೆ. ಆ ಅತಿಥಿಗೆ ತಾಂಬೂಲವನ್ನು ಕೊಟ್ಟು ಸಂತೋಷಪಡಿಸಿದವನು ಗಂಧರ್ವ ಲೋಕದಲ್ಲಿ ಗಂಧರ್ವರೊಡನೆ ಸುಖ ಪಡುತ್ತಾನೆ. ಸ್ವರ್ಗಸಾಮ್ರಾಜ್ಯದಿಂದ ಗೌರವಿಸಲ್ಪಡುತ್ತಾನೆ.

೫೫-೫೬ ಅತಿಥಿಗೆ ಇತಿಹಾಸಪುರಾಣಗಳನ್ನು ಶ್ರವಣಮಾಡಿಸಿದವನು ಗೋದಾನದ ಫಲವನ್ನು ಹೊಂದುತ್ತಾನೆ. ಅತಿಥಿಗಳಿಗೆ ಗೋದಾನದಿಂದಲೂ, ದ್ರವ್ಯದಿಂದಲೂ ಸಂತೋಷಪಡಿಸುವವನು ಮಹಾಫಲವನ್ನು ಹೊಂದಿ ಗಂಧರ್ವ ಲೋಕದಲ್ಲಿ ಸುಖಿಸುತ್ತಾನೆ. ಅತಿಥಿಯನ್ನು ಗಮನಕಾಲದಲ್ಲಿ ಅನುಸರಿಸಿ ಹೋಗಿ ಉಪಚರಿಸಿದವರು ಗೋದಾನ ಫಲವನ್ನು ಹೊಂದುತ್ತಾರೆ.

೫೭-೫೮. ಆದುದರಿಂದ ಗೃಹಸ್ಥಧರ್ಮದಲ್ಲಿರುವವನು ತನ್ನ ಸರ್ವಪ್ರಯತ್ನ ದಿಂದಲೂ ಅತಿಥಿಪೂಜೆಯನ್ನು ಯಾವಾಗಲೂ ಮಾಡಬೇಕು. ಕ್ಷತ್ರಿಯನು ಬ್ರಾಹ್ಮಣ ನನ್ನೇ ದೇವತೆ ಎಂದು ಭಾವಿಸುವಂತೆಯೂ, ಪತಿವ್ರತೆಯಾದ ಕುಲವನಿತೆಯು ಪತಿಯನ್ನೇ ದೇವತೆ ಎಂದು ಭಾವಿಸುವಂತೆಯೂ, ಗೃಹಸ್ಥನು ಅತಿಥಿಯನ್ನೇ ದೇವತೆ ಎಂದು ಭಾವಿಸಬೇಕು. ಆದುದರಿಂದ ಗೃಹಸ್ಥನಾದವನು ಅತಿಥಿಯನ್ನು ಯಾವಾ ಗಲೂ ಪೂಜಿಸುತ್ತಿರಬೇಕು. ಯಾವ ಮನುಷ್ಯನು ಸುಲಭವಾದ ಹುಲ್ಲು, ಜಲ, ಮೃದುವಾದ ವಾಣಿ ಇವುಗಳಿಂದಲಾದರೂ ಶಕ್ತಿಗೆ ತಕ್ಕಂತೆ ಅತಿಥಿಗಳ ಪೂಜೆಯನ್ನು ಮಾಡುತ್ತಾನೆಯೋ ಅಂತಹ ಗೃಹಸ್ಥನು ದೇವತೆಗಳ ಸಭೆಯಲ್ಲಿ ದೇವತೆಗಳ

**ಸತತಮಿಹ ನರೋಯಃ ಪೂಜನಂ ಚಾತಿಥೀನಾಂ**
**ತೃಣಜಲಮೃದುವಾಕ್ಯೈಃ ಸಾರಶಕ್ತ್ಯಾವಿದಧ್ಯಾತ್ ।**
**ಸುರಸದಸಿ ಸ ಪೂಜ್ಯೋ ದೇವತಾನಾಂ ತಥಾ**
**ಸ್ಯಾದ್ಭವತಿ ಚ ನಂಲೋಕೇ ಜಾಯಮಾನಃ ಸಮೃದ್ಧಃ ॥ ೫೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರವಾಕ್ಯೇ ವೈಶ್ವದೇವಕಥನಂ ನಾಮ ದ್ವಿನವತಿತಮೋऽಧ್ಯಾಯಃ**

---

ಮಧ್ಯದಲ್ಲಿ ಪೂಜ್ಯನೂ ಆಗುತ್ತಾನೆ. ಒಂದುವೇಳೆ ಭೂಮಿಯಲ್ಲಿ ಅವನು ಪುನಃ ಹುಟ್ಟುವುದಾದರೆ ಸಂಪತ್ತಿನಿಂದ ಕೂಡಿಯೇ ಹುಟ್ಟುತ್ತಾನೆ. (ಆಗರ್ಭ ಶ್ರೀಮಂತ ನಾಗಿ ಎಂದು ತಾತ್ಪರ್ಯ.)

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ವೈಶ್ವದೇವಕಥನವೆಂಬ ತೊಂಭತ್ತೆರಡನೆಯ ಅಧ್ಯಾಯ ಮುಗಿದಿದೆ.



## ತೊಂಭತ್ತೆರಡನೇ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ದೇವತಾರ್ಚನೆಯಾದ ನಂತರ ಗೃಹಸ್ಥನು ಮಾಡಬೇಕಾದ ವೈಶ್ವದೇವವೆಂಬ ಗೃಹ್ಯಕರ್ಮವನ್ನೂ ಬಲಿಪ್ರದಾನದ ಕ್ರಮವನ್ನೂ ಅನಂತರ ಮಾಡಬೇಕಾದ ಅತಿಥಿಪೂಜೆಯನ್ನೂ ಸಹ ವಿಸ್ತಾರವಾಗಿ ನಿರೂಪಿಸಿರುವರು.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

# ದ್ವಿತೀಯಖಂಡೇ

---

## ತ್ರಿನವತಿತಮೋಽಧ್ಯಾಯಃ

॥ ಪುಷ್ಕರ ಉವಾಚ ॥

**ಚಂದ್ರಸ್ಯ ಯದಿವಾ ಭಾನೋರ್ಯಸ್ಮಿನ್ನಹನಿ ಭಾರ್ಗವ ।**
**ಗ್ರಹಣಂ ತು ಭವೇತ್ತತ್ರ ನ ಪೂರ್ವಂ ಭೋಜನಕ್ರಿಯಾ ॥ ೧ ॥**

**ನಾಚರೇತ್ಸಗ್ರಹೇ ತಸ್ಮಿಂಸ್ತಥೈವಾಸ್ತಮುಪಾಗತೇ ।**
**ಯಾವತ್ಸ್ಯಾದುದಯಂ ತಸ್ಯ ನಾಶ್ನೀಯಾತ್ತಾವದೇವ ತು ॥ ೨ ॥**

**ಗೋಬ್ರಾಹ್ಮಣೋಪರಾಗೇ ನ ಚಾಶ್ನೀಯಾತ್ಪ್ರಯತ್ನತಃ ।**
**ನ ರಾಜ್ಞೋ ವಿಪ್ಲವೇಽಶ್ನೀಯಾ ಸುರಾರ್ಚಾವಿಪ್ಲವೇ ತಥಾ ॥ ೩ ॥**

---

## ತೊಂಭತ್ತಮೂರನೆಯ ಅಧ್ಯಾಯವು.

೧–೨. ಎಲೈ ಭಾರ್ಗವನೇ, ಚಂದ್ರನಿಗಾಗಲಿ, ಸೂರ್ಯನಿಗಾಗಲಿ, ಗ್ರಹಣ ಉಂಟಾದಲ್ಲಿ ಆ ದಿನದಲ್ಲಿ ಗ್ರಹಣಕ್ಕೆ ಮೊದಲು ಭೋಜನಮಾಡಕೂಡದು. ಆ ಚಂದ್ರ ಸೂರ್ಯರು ಗ್ರಹಣದೊಡನೆಯೇ ಅಸ್ತಹೊಂದಿದಲ್ಲಿ ಪುನಃ ಅವರು ಬಿಡುಗಡೆ ಹೊಂದಿ ಉದಯಿಸುವ ವರಿಗೂ ಊಟಮಾಡಕೂಡದು.

೩–೪. ಗ್ರಹಣ ಸಂದರ್ಭದಲ್ಲಿ ಗೋವುಗಳೂ, ಬ್ರಾಹ್ಮಣರೂ ಸಹ ಪ್ರಯತ್ನ ದಿಂದ ಭೋಜನವನ್ನು ಬಿಡಬೇಕು. ದೊರೆಗೆ ವಿಪತ್ತು ಸಂಭವಿಸಿದ ಕಾಲದಲ್ಲಿಯೂ, ದೇವಗೃಹದಲ್ಲಿ ಆಕಸ್ಮಿಕವಾಗಿ ಉಂಟಾದ (ಪೂಜೆಗೆ ಪ್ರತಿಬಂಧಕವಾದ) ತೊಂದರೆ ಯಲ್ಲಿಯೂ ಸಹ ಭೋಜನಮಾಡಬಾರದು. ಗೃಹಧರ್ಮಕ್ಕೆ ಸೇರಿರುವ ಹೋಮ

ನ ಹುತ್ವಾ ನ ಚ ದತ್ವಾ ಚ ನಾಶೌಚೇ ನ ಚ ಗರ್ಹಿತಂ ।
ನಾಪಥ್ಯಂ ನ ಚ ಬಾಲಾನಾಂ ತಥಾ ಭಾರ್ಗವ ಪಶ್ಯತಾಂ ॥ ೪ ॥

ಪ್ರಾರ್ಥಿತಂ ಬಾಲಕಾನಾಂ ಚ ದಾತವ್ಯಂ ಸ್ಯಾತ್ಪ್ರಯತ್ನತಃ ।
ಬಾಲಾನಾಂ ಪ್ರಾರ್ಥಿತಂ ದತ್ವಾ ನಾಕಲೋಕೇ ಮಹೀಯತೇ ॥ ೫ ॥

ಬಾಲಕಾ ಲಾಲನೀಯಾಶ್ಚ ಧರ್ಮಕಾಮೈಸ್ಸದಾ ನರೈಃ ।
ತೇಷಾಂ ಭೋಜ್ಯಪ್ರದಾನೇನ ಗೋದಾನಫಲಮಾಪ್ನುಯಾತ್ ॥ ೬ ॥

ತೇಷಾಂ ಕ್ರೀಡನಕಂ ದತ್ವಾ ಮೋದತೇ ನಂದತೇ ಚಿರಂ ।
ಆಹ್ಲಾದಂ ಯಾಂತಿ ಸತತಂ ಯಸ್ಮಿನ್ ದೃಷ್ಟೇ ತು ಬಾಲಕಾಃ ॥ ೭ ॥

ಸೌಭಾಗ್ಯಂ ಮಹದಾಪ್ನೋತಿ ಯತ್ರಯತ್ರಾಭಿಜಾಯತೇ ।
ತಸ್ಮಾತ್ಸರ್ವಪ್ರಯತ್ನೇನ ಬಾಲಾನಗ್ರೇ ತು ಭೋಜಯೇತ್ ॥ ೮ ॥

---

ವನ್ನು ಮಾಡದೆಯೂ, ವೈಶ್ವದೇವಾದಿಗಳಲ್ಲಿ ಬಲಿಪ್ರದಾನ ಅತಿಥಿಪೂಜೆ ಇತ್ಯಾದಿಗಳನ್ನು ಮಾಡದೆಯೂ, ಭೋಜನಮಾಡಕೂಡದು. ಆಶೌಚಾನ್ನವನ್ನೂ, ದುಷ್ಟವಾದ ಅನ್ನವನ್ನೂ ತನಗೆ ಅಪಥ್ಯವಾದ ಅನ್ನವನ್ನೂ ಸಹ ಭುಂಜಿಸಬಾರದು. ಹುಡುಗರು ಊಟಮಾಡದಿರುವಾಗ ಅವು ನೋಡುತ್ತಿರುವಾಗಲೇ ತಾನು ಮಾತ್ರ ಊಟಮಾಡಬಾರದು.

೫–೬. ಹುಡುಗರು ಅಪೇಕ್ಷಿಸಿದ ಭಕ್ಷ್ಯಾದಿಗಳನ್ನು ಪ್ರಯದಿಂದಲಾದರೂ ಕೊಡಲೇಬೇಕು. ಬಾಲಕರ ಅಪೇಕ್ಷೆಯನ್ನು ಪೂರ್ತಿಗೊಳಿಸಿ ಸಂತೋಷಪಡಿಸುವವನು ಸ್ವರ್ಗ ಸುಖಕ್ಕೆ ಪಾತ್ರನಾಗುತ್ತಾನೆ. ಧರ್ಮಾಭಿಲಾಷೆಯುಳ್ಳವರು ಯಾವಾಗಲೂ ಮಕ್ಕಳನ್ನು ಲಾಲಿಸಿ ಪೋಷಿಸಬೇಕು. ಅವರಿಗೆ ಇಷ್ಟವಾದ ಭೋಜ್ಯವಸ್ತುಪ್ರದಾನದಿಂದ ಗೃಹಸ್ಥನು ಗೋದಾನ ಫಲವನ್ನೇ ಹೊಂದುತ್ತಾನೆ.

೭–೮. ಆ ಬಾಲಕರಿಗೆ ಆಡುವ ಪದಾರ್ಥಗಳನ್ನೂ ಕೊಟ್ಟು ಸಂತೋಷಪಡಿಸುವವನು ತಾನೂ ಬಹುಕಾಲ ಸಂತುಷ್ಟನಾಗಿರುವನು. ಯಾವ ವಸ್ತುವನ್ನು ನೋಡಿ ಆಡುವ ಆಸೆಯಿಂದ ಹುಡುಗರು ಬಹಳ ಸಂತೋಷಹೊಂದುತ್ತಾರೆಯೋ ಅಂತಹ ಆಟಪಾಟಕ್ಕೆ ಅರ್ಹವಾದ ವಸ್ತುಗಳಿಂದ ಅವರು ಸಂತೋಷ ಹೊಂದಿದಲ್ಲಿ

ಅಭುಕ್ತವತ್ಸು ಬಾಲೇಷು ನ ಚಾಶ್ನೀಯಾತ್ಕಥಂಚನ ।
ಯೋ ನ ದದ್ಯಾನ್ನಚಾಶ್ನೀಯಾತ್ ಕದಾಚಿದಪಿ ತನ್ಮಯೇ ॥ ೯ ॥

ಯ ಏಕೋ ಮಿಷ್ಟಮಶ್ನಾತಿ ನ ತತೋಽನ್ಯೋಽಸ್ತಿ ಪಾತಕೀ ।
ನೈಕವಾಸಾಃ ತಥಾಶ್ನೀಯಾದ್ಭಿನ್ನಭಾಂಡೇ ನ ಮಾನವಃ ॥ ೧೦ ॥

ಭಿನ್ನಾಸನೋಽಪವಿಷ್ಟಶ್ಚ ಶಯನೀಯಗತಸ್ತಥಾ ।
ಅನಾರ್ದ್ರಪಾಣಿ ಪಾದಾಂತಸ್ತಥಾ ಚೈವಾರ್ದ್ರಮಸ್ತಕಃ ॥ ೧೧ ॥

---

ಅದರಿಂದ ಗೃಹಸ್ವಾಮಿಯೂ ಸೌಭಾಗ್ಯವಂತನಾಗುತ್ತಾನೆ. ಆದುದರಿಂದ ಗೃಹಸ್ವಾಮಿಯಾದ ಯಜಮಾನನು ಸರ್ವಪ್ರಯತ್ನದಿಂದಲೂ ಬಾಲಕರಿಗೆ ಮೊದಲು ಭೋಜನಮಾಡಿಸಿ ಸಂತೋಷ ಉಂಟುಮಾಡಬೇಕು.

೯–೧೦. ಬಾಲಕರು ಊಟಮಾಡದಿರುವಾಗ ಗೃಹಸ್ಥನು ಊಟ ಮಾಡಲೇಬಾರದು. ಬಾಲಕರಿಗೆ ಕೊಡಲು ಅವಕಾಶವಿಲ್ಲದಿರುವಾಗ ತಾನೂ ಸಹ ಅದನ್ನು ಭುಂಜಿಸಲೇಬಾರದು. ಬಾಲಕರಿಂದ ತುಂಬಿದ ಮನೆಯಲ್ಲಿ ಯಾವನೊಬ್ಬನು ಬಾಲಕರಿಗೆ ಕೊಡದೆ ವಂಚಿಸಿ ತಾನೊಬ್ಬನೇ ಸ್ವಾದುವಾದ ಭೋಜ್ಯಪದಾರ್ಥಗಳನ್ನು ಭುಂಜಿಸುವನೋ ಅವನಿಗಿಂತಲೂ ಪಾಪಿಯಾದವನು ಮತ್ತೊಬ್ಬನಿಲ್ಲ. ಮತ್ತು ಒಂದೇ ವಸ್ತ್ರವನ್ನು ಧರಿಸಿ ಭೋಜನ ಮಾಡಬಾರದು. ಒಡೆದು ಹೋದ ಭೋಜನ ಪಾತ್ರೆಯಲ್ಲಿಯೂ ಊಟಮಾಡಬಾರದು.

೧೧–೧೨. ಒಡೆದು ಹೋದ ಆಸನದಲ್ಲಿ ಕುಳಿತು ಮತ್ತು ಹಾಸಿಗೆಯ ಮೇಲೆ ಕುಳಿತು ಭೋಜನಮಾಡಕೂಡದು. ಮತ್ತು ಕೈಕಾಲುಗಳನ್ನು ತೊಳೆದುಕೊಳ್ಳದೆ ಊಟಮಾಡಬಾರದು. (ನೀರಿನಿಂದ ತೊಳೆದ ಕೈಕಾಲುಗಳು ಊಟಕ್ಕೆ ಕುಳಿತುಕೊಳ್ಳುವಾಗ ಒದ್ದೆಯಾಗಿಯೇ ಇರಬೇಕೆಂದು ತಾತ್ಪರ್ಯ) ನೀರಿನಿಂದಾಗಲಿ ತೈಲಾದಿಗಳಿಂದಾಗಲಿ ತಲೆಯು ಒದ್ದೆಯಾಗಿರುವಾಗ ಭೋಜನಕ್ಕೆ ಕೂಡಬಾರದು. ಮತ್ತು ಭಕ್ಷ್ಯಗಳನ್ನು ತೊಡೆಯ ಮೇಲೆ ಇಟ್ಟುಕೊಂಡು ಭಕ್ಷಿಸಬಾರದು. ಉಪ್ಪನ್ನು ಕೈಯಿನಿಂದ ಬಡಿಸಿಕೊಳ್ಳಬಾರದು. ಮತ್ತು ರಾತ್ರಿಯಲ್ಲಿ ಮಾಂಸವನ್ನೂ ಹಾಲನ್ನೂ ಬೇರೆ ಬೇರೆಯಾಗಿ ಭುಂಜಿಸಬಾರದು. ಹಲ್ಲಿನಿಂದ ಪದಾರ್ಥಗಳನ್ನು ಪುನಃ ಪುನಃ ಕಚ್ಚಿ ತಿನ್ನಬಾರದು. (ಅಂದರೆ ಭಕ್ಷ್ಯಮೊದಲಾದುವನ್ನು ಕೈಯಿನಿಂದ ಮುರಿದು

ನೋತ್ಸಂಗೇ ಭಕ್ಷಯೇದ್ಭಕ್ಷ್ಯಾನ್ನಪಾಣೌ ಲವಣಂ ತಥಾ ।
ಸಕೃದ್ಧಾನಂ ಪೃಥಕ್ಪಾನಂ ಮಾಂಸೇನ ಪಯಸಾ ನಿಶಿ ॥ ೧೨ ॥

ದಂತಚ್ಛೇದನಮುಷ್ಣಂ ಚ ಸಪ್ತಕಂ ತು ಸುವರ್ಜಯೇತ್ ।
ದಧಿ ರಾತ್ರೌ ನ ಚಾಶ್ನೀಯಾಜ್ಜಲಂ ನಾಂಜಲಿನಾ ಪಿಬೇತ್ ॥ ೧೩ ॥

ಸರ್ವಂ ತೈಲಸಮೃದ್ಧಂ ಚ ನಾದ್ಯಾದಸ್ತಮಿತೇ ರವೌ ।
ವರ್ಜನೀಯಾ ದಿವಾ ಧಾನಾಃ ಕೋವಿದಾರಃ ಸದೈವ ತು ॥ ೧೪ ॥

ದಿವಾ ಧಾನಾಃ ಸ್ವರಂ ಹಂತಿ ರಾತ್ರೌ ಚ ದಧಿ ಸಕ್ತುಷು ।
ಅಲಕ್ಷ್ಮೀಃ ಕೋವಿದಾರೇಷು ನಿತ್ಯಮೇವ ಕೃತಾಲಯಾ ॥ ೧೫ ॥

ನಿಃಶೇಷಕೃತ್ತಥಾ ರಾಮ ನ ಸ್ಯಾದನ್ಯತ್ರ ಮಾಕ್ಷಿಕಾತ್ ।
ಕ್ಷೀರಸ್ಯ ರಾಮ ಸಕ್ತೂನಾಂ ಪಾಥ[1]ಸಸ್ಯೋದಕಸ್ಯ ಚ ॥ ೧೬ ॥

---

ಭಕ್ಷಿಸಬೇಕೇ ಹೊರತು ಹಲ್ಲಿನಿಂದ ಒಂದು ಸಲ ಕಚ್ಚಿ ತಿಂದು ಪುನಃ ಆ ಭಕ್ಷ್ಯವನ್ನು ಎಲೆಯಲ್ಲಿಟ್ಟು ಪುನಃ ಅದನ್ನು ಭಕ್ಷಿಸಬಾರದು ಒಂದು ಸಲ ಕಚ್ಚಿ ತಿಂದು ಕೆಳಗೆ ಇಟ್ಟ ನಂತರ ಅದು ಉಚ್ಛಿಷ್ಟವೇ ಆಗುತ್ತದೆ. ಆದ್ದರಿಂದ ಹಲ್ಲಿನಿಂದ ಬಾರಿಬಾರಿಗೂ ಕಚ್ಚಿ ತಿನ್ನಬಾರದೆಂದು ತಾತ್ಪರ್ಯ) ಮತ್ತು ಬಹಳ ಬಿಸಿಯಾದ ಪದಾರ್ಥವನ್ನೂ ಭುಂಜಿಸಬಾರದು. ಈ ಏಳು ವಿಧವಾದ ದೋಷಗಳನ್ನು ಭೋಜನದಲ್ಲಿ ವರ್ಜಿಸಲೇಬೇಕು.

೧೩–೧೫. ರಾತ್ರಿಯಲ್ಲಿ ಮೊಸರನ್ನು ಭಕ್ಷಿಸಬಾರದು. ನೀರನ್ನು ಕೈಯಿನಿಂದ ಯಾವಾಗಲೂ ಕುಡಿಯಬಾರದು. ಎಣ್ಣೆಯಿಂದ ಕೂಡಿದ ಎಲ್ಲಾ ಪದಾರ್ಥಗಳನ್ನೂ ಸಹ ಸೂರ್ಯನು ಅಸ್ತಹೊಂದಿದ ಮೇಲೆ (ರಾತ್ರಿಯಲ್ಲಿ) ಭುಂಜಿಸಬಾರದು. ಹಗಲಿನಲ್ಲಿ ಅರಳು, ಪುರಿ ಇವನ್ನು ಭಕ್ಷಿಸಕೂಡದು. ಕೆಂಪುಕಂಚುವಾಳದ ಹೂವನ್ನು ಯಾವಾಗಲೂ ಭಕ್ಷಿಸಬಾರದು. ಹಗಲಿನಲ್ಲಿ ಅರಳನ್ನೂ, ರಾತ್ರಿಯಲ್ಲಿ ಅರಳುಹಿಟ್ಟಿನಿಂದ ಕೂಡಿದ ಮೊಸರನ್ನೂ ಭುಂಜಿಸಿದವನಿಗೆ ಸರ್ವವೂ ನಾಶವಾಗುತ್ತದೆ. ಕೆಂಪುಕಂಚುವಾಳವನ್ನು ಭಕ್ಷಿಸುವವನು ಯಾವಾಗಲೂ ದರಿದ್ರನಾಗಿಯೇ ಇರುತ್ತಾನೆ.

೧೬–೧೭. ಭೋಜನಮಾಡುವಾಗ ಜೇನನ್ನು ಹೊರತು ಉಳಿದ ವಸ್ತುಗಳನ್ನು ನಿಶ್ಶೇಷವಾಗಿ ಭಕ್ಷಿಸಬಾರದು. ಹಾಲು, ಹುರಿಟ್ಟು, ಪಾಯಸ, ಉದಕ

---

1. ಇಲ್ಲಿ ಪಾಯಸಸ್ಯ ಎಂಬ ಪಾಠವನ್ನು ಊಹಿಸಲಾಗಿದೆ.

ಶೇಷಂ ತು ಕಾರ್ಯಮನ್ಯಸ್ಯ ನ ತು ನಿಃಶೇಷಕೃದ್ಭವೇತ್ ।
ಶೂದ್ರಾಯ ದದ್ಯಾನ್ನೋಚ್ಛಿಷ್ಟಂ ನೋಚ್ಛಿಷ್ಟಶ್ಚ ಘೃತಂ ಸ್ಪೃಶೇತ್ ॥ ೧೭ ॥

ಮೂರ್ಧಾನಂ ನ ಸ್ಪೃಶೇದ್ರಾಮ ನ ಸ್ಪೃಶೇಚ್ಚ ಹುತಾಶನಂ ।
ನಾನುಕುತ್ಸಾ ಚ ಕರ್ತವ್ಯಾ ಸುಮನಾಸ್ತನ್ಮನಾಸ್ತಥಾ ॥ ೧೮ ॥

ಭುಂಜೀತ ಪ್ರಯತೋ ಭೂತ್ವಾ ದಿಶಶ್ಚಾನವಲೋಕಯನ್ ।
ವಾಮಹಸ್ತೇನ ಪಾನೀಯಂ ಪೀತೋಚ್ಛಿಷ್ಟಂ ತಥೈವ ಚ ॥ ೧೯ ॥

ನ ಪಿಬೇನ್ನ ತಥಾಶ್ನೀಯಾತ್ಕೃತ್ವಾ ಪರ್ಯಸ್ತಿಕಂ ನರಃ ।
ಪಾದಪ್ರಸಾರಣಂ ಕೃತ್ವಾ ನ ಚ ವೇಷ್ಟಿತಮಸ್ತಕಃ ॥ ೨೦ ॥

ಆಚಮ್ಯ ತು ತತಃ ಕಾರ್ಯಂ ದಂತಕಾಷ್ಠಸ್ಯ ಭಕ್ಷಣಂ ।
ಭೂಯೋಪ್ಯಾಚಮ್ಯ ಕರ್ತವ್ಯಂ ತತಸ್ತಾಂಬೂಲಧಾರಣಂ ॥ ೨೧ ॥

---

ಇವನ್ನು ಬಿಟ್ಟು ಉಳಿದ ಪದಾರ್ಥಗಳನ್ನು ಸಶೇಷವಾಗಿಯೇ ಭಕ್ಷಿಸಬೇಕು. ನಿಶ್ಶೇಷವಾಗಿ ಭಕ್ಷಿಸಬಾರದು. ಶೂದ್ರನಿಗೆ ಉಚ್ಛಿಷ್ಟವನ್ನು (ಎಂಜಲು) ಕೊಡಬಾರದು. ತಾನು ಎಂಜಲಕೈಯ್ಯಲ್ಲಿರುವಾಗ ತುಪ್ಪವನ್ನು ಮುಟ್ಟಬಾರದು.

೧೮-೧೯. ತಲೆಯನ್ನು ತಾನು ಮುಟ್ಟಬಾರದು. (ತಲೆಯ ಮೇಲೆ ಕೈಗಳನ್ನು ಇಡಬಾರದೆಂದು ತಾತ್ಪರ್ಯ) ಅಗ್ನಿಯನ್ನು ಸ್ಪರ್ಶಮಾಡಬಾರದು. ಶಾಂತಮನಸ್ಸಿನಿಂದಿರುವವನು ಅಣಕಿಸುತ್ತಿರುವ ಮತ್ತೊಬ್ಬನನ್ನು ನೋಡಿ ಅವನಂತೆಯೇ ಮನೋದೋಷಹೊಂದಿ ಪುನಃ ಅವನನ್ನು ಅಣುಕಿಸಬಾರದು. ಭೋಜನಕಾಲದಲ್ಲಿ ಅತ್ತಿತ್ತ ನೋಡದೆ ಶುದ್ಧನಾಗಿ ಊಟಮಾಡಬೇಕು. ಭೋಜನಮಾಡುವಾಗ ಒಂದಾವರ್ತಿ ಕುಡಿದು ಉಳಿದ ನೀರನ್ನು ಪುನಃ ಎಡಗೈಯಿನಿಂದ ಕುಡಿಯಬಾರದು. ಮತ್ತು

೨೦-೨೧. ಪರ್ಯಸ್ತಿಕವೆಂಬ ಆಸನದಲ್ಲಿ ಕುಳಿತು ಭುಂಜಿಸಬಾರದು. (ಪರ್ಯಸ್ತಿಕವೆಂದರೆ ಎರಡು ಮಂಡಿಗಳನ್ನೂ ಮೇಲ್ಮುಖವಾಗಿ ಮಾಡಿ ಯೋಗಕ್ಕೆ ತಕ್ಕ ಆಸನವಿಶೇಷ) ಮತ್ತು ಕಾಲನ್ನು ನೀಡಿಕೊಂಡೂ, ತಲೆಗೆ ವಸ್ತ್ರವನ್ನು ಸುತ್ತಿಕೊಂಡೂ ಸಹ ಭೋಜನಮಾಡಬಾರದು. ಅನಂತರ ಆಚಮನಮಾಡಿ ದಂತಗಳ ಶೋಧನೆಗಾಗಿ ಕಾಷ್ಠವನ್ನು ಉಪಯೋಗಿಸಬೇಕು. (ಇಲ್ಲಿಯೂ ದಂತಧಾವನ

ಶ್ರವಣಂ ಚೇತಿಹಾಸಸ್ಯ ತತಃ ಕುರ್ಯಾತ್ಸಮಾಹಿತಃ ।
ಶಾಸ್ತ್ರಾನ್ವೇಷಾ ಚ ಕರ್ತವ್ಯಾ ತತಃ ಸಮ್ಯಕ್ ಭೃಗೂತ್ತಮ ॥ ೨೨ ॥

ಶಾಸ್ತ್ರಾನ್ವವೇಕ್ಷಣಂ ಕೃತ್ವಾ ಕೃತ್ವಾ ಚಂಕ್ರಮಣಂ ತತಃ ।
ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ತಿಷ್ಠೇತ್ಪ್ರಯತಮಾನಸಃ ॥ ೨೩ ॥

ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠೇತ್ ಉಪರಿಷ್ಟಾಚ್ಚ ಪಶ್ಚಿಮಾಂ ।
ಅರ್ಕಸ್ಯೋದಯನಾತ್ತಾವದ್ಯಾವದ್ಭಾಸ್ಕರದರ್ಶನಂ ॥ ೨೪ ॥

ಪೂರ್ವಾಂ ಸಂಧ್ಯಾಂ ಜಪೇತ್ಸ್ನಾತಃ ಪಶ್ಚಿಮಾಂ ಸತಿ ಭಾಸ್ಕರೇ ।
ಉಪವಿಷ್ಟೋ ಜಪೇತ್ತಾವದ್ಯಾವತ್ತಾರಕದರ್ಶನಂ ॥ ೨೫ ॥

---

ಪ್ರಕರಣದಲ್ಲಿಯೂ ಸಹ ಮುಖ್ಯನಾದ ಭಕ್ಷಣಕ್ಕೆ ಪ್ರಸಂಗವಿಲ್ಲ. ವಿವಕ್ಷಿತವೂ ಅಲ್ಲ. ಆದರೂ ಪೂರ್ವೋತ್ತರ ಕಾಲಗಳಲ್ಲಿ ಆಚಮನವನ್ನು ವಿಧಿಸುವುದಕ್ಕಾಗಿ ಭಕ್ಷಣ ರೂಪವನ್ನು ಆರೋಪಿಸಿ ಹೇಳಲಾಗಿದೆ. ಭೋಜನದಲ್ಲಿ ಪೂರ್ವೋತ್ತರ ಕಾಲದಲ್ಲಿ ಆಚಮನವು ವಿಹಿತವಾಗಿರುವುದರಿಂದ ಇಲ್ಲಿಯೂ ಆ ಭೋಜನದ ಆರೋಪ ದಿಂದ ಆಚಮನಪ್ರಾಪ್ತಿಯೇ ಇದಕ್ಕೆ ಪ್ರಯೋಜನವೆಂದು ತಿಳಿಯಬೇಕು. ಧರ್ಮ ಶಾಸ್ತ್ರದಲ್ಲಿ ಪೂರ್ವಮೀಮಾಂಸಾ ಮರ್ಯಾದೆಯನ್ನು ಅನುಸರಿಸಿ ಕೆಲವು ಕರ್ಮ ಗಳನ್ನು ಸಾಕ್ಷಾತ್ತಾಗಿ ವಿಧಾನಮಾಡುವುದೂ ಕೆಲವನ್ನು ಅತಿದೇಶದಿಂದ ಸಿದ್ಧಪಡಿಸು ವುದೂ ವಾಡಿಕೆ ಇದೆ) ಅನಂತರವೂ ಪುನಃ ಆಚಮನಮಾಡಿ ತಾಂಬೂಲವನ್ನು ಸ್ವೀಕರಿಸಬೇಕು.

೨೨-೨೩. ಅನಂತರ ಶಾಂತಚಿತ್ತನಾಗಿ ಇತಿಹಾಸಾದಿಗಳ ಶ್ರವಣವನ್ನು ಮಾಡಬೇಕು. ಈ ಸಮಯದಲ್ಲಿ ಶಾಸ್ತ್ರಾರ್ಥ ಪರಿಶೀಲನೆಯನ್ನೂ ಸಹ ವಿಮರ್ಶ ದೃಷ್ಟಿಯಿಂದ ಚೆನ್ನಾಗಿ ಮಾಡಬೇಕು. ಈ ರೀತಿ ಶಾಸ್ತ್ರವನ್ನು ವಿಚಾರಮಾಡಿದ ನಂತರ ಸಂಚಾರಮಾಡಿಕೊಂಡು ಬಂದು ಸಾಯಂಕಾಲದ ಸಂಧ್ಯಾವಂದನವನ್ನು ಮಾಡಿ ಶುದ್ಧಮನಸ್ಸಿನಿಂದ ಇರಬೇಕು.

೨೪-೨೫. ಪ್ರಾತಃಕಾಲದಲ್ಲಿ ಸಂಧ್ಯಾಂಗವಾದ ಜಪವನ್ನು ನಿಂತುಕೊಂಡೇ ಮಾಡಬೇಕು. ಸಾಯಂ ಸಂಧ್ಯಾಕಾಲದಲ್ಲಿ ಕುಳಿತುಕೊಂಡೇ ಮಾಡಬೇಕು. ಪ್ರಾತಃಕಾಲದ ಸಂಧ್ಯಾವಂದನವನ್ನು ಸ್ನಾನಮಾಡಿಯೇ ಮಾಡಬೇಕು. ಸೂರ್ಯೋ ದಯಕ್ಕೆ ಮೊದಲು ಪ್ರಾರಂಭಿಸಿ ಸೂರ್ಯನ ದರ್ಶನವಾಗುವವರಿಗೂ ನಿಂತುಕೊಂಡು

**ಸಂಪೂಜನಂ ದೇವವರಸ್ಯ ಕೃತ್ವಾ**
**ತತಶ್ಚ ಕುರ್ಯಾತ್ಖಲು ವೈಶ್ವದೇವಂ ।**
**ಭುಕ್ತ್ವಾ ತತೋಽನ್ನಂ ಲಘು ಯಚ್ಚ ಹೃದ್ಯಂ**
**ತತಃ ಸ್ವಪೇದ್ಭಾರ್ಗವವಂಶಮುಖ್ಯ　　॥ ೨೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಭೋಜನ ವಿಧಿರ್ನಾಮ ತ್ರಿನವತಿತಮೋಽಧ್ಯಾಯಃ**

---

ಸಂಧ್ಯಾಂಗವಾದ ಜಪವನ್ನು ಮಾಡಬೇಕು. ಸೂರ್ಯನು ಪಶ್ಚಿಮ ದಿಕ್ಕನ್ನು ಹೊಂದಿದ ಮೇಲೆ ಅದು ಮೊದಲುಗೊಂಡು ನಕ್ಷತ್ರಗಳು ಕಾಣಿಸಿಕೊಳ್ಳುವವರಿಗೂ ಕುಳಿತುಕೊಂಡೇ ಸಂಧ್ಯಾಜಪವನ್ನು ಮಾಡಬೇಕು

೨೬. ಅನಂತರ ಭಗವಂತನ ಪೂಜಾವಿಧಿಯನ್ನು ನೆರವೇರಿಸಿ ವೈಶ್ವದೇವ ವನ್ನೂ ಮಾಡಿ ಲಘುವಾಗಿಯೂ, ಸ್ವಾದ್ಯವಾಗಿಯೂ ಇರುವ ಅನ್ನವನ್ನು ಭೋಜನ ಮಾಡಿ ನಂತರ ಶಯನವಿಧಿಯನ್ನು ಆಶ್ರಯಿಸಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಭೋಜನವಿಧಿ ಎಂಬ ತೊಂಭತ್ತಮೂರನೆಯ ಅಧ್ಯಾಯವು ಮುಗಿದಿದೆ.



## ತೊಂಭತ್ತಮೂರನೇ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಭೋಜನ ನಿಯಮವನ್ನು ನಿರೂಪಿಸುವ ಉದ್ದೇಶದಿಂದ ಗ್ರಹಣಕಾಲ ಮೊದಲುಗೊಂಡು ನಾನಾ ನಿಮಿತ್ತಗಳಿಂದ ಭೋಜನದ ನಿಯಮವನ್ನೂ ಸಂಧ್ಯಾವಂದನಾದಿಗಳಲ್ಲಿಯೂ ಕೆಲವು ನಿಯಮಗಳನ್ನೂ ನಿರೂಪಿಸಿರುತ್ತಾರೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

# ದ್ವಿತೀಯಖಂಡೇ

---

## ಚತುರ್ನವತಿತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಶೂನ್ಯಾಲಯೇ ಶ್ಮಶಾನೇ ವಾನೇಕವೃಕ್ಷೇ ಚತುಷ್ಪಥೇ |**
**ಮಹಾದೇವಗೃಹೇ ವಾಪಿ ಮಾತೃವೇಶ್ಮನಿ ವಾ ಸ್ವಪೇತ್ || ೧ ||**

**ನ ಯಕ್ಷನಾಗಾಯತನೇ ಸ್ಕಂದಸ್ಯಾಯತನೇ ತಥಾ ||**
**ಕೂಲಚ್ಛಾಯಾಸು ಚ ತಥಾ ಶರ್ಕರಾಲೋಷ್ಟಪಾಂಸುಷು || ೨ ||**

**ಪ್ರಸ್ವಪೇಚ್ಚ ತಥಾ ದರ್ಭೇ ವಿನಾ ದೀಕ್ಷಾಂ ವ್ರತಂ ನ ಚ |**
**ಧಾನ್ಯಗೋದೇವವೃಕ್ಷಾಣಾಂ ಗುರೂಣಾಂ ಚ ತಥೋಪರಿ || ೩ ||**

---

## ತೊಂಭತ್ತನಾಲ್ಕನೆಯ ಅಧ್ಯಾಯ.

೧–೨. ಯಾರೂ ಇಲ್ಲದಿರುವ ಶೂನ್ಯಗೃಹದಲ್ಲಿಯೂ, ಶ್ಮಶಾನದಲ್ಲಿಯೂ, ಮರಗಳಿಂದ ಕೂಡಿರುವ ರಸ್ತೆಯ ಚೌಕಗಳಲ್ಲಿಯೂ, ರುದ್ರದೇವಾಲಯದಲ್ಲಿಯೂ, ಮಲಗಬಾರದು. ಮತ್ತು ಯಕ್ಷ, ಸರ್ಪ ಇವುಗಳ ಗುಡಿಯಲ್ಲಿಯೂ, ಷಣ್ಮುಖನ ದೇವಾಲಯದಲ್ಲಿಯೂ, ನದಿಯ ದಡದಲ್ಲಿರುವ ಮರಗಳ ನೆರಳಿನಲ್ಲಿಯೂ ಮತ್ತು ನುರುಜುಗಲ್ಲುಗಳು, ಮಣ್ಣುಹೆಂಟೆಗಳು, ಧೂಳಿ ಇವುಗಳಿಂದ ಕೂಡಿರುವ ಸ್ಥಳಗಳಲ್ಲಿಯೂ ಸಹ ಮಲಗಬಾರದು.

೩–೪. ದೀಕ್ಷೆ, ವ್ರತ ಮುಂತಾದ ನಿಯಮಗಳಲ್ಲಿ ಹೊರತು ಇತರ ಕಾಲಗಳಲ್ಲಿ ದರ್ಭೆಯಲ್ಲಿ ಮಲಗಬಾರದು. ಧಾನ್ಯ, ಗೋವು, ದೇವತೆಗಳು, ಮರಗಳು, ಗುರುಜನಗಳು ಇವರ ಮೇಲ್ಭಾಗದಲ್ಲಿಯೂ ಸಹ ಮಲಗಬಾರದು. ಭಿನ್ನವಾದ ಸ್ಥಳದಲ್ಲಿಯೂ, ಅಶುಚಿಯಾದ ಸ್ಥಳದಲ್ಲಿಯೂ, ತಾನೂ ಸಹ ಅಶುಚಿಯಾಗಿರು

ನ ಚಾಪಿ ಭಿನ್ನವಿಷಯೇ ನಾಶುಚೌ ನಾಶುಚಿಸ್ತಥಾ ।
ನಾರ್ದ್ರಪಾದಶ್ಚ ನಗ್ನಶ್ಚ ನೋತ್ತರಾಪರಮಸ್ತಕಃ ॥ ೪ ॥

ನಾಕಾಶೇ ಸರ್ವತಃ ಶೂನ್ಯೇ ನ ಚ ಚೈತ್ಯದ್ರುಮೇ ತಥಾ ।
ನ ಗಚ್ಛೇದ್ಗುರ್ವಿಣೀಂ ನಾರೀಂ ನ ಗಚ್ಛೇತ್ಸಿತಮೂರ್ಧಜಾಂ ॥ ೫ ॥

ರಜಸ್ವಲಾಂ ರೋಗವತೀಂ ನಾಯೋನೌ ನ ಬುಭುಕ್ಷಿತಃ ।
ನಾಭ್ಯಕ್ತೋ ನ ತಥಾಭ್ಯಕ್ತಾಂ ನ ಚ ಪರ್ವಣಿ ಭಾರ್ಗವ ।
ಶುಕ್ರಮೋಕ್ಷಮಥಾಕಾಶೇ ತಿರ್ಯಗ್ಯೋನೌ ಚ ವರ್ಜಯೇತ್ ॥ ೬ ॥

---

ವಾಗಲೂ ಮಲಗಬಾರದು. ವಿಹಿತ ಕಾಲದಲ್ಲಿ ವಿಹಿತ ದೇಶದಲ್ಲಿ ಮಲಗುವಾಗಲೂ ಒದ್ದೆಯಾದ ಕಾಲಿನೊಡನೆ ಮಲಗಬಾರದು. (ಅಂದರೆ ಕಾಲನ್ನು ತೊಳೆದುಕೊಂಡ ಮೇಲೆ ವಸ್ತ್ರಾದಿಗಳಿಂದ ಚೆನ್ನಾಗಿ ಒರಸಿಕೊಂಡು ನೀರಿಲ್ಲದ ಕಾಲಿನಿಂದ ಮಲಗ ಬೇಕು ಎಂದು ತಾತ್ಪರ್ಯ) ವಸ್ತ್ರವಿಲ್ಲದೆ ಬೆತ್ತಲೆಯಾಗಿ ಮಲಗಬಾರದು ಮತ್ತು ತಲೆಯನ್ನು ಉತ್ತರ ದಿಕ್ಕಿಗೆ ಹಾಕಿಕೊಂಡೂ ಮಲಗಬಾರದು.

೫. ಮೇಲೆಯೂ, ಸುತ್ತಲೂ ಆವರಣವಿಲ್ಲದ ಕೇವಲ ಬೈಲಿನಲ್ಲಿಯೂ, ಆಶ್ರಯ ಮಂದಿರಗಳ ಮರದ ಕೆಳಗೂ, ಮಲಗಬಾರದು. ಗರ್ಭಿಣಿಯಾಗಿರುವ ಸ್ತ್ರೀಯಲ್ಲಿ ಪ್ರವೇಶಿಸಬಾರದು. ನರೆತ ಕೂದಲುಳ್ಳ ಸ್ತ್ರೀಯನ್ನೂ, ರಜಸ್ವಲೆಯನ್ನೂ, ರೋಗಿಷ್ಠೆಯನ್ನೂ ಭೋಗಿಸಬಾರದು. ನಿಷಿದ್ಧಯೋನಿಗಳಲ್ಲಿ ರಮಿಸಬಾರದು. ಹಸಿದಿರುವಾಗ ಸ್ತ್ರೀಯಲ್ಲಿ ರಮಿಸಬಾರದು ಮತ್ತು ತಾನು ಎಣ್ಣೆ ಹಚ್ಚಿಕೊಂಡಿರು ವಾಗ ಹಾಗೆಯೇ ಎಣ್ಣೆಯೊಡನೆ ಇರುವಸ್ತ್ರೀಯನ್ನು ಪ್ರವೇಶಿಸಬಾರದು. ಪರ್ವ ಕಾಲದಲ್ಲಿ ಸ್ತ್ರೀಗಮನವನ್ನು ಮಾಡಕೂಡದು.

೬-೭ . ನಿರಾಶ್ರಯವಾದ ಪ್ರದೇಶದಲ್ಲಿಯೂ ತಿರ್ಯಕ್ ಪ್ರಾಣಿಗಳಲ್ಲಿಯೂ ವೀರ್ಯವನ್ನು ಬಿಡಬಾರದು. ಎಲೈ ಪುರುಷಶ್ರೇಷ್ಠನೇ ಈ ರೀತಿ ಯಾವನು ಯಾವಾಗಲೂ ಜಾಗರೂಕತೆಯಿಂದ ಇರುತ್ತಾ ಶಾಸ್ತ್ರಪರಿಶೀಲನೆಯಿಂದ ಸದ್ಬುದ್ಧಿ

ಏವಂ ಸದಾ ಯಃ ಕುರುತೇ ನೃವೀರ
ಸಮ್ಯಗ್ಯಥೋಕ್ತಂ ಸುಮನಾಸ್ತರಸ್ವೀ ।
ತಸ್ಯಾಶು ಪಾಪಂ ವಿಲಯಂ ಪ್ರಯಾತಿ
ಶ್ರಿಯಂ ಚ ಮುಖ್ಯಾಂ ಲಭತೇ ಸುಖಂ ಚ　　॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಆಚಾರಕಥನಂ ನಾಮ ಚತುರ್ನವತಿತಮೋಽಧ್ಯಾಯಃ

---

ಯುಳ್ಳವನಾಗಿ ಇಲ್ಲಿ ಹೇಳಿರುವ ಸದಾಚಾರಗಳನ್ನು ಆಚರಿಸುತ್ತಾನೆಯೋ ಅವನು ತನ್ನ ಸರ್ವ ಪಾಪಗಳನ್ನೂ ಜಾಗ್ರತೆಯಾಗಿ ಹೋಗಲಾಡಿಸಿಕೊಂಡು ಒಳ್ಳೆಯ ಸಂಪತ್ತನ್ನೂ ಸುಖವನ್ನೂ ಸಹ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಆಚಾರ ಕಥನವೆಂಬ ತೊಂಭತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.



## ತೊಂಭತ್ತನಾಲ್ಕನೇ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಶಯನವಿಧಿಯೇ ಮೊದಲಾದ ಕೆಲವು ಆಚಾರಗಳನ್ನು ನಿರೂಪಿಸಿರುವರು.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಪಂಚನವತಿತಮೋಽಧ್ಯಾಯಃ

|| ಪುಷ್ಕರ ಉವಾಚ ||

ವೈವಾಹಿಕೇಽಗ್ನೌ ಕುರ್ವೀತ ಕರ್ಮ ಸ್ಮಾರ್ತಂ ಸದಾ ಗೃಹೀ |
ದಾಯಕಾಲಾಹೃತೇ ವಾಪಿ ಪಿತುರ್ಮರಣಕಾಲಿಕೇ || ೧ ||

ಮಾತುರ್ವಾ ಭೃಗುಜಶ್ರೇಷ್ಠ ಶ್ರೌತಂ ವೈತಾನಿಕಾಗ್ನಿಷು |
ದೇವತಾನಾಂ ಪಿತೄಣಾಂ ಚ ಋಷೀಣಾಂ ಚ ತಥಾ ನರಃ || ೨ ||

ಋಣವಾನ್ ಜಾಯತೇ ಯಸ್ಮಾತ್ತನ್ಮೋಕ್ಷೇ ಪ್ರಯತೇತ್ಸದಾ |
ದೇವಾನಾಮನೃಣೋ ಜಂತುರ್ಯಜ್ಞೈರ್ಭವತಿ ಮಾನದ || ೩ ||

---

### ತೊಂಭತ್ತೈದನೆಯ ಅಧ್ಯಾಯ.

೧–೨. ಗೃಹಸ್ಥನಾದವನು ಸ್ಮಾರ್ತಕರ್ಮಗಳನ್ನು ವಿವಾಹ ಕಾಲದಲ್ಲಿ ಹೊಂದಿದ ಔಪಾಸನಾಗ್ನಿಯಲ್ಲಿ ಮಾಡಬೇಕು. ದಾಯವಿಭಾಗಕಾಲದಲ್ಲಿ ತನಗೆ ಲಭ್ಯವಾದ ಅಗ್ನಿಯಲ್ಲಾಗಲಿ ಮಾತಾಪಿತೃಗಳ ಮರಣಕಾಲದಲ್ಲಿ ಸಾಧಿಸಿದ ಅಗ್ನಿಯಲ್ಲಾಗಲಿ ಮಾಡಬಹುದು. ಶ್ರೌತಕರ್ಮಗಳನ್ನು ಯಜ್ಞಾಗ್ನಿಗಳಲ್ಲಿ ಮಾಡಬೇಕು.

೩–೪. ಮನುಷ್ಯನಾಗಿ ಹುಟ್ಟಿದವನು ದೇವತೆಗಳಿಗೂ, ಪಿತೃಗಳಿಗೂ, ಋಷಿಗಳಿಗೂ ಸಹ ಋಣಿಯಾಗಿ ಆಗುತ್ತಾನೆ. ಆದುದರಿಂದ ಈ ಮೂರು ವಿಧವಾದ ಋಣವನ್ನು ಹೋಗಲಾಡಿಸಿಕೊಳ್ಳಲು ಪ್ರಯತ್ನಪಡಲೇಬೇಕು. ಯಜ್ಞಗಳ ಆಚರಣೆಯಿಂದ ದೇವತೆಗಳ ಋಣವನ್ನು ಪರಿಹರಿಸಿಕೊಳ್ಳಬೇಕು. ಯಜ್ಞಮಾಡಲು

ಸ್ವಲ್ಪವಿತ್ತಶ್ಚ ಪೂಜಾಭಿರುಪವಾಸೈರ್ವ್ರತೈಸ್ತಥಾ ।
ಶ್ರಾದ್ಧೇನ ಪೂಜಯಾ ಚೈವ ಪಿತ್ರ್ಯಾಣಾಮನೃಣೋ ಭವೇತ್ ॥ ೪ ॥

ಋಷೀಣಾಂ ಬ್ರಹ್ಮಚರ್ಯೇಣ ಶ್ರುತೇನ ತಪಸಾ ತಥಾ ।
ಹುತಂ ಚೈವಾಹುತಂ ಚೈವ ನಿರ್ವಾಪ್ಯಂ ಪ್ರಹುತಂ ತಥಾ ॥ ೫ ॥

ಪ್ರಾಶಿತಂ ಚ ಮಹಾಭಾಗ ಪಂಚಯಜ್ಞಾನ್ನಹಾಪಯೇತ್ ।
ಹುತಮಗ್ನೌ ವಿಜಾನೀಯಾದಹುತಂ ಬಲಿಕರ್ಮ ಯತ್ ॥ ೬ ॥

ಪಿಂಡನಿರ್ವಾಪಣಂ ರಾಮ ನಿರ್ವಾಪ್ಯಂ ಪರಿಕೀರ್ತಿತಂ ।
ಪ್ರಹುತಂ ಚ ಯಥಾ ಯಜ್ಞಂ ಪಿತೃಯಜ್ಞಂ ತಥೈವ ಚ ॥ ೭ ॥

ಪ್ರಾಶನಂ ಚ ತಥಾಪ್ರೋಕ್ತಂ ಯದ್ಭುಕ್ತಂ ತದನಂತರಂ ।
ಪಂಚಯಜ್ಞಾನ್ ಸದಾ ಕುರ್ಯಾತ್ ಗೃಹೀ ಪಾಪಾಪನುತ್ತಯೇ ॥ ೮ ॥

---

ಬೇಕಾದ ಧನಸಮೃದ್ಧಿ ಇಲ್ಲದವನು ಪೂಜೆಗಳಿಂದಲೂ, ಉಪವಾಸಗಳಿಂದಲೂ, ವ್ರತಗಳಿಂದಲೂ ಸಹ ದೇವತೆಗಳನ್ನು ಸಂತೋಷಪಡಿಸಿ ಋಣವಿಮೋಚನೆ ಹೊಂದಬೇಕು. ಶ್ರಾದ್ಧಗಳಿಂದಲೂ, ಪೂಜೆಗಳಿಂದಲೂ, ಪಿತೃ ಋಣವನ್ನು ಪರಿಹರಿಸಿಕೊಳ್ಳಬೇಕು.

೫. ಋಷಿಗಳ ಋಣವನ್ನು ಬ್ರಹ್ಮಚರ್ಯದಿಂದಲೂ, ವೇದಾಧ್ಯಯನದಿಂದಲೂ, ತಪಸ್ಸಿನಿಂದಲೂ ಹೋಗಲಾಡಿಸಿಕೊಳ್ಳಬೇಕು. ಹುತಃ, ಅಹುತಃ ನಿರ್ವಾಪ್ಯಃ, ಪ್ರಹುತ, ಪ್ರಾಶಿತಗಳೆಂಬ ಐದು ಯಾಗಗಳನ್ನು ಯಾವಾಗಲೂ ಬಿಡಬಾರದು (ಆಚರಿಸಿಯೇ ತೀರಬೇಕು).

೬-೮. ಹುತವೆಂದರೆ ಅಗ್ನಿಯಲ್ಲಿ ಮಾಡುವ ಹೋಮಾದಿಗಳು, ಅಹುತವೆಂದರೆ ಬಲಿಪ್ರದಾನ, ನಿರ್ವಾಪ್ಯವೆಂದರೆ ಪಿಂಡಪ್ರದಾನ, ಪ್ರಹುತವೆಂದರೆ ದೇವಯಜ್ಞ ಪಿತೃಯಜ್ಞಗಳು, ಪ್ರಾಶನವೆಂದರೆ ಅನಂತರ ಭುಂಜಿಸುವುದು. ಈ ಐದು ವಿಧವಾದ ಯಜ್ಞಗಳನ್ನು ಗೃಹಸ್ಥನಾದವನು ತನ್ನ ಪಾಪ ಶಾಂತಿಗಾಗಿ ಯಾವಾಗಲೂ ತಪ್ಪದೆ ಮಾಡಬೇಕು.

ದೇವಯಜ್ಞಂ ಭೂತಯಜ್ಞಂ ಪಿತೃಯಜ್ಞಂ ತಥೈವ ಚ ।
ಮಾನುಷ್ಯಮೃಷಿಯಜ್ಞಂ ಚ ಕುರ್ಯಾನ್ನಿತ್ಯಮತಂದ್ರಿತಃ ॥ ೯ ॥

ದೇವಯಜ್ಞಂ ಹುತಂ ವಿದ್ಯಾದ್ಭೂತಯಜ್ಞಂ ಬಲಿಕ್ರಿಯಾ ।
ಪಿತೃಯಜ್ಞಂ ತಥಾಪಿಂಡೈರ್ಋಷಿಯಜ್ಞಂ ಚ ಭಾರ್ಗವ ॥ ೧೦ ॥

ಸ್ವಾಧ್ಯಾಯಸೇವಾ ವಿಜ್ಞೇಯೋ ತಥೈವಾತಿಥಿಪೂಜನಂ ।
ಮನುಷ್ಯಯಜ್ಞೋ ವಿಜ್ಞೇಯಃ ಪಂಚಯಜ್ಞಾನ್ನಹಾಪಯೇತ್ ॥ ೧೧ ॥

ವಿಷ್ಣುಂ ಯಜೇತ್ತಥಾ ದೇವಂ ಹವಿರ್ಯಜ್ಞೈಶ್ಚ ಸಪ್ತಭಿಃ ।
ಅಗ್ನ್ಯಾಧಾನಂ ಮಹಾಭಾಗ ತಥಾಗ್ನಿಹವನಕ್ರಿಯಾ ॥ ೧೨ ॥

ದರ್ಶಂ ಚ ಪೂರ್ಣಮಾಸಂ ಚ ಚಾತುರ್ಮಾಸ್ಯಂ ತಥೈವ ಚ ।
ದ್ವಿರಾಗ್ರಹಾಯಣೇಷ್ಟಿಶ್ಚ ಪಾಕೇ ಚ ಯವಧಾನ್ಯಯೋಃ ॥ ೧೩ ॥

---

೯-೧೦. ದೇವಯಜ್ಞ, ಭೂತಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಋಷಿಯಜ್ಞಗಳೆಂಬ ಐದುಯಜ್ಞಗಳನ್ನೂ ಸಹ ನಿತ್ಯವೂ ಗೃಹಸ್ಥನು ಜಾಗರೂಕತೆಯಿಂದ ಮಾಡುತ್ತಿರಬೇಕು. ದೇವಯಜ್ಞವೆಂದರೆ, ಹೋಮ, ಭೂತಯಜ್ಞವೆಂದರೆ ಬಲಿಪ್ರದಾನ, ಪಿತೃಯಜ್ಞವೆಂದರೆ ಪಿಂಡಪ್ರದಾನ,

೧೧-೧೨. ಋಷಿಯಜ್ಞವೆಂದರೆ. ವೇದಾಧ್ಯಯನವೆಂಬಸೇವೆ, ಮನುಷ್ಯಯಜ್ಞವೆಂದರೆ ಅತಿಥಿಗಳಪೂಜೆ ಈವಿಧವಾದ ಐದುಯಜ್ಞಗಳನ್ನೂ ತ್ಯಜಿಸಬಾರದು. ಏಳು ಹವಿರ್ಯಜ್ಞಗಳಿಂದಲೂ ಪ್ರಭುವಾದ ವಿಷ್ಣುವನ್ನು ಆರಾಧಿಸಬೇಕು. ಆಧಾನವೆಂಬ ಸಂಸ್ಕಾರದಿಂದ ಅಗ್ನಿಯನ್ನು ಶ್ರೌತಾಗ್ನಿಯನ್ನಾಗಿ ಏರ್ಪಡಿಸುವುದು. ಆ ಅಗ್ನಿಯಲ್ಲಿ ಹೋಮಮಾಡುವುದು.

೧೩-೧೪. ದರ್ಶಪೂರ್ಣಮಾಸೇಷ್ಟಿಗಳು ಚಾತುರ್ಮಾಸ್ಯ ಧಾನ್ಯಗಳ ಪಾಕಕಾಲದಲ್ಲಿಯೂ, ಬೀಜಗಳನ್ನು ನೆಡುವಕಾಲದಲ್ಲಿಯೂ ಸಹ ಮಾಡಬೇಕಾದ ಎರಡು ಆಗ್ರಹಾಯಣೇಷ್ಟಿ, ಪಶುಬಂಧ, ಸೌತ್ರಾಮಣಿ, ಈ ಏಳುವಿಧವಾದ ಹವಿ

ವಿರೂಢಾ ಪಶುಬಂಧಶ್ಚ ತಥಾ ಸೌತ್ರಾಮಣಿರ್ದ್ವಿಜ |
ಸಪ್ತಭಿಃ ಸೋಮಸಂಸ್ಥಾಭಿಃ ಯಜೇದ್ದೇವಂ ಸನಾತನಂ || ೧೪ ||

ಅಗ್ನಿಷ್ಟೋಮಂ ಮಹಾಭಾಗ ಚಾತ್ಯಗ್ನಿಷ್ಟೋಮಮೇವ ಚ |
ಉಕ್ಥ್ಯಂ ಚ ಸಾವನೀಂ ಚೈವ ಪ್ರತಿರಾತ್ರಂ ತಥೈವ ಚ || ೧೫ ||

ವಾಜಪೇಯಂ ಚ ಧರ್ಮಜ್ಞ ಅಪ್ತೋರ್ಯಾಮಂ ತಥೈವ ಚ |
ಅನ್ಯೈಶ್ಚ ವಿವಿಧೈರ್ಯಜ್ಞೈಃ ಪೌಂಡರೀಕಾದಿಭಿಸ್ತಥಾ || ೧೬ ||

ಗೋಸವೇನಾಶ್ವಮೇಧೇನ ರಾಜಸೂಯೇನ ವಾ ಪುನಃ |
ತಥಾ ಪುರುಷಮೇಧೇನ ಸರ್ವಮೇಧೇನ ಭಾರ್ಗವ || ೧೭ ||

ಅನ್ಯೈಶ್ಚ ವಿವಿಧೈರ್ಯಜ್ಞೈಃ ನಾಮಕಲ್ಪೋಚಿತೈಸ್ತಥಾ |
ಯಜನಂ ದೇವದೇವಸ್ಯ ವಾಸುದೇವಸ್ಯ ಕಾರಯೇತ್ || ೧೮ ||

ಯಜ್ಞೋ ವಿಷ್ಣುರ್ಮಹಾತೇಜಾ ಯಜಮಾನಃ ಸ ಏವ ಹಿ |
ತ ಏವ ಯಜ್ಞಪಾತ್ರಾಣಿ ಯಜ್ಞದ್ರವ್ಯಾಣಿ ಯಾನಿ ಚ || ೧೯ ||

---

ರ್ಯಜ್ಞದಿಂದಲೂ ಮುಂದೆ ಹೇಳುವ ಏಳು ಸೋಮಸಂಸ್ಥೆಗಳಿಂದಲೂ ಸಹ, ಶಾಶ್ವತನಾದ ವಿಷ್ಣುವನ್ನು ಆರಾಧಿಸಬೇಕು.

೧೫-೧೬. ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಸಾವನೀ, ಪ್ರತಿರಾತ್ರ, ವಾಜಪೇಯ, ಅಪ್ತೋರ್ಯಾಮ ಈ ಏಳು ಸೋಮಸಂಸ್ಥೆಗಳಿಂದಲೂ ಪೌಂಡರೀಕವೇ ಮೊದಲಾದ ಇತರ ಯಾಗಗಳಿಂದಲೂ ಆರಾಧಿಸಬೇಕು.

೧೭-೧೮. ಗೋಯಾಗ, ಅಶ್ವಮೇಧ, ರಾಜಸೂಯ, ಪುರುಷಮೇಧ, ಸರ್ವಮೇಧ, ಇವುಗಳಿಂದಲೂ ಹೀಗೆಯೇ ಆಯಾಯ ನಾಮಭೇದದಿಂದಲೂ, ಕಲ್ಪಭೇದದಿಂದಲೂ ಅನೇಕ ವಿಧವಾಗಿ ಹೇಳಿರುವ ಇತರ ಯಜ್ಞಗಳಿಂದಲೂ ಪ್ರಭುವಾದ ವಾಸುದೇವನ ಆರಾಧನವನ್ನು ಮಾಡಬೇಕು.

೧೯-೨೦ ಯಜ್ಞವೆಂಬುದು ತೇಜಸ್ವಿಯಾದ ವಿಷ್ಣುವಿನ ರೂಪವೇ ಆಗಿವೆ ಯಜಮಾನನೂ ಸಹ ವಿಷ್ಣುವಿನ ರೂಪವೇ ಆಗಿರುವನು. ಯಜ್ಞಪಾತ್ರೆಗಳೂ

**ತಂ ಯಜೇತ್ಸತತಂ ರಾಮ ಸರ್ವದೇವಮಯಂ ಹರಿಂ ।**
**ಸತ್ಯೇನ ವೈ ಯಜೇದ್ದೇವಂ ಪ್ರತ್ಯಬ್ದಂ ಮುನಿಪುಂಗವ ॥ ೨೦ ॥**

**ಪಶುಂ ಪ್ರತ್ಯಯನಂ ಕುರ್ಯಾಚ್ಚಾತುರ್ಮಾಸಿಕಮೇವ ಚ ।**
**ಇಷ್ಟಿಂ ವೈಶ್ವಾನರೀಂ ಕುರ್ಯಾತ್ತಥಾ ಸ್ವಲ್ಪಧನೋ ನರಃ ॥ ೨೧ ॥**

**ಅತ್ಯೇವಾಲ್ಪೇ ಧನೇ ಸೋಮಂ ಪಿಬೇದ್ಭಾರ್ಗವಸತ್ತಮ ।**
**ಆಯುಃಪುತ್ರಾನ್ಯಶೋ ಮೇಧಾಂ ಧನಮಂತ್ರಗಣಂ ತಥಾ ॥ ೨೨ ॥**

**ಹಂತ್ಯಲ್ಪದಕ್ಷಿಣೋ ಯಜ್ಞಃ ತಸ್ಮಾನ್ನಾಲ್ಪಧನೋ ಯಜೇತ್ ।**
**ಯಸ್ಯ ತ್ರೈವಾರ್ಷಿಕಂ ಭಕ್ತಂ ಪರ್ಯಾಪ್ತಂ ಭೃತ್ಯವೃತ್ತಯೇ ॥ ೨೩ ॥**

---

ಯಜ್ಞದ ದ್ರವ್ಯಗಳೂ ಸಹ ಆ ವಿಷ್ಣುವಿನ ರೂಪಗಳೇ ಆಗಿವೆ. ಆದುದರಿಂದ ಸರ್ವದೇವತಾಮಯನಾದ ಆ ಹರಿಯನ್ನು ಸತ್ಯವ್ರತದಿಂದ ಪ್ರತಿವರ್ಷವೂ ಪೂಜಿಸುತ್ತಿರಬೇಕು.

೨೧-೨೨. ಪಶುಯಾಗವನ್ನೂ, ಚಾತುರ್ಮಾಸ್ಯವನ್ನೂ ಸಹ ಪ್ರತಿವರ್ಷವೂ ಮಾಡುತ್ತಿರಬೇಕು. ಸ್ವಲ್ಪ ದ್ರವ್ಯವುಳ್ಳ ದರಿದ್ರನಾದವನು ವೈಶ್ವಾನರೇಷ್ಟಿಯನ್ನಾದರೂ ಮಾಡಬೇಕು. ಇನ್ನೂ ಕಡಮೆಯಾದ ಸ್ವಲ್ಪ ಧನವುಳ್ಳವನು ಸೋಮಪಾನವನ್ನಾದರೂ ಮಾಡಲೇಬೇಕು.

೨೨-೨೩. ಪರಿಪೂರ್ಣ ದಕ್ಷಿಣೆ ಇಲ್ಲದೆ ಅಲ್ಪ ದಕ್ಷಿಣೆಯಿಂದ ಯಜ್ಞಮಾಡಿದಲ್ಲಿ ಅಪರಿಪೂರ್ಣವಾದ ಆ ಯಜ್ಞವು ಆಯುಸ್ಸು, ಪುತ್ರರು, ಯಶಸ್ಸು, ಬುದ್ಧಿಶಕ್ತಿ, ಧನ, ಮಂತ್ರಶಕ್ತಿ ಎಲ್ಲವನ್ನೂ ನಾಶಮಾಡುತ್ತದೆ. ಆದುದರಿಂದ ಸ್ವಲ್ಪ ಹಣವಿರುವವನು ಅಂತಹ ಅಸಮಗ್ರವಾದ ಯಜ್ಞವನ್ನು ಮಾಡಬಾರದು. ಯಾವನಿಗೆ ಬರುವ ಅನ್ನವು ಮೂರುವರ್ಷದವರಿಗೂ ಭೃತ್ಯರೇ ಮೊದಲಾದ ಪರಿವಾರಗಳಿಗೆಲ್ಲಾ ಸಾಕಾದಷ್ಟಾಗುತ್ತದೆಯೋ, ಅಧಿಕವಾಗಿಯೂ ಆಗುತ್ತದೆಯೋ ಅಂತಹವನು ಸೋಮಪಾನಕ್ಕೆ ಅರ್ಹನಾಗುತ್ತಾನೆ.

ಅಧಿಕಂ ವಾಪಿ ವಿದ್ಯೇತ ಸ ಸೋಮಂ ಪಾತುಮರ್ಹತಿ ।
ಪ್ರಾಜಾಪತ್ಯಮದತ್ವಾ ಚ ಅಗ್ನ್ಯಾಧೇಯಸ್ಯ ದಕ್ಷಿಣಾಂ ॥ ೨೪ ॥

ಅನಾಹಿತಾಗ್ನಿರ್ಭವತಿ ಬ್ರಾಹ್ಮಣೋ ವಿಭವೇ ಸತಿ ।
ಸರ್ವದೇವಮಯೋ ವಿಷ್ಣುಃ ಪ್ರತ್ಯಹಂ ತಸ್ಯ ಪೂಜನಂ ॥ ೨೫ ॥

ಪ್ರತಿಮಾಯಾಮಪಿ ತಥಾ ಕರ್ತವ್ಯಂ ಭೃಗುಸತ್ತಮ ।
ವಿಷ್ಣುಮೇವಾಭಿಜಾನಂತಿ ಸರ್ವಯಜ್ಞೇಷು ವೈ ದ್ವಿಜಾಃ ॥ ೨೬ ॥

ಪಾಯಸೈಃ ಸುಮನೋಭಿಶ್ಚ ತಸ್ಯಾಪಿ ಯಜನಂ ಸ್ಮೃತಂ ।
ತತ್ತದ್ದೇವನಿಕಾಯೇಷು ತಥೈವ ಸ್ವಯಮೇವ ವಾ ॥ ೨೭ ॥

---

೨೪–೨೬. ಅಗ್ನಿಯ ಆಧಾನ ಸಂಸ್ಕಾರಕ್ಕಾಗಿ ಪ್ರಾಜಾಪತ್ಯಕೃಚ್ಛ್ರವೆಂಬ ದಕ್ಷಿಣೆಯನ್ನು ದ್ರವ್ಯ ಸಮೃದ್ಧಿ ಇದ್ದರೂ ಕೊಡದಿರುವ ಬ್ರಾಹ್ಮಣನು ಅನಾಹಿತಾಗ್ನಿಯೇ ಆಗುತ್ತಾನೆ. ಸರ್ವದೇವತಾತ್ಮಕನಾಗಿ ವಿಷ್ಣುವು ಇರುವುದರಿಂದ ಪ್ರತಿಮೆ (ವಿಗ್ರಹ) ಯಲ್ಲಿಯೂ ಕೂಡ ನಿತ್ಯವೂ ಅವನ ಪೂಜೆಯನ್ನು ತಪ್ಪದೆ ಮಾಡಬೇಕು. ಎಲ್ಲಾ ವಿಧವಾದ ಯಜ್ಞಗಳಲ್ಲಿಯೂ (ಹವಿಸ್ಸಿನಿಂದಲೂ ಇತರ ದ್ರವ್ಯಗಳಿಂದಲೂ ವಿಗ್ರಹರೂಪದಲ್ಲಿಯೂ ಮಾಡುವ ಸಕಲ ಕರ್ಮಗಳೂ ಅವನ ಆರಾಧನ ರೂಪಗಳಾದುದರಿಂದ ಯಜ್ಞವೆಂದರೆ ಭಗವಂತನ ಪೂಜಾ ಎಂದರ್ಥ. ಯಜ ದೇವಪೂಜಾಯಾಂ ಎಂಬ ಧಾತುವಿನಿಂದ ಯಜ್ಞಶಬ್ದವು ನಿಷ್ಪನ್ನವಾಗಿದೆ ಎಂದು ತಾತ್ಪರ್ಯ) ಸರ್ವವ್ಯಾಪಕನಾದ ಆ ಹರಿಯೇ ಆರಾಧ್ಯನಾಗಿರುವನೆಂದು ಬ್ರಾಹ್ಮಣೋತ್ತಮರು ತಿಳಿಯುತ್ತಾರೆ.

೨೭–೨೮. ಮತ್ತು ಪಾಯಸವೇ ಮೊದಲಾದ ನೈವೇದ್ಯಗಳಿಂದಲೂ ಹೂವುಗಳಿಂದಲೂ ಮಾಡುವ ಪೂಜೆಯೂ ಒಂದು ಬಗೆಯ ಯಜ್ಞವೇ ಆಗುತ್ತದೆ. ಆದುದರಿಂದ ಅವನನ್ನು ದೇವಾಲಯಗಳಲ್ಲಾಗಲಿ, ಮನೆಯಲ್ಲಿ ಸ್ವಂತವಾಗಿಯಾಗಲಿ ವೇದಿಯಿಂದ ಹೊರಗೂ ಪೂಜಿಸಲೇಬೇಕು. (ಯಜ್ಞವೇದಿಕೆಯಲ್ಲಿ ಅಗ್ನಿರೂಪದಿಂದ ಸಂತೋಷಪಡುವ ಆ ಪ್ರಭುವನ್ನು ಬೇರೆ ಕಡೆಯಲ್ಲಿಯೂ ಪೂಜಿಸಬೇಕೆಂದು ತಾತ್ಪರ್ಯ) ಅನಿಷ್ಟ ಫಲವನ್ನು ಕೊಡುವ ಅಲ್ಪ ದಕ್ಷಿಣೆಯುಳ್ಳ ಯಜ್ಞಗಳನ್ನು

ಪೂಜಾ ಕಾರ್ಯಾ ಬಹಿರ್ವೇದೌ ಶ್ರದ್ಧಯಾ ಭೃಗುನಂದನ ।
ನತ್ವಲ್ಪದಕ್ಷಿಣೈರ್ಯಜ್ಞೈಃ ಯಜೇತೇಹ ಕದಾಚನ ॥ ೨೮ ॥

ವಿಷ್ಣುಂ ದೇವನಿಕಾಯಸ್ಥಂ ಯಥಾಶ್ರದ್ಧಮರಿಂದಮ ।
ತಪಸಾ ಪೂಜಯೇನ್ನಿತ್ಯಂ ತಸ್ಮಾದಲ್ಪಧನೋ ನರಃ ॥ ೨೯ ॥

ಸಂಪೂಜ್ಯ ದೇವಂ ಪರಮಾನ್ನಗಂಧೈ
ಧೂರ್ಪೈಃ ಸುಗಂಧೈಶ್ಚ ಫಲೈಶ್ಚ ಮುಖ್ಯೈಃ ।
ತಸ್ಮಾದವಾಪ್ನೋತಿ ಸ ಸರ್ವಯಜ್ಞಾಂ-
ಸ್ತಸ್ಮಾತ್ಪ್ರಪೂಜ್ಯಃ ಸತತಂ ಮಹಾತ್ಮಾ ॥ ೩೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಗೃಹಸ್ಥಧರ್ಮ ವರ್ಣನಂ ನಾಮ ಪಂಚನವತಿತಮೋಽಧ್ಯಾಯಃ

---

ಮಾಡಬಾರದು. ಅಂತಹ ಅಸಮರ್ಥರು ಈ ವಿಧವಾದ ಪೂಜೆಯಿಂದ ಆ ಪ್ರಭುವನ್ನು ಸಂತೋಷಪಡಿಸಬೇಕು (ಇಲ್ಲಿ ಯಜ್ಞಗಳ ನಿಷೇಧದಲ್ಲಿ ತಾತ್ಪರ್ಯವಲ್ಲ ಧನಿಕನಿಗೂ ದರಿದ್ರನಿಗೂ ಅಧಿಕಾರಿಭೇದದಿಂದ ವ್ಯವಸ್ಥೆಮಾಡುವುದರಲ್ಲಿ ತಾತ್ಪರ್ಯ)

೨೯-೩೦. ಅಲ್ಪಧನವನ್ನು ಹೊಂದಿರುವವನು ದ್ರವ್ಯಸಾಧ್ಯವಾದ ಯಜ್ಞಗಳನ್ನು ಮಾಡದಿದ್ದರೂ ದೇವಗೃಹದಲ್ಲಿ ಪ್ರತಿಷ್ಠಿತನಾಗಿರುವ ವಿಷ್ಣುವನ್ನು ಶ್ರದ್ಧೆಯಿಂದಲೂ, ತಪಸ್ಸಿನಿಂದಲೂ ನಿತ್ಯವೂ ಪೂಜಿಸಬೇಕು. ಆ ಪ್ರಭುವನ್ನು ಸುಗಂಧಿಗಳಾದ ಧೂಪಗಳಿಂದಲೂ ಪಾಯಸ ಮತ್ತು ಒಳ್ಳೆಯ ಹಣ್ಣುಗಳು ಇವುಗಳಿಂದಲೂ ಆರಾಧಿಸಿದಲ್ಲಿ ಎಲ್ಲಾ ಯಜ್ಞಗಳನ್ನೂ ಅವನು ಹೊಂದುತ್ತಾನೆ. ಆದುದರಿಂದ ಅಂತಹ ಅಧಿಕಾರಿಯು ಮಹಾತ್ಮನಾದ ಆ ವಿಷ್ಣುವನ್ನು ಯಾವಾಗಲೂ ಪೂಜಿಸಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಗೃಹಸ್ಥ ಧರ್ಮವೆಂಬ ತೊಂಭತ್ತೈದನೆಯ ಅಧ್ಯಾಯವು ಮುಗಿದಿದೆ.



## ತೊಂಭತ್ತೈದನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಗೃಹಸ್ಥನಿಗೆ ವಿಹಿತವಾಗಿರುವ ಶ್ರೌತಸ್ಮಾರ್ತಕರ್ಮಗಳನು ವಿವರಿಸಿ ಯಜ್ಞಾದಿಶ್ರೌತಕರ್ಮಗಳನ್ನು ಮಾಡಲು ಅನುಕೂಲವಿಲ್ಲದ ಸ್ವಲ್ಪ ಧನವುಳ್ಳ ಅಧಿಕಾರಿಗೆ ವಿಷ್ಣುಪ್ರೀತಿಕರವಾದ ಪೂಜಾಮಾತ್ರವೂ ಸರ್ವಯಜ್ಞಗಳ ಫಲವನ್ನೂ ಉಂಟುಮಾಡುತ್ತದೆಯಾದುದರಿಂದ ಅರ್ಥದ ನ್ಯೂನತೆಯಿಂದ ಅನಿಷ್ಟಫಲವಾದ ಯಾಗವನ್ನು ಮಾಡುವುದಕ್ಕಿಂತಲೂ ವಿಷ್ಣುವಿನ ಆರಾಧನೆಯೇ ಶ್ರೇಯಸ್ಕರವೆಂದು ಹೇಳಲಾಯಿತು.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಷಣ್ಣವತಿತಮೋಽಧ್ಯಾಯಃ

**|| ರಾಮ ಉವಾಚ ||**

**ಕರ್ಮಾಣಿ ಶ್ರೋತುಮಿಚ್ಛಾಮಿ ಕಾಮ್ಯಾನಿ ಗೃಹಿಣಾಮಹಂ ।**
**ತ್ವತ್ತಃ ಸಮಸ್ತಧರ್ಮಜ್ಞ ಯಾದೋಗಣನೃಪಾತ್ಮಜ || ೧ ||**

**|| ಪುಷ್ಕರ ಉವಾಚ ||**

**ಕೃತೋಪವಾಸೋ ಯಾಮ್ಯರ್ಕ್ಷೇ ಸೋಪವಾಸಸ್ಯ ಭಾರ್ಗವ ।**
**ಪುರೋಧಾಃ ಸ್ನಪನಂ ಕುರ್ಯಾತ್ ಕೃತ್ತಿಕಾಸು ಯಥಾವಿಧಿ || ೨ ||**

---

### ತೊಂಭತ್ತಾರನೇ ಅಧ್ಯಾಯ

೧. ಪೂಜ್ಯನಾದ ವರುಣಪುತ್ರನೇ, ಸಂಸಾರಿಗಳಾದವರು ಮಾಡಲು ಅರ್ಹಗಳಾದ ಕಾಮ್ಯಕರ್ಮಗಳಾವುವು ಇವೆಲ್ಲವನ್ನೂ ಧರ್ಮಜ್ಞನಾದ ನೀನು ಹೇಳಬೇಕು ಎಂದು ಭಾರ್ಗವನು ಪ್ರಶ್ನೆಮಾಡಲು ಪುಷ್ಕರನು ಹೇಳುತ್ತಾನೆ. (ಯಾವ ಕರ್ಮಗಳನ್ನು ಬಿಡುವುದರಿಂದ ಪಾಪ ಉಂಟಾಗುವುದೋ ಆಚರಿಸಿದಲ್ಲಿ ಫಲವಿಶೇಷವಿರುವುದಿಲ್ಲವೋ ಅಂತಹ ಕರ್ಮಗಳು (ಸಂಧ್ಯಾವಂದನಾದಿ) ನಿತ್ಯಕರ್ಮಗಳೆಂದೂ, ಯಾವ ಕರ್ಮಗಳನ್ನು ಫಲೋದ್ದೇಶ್ಯದಿಂದಲೇ ಆಚರಿಸಿ ಫಲವನ್ನು ಹೊಂದಬಹುದೋ ಆಚರಿಸದಿದ್ದಲ್ಲಿ ಅನಿಷ್ಟವೂ ಇರುವುದಿಲ್ಲವೋ ಅಂತಹ ಕರ್ಮಗಳು ಕಾಮ್ಯಗಳೆಂದೂ ಶಾಸ್ತ್ರಗಳಲ್ಲಿ ವಿಭಾಗಮಾಡಿರುವರು.)

೨-೩. ಭರಣೀ ನಕ್ಷತ್ರದಲ್ಲಿ ಉಪವಾಸಮಾಡಿದ ಪುರೋಹಿತನು ಹಾಗೆಯೇ ಫಲಾರ್ಥಿಯಾಗಿ ಉಪವಾಸ ಹೊಂದಿರುವವನನ್ನು ಕೃತ್ತಿಕಾ ನಕ್ಷತ್ರದಲ್ಲಿ ಯಥಾವಿಧಿಯಾಗಿ ಸ್ನಾನಮಾಡಿಸಬೇಕು. ಅನಂತರ ಬುಡದಲ್ಲಿ ಕಪ್ಪಾಗಿಲ್ಲದ ಮಣ್ಣಿನ

ಅಕಾಲಮೂಲ್ಯೈಃ ಕಲಶೈಃ ಮೃನ್ಮಯೈರಥ ಕಾಂಚನೈಃ ।
ಉಜ್ಜ್ವಲೈರ್ಲಕ್ಷಣೈಃ ಪೂರ್ಣೈಸ್ತಥಾ ತೀರ್ಥೋದಕೈಃ ಶುಭೈಃ ॥ ೩ ॥

ಅಗ್ನಿಮಂಥಶಿರೀಷಾಣಾಂ ನ್ಯಗ್ರೋಧಾಶ್ವತ್ಥಯೋರಪಿ ।
ಪತ್ರಪೂರ್ಣೈಃ ತಥಾ ಯುಕ್ತೈಸ್ತಿಲೈಃ ಕೃಷ್ಣೈರ್ದ್ವಿಜೋತ್ತಮ ॥ ೪ ॥

ವಹ್ನಿಂ ಕುಮಾರಂ ಶಶಿನಂ ಖಡ್ಗಂ ವರುಣಮೇವ ಚ ।
ಪೂಜಯೇತ್ಕೃತ್ತಿಕಾಶ್ಚೈವ ಗಂಧಮಾಲ್ಯಾನ್ನಸಂಪದಾ ॥ ೫ ॥

ಪೀತರಕ್ತೈಸ್ತಥಾವಸ್ತ್ರೈರ್ಘೃತದೀಪೈಸ್ತಥೈವ ಚ ।
ದಧ್ನಾ ಗವ್ಯೇನ ಲಾಜಾಭಿರಗ್ನಿಮಂಥೇನ ಚಾಪ್ಯಥ ॥ ೬ ॥

ಕೃಸರೋಲ್ಲೋಪಿಕಾಭಿಶ್ಚ ಅಪೂಪೈಶ್ಚ ಪೃಥಗ್ವಿಧೈಃ ।
ದೇವತಾನಾಂ ಯಥೋಕ್ತಾನಾಂ ಪ್ರಿಯಂಗುಂ ಜುಹುಯಾತ್ತತಃ ॥ ೭ ॥

ಚಂದನಂ ಚ ಮಯೂರಾಣಾಂ ಲೋಮಾನಿ ಮನುಜೋತ್ತಮ ।
ಅಗ್ನಿಮಂಥಗೃಹಾದ್ಧೂಮಂ ಕೃತ್ವಾ ರುಕ್ಮಾಂಗದಂ ಮಣಿಂ ॥ ೮ ॥

---

ಅಥವಾ ಚಿನ್ನದ ಕುಂಭಗಳನ್ನಿಡಬೇಕು ಅವು ಸಲ್ಲಕ್ಷಣಗಳಿಂದ ಕೂಡಿಯೂ ತೀರ್ಥಜಲದಿಂದ ತುಂಬಿಯೂ ಇರಬೇಕು.

೪–೫. ನೆಲ್ಲಿ, ಬಾಗೆ, ಆಲ, ಅರಳಿ ಇವುಗಳ ಎಲೆಗಳಿಂದ ಕೂಡಿರುವ ಆ ಕಲಶಗಳನ್ನು ಕರಿಯ ಎಳ್ಳಿನ ಮೇಲೆ ಇಟ್ಟು ಇವುಗಳೊಡನೆ ಅಗ್ನಿ, ಷಣ್ಮುಖ, ಚಂದ್ರ, ಖಡ್ಗ, ವರುಣ ಇವರನ್ನೂ ಕೃತ್ತಿಕಾ ನಕ್ಷತ್ರಗಳನ್ನೂ ಸಹ ಗಂಧಪುಷ್ಪ ನೈವೇದ್ಯಾದಿ ಸಮೃದ್ಧಿಯಿಂದ ಪೂಜಿಸಬೇಕು.

೬–೭. ಹೊಂಬಣ್ಣವಾಗಿಯೂ, ಕೆಂಪಾಗಿಯೂ ಇರುವ ವಸ್ತ್ರಗಳಿಂದಲೂ, ತುಪ್ಪದ ದೀಪಗಳಿಂದಲೂ, ಹಸುವಿನ ಮೊಸರು, ಅರಳು, ನೆಲ್ಲಿಕಾಯಿ ಇವುಗಳಿಂದಲೂ ಚಿಗಳಿ, ಕರ್ಜಿಕಾಯಿ, ಇವುಗಳಿಂದಲೂ ನಾನಾ ವಿಧವಾದ (ಭಕ್ಷ್ಯ) ಗಳಿಂದಲೂ ಪೂಜಿಸಬೇಕು. ಅನಂತರ ಮೇಲೆ ಹೇಳಿರುವ ದೇವತೆಗಳನ್ನುದ್ದೇಶಿಸಿ ನವಣೆ ಯಿಂದ ಹೋಮಮಾಡಬೇಕು.

೮–೯. ಚಂದನವನ್ನೂ ಹೋಮಮಾಡಿ ನವಿಲುಗಳ ರೋಮಗಳಿಂದ ಧೂಪಿಸಿ ಅಗ್ನಿಗೃಹದಿಂದ ರುಕ್ಮಾಂಗದ ಮಣಿಯನ್ನು ತೆಗೆದುಕೊಂಡು ಧರಿಸಬೇಕು.

ಧಾರಯೇದ್ದಕ್ಷಿಣಾಂ ದದ್ಯಾಚ್ಛಕ್ತ್ಯಾ ಕನಕಮೇವ ಚ ।
ಶ್ವೇತವಾಸಾಃ ತತಃ ಪಶ್ಚಾತ್ಪೂಜಯೇನ್ಮಧುಸೂದನಂ ॥ ೯ ॥

ಕರ್ಮೈತತ್ಸತತಂ ಕೃತ್ವಾ ವಹ್ನ್ಯಾಧಾನಮಥಾಪ್ನುಯಾತ್ ।
ಕರ್ಮೈತದುಕ್ತಂ ರಿಪುನಾಶಕಾರಿ
ಸರ್ವಾಗ್ನಿ ಕರ್ಮಪ್ರಸಮೃದ್ಧಿದಂ ಚ ॥
ಧನ್ಯಂ ಯಶಸ್ಯಂ ಚ ತಥೈವ ಕಾಮ್ಯಂ
ನಿತ್ಯಂ ಕೃತಂ ಧರ್ಮವಿದಾಂ ವರಿಷ್ಠ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಕೃತ್ತಿಕಾ
ಸ್ನಾನವರ್ಣನಂ ನಾಮ ಷಣ್ಣವತಿತಮೋಽಧ್ಯಾಯಃ

---

ಶಕ್ತಿಗೆ ತಕ್ಕಂತೆ ದಕ್ಷಿಣೆಯನ್ನೂ ಸುವರ್ಣವನ್ನೂ ದಾನಮಾಡಬೇಕು. ಅನಂತರ ಬಿಳಿಯ ವಸ್ತ್ರವನ್ನುಟ್ಟು ಮಧುಸೂದನನನ್ನು ಪೂಜಿಸಬೇಕು.

೧೦. ಈ ಕರ್ಮವನ್ನು ಯಾವಾಗಲೂ ಮಾಡುತ್ತಿರುವವನು ಅಗ್ನಿಯ ವಶೀಕರಣವನ್ನು ಹೊಂದುತ್ತಾನೆ. ಇದು ಶತ್ರುನಾಶಕವಾಗಿಯೂ, ಅಗ್ನಿಸಾಧ್ಯ ಗಳಾದ ಎಲ್ಲಾ ಕಾರ್ಯಗಳಲ್ಲಿಯೂ, ಜಯಪ್ರದವಾಗಿಯೂ ಆಗುತ್ತದೆ. ಇದನ್ನು ನಿತ್ಯವೂ ಮಾಡುವವನು ಧನಸಮೃದ್ಧಿಗೂ ಯಶಸ್ಸಿಗೂ ಅರ್ಹನಾಗುತ್ತಾನೆ. ಎಲೈ ಧರ್ಮಜ್ಞನೇ ಇದೂ ಒಂದು ಕಾಮ್ಯಕರ್ಮವೆಂದು ತಿಳಿ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ಕೃತ್ತಿಕಾಸ್ನಾನವೆಂಬ ತೊಂಭತ್ತಾರನೆಯ ಅಧ್ಯಾಯ ಮುಗಿದಿದೆ.



## ತೊಂಭತ್ತಾರನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಕೃತ್ತಿಕಾಸ್ನಾನವೆಂಬ ಕಾಮ್ಯಕರ್ಮವನ್ನು ನಿರೂಪಿಸಿರುವರು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಸಪ್ತನವತಿತಮೋಽಧ್ಯಾಯಃ

|| ರಾಮ ಉವಾಚ ||

ಅಗ್ನ್ಯಾಧಾನಮಥಾಪ್ನೋತಿ ಶತ್ರುನಾಶಮಥಾಪಿ ವಾ ।
ಸ್ವೇಚ್ಛಯಾ ಕರ್ಮಣಾ ಕೇನ ಸದಾ ಯಾದೋನೃಪಾತ್ಮಜ || ೧ ||

ಶತ್ರುನಾಶಕರಂ ಕರ್ಮ ಕಥಯಸ್ವ ತತಃ ಪರಂ ।
ತದಹಂ ಶ್ರೋತುಮಿಚ್ಛಾಮಿ ತತ್ರ ಶ್ರದ್ಧಾ ಸದಾ ಮಮ || ೨ ||

|| ಪುಷ್ಕರ ಉವಾಚ ||

ಕೃತೋಪವಾಸೋ ಯಾಮ್ಯರ್ಕ್ಷೇ ಕೃತ್ತಿಕಾಸು ಸದೈವತು ।
ಪೂಜಯೇದ್ವಾಸುದೇವಂ ತು ಕುಂಕುಮೇನ ಸುಗಂಧಿನಾ || ೩ ||

---

### ತೊಂಭತ್ತೇಳನೆಯ ಅಧ್ಯಾಯ.

೧-೨. ಎಲೈ ವರುಣಾತ್ಮಜನೇ, ಮನುಷ್ಯನು ಸ್ವೇಚ್ಛೆಯಿಂದಲೇ ಅಗ್ನಿಯ ವಶೀಕರಣವನ್ನೂ ಶತ್ರುನಾಶವನ್ನೂ ಹೊಂದಲು ಯಾವ ಕರ್ಮವನ್ನು ಆಚರಿಸಬೇಕು. ಇವುಗಳಲ್ಲಿ ಶತ್ರುನಾಶಕವಾದ ಕರ್ಮವನ್ನು ಮೊದಲು ಹೇಳು. ಇದನ್ನು ಕೇಳಲು ನನಗೆ ಬಹಳ ಕುತೂಹಲ ಉಂಟಾಗುತ್ತದೆ ಎಂದು ಭಾರ್ಗವನು ಪ್ರಶ್ನೆ ಮಾಡಲು ಪುಷ್ಕರನು ಹೇಳುತ್ತಾನೆ.

೩-೪. ಭರಣೀ ನಕ್ಷತ್ರದಲ್ಲಿ ಉಪವಾಸವಿದ್ದು ಕೃತ್ತಿಕಾ ನಕ್ಷತ್ರದದಿನ ವಾಸುದೇವನನ್ನು ಪೂಜಿಸಬೇಕು. ಸುವಾಸನೆಯುಳ್ಳ ಕುಂಕುಮದಿಂದಲೂ, ರಮ್ಯ

**ರಕ್ತೈಶ್ಚ ಕುಸುಮೈರ್ಹೃದ್ಯೈಃ ಧೂಪಂ ದದ್ಯಾಚ್ಚ ಗುಗ್ಗುಲುಂ ।**
**ಘೃತೇನ ದೀಪಂ ದದ್ಯಾಚ್ಚ ರಕ್ತವರ್ಣಂ ತಥೈವ ಚ ॥ ೪ ॥**
**ನಿವೇದನೀಯಂ ದೇವಾಯ ತಥಾ ಸರ್ವಂ ನಿವೇದಯೇತ್ ।**
**ಹೋತವ್ಯಂ ಸುಸಮಿದ್ಧೇಗ್ನೌ ತಥೈವಾತ್ರ ಶುಭಂ ಹವಿಃ ।**
**ಆಯುಧಾನಿ ಚ ದೇಯಾನಿ ಬ್ರಾಹ್ಮಣೇಭ್ಯಶ್ಚ ದಕ್ಷಿಣಾ ॥ ೫ ॥**

**ಕರ್ಮೈತದುಕ್ತಂ ರಿಪುನಾಶಕಾರಿ**
**ಧಾರ್ಯಂ ಸದಾ ಶತ್ರುಗಣಪ್ರಮಾಥಿ ।**
**ಕೃತ್ವೈತದಗ್ರ್ಯಂ ರಿಪುನಾಶಮಾಶು**
**ಪ್ರಾಪ್ನೋತಿ ಮರ್ತ್ಯೋ ನ ಹಿ ಸಂಶಯೋತ್ರ ॥ ೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಶತ್ರುನಾಶ ಕರ್ಮವರ್ಣನಂ ನಾಮ ಸಪ್ತನವತಿತಮೋಽಧ್ಯಾಯಃ**

---

ವಾಗಿರುವ ಕೆಂಪು ಹೂವುಗಳಿಂದಲೂ, ಗುಗ್ಗುಳದ ಧೂಪದಿಂದಲೂ ಪೂಜಿಸಬೇಕು. ತುಪ್ಪದ ದೀಪವನ್ನು ಅರ್ಪಿಸಬೇಕು.

೫-೬. ರಕ್ತವರ್ಣವುಳ್ಳ ಎಲ್ಲಾ ನೈವೇದ್ಯವನ್ನೂ ಅರ್ಪಿಸಬೇಕು. ಅಗ್ನಿಯಲ್ಲಿಯೂ ಸಹ ಶುಭಕರವಾದ ಹವಿಸ್ಸನ್ನು ಹೋಮಮಾಡಬೇಕು ಬ್ರಾಹ್ಮಣರಿಗೆ ಆಯುಧಗಳನ್ನೇ ದಕ್ಷಿಣೆಯಾಗಿ ಕೊಡಬೇಕು. ಈ ವಿಧವಾದ ಶತ್ರುನಾಶಕವಾದ ಕರ್ಮವನ್ನು ಯಾವಾಗಲೂ, ಆಚರಿಸುವವನು ಈ ಕರ್ಮದಿಂದ ಶತ್ರುನಾಶವನ್ನು ಹೊಂದಿಯೇ ಹೊಂದುತ್ತಾನೆ. ಇದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದ ದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ಶತ್ರುನಾಶಕರ್ಮ ವರ್ಣನವೆಂಬ ತೊಂಭತ್ತೇಳನೆಯ ಅಧ್ಯಾಯವು ಮುಗಿದಿದೆ.



**ತೊಂಭತ್ತೇಳನೆಯ ಅಧ್ಯಾಯದ ಸಾರಾಂಶ.**

ಈ ಅಧ್ಯಾಯದಲ್ಲಿಯೂ ಶತ್ರುನಾಶಕರ್ಮವೆಂಬ ಕಾಮ್ಯಕರ್ಮವನ್ನು ವಿವರಿಸಿರುವರು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

# ದ್ವಿತೀಯಖಂಡೇ

---

## ಅಷ್ಟನವತಿತಮೋಽಧ್ಯಾಯಃ

**|| ರಾಮ ಉವಾಚ ||**

**ಕಾಮ್ಯಾನಿ ತ್ವಂ ಸಮಾಚಕ್ಷ್ವ ಸ್ನಾನಾನ್ಯನ್ಯಾನಿ ದೇವಜ |**
**ಕೇನ ಸ್ನಾನೇನ ಧರ್ಮಜ್ಞ ಕಂ ಕಂ ಕಾಮಮವಾಪ್ನುಯಾತ್ || ೧ ||**

**|| ಪುಷ್ಕರ ಉವಾಚ ||**

**ಪುರೋಧಾಃ ಸೋಪವಾಸಸ್ತು ಸರ್ವಸ್ನಾನಾನಿ ಕಾರಯೇತ್ |**
**ಸೋಪವಾಸಸ್ಯ ಧರ್ಮಜ್ಞ ತಥಾ ಸರ್ವತ್ರ ಮಾನವಃ || ೨ ||**

**ಅಕಾಲಿಮೂಲಾಃ ಕಲಶಾಃ ಕಾರ್ಯಾಃ ಸರ್ವೇಷು ಭಾರ್ಗವ |**
**ಪೂಜಾ ಚಂದ್ರಮಸಃ ಕಾರ್ಯಾ ವರುಣಸ್ಯ ತಥೈವ ಚ || ೩ ||**

---

## ತೊಂಭತ್ತೆಂಟನೆಯ ಅಧ್ಯಾಯ.

೧. ಭಾರ್ಗವನು ಕೇಳುತ್ತಾನೆ:—ಎಲೈ ದೇವಪುತ್ರನೇ, ಇತರ ಕಾಮ್ಯ ಸ್ನಾನಗಳನ್ನೂ ಸಹ ಧರ್ಮಜ್ಞನಾದ ನಿನ್ನಿಂದ ತಿಳಿಯಲು ಆಶಿಸುತ್ತೇನೆ. ಯಾವ ಯಾವ ಸ್ನಾನದಿಂದ ಯಾವ ಯಾವ ಫಲವು ಉಂಟಾದೀತೆಂಬುದನ್ನೂ ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಪುರೋಹಿತನು ಉಪವಾಸದಿಂದಿದ್ದೇ ಈ ಸ್ನಾನಗಳನ್ನೆಲ್ಲಾ ಮಾಡಿಸಬೇಕು. ಸ್ನಾನಮಾಡತಕ್ಕವನೂ ಸಹ ಉಪವಾಸದಿಂದ ಇರಬೇಕು. ಎಲ್ಲಾ ಸ್ನಾನಗಳಲ್ಲಿಯೂ ಬುಡದಲ್ಲಿ ಕಪ್ಪಾಗಿಲ್ಲದ ಕಲಶಗಳನ್ನೇ ಇಡಬೇಕು. ಚಂದ್ರನಿಗೂ, ವರುಣನಿಗೂ ಸಹ ಪೂಜೆಯನ್ನು ಮಾಡಬೇಕು. ಮತ್ತು

ನಕ್ಷತ್ರದೇವತಾನಾಂ ಚ ನಕ್ಷತ್ರಸ್ಯ ತಥೈವ ಚ ।
ಸರ್ವಗಸ್ಯಾಪ್ರಮೇಯಸ್ಯ ವಾಸುದೇವಸ್ಯ ಚಾಪ್ಯಥ ॥ ೪ ॥
ಯೇಷಾಂ ಚ ಪೂಜಾಕರ್ತವ್ಯಾ ತೇಷಾಂ ಚ ಜುಹುಯಾದ್ಧವಿಃ ।
ಕಾಮ್ಯಂ ಸ್ನಾನಂ ಸದಾ ಕುರ್ಯಾನ್ನಕ್ಷತ್ರಂ ತು ನ ಲಂಘಯೇತ್ ।
ಮಂತ್ರಯೇತ್ಸ್ನಾನಕಲಶಂ ಮಂತ್ರೇಣಾನೇನ ಭಾರ್ಗವ ॥ ೫ ॥

ಮಂತ್ರಃ ॥ ಆಪಃ ಸೋಮಾದ್ಯಾಃ ಸಂಬಭೂವುಃ ಪವಿತ್ರಾಗ್ನಿಃ ಪಾವನಃ ಸೋಮಸೂರ್ಯಸಂಸ್ಥಿತಾ ವಾಯುನಾನಷ್ಟದೋಷಾಶ್ಚಯೋ ನಿತ್ಯಮುಚ್ಛ್ರೇಯಸೇ ಸತ್ಕೃತ್ಯಾಪ್ಸುಸ್ಯಃ ಸ್ವಾಹಾ ಶಾಂತಿಃ ಶ್ರೀರ್ನವಪುಷ್ಟಿರ್ಮಹ್ಯಂ ಭೂಯಾಸಂ ಸರ್ವಶಿರಃ ॥ ಸಾಧು ಸ್ವಾಹೇತಿ ಸೂರ್ಯಃ ಸಂಸ್ಥಿತಾವಾಯುನಾಮಾಷ್ಟದೋಷಾ-ಕರ್ಮ್ಯತೆದುಕ್ತಂ ರಿಪುನಾಶಕಾರಿ ಸಾಧಾರಣಂ ಸ್ನಾನಮಿದಂ ಪವಿತ್ರಂ ॥ ಅತಃ ಪರಂತೇ ಕಥಯಾಮಿ ರಾಮ ಸ್ನಾನಾನಿ ಕಾಮ್ಯಾನಿ ಸುಖಪ್ರದಾನಿ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಸಾಧಾರಣ ಸ್ನಾನವರ್ಣನಂ ನಾಮಾಷ್ಟನವತಿತಮೋಽಧ್ಯಾಯಃ

೪–೫. ನಕ್ಷತ್ರ ದೇವತೆಗಳಿಗೂ, ನಕ್ಷತ್ರಗಳಿಗೂ, ಸರ್ವವ್ಯಾಪಿಯಾಗಿಯೂ, ಅಚಿಂತ್ಯಮಹಿಮನಾಗಿಯೂ, ಇರುವ ವಾಸುದೇವನಿಗೂ ಸಹ ಪೂಜಾದಿಗಳನ್ನು ಮಾಡಬೇಕು. ಯಾವ ಯಾವ ದೇವತೆಗಳಿಗೆ ಪೂಜೆಯು ಹೇಳಲ್ಪಟ್ಟಿದೆಯೋ ಅವರನ್ನುದ್ದೇಶಿಸಿ ಹವಿಸ್ಸನ್ನೂ ಹೋಮಮಾಡಬೇಕು. ಈ ಕಾಮ್ಯಸ್ನಾನ ಮಾಡು ವಾಗ ಉಕ್ತವಾಗಿರುವ ನಕ್ಷತ್ರವನ್ನು ಯಾವಾಗಲೂ ಅತಿಕ್ರಮಿಸಿ ನಡೆಯಬಾರದು. ಸ್ನಾನಕ್ಕಾಗಿ ಏರ್ಪಡಿಸಲ್ಪಡುವ ಕಲಶಗಳನ್ನು ಮುಂದೆ ಹೇಳುವ ಈ ಮಂತ್ರದಿಂದ ಅಭಿಮಂತ್ರಿಸಬೇಕು.

ಈ ಅಧ್ಯಾಯದಲ್ಲಿ ಕಾಮ್ಯಸ್ನಾನಗಳ ವಿಶೇಷವಿವರಣೆಗಾಗಿ ಸಾಮಾನ್ಯವಾಗಿ ಎಲ್ಲಾ ಸ್ನಾನಗಳಲ್ಲಿಯೂ ಆಚರಿಸಬೇಕಾದ ಕ್ರಮವನ್ನೂ, ಸ್ನಾನಕುಂಭಗಳನ್ನು ಅಭಿಮಂತ್ರಿಸುವ ಮಂತ್ರವನ್ನೂ ಸಹ ಹೇಳಿರುತ್ತಾರೆ.

ಇಲ್ಲಿಗೆ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಭಾರ್ಗವ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿಸ್ನಾನ ವರ್ಣನವೆಂಬ ತೊಂಭತ್ತೆಂಟನೆಯ ಅಧ್ಯಾಯವು ಮುಗಿದಿದೆ.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ನವನವತಿತಮೋಽಧ್ಯಾಯಃ

॥ ಪುಷ್ಕರ ಉವಾಚ ॥

**ಕೃತ್ತಿಕಾಸ್ನಾನಮುಕ್ತಂ ತೇ ವಹ್ನಿಕರ್ಮಪ್ರಸಾಧನಂ ।**
**ತಥಾರಿನಾಶನಂ ಮುಖ್ಯಂ ವಹ್ಯಾಮ್ಯಧ್ಯೇಯಪ್ರದಂ ತಥಾ ॥ ೧ ॥**

**ರೋಹಿಣೀಷು ತಥಾ ಸ್ನಾನಂ ಪ್ರೋಕ್ತಂ ಪುತ್ರಪ್ರದಂ ತವ ।**
**ಬ್ರಹ್ಮವರ್ಚಸಕಾಮಸ್ಯ ಸ್ನಾನಂ ಸೌಮ್ಯಮಿದಂ ಶೃಣು ॥ ೨ ॥**

**ಪೂರ್ಣಮೌದುಂಬರೈಃ ಪತ್ರೈಃ ಕೃತ್ವಾ ರಾಮ ಘಟತ್ರಯಂ ।**
**ಪೂರ್ಣಚಂದ್ರಾಂಕಿತೈಃ ಶುಕ್ಲೈಃ ಸೂತ್ರಮಾಲ್ಯೈರಲಂಕೃತಂ ॥ ೩ ॥**

---

### ತೊಂಭತ್ತೊಂಭತ್ತನೆಯ ಅಧ್ಯಾಯ.

೧–೨. ಪುಷ್ಕರನು ಸ್ನಾನವಿಶೇಷಗಳನ್ನು ಹೇಳುತ್ತಾನೆ. ಅಗ್ನಿ ಸಾಧನೆಗೆ ತಕ್ಕ ಕೃತ್ತಿಕಾ ಸ್ನಾನವನ್ನೂ ಅದರಿಂದುಂಟಾಗುವ ಶತ್ರುನಾಶನವೆಂಬ ಮುಖ್ಯ ಫಲವನ್ನೂ ಸಹ ನಿನಗೆ ಹೇಳಿದ್ದಾಯಿತು. ಹಾಗೆಯೇ ರೋಹಿಣೀ ನಕ್ಷತ್ರಗಳಲ್ಲಿ ಯೂ ಸ್ನಾನವು ಹೇಳಲ್ಪಟ್ಟಿದೆ. ಇದು ಪುತ್ರಪ್ರದವಾಗಿಯೂ, ಬ್ರಹ್ಮವರ್ಚಸ್ಸನ್ನು ಅಪೇಕ್ಷಿಸುವವನಿಗೆ ಅದರ ಫಲಸಿದ್ಧಿಗೆ ಕಾರಣವಾಗಿಯೂ, ಸೌಮ್ಯವಾಗಿಯೂ ಇದೆ. ಇದನ್ನು ಹೇಳುತ್ತೇನೆ. ಕೇಳು.

೩–೪. ಅತ್ತಿಯ ಎಲೆಗಳಿಂದ ತುಂಬಿದ ಮೂರು ಘಟಗಳನ್ನು ಏರ್ಪಡಿಸ ಬೇಕು. ಆ ಘಟಗಳಲ್ಲಿ ಪೂರ್ಣಚಂದ್ರನನ್ನು ಚಿತ್ರಿಸಿ ಬಿಳುವಾದ ನೂಲುಗಳಿಂದಲೂ ಹೂವಿನ ಮಾಲಿಕೆಯಿಂದಲೂ ಆ ಘಟಗಳನ್ನು ಅಲಂಕರಿಸಬೇಕು. ಅಂತಹ

ತೇನ ಸಂಸ್ನಾಪಿತಃ ಪಶ್ಚಾತ್ಕೃತ್ವಾ ಮವಾಸಾ ಯಥಾವಿಧಿ ।
ದೇವತಾಪೂಜನಂ ಕೃತ್ವಾ ಘೃತಂ ಹುತ್ವಾ ಹುತಾಶನೇ ॥ ೪ ॥

ಓಂಕಾರಪೂತಂ ಸೋಮಾಯ ಕ್ಷೀರಂ ಹುತ್ವಾ ತಥಾ ಜಲೇ ।
ನಿವೇದನೀಯಂ ಸೋಮಾಯ ತಥಾ ಪಿಷ್ಟಮೃಗತ್ರಯಂ ॥ ೫ ॥

ಮೃಗಶೃಂಗೇಣ ಧೂಪಂ ಚ ತಥಾ ದದ್ಯಾದನಂತರಂ ।
ಸೋಮೇನ ಚ ಮಣಿರ್ಧಾರ್ಯೋ ಜಾತರೂಪಪರಿಷ್ಕೃತಃ ॥ ೬ ॥

ದಕ್ಷಿಣಾ ಚಾತ್ರ ದಾತವ್ಯಾ ಶುಭಧೇನುಃ ಪಯಸ್ವಿನೀ ।
ಕೃತ್ವಾ ತನ್ನಿತ್ಯಮಾಪ್ನೋತಿ ಬ್ರಹ್ಮವರ್ಚಸಮುತ್ತಮಂ ॥ ೭ ॥

ಘೃತಾಮ್ರಮಧುಪೂರ್ಣೇನ ಸ್ನಾತಃ ಕುಂಭೇನ ಮಾನವಃ ।
ಪಟ್ಟಶಾಲಂಕೃತೇನಾಥ ರಕ್ತಚಂದನವಾರಿಣಾ ॥ ೮ ॥

---

ಘಟಗಳ ನೀರಿನಲ್ಲಿ ಸ್ನಾನಮಾಡಿ ಅನಂತರ ಪಟ್ಟೆಯ ವಸ್ತ್ರವನ್ನುಟ್ಟು ಯಥಾವಿಧಿಯಾಗಿ ದೇವತಾಪೂಜೆಯನ್ನು ಮಾಡಿ ಅಗ್ನಿಯಲ್ಲಿ ಆಜ್ಯವನ್ನು ಹೋಮ ಮಾಡಬೇಕು.

೫–೬. ಅನಂತರ ಚಂದ್ರನನ್ನು ಉದ್ದೇಶಿಸಿ ಓಂಕಾರ ಪೂರ್ವಕವಾಗಿ ಜಲದಲ್ಲಿ ಹಾಲನ್ನು ಹೋಮಮಾಡಬೇಕು. ಮತ್ತು ಹಿಟ್ಟಿನಿಂದ ಮಾಡಿದ ಮೂರು ಮೃಗಗಳನ್ನು ಚಂದ್ರನಿಗೆ ನೈವೇದ್ಯವಾಗಿ ಸಮರ್ಪಿಸಿ ಜಿಂಕೆಯ ಕೊಂಬಿನಿಂದ ಮಾಡಿದ ಧೂಪವನ್ನೂ ಅರ್ಪಿಸಬೇಕು ಅನಂತರ ಚಂದ್ರನ ಚಿತ್ರದಿಂದ ರಮ್ಯವಾಗಿ ಮಾಡಲ್ಪಟ್ಟ ಮತ್ತು ಚಿನ್ನದಿಂದಲೂ ಪರಿಷ್ಕರಿಸಲ್ಪಟ್ಟ ಮಣಿಯನ್ನು ಧರಿಸಬೇಕು.

೭–೮. ಈ ಕರ್ಮದಲ್ಲಿ ಹೆಚ್ಚಾಗಿ ಹಾಲು ಕೊಡುವ ಒಳ್ಳೆಯ ಹಸುವನ್ನು ದಕ್ಷಿಣೆಗಾಗಿ ದಾನಮಾಡಬೇಕು. ಈ ಕರ್ಮವನ್ನು ನಿಯತವಾಗಿ ಮಾಡಿದಲ್ಲಿ ಅವನು ಬ್ರಹ್ಮವರ್ಚಸ್ಸನ್ನು ಹೊಂದಿಯೇ ಹೊಂದುತ್ತಾನೆ........ಮತ್ತು ತುಪ್ಪ ಮಾವಿನ ಎಲೆ, ಜೇನು ತುಪ್ಪ ಇವುಗಳಿಂದ ಪೂರ್ಣವಾದ ಮತ್ತು ಖಡ್ಗದಿಂದ ಅಲಂಕರಿಸಿ ಕೆಂಪಾದ ಚಂದನದನೀರಿನಿಂದಲೂ ಕೂಡಿರುವ ಆ ಘಟಗಳ ನೀರಿನಲ್ಲಿ ಸ್ನಾನಮಾಡಬೇಕು.

ರುದ್ರಾಯ ಮಾಂಸಂ ರುಧಿರಂ ತಥಾ ಚ ಮಧುಪಾಯಸಂ ।
ಕೃಷ್ಣಾನಿ ವಾಸಾಂಸಿ ತಥಾ ಧೂಪಂ ಗುಗ್ಗುಲಮೇವ ಚ　　॥ ೯ ॥

ದದ್ಯಾತ್ ಘೃತೇನ ಚ ತಥಾ ಹೋಮೋ ಮಂತ್ರೈರ್ವಿಧೀಯತೇ ।
ಕೃಷ್ಣಾನಿ ವಾಸಾಂಸಿ ತಥಾ ದಾತವ್ಯಾ ದಕ್ಷಿಣಾ ಭವೇತ್　　॥ ೧೦ ॥

ಮೇಷಾಶ್ವನರಲೋಮಾನಿ ಗರ್ದಭಸ್ಯ ವಿಶೇಷತಃ ।
ಆಯ[1]ಸೀತು ಮಣೌ ಕೃತ್ವಾ ದ್ವಾರಿ ಶತ್ರೋರ್ನಿಧಾಪಯೇತ್　　॥ ೧೧ ॥

ಆದ್ರಾಸ್ನಾನಮಿದಂ ರಾಮ ಸರ್ವಶತ್ರುವಿನಾಶನಂ ।
ಸರ್ವಗಂಧೈಃ ಫಲೈರ್ಬೀಜೈಃ ಪೂರ್ಣಂ ಕೃತ್ವಾ ಘಟತ್ರಯಂ　　॥ ೧೨ ॥

ಸ್ನಾಪನಂ ತೇನ ಕರ್ತವ್ಯಂ ಆದಿತ್ಯೈಸ್ತದನಂತರಂ ।
ನವನೀತಂ ಚ ಕುಲ್ಮಾಷಂ ಮತ್ಸ್ಯಾಂಶ್ಚೈವ ಸ್ವರಾಂಸ್ತಥಾ　　॥ ೧೩ ॥

೯-೧೦. ರುದ್ರನನ್ನುದ್ದೇಶಿಸಿ ಮಾಂಸವನ್ನೂ, ರಕ್ತವನ್ನೂ ಜೇನಿನಿಂದ ಕೂಡಿದ ಪಾಯಸವನ್ನೂ ಅರ್ಪಿಸಿ, ಕರಿಯ ವಸ್ತ್ರಗಳಿಂದ ಪೂಜಿಸಿ ಗುಗ್ಗುಳದ ಧೂಪವನ್ನು ಅರ್ಪಿಸಬೇಕು. ಮಂತ್ರಗಳಿಂದ ಆಜ್ಯ ಹೋಮವನ್ನೂ ಮಾಡಬೇಕು. ಕರಿಯವಸ್ತ್ರಗಳನ್ನೇ ದಕ್ಷಿಣೆಯನ್ನಾಗಿ ಕೊಡಬೇಕು.

೧೧. ಕುರಿ, ಕುದುರೆ ಮತ್ತು ಮನುಷ್ಯ ಇವರ ರೋಮಗಳನ್ನು ಅವರಲ್ಲೂ ವಿಶೇಷವಾಗಿ ಕತ್ತೆಯ ರೋಮಗಳನ್ನೂ, ಕಬ್ಬಿಣದ ಸಣ್ಣ ಗುಂಡಿನಲ್ಲಿ ಸೇರಿಸಿ ಶತ್ರುವಿನ ಮನೆಯ ಬಾಗಿಲಿನಲ್ಲಿ ಅದನ್ನು ಸ್ಥಾಪಿಸಬೇಕು. ಈ ಆದ್ರಾಸ್ನಾನವೆಂಬುದು ಸರ್ವ ಶತ್ರುನಾಶಕವಾಗಿ ಆದೀತು.

೧೨-೧೩. ನಾನಾ ವಿಧವಾದ ಗಂಧಗಳುಳ್ಳ ಫಲಗಳಿಂದಲೂ, ಬೀಜಗಳಿಂದಲೂ, ತುಂಬಿದ ಮೂರು ಘಟಗಳಲ್ಲಿ ಜಲವನ್ನು ತುಂಬಿ ಆ ನೀರಿನಲ್ಲಿ ಸ್ನಾನಮಾಡಿಸಬೇಕು. ಅನಂತರ ಆದಿತ್ಯ ಮಂತ್ರಗಳಿಂದ ಆ ಘಟಗಳಿಗೆ ಬೆಣ್ಣೆ, ಹಲಸಂದೆ, ಮೀನುಗಳು, ಸುರಾ ಮತ್ತು ಸುವಾಸನೆಯುಳ್ಳ ಇತರ ಮೀನುಗಳು ಇವನ್ನು ನೈವೇದ್ಯಕ್ಕೆ ಇಟ್ಟು ಪೂಜಿಸಬೇಕು.

1 ಇಲ್ಲಿ ಆಯಸೀ ತು ಎಂದು ಪಾಠವಿರಬೇಕೆಂದು ತೋರುತ್ತದೆ.

ನಿವೇದಯೇಚ್ಚೈವ ತಥಾ ಮತ್ಸ್ಯಾನಿ ಸುರಭೀಣಿ ಚ ।
ಘೃತಾಕ್ಷತಾಭ್ಯಾಂ ಧೂಪೇನ ಹೋಮಶ್ಚೈವ ವಿಧೀಯತೇ ॥ ೧೪ ॥

ತದ್ದಿನೇತು ನದೀ ಯತ್ರ ಯೋಗೇ ಗಚ್ಛೇತು ತಾಂ ಮುದಾ ।
ಸುವರ್ಣರೂಪ್ಯಗಂಧಶ್ಚ ಧಾರಣೀಯಸ್ತಥಾ ಮಣಿಃ ॥ ೧೫ ॥

ದಕ್ಷಿಣಾಚಾತ್ರ ದಾತವ್ಯಾ ರಾಮ ಧೇನುಃ ಪಯಸ್ವಿನೀ ।
ಸ್ನಾತಃ ಪುನರ್ವಸಾವೇವ ಜ್ಞಾತಿಶ್ರೈಷ್ಠ್ಯಮವಾಪ್ನುಯಾತ್ ॥ ೧೬ ॥

ಪುತ್ರಾನ್ಸ್ವಾ ಸುಮಹಾಭಾಗ ಯದೀಚ್ಛತಿ ತದಾಪ್ನುಯಾತ್ ।
ಗೌರಸರ್ಷಪಕಲ್ಕೇನ ರಾಮೋತ್ಸಾದಿತವಿಗ್ರಹಃ ॥ ೧೭ ॥

ಗವ್ಯಾಜ್ಯಪೂರ್ಣಕುಂಭೇನ ಸ್ನಾತಃ ಸ್ನಾತಸ್ತಥೌಷಧೈಃ ।
ಅಹತಾಂಬರಸಂವೀತಃ ಪಾಯಸಂ ವಿನಿವೇದಯೇತ್ ॥ ೧೮ ॥

---

೧೪-೧೫. ಆಜ್ಯ, ಅಕ್ಷತೆ, ಧೂಪ ಇವುಗಳಿಂದಲೂ ಪೂಜಿಸಿ ಹೋಮವನ್ನೂ ಮಾಡಬೇಕು. ನದಿಯು ಸಮೀಪದಲ್ಲಿದ್ದಲ್ಲಿ ಆ ದಿನ ನದಿಯ ಸಮೀಪಕ್ಕೆ ಹೋಗಿ ಅಲ್ಲಿ ಚಿನ್ನ ಅಥವಾ ಬೆಳ್ಳಿಯ ಮಣಿಯನ್ನು ಧೂಪದಿಂದ ಸುಗಂಧಮಾಡಿ ಧರಿಸ ಬೇಕು. ಈ ಕರ್ಮದಲ್ಲಿ ತುಂಬ ಹಾಲು ಕೊಡುವ ಹಸುವನ್ನುದಕ್ಷಿಣೆಗಾಗಿ ಕೊಡಬೇಕು.

೧೬-೧೭. ಪುನರ್ವಸೂ ನಕ್ಷತ್ರದಲ್ಲಿ ಈ ರೀತಿ ಸ್ನಾನಮಾಡಿದವನು ಸ್ವಜನರಲ್ಲಿ ಶ್ರೇಷ್ಠನಾಗುತ್ತಾನೆ. ಅಪೇಕ್ಷೆಪಟ್ಟಲ್ಲಿ ಪುತ್ರರನ್ನೂ ಅವನು ಹೊಂದುತ್ತಾನೆ ಮತ್ತು ಬಿಳಿಯ ಸಾಸವೆಯ ಚೂರ್ಣದಿಂದ ದೇಹವನ್ನು ಉಜ್ಜಿ ಸ್ನಾನಮಾಡಿ ಹಸುವಿನ ತುಪ್ಪದಿಂದ ಪೂರ್ಣವಾದ ಘಟದಿಂದಲೂ ಓಷಧಿಗಳಿಂದಲೂ ಸ್ನಾನ ಮಾಡಬೇಕು.

೧೮-೧೯. ಮಡಿಯಾದ ವಸ್ತ್ರವನ್ನು ಧರಿಸಿ ಮಡಿಯಾದ ವಸ್ತ್ರದಿಂದಲೂ, ಬಿಳಿಯ ಹೂವುಗಳಿಂದಲೂ ಪೂಜಿಸಿ ಪಾಯಸವನ್ನು ನೈವೇದ್ಯಕ್ಕೆ ಅರ್ಪಿಸಬೇಕು.

**ಶುಕ್ಲಾನಿ ಚೈವ ಮಾಲ್ಯಾನಿ ವಾಸಾಂಸ್ಯಪಹತಾನಿ ಚ ।**
**ಹೋಮಶ್ಚ ಪಾಯಸೇನಾತ್ರ ಧೂಪಂ ಗಂಧೈಶ್ಚ ದಾಪಯೇತ್ ॥ ೧೯ ॥**

**ಮಣಿಃ ಶಿರಸಿ ಧಾರ್ಯಶ್ಚ ದಂಡಾಗ್ರೇ ಬ್ರಹ್ಮಚಾರಿಣಃ ।**
**ಸುವರ್ಣಗರ್ಭಂ ಪುಷ್ಪೇಣ ಸ್ನಾನಂ ಪುಷ್ಟಿಕರಂ ಭವೇತ್ ॥ ೨೦ ॥**

**ದಕ್ಷಿಣಾ ಚಾತ್ರ ದಾತವ್ಯಾ ಘೃತಂ ಕನಕಸಂಯುತಂ ।**
**ಷಡ್ಧ್ವಜಾಂ ನೀಲಸೂತ್ರೇಣ ನೀಲಪುಷ್ಪೈಶ್ಚ ವೇಷ್ಟಿತಾಂ ॥ ೨೧ ॥**

**ಸರ್ಷಪಾನ್ ವೇಷ್ಟಯೇದ್ರಾಮ ನಾಗಪುಷ್ಪೇಣ ಭೂರಿಣಾ ।**
**ವಲ್ಮೀಕಾನಾಂ ಸಹಸ್ರಸ್ಯ ತಥೈವಾಗ್ರಮೃದಾ ದ್ವಿಜಃ ॥ ೨೨ ॥**

**ತೈಃ ಸ್ನಾತಃ ಸರ್ವನಾಗೇಭ್ಯೋ ಮಧುಲಾಜಾಂ ನಿವೇದಯೇತ್ ।**
**ಗಂಧೋದಕಂ ತಥಾ ಧಾನಾಃ ಷಟ್ಕೃತ್ವೋಥ ಪುನಃಪುನಃ ॥ ೨೩ ॥**

---

ಈ ಕರ್ಮದಲ್ಲಿ ಪಾಯಸದಿಂದಲೇ ಹೋಮವನ್ನು ಮಾಡಬೇಕು. ಸುಗಂಧಿಯಾದ ಧೂಪವನ್ನು ಅರ್ಪಿಸಬೇಕು. ಮಣಿಯನ್ನು ತಲೆಯಲ್ಲಿ ಧರಿಸಬೇಕು. ಬ್ರಹ್ಮಚಾರಿಯಾಗಿದ್ದಲ್ಲಿ ತನ್ನ ದಂಡದ ಅಗ್ರಭಾಗದಲ್ಲಿ ಧರಿಸಬೇಕು.

೨೦–೨೧. ಸುವರ್ಣದಿಂದೊಡಗೂಡಿದ ಹೂವುಗಳಿಂದಲೇ ಸ್ನಾನಮಾಡಿದಲ್ಲಿ ಬಹಳ ಮಟ್ಟಿಗೂ ಪುಷ್ಟಿಕರವಾಗುತ್ತದೆ. ಈ ಕರ್ಮದಲ್ಲಿ ಚಿನ್ನವನ್ನೂ ತುಪ್ಪವನ್ನೂ ಸಹ ದಕ್ಷಣೆಯಾಗಿ ದಾನ ಮಾಡಬೇಕು. ಕಪ್ಪಾದ ನೂಲಿನಿಂದ ಕಪ್ಪಾದ ಹೂವುಗಳನ್ನು ಕಟ್ಟಿ ಆ ಹೂವಿನ ಮಾಲೆಯಿಂದ ಅಲಂಕರಿಸಲ್ಪಟ್ಟ ಆರು ಧ್ವಜಗಳನ್ನೂ ಸ್ಥಾಪಿಸಬೇಕು. ಹೆಚ್ಚಾದ ಸಂಪಿಗೆಯ ಹೂವುಗಳಿಂದಲೂ ಸಾಸವೆಯ ಹೂವುಗಳಿಂದಲೂ ಆ ಧ್ವಜಗಳನ್ನು ಸುತ್ತಬೇಕು.

೨೨–೨೩. ಒಂದು ಸಾವಿರ ಹುತ್ತಗಳಲ್ಲಿ ಮೇಲಿನ ಮಣ್ಣನ್ನು ತಂದು ಸೇರಿಸಿ ಆ ಮೃತ್ತಿಕೆಯಿಂದ ಸ್ನಾನ ಮಾಡಬೇಕು. ಸರ್ಪಗಳಿಗೆಲ್ಲಾ ಬೆಲ್ಲದ ಅರಳನ್ನು ನೈವೇದ್ಯಕ್ಕೆ ಇಟ್ಟು ಪೂಜಿಸಬೇಕು. ಅರಳಿನೊಡನೆ ಸುಗಂಧಿಯಾದ ಜಲವನ್ನು ಪೂಜೆಗೆ ಉಪಯೋಗಿಸಬೇಕು. ಅನಂತರ ಹಾಲಿನಿಂದ ಪುನಃ ಪುನಃ ಆರು ಸಲ ಹೋಮಮಾಡಬೇಕು. ಸರ್ಪಗಳ ಸೋಲೆಯಿಂದ ಧೂಪಿಸಬೇಕು.

ಕ್ಷೀರೇಣ ಹೋಮಃ ಕರ್ತವ್ಯೋ ಧೂಪಃ ಸರ್ಪತ್ವಚಾ ತಥಾ ।
ಸರ್ಪತ್ವಕ್ ನಾಗಪುಷ್ಪಂ ಚ ಸುವರ್ಣಂ ಚ ಮಣಿರ್ಭವೇತ್ ॥ ೨೪ ॥

ದಕ್ಷಿಣಾ ಚಾತ್ರ ದಾತವ್ಯಾ ಶಯನೀಯಂ ಮನೋಹರಂ ।
ಸ್ನಾನಂ ಸಾರ್ಪೇಣ ತೆ ಪ್ರೋಕ್ತಂ ಭೋಗ್ಯಂ ಸಿದ್ಧಿಕರಂ ಭವೇತ್ ॥ ೨೫ ॥

ಶ್ರೀಪ್ರದಂ ವಾ ಮಹಾಭಾಗ ಕಥಿತಂ ಕಾಮತಸ್ತವ ।
ಪ್ಲಕ್ಷಪತ್ರೈಃ ತಿಲೈಃ ಕೃಷ್ಣೈಃ ಘಟಷಟ್ಕಂ ತು ಪೂರಯೇತ್ ॥ ೨೬ ॥

ವೇಷ್ಟಯೇತ್ಕೃಷ್ಣಮಾಲ್ಯೈಶ್ಚ ತೇನ ಸ್ನಾತೋಽಹತಾಂಬರಃ ।
ದಕ್ಷಿಣಾಗ್ರೇಷು ದರ್ಭೇಷು ಸಪ್ತಪಿಂಡಾನುಪಾಹರೇತ್ ॥ ೨೭ ॥

ಸುಭಾಸ್ವರೋ ಬರ್ಹಿಷದೋ ಹ್ಯಗ್ನಿಷ್ವಾತ್ತಾಸ್ತಥೈವ ಚ ।
ಕ್ರವ್ಯಾದಶ್ಚೋಪಹೂತಾಶ್ಚ ಆಜ್ಯಪಾಶ್ಚ ಸುಕಾಲಿನಃ ॥ ೨೮ ॥

---

೨೪-೨೫. ಸುವರ್ಣದಿಂದ ಮಣಿಯನ್ನು ಮಾಡಿ ಹಾವಿನ ಪೊರೆ ಮತ್ತು ಸಂಪಿಗೆ ಹೂವಿನೊಡನೆ ಅದನ್ನು ಧರಿಸಬೇಕು. ಈ ಕರ್ಮದಲ್ಲಿ ರಮ್ಯವಾದ ಹಾಸಿಗೆಯನ್ನು ದಕ್ಷಿಣೆಗಾಗಿ ಕೊಡಬೇಕು. ಈಗ ಹೇಳಿದ ಈ ಸ್ನಾನವನ್ನು ಆಶ್ರೇಷಾ ನಕ್ಷತ್ರದಲ್ಲಿ ಮಾಡಿದರೆ ಇದು ಭೋಗಪ್ರದವಾಗಿಯೂ ಸರ್ವಸಿದ್ಧಿಗೂ ಕಾರಣವಾಗಿಯೂ ಆಗುತ್ತದೆ. ಈ ಕಾಮ್ಯ ಕರ್ಮವು ಸಂಪತ್ಪ್ರದವಾಗಿಯೂ ಆಗುತ್ತದೆ.

೨೬-೨೭. ಪ್ಲಕ್ಷವೃಕ್ಷದ (ಜುಲ್ಲಿಯ ಗಿಡ) ಎಲೆಗಳಿಂದಲೂ, ಕಪ್ಪಾದ ಎಳ್ಳಿನಿಂದಲೂ ಆರು ಘಟಗಳನ್ನು ತುಂಬಿ. ಕಪ್ಪಾದ ಹೂವುಗಳಿಂದ ಆ ಘಟಗಳನ್ನು ಸುತ್ತಿ ಆ ಘಟದ ನೀರಿನಿಂದ ಸ್ನಾನಮಾಡಬೇಕು. ಅನಂತರ ಮಡಿಯ ವಸ್ತ್ರವನ್ನುಟ್ಟು, ದಕ್ಷಿಣಾಗ್ರವಾದ ದರ್ಭೆಗಳನ್ನು ಹರಡಿ ಆ ದರ್ಭೆಗಳಮೇಲೆ ಏಳು ಪಿಂಡಗಳನ್ನು ಇಡಬೇಕು. ಸುಧಾಸ್ವರ, ಬರ್ಹಿಷದ, ಅಗ್ನಿಷ್ವಾತ್ತ ಮತ್ತು

೨೮-೩೦. ಕ್ರವ್ಯಾದ, ಉಪಹೂತ, ಆಜ್ಯಪಾಃ, ಸುಕಾಲಿ, ಎಂಬ ಈ ಪಿತೃಗಳಿಗೆ ಕ್ರಮವಾಗಿ ಏಳು ಪಿಂಡಗಳನ್ನಿಡಬೇಕು. ಭತ್ತ ಗೋಧಿ ಇವುಗಳಿಂದ ಧೂಪವನ್ನೂ ಎಳ್ಳಿನಿಂದ ಹೋಮವನ್ನೂ ಮಾಡಬೇಕು. ಈ ಕರ್ಮದಲ್ಲಿ

ಪಿತರಃ ಕಥಿತಾಸ್ತೇಷಾಂ ಪಿಂಡಂ ದದ್ಯಾತ್ಕ್ರಮೇಣ ಚ ।
ಧೂಪಂ ವ್ರೀಹಿಯವೈರ್ದದ್ಯಾತ್ತಿಲೈರ್ಹೋಮಂ ತು ಕಾರಯೇತ್ ॥ ೨೯ ॥

ದಾತವ್ಯಾ ದಕ್ಷಿಣಾ ಚಾತ್ರ ತಿಲಾನ್ರಜತಮೇವ ಚ ।
ವಚಾ ಚ ಕೋರಕಂ ಚೈವ ತ್ರಿವೃತಂ ಧಾರಯೇನ್ಮಣಿಂ ॥ ೩೦ ॥

ಪಿತೃಪ್ರಸಾದಂ ಪ್ರಾಪ್ನೋತಿ ಕರ್ಮಸಿದ್ಧಿಮಥಾಪಿ ಚ ।
ಮಘಾಸ್ನಾನಮಿದಂ ಕೃತ್ವಾ ನಿತ್ಯಮೇವ ಸಮಾಹಿತಃ ॥ ೩೧ ॥

ಮಾಕ್ಷಿಕಂ ಚ ಮಧೂಕಂ ಚ ತಥೈವ ಮಧುಯಷ್ಟಿಕಾಂ ।
ಕೃತ್ವಾ ಕುಂಭದ್ವಯಂ ಪೂರ್ಣಂ ಭಗ್ನಾಂಗಃ ಸ್ನಾಪಯೇನ್ನರಂ ॥ ೩೨ ॥

ಶಾಲಿಪಿಷ್ಟಂ ತತಃ ಸ್ನಾತೋ ಘೃತೇನ ಮಧುನಾ ಯುತಂ ।
ಗಂಧಮಾಲ್ಯಂ ಬಹುವಿಧಂ ಬಹುಕೃತ್ವಾ ಭಗಾಯ ತು ॥ ೩೩ ॥

---

ಎಳ್ಳನ್ನೂ, ಬೆಳ್ಳಿಯ ನಾಣ್ಯವನ್ನೂ ಸಹ ದಕ್ಷಿಣೆಯನ್ನಾಗಿ ಕೊಡಬೇಕು. ಬಜೆಯನ್ನೂ, ಮೂರು ಸುತ್ತಿರುವ ಮೊಗ್ಗನ್ನೂ ಸಹ ಮಣಿಯನ್ನಾಗಿ ಧರಿಸಬೇಕು.

೩೧–೩೨. ಮಘಾ ನಕ್ಷತ್ರದಲ್ಲಿ ಈ ಸ್ನಾನವನ್ನು ಶಾಂತಮನಸ್ಕತೆಯಿಂದ ಮಾಡಿದವನು ಪಿತೃಗಳ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಎಲ್ಲಾ ಕರ್ಮಗಳಲ್ಲಿಯೂ ಸಿದ್ಧಿಯನ್ನೂ ಹೊಂದುತ್ತಾನೆ. ಜೇನು, ಹಿಪ್ಪೆಯಹೂವು, ಅತಿಮಧುರ ಇವುಗಳಿಂದ ಪೂರ್ಣವಾದ ಎರಡು ಕುಂಭಗಳನ್ನೇರ್ಪಡಿಸಿ ಅಂಗವಿಕಲನಾದವನನ್ನು ಆ ಕುಂಭಗಳಿಂದ ಸ್ನಾನಮಾಡಿಸಬೇಕು.

೩೩–೩೪. ಹಾಗೆ ಸ್ನಾನಮಾಡಿದವನು ಸಣ್ಣ ಅಕ್ಕಿಯ ಹಿಟ್ಟನ್ನು ತುಪ್ಪದಿಂದಲೂ ಜೇನಿನಿಂದಲೂ, ಮರ್ದಿಸಿ ಅದನ್ನು ನೈವೇದ್ಯಕ್ಕಾಗಿ ಸಮರ್ಪಿಸಿ ಬಹುವಿಧವಾದ ಗಂಧಪುಷ್ಪಗಳಿಂದ ಭಗನೆಂಬ ದೇವತೆಯನ್ನು ಪೂಜಿಸಬೇಕು. ನಾನಾ

ನಿವೇದಯಿತ್ವಾ ದೇಯಾನಿ ಚಿತ್ರಮಾಂಸಾನಿ ಚಾಪ್ಯಥ ।
ಘೃತೇನ ಧೂಪೋ ದಾತವ್ಯೋ ಹೋಮಃ ಕಾರ್ಯಃ ಪ್ರಿಯಂಗುನಾ ॥ ೩೪ ॥

ದಕ್ಷಿಣಾ ಚಾತ್ರ ದಾತವ್ಯಾ ಚಿತ್ರವಾಸಾಂಸಿ ಚಾಪ್ಯಥ ।
ಪಾರಾವತಸ್ಯ ಪಕ್ಷಾಣಿ ಚಕ್ರವಾಕಸ್ಯ ಮಾನದ ॥ ೩೫ ॥

ತ್ರಿವೃತಾನಿ ತಥಾ ಕೃತ್ವಾ ಮಣಿಂ ಶಿರಸಿ ಧಾರಯೇತ್ ।
ಸೌಭಾಗ್ಯಂ ಮಹದಾಪ್ನೋತಿ ಸ್ನಾತ್ವೈವಂ ಭಗದೈವತೇ ॥ ೩೬ ॥

ತಿಲಮಾಕ್ಷಿಕಪೂರ್ಣೇನ ಸ್ನಾತಃ ಕುಂಭದ್ವಯೇನ ತು ।
ಆರ್ಯರ್ಕ್ಷೇ ಪಾಯಸಂ ದದ್ಯಾತ್ಪೀತರಕ್ತೇ ಚ ವಾಸಸೀ ॥ ೩೭ ॥

ಧೂಪೇ ಶತಾವರೀ ದೇಯಾ ಹೋಮಃ ಕಾರ್ಯಸ್ತಥಾಕ್ಷತೈಃ ।
ತೇಜೋವಂತೀ ಪ್ರಿಯಂಗುಶ್ಚ ತ್ರಿವೃತಂ ಧಾರಯೇನ್ಮಣಿಂ ॥ ೩೮ ॥

---

ವಿಧವಾದ ಮಾಂಸವನ್ನೂ ನೈವೇದ್ಯಕ್ಕೆ ಇಟ್ಟು ತುಪ್ಪದಿಂದ ಧೂಪವನ್ನರ್ಪಿಸಿ ನವಣೆಯ ಅಕ್ಕಿಯಿಂದ ಹೋಮಮಾಡಬೇಕು.

೩೫–೩೬. ಈ ಕರ್ಮದಲ್ಲಿ ನಾನಾವರ್ಣವುಳ್ಳ ವಸ್ತ್ರಗಳನ್ನು ದಾನಮಾಡಬೇಕು. ಪಾರಿವಾಳದ ಪಕ್ಷಿಯ ಮತ್ತು ಚಕ್ರವಾಕ ಪಕ್ಷಿಯ ಗರಿಗಳನ್ನು ಮೂರು ಸುತ್ತು ಬರುವಂತೆ ಜೋಡಿಸಿ ಅದನ್ನೇ ತಲೆಯಲ್ಲಿ ಮಣಿಯನ್ನಾಗಿ ಧರಿಸಬೇಕು. ಈ ರೀತಿ ಭಗದೈವತವನ್ನು ಕುರಿತು ಸ್ನಾನಮಾಡಿದವನು ಮಹಾಸೌಭಾಗ್ಯಶಾಲಿಯಾಗುತ್ತಾನೆ.

೩೭–೩೮. ಎಳ್ಳು ಜೇನು ಇವುಗಳಿಂದ ಪೂರ್ಣವಾದ ಎರಡು ಕುಂಭಗಳಿಂದ ಸ್ನಾನಮಾಡಬೇಕು. ಹಸ್ತನಕ್ಷತ್ರದಲ್ಲಿ ಹೀಗೆ ಸ್ನಾನಮಾಡಿ ಪಾಯಸವನ್ನೂ ಹಳದಿಯಾಗಿಯೂ ಕೆಂಪಾಗಿಯೂ ಇರುವ ವಸ್ತ್ರಗಳನ್ನೂ ಅರ್ಪಿಸಿ, ನಾರಾಯಣಿ ಬೇರಿನಿಂದ ಧೂಪಮಾಡಿ ಅಕ್ಷತೆಯಿಂದ ಹೋಮಮಾಡಬೇಕು. ಕೊರಟಿಗೆಯನ್ನು ಮೂರು ಸುತ್ತಾಗಿಮಾಡಿ ನವಣೆಯನ್ನೂ ಅದರೊಡನೆ ಮಣಿಯನ್ನಾಗಿ ಧರಿಸಬೇಕು.

ದಕ್ಷಿಣಾ ಚಾತ್ರ ದಾತವ್ಯಾ ತಥಾ ರಕ್ತೇ ಚ ವಾಸಸೀ ।
ಉತ್ತರಾಫಲ್ಗುನೀ ಸ್ನಾನಂ ಸರ್ವಾರಂಭಪ್ರಸಿದ್ಧಿದಂ ॥ ೩೯ ॥

ವೀರ್ಯಸ್ಯ ವರ್ಧನಂ ಚಾಪಿ ಕರ್ತವ್ಯಮನಸೂಯುನಾ ।
ಗಜಕಾಮಸ್ಯ ತೇ ಸ್ನಾನಂ ಹಸ್ತೇ ಪೂರ್ವಂ ಮಯೋದಿತಂ ॥ ೪೦ ॥

ಪರಸೈನ್ಯಜಯಾರ್ಥಾಯ ಸ್ನಾನಂ ತದಪಿ ಶಸ್ಯತೇ ।
ಮಂಜಿಷ್ಠಾಂ ಚ ಸಭಂಗಾಂ ಚ ಮಿಸಿಕಾಂ ತಾಂ ಚ ಭಾರ್ಗವ ॥ ೪೧ ॥

ಕನಕಂ ರಜತಂ ಚೈವ ಪೂರ್ಣಕುಂಭೇ ವಿನಿಕ್ಷಿಪೇತ್ ।
ತೇನಾಭಿಷಿಕ್ತಶ್ಚಿತ್ರಾಣಿ ಮಾಲ್ಯವಾಸಾಂಸ್ಯನಂತರಂ ॥ ೪೨ ॥

ತ್ವಾಷ್ಟ್ರೇ ನಿವೇದಯೇದ್ಭಕ್ತ್ಯಾ ಹೋಮಂ ಕ್ಷೀರೇಣ ಕಾರಯೇತ್ ।
ದಕ್ಷಿಣಾ ಚಾತ್ರ ದಾತವ್ಯಾ ಚಿತ್ರವಸ್ತ್ರಾಣಿ ಮಾನದ ॥ ೪೩ ॥

---

೩೯–೪೦. ಈ ಕರ್ಮದಲ್ಲಿ ಕೆಂಪಾದ ವಸ್ತ್ರಯುಗ್ಮವನ್ನು ದಕ್ಷಿಣೆಗಾಗಿ ಕೊಡಬೇಕು. ಈ ಉತ್ತರಫಲ್ಗುನೀ ಸ್ನಾನವು ಸರ್ವಕಾರ್ಯಗಳಲ್ಲಿಯೂ ಸಿದ್ಧಿ ಪ್ರದವಾಗುತ್ತದೆ. ವೀರ್ಯವೃದ್ಧಿಗೆ ಕಾರಣವೂ ಆಗುತ್ತದೆ. ಅಸೂಯಾದಿ ದೋಷಗಳಿಲ್ಲದೆ ಶಾಂತಮನಸ್ಕತೆಯಿಂದ ಇದನ್ನು ಮಾಡಬೇಕು. ಹಸ್ತನಕ್ಷತ್ರದಲ್ಲಿ ಮಾಡತಕ್ಕದ್ದೆಂದು ನಾನು ಹಿಂದೆ ಹೇಳಿದ ಸ್ನಾನವನ್ನು ಗಜಾರ್ಥಿಯಾಗಿರುವವನು ಆಚರಿಸಬೇಕು.

೪೧–೪೨. ಶತ್ರುಸೈನ್ಯವನ್ನು ಜಯಿಸುವುದಕ್ಕಾಗಿ ಈ ಸ್ನಾನವು ಪ್ರಶಸ್ತ ವಾದುದು. ಮಂಜಿಷ್ಠೆಯನ್ನೂ, ಸಣಬನ್ನೂ, ಸಬ್ಬಸೀಗೆಯನ್ನೂ, ಚಿನ್ನಬೆಳ್ಳಿ ಗಳನ್ನೂ ಪೂರ್ಣಕುಂಭದಲ್ಲಿ ಹಾಕಬೇಕು. ಆ ಕುಂಭದಲ್ಲಿ ಸ್ನಾನಮಾಡಿ ನಾನಾ ವರ್ಣದಿಂದ ಕೂಡಿ ಚಿತ್ರವಾಗಿರುವ ಹೂವುಗಳು ವಸ್ತ್ರಗಳು ಇವುಗಳಿಂದ ಇಂದ್ರನನ್ನು ಪೂಜಿಸಬೇಕು. ನೈವೇದ್ಯವನ್ನೂ ಸಮರ್ಪಿಸಿ ಹಾಲಿನಿಂದ ಭಕ್ತಿಪೂರ್ವಕವಾಗಿ ಹೋಮಮಾಡಬೇಕು

೪೩–೪೫. ಈ ಕರ್ಮದಲ್ಲಿ ನಾನಾವರ್ಣವುಳ್ಳ ವಸ್ತ್ರಗಳನ್ನೇ ದಕ್ಷಿಣೆಯನ್ನಾಗಿ ಕೊಡಬೇಕು. ನಾನಾವಿಧವಾದ ಸುಗಂಧವಸ್ತುಗಳಿಂದ ಧೂಪವನ್ನೂ ನಾನಾ ವರ್ಣಗಳುಳ್ಳ ಬಲಿಪ್ರದಾನವನ್ನೂ ಮಾಡಬೇಕು. (ಗೊಂಚಲಿನಲ್ಲಿ ಸೇರದೆ) ಬೇರೆ

ಸರ್ವಗಂಧೈಸ್ತಥಾ ಧೂಪಂ ಬಲಿಂ ಚಿತ್ರಂ ತಥೈವ ಚ ।
ಪೃಥಕ್ಸ್ರುತಿಪ್ರಸೂತಾನಾಂ ಪುಷ್ಪಾಣಾಂ ಕನಕೈರ್ವೃತಂ ॥ ೪೪ ॥

ಅಷ್ಟಾದಶಾನಾಂ ಚ ತಥಾ ಮಣಿಂ ಶಿರಸಿ ಧಾರಯೇತ್ ।
ಏವಂ ಸ್ನಾತಸ್ತು ಚಿತ್ರಾಸು ಸೌಭಾಗ್ಯಂ ಮಹದಶ್ನುತೇ ॥ ೪೫ ॥

ಸರ್ವಭೂತೇಷು ಚಾಧಿಕ್ಯಂ ಯದೀಚ್ಛತಿ ತದಾಪ್ನುಯಾತ್ ।
ರುಕ್ಮಮಶ್ವತ್ಥಪತ್ರಂ ಚ ಖಡ್ಗಶೃಂಗಂ ತಥೈವ ಚ ॥ ೪೬ ॥

ಪೂರ್ಣಕುಂಭೇ ವಿನಿಕ್ಷಿಪ್ಯ ಸ್ನಾತಃ ಶೀಧುಸುರಾಸವಂ ।
ವಾಯವ್ಯೇ ಪ್ರಯತೋ ದದ್ಯಾತ್ಕ್ಷೀರಂ ಸಪಲಂ ದಧಿ ॥ ೪೭ ॥

ಗಂಧಂ ಧೂಪಂ ತಥಾ ದದ್ಯಾದ್ಧೋಮೋ ಕಾರ್ಯಂ ತಥಾ ಘೃತೇ ।
ದಕ್ಷಿಣಾ ಚಾತ್ರ ದಾತವ್ಯಾ ವಾಸಾಂಸಿ ವಿವಿಧಾನಿ ಚ ॥ ೪೮ ॥

---

ಬೇರೆಯಾಗಿ ಬೆಳೆದಿರುವ ಹದಿನೆಂಟು ಹೂವುಗಳೊಡನೆ ಕೂಡಿದ ಚಿನ್ನವನ್ನು ಮಣಿಯನ್ನಾಗಿ ತಲೆಯಲ್ಲಿ ಧರಿಸಬೇಕು. ಚಿತ್ರಾನಕ್ಷತ್ರದಲ್ಲಿ ಹೀಗೆ ಸ್ನಾನಮಾಡಿದವನು ಬಹಳ ಸೌಭಾಗ್ಯಶಾಲಿಯಾಗುತ್ತಾನೆ.

೪೬-೪೭. ಅಪೇಕ್ಷೆಪಟ್ಟದ್ದೇ ಆದರೆ ಸರ್ವಪ್ರಾಣಿಗಳಲ್ಲಿಯೂ ಆಧಿಕ್ಯವನ್ನೂ ಹೊಂದುತ್ತಾನೆ. ಚಿನ್ನ, ಅರಳಿಯ ಎಲೆಗಳು, ಖಡ್ಗಮೃಗದ ಕೊಂಬು ಇವನ್ನು ಪೂರ್ಣಕುಂಭದಲ್ಲಿ ಹಾಕಬೇಕು. ಆ ಕುಂಭದಲ್ಲಿ ಸ್ನಾನಮಾಡಿ ಶೀಧು, ಸುರಾ, ಆಸವವೆಂಬ ಮೂರುವಿಧವಾದ ಮದ್ಯಗಳನ್ನೂ, ಹಾಲನ್ನೂ, ಮಾಂಸದಿಂದಕೂಡಿದ ಮೊಸರನ್ನೂ ಸಹ ವಾಯುವ್ಯದಿಕ್ಕಿನಲ್ಲಿ ಶುಚಿಯಾಗಿದ್ದು ದಾನಮಾಡಬೇಕು.

೪೮-೪೯. ಗಂಧವನ್ನೂ ಧೂಪವನ್ನೂ ಅರ್ಪಿಸಿ ತುಪ್ಪದಿಂದ ಹೋಮವನ್ನು ಮಾಡಬೇಕು. ಈ ಕರ್ಮದಲ್ಲಿ ನಾನಾವಿಧವಾದ ವಸ್ತ್ರಗಳನ್ನು ದಾನಮಾಡಬೇಕು. ಹದಿನೆಂಟು ಕುದುರೆಗಳ ರೋಮಗಳಿಂದಲೂ ಕಪ್ಪಾದ ಹಾರೀತಪಕ್ಷಿ ಮತ್ತು

ದ್ಯೈಷ್ಟಾಶ್ಚ ಶ್ಯಾಮಹಾರೀತಹಂಸಪಕ್ಷ್ಯೈಃ ಪಯೋನ್ವಿತಂ ।
ಧಾರಯೇಚ್ಚ ಮಣಿಂ ವಿದ್ವಾನ್ ಸ್ವಾತಾವೇವಂ ಸಮಾಚರೇತ್ || ೪೯ ||

ವಾಣಿಜ್ಯೇ ಸಮ್ಯಗಾಪ್ನೋತಿ ಸಿದ್ಧಿಂ ಚ ಮಹತೀಂ ನರಃ ।
ವಿಶಾಖಾಸು ತಥಾ ಸ್ನಾನಂ ಕಾರ್ಯಂ ಕುಂಭದ್ವಯೇನ ತು || ೫೦ ||

ಕೃತ್ತಿಕಾಸು ಮಹಾಭಾಗ ತತಃ ಶಾಕಂ ನಿವೇದಯೇತ್ ।
ಇಂದ್ರಾಗ್ನಿಭ್ಯಾಂ ಚ ವಾಸಾಂಸಿ ಪೀತರಕ್ತಾನಿ ಚಾಪ್ಯಥ || ೫೧ ||

ಮಾಲ್ಯಾನಿ ಚ ಮಹಾಭಾಗ ಧೂಪಂ ಚ ಘೃತಗುಗ್ಗುಲಂ ।
ಹೋಮಾರ್ಥೇ ಚ ಘೃತಂ ಕುರ್ಯಾದ್ದಕ್ಷಿಣಾ ಕನಕಂ ತಥಾ || ೫೨ ||

ಗಣಾಧಿಪತ್ಯಮಾಪ್ನೋತಿ ಕೃತ್ವೈವಂ ನಾತ್ರ ಸಂಶಯಃ ।
ಸಹಸ್ರವೀರ್ಯಂ ಚಾನಂತಾಂ ಮಧೂಕಂ ಚ ತಥಾಮಿಷಂ || ೫೩ ||

---

ಹಂಸಪಕ್ಷಿಯ ಗರಿಗಳಿಂದಲೂ ಕೂಡಿದ ಮಣಿಯನ್ನು ಹಾಲಿನಲ್ಲಿ ನೆನೆಸಿ ಧರಿಸಬೇಕು. ಸ್ವಾತಿಯ ನಕ್ಷತ್ರದಲ್ಲಿ ಹೀಗೆ ಮಾಡಿದವನು ವಾಣಿಜ್ಯ ವೃತ್ತಿಯಲ್ಲಿ ಹೆಚ್ಚಾದ ಸಿದ್ಧಿಯನ್ನು ಹೊಂದುತ್ತಾನೆ.

೫೦-೫೧. ಹಾಗೆಯೇ ವಿಶಾಖಾ ನಕ್ಷತ್ರದಲ್ಲಿಯೂ ಎರಡು ಕುಂಭಗಳಿಂದ ಸ್ನಾನಮಾಡಬೇಕು. ಕೃತ್ತಿಕಾ ನಕ್ಷತ್ರದಲ್ಲಿ ಇಂದ್ರಾಗ್ನಿ ದೇವತೆಗಳನ್ನುದ್ದೇಶಿಸಿ ಶಾಕವನ್ನು ನೈವೇದ್ಯಕ್ಕಾಗಿ ಅರ್ಪಿಸಬೇಕು ಹೊಂಬಣ್ಣವಾಗಿಯೂ, ಕೆಂಪಾಗಿಯೂ ಇರುವ ವಸ್ತ್ರಗಳನ್ನು ಸಮರ್ಪಿಸಬೇಕು. ವಸ್ತ್ರದಂತೆಯೇ ಬಣ್ಣವುಳ್ಳ ಹೂವುಗಳನ್ನು ಅರ್ಪಿಸಿ ತುಪ್ಪದಿಂದ ನೆನೆದ ಗುಗ್ಗುಲದಿಂದ ಧೂಪಿಸಬೇಕು.

೫೨-೫೩. ಹೋಮಕ್ಕಾಗಿ ಆಜ್ಯವನ್ನು ಉಪಯೋಗಿಸಬೇಕು. ಚಿನ್ನದ ನಾಣ್ಯವೇ ದಕ್ಷಿಣೆ. ಈ ಕರ್ಮವನ್ನು ಈ ರೀತಿ ಮಾಡಿದವನು ಗಣಾಧಿಪತಿಯ ಸ್ಥಾನವನ್ನೇ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ ಗರಿಕೆ, ಚುರ ಚುರಸೊಪ್ಪು, ಹಿಪ್ಪೆ ಹೂವು ಇವನ್ನೂ ಮಾಂಸವನ್ನೂ ಸಹ ಮೂರು ಪೂರ್ಣ ಕುಂಭವಲ್ಲಿ ಹಾಕಬೇಕು. ಆ ಕುಂಭಗಳನ್ನು ಅಲಂಕರಿಸಿಡಬೇಕು.

ಪೂರ್ಣಕುಂಭತ್ರಯೇ ಕೃತ್ವಾ ಕೃತಸ್ವಸ್ತಿಕಲಕ್ಷಣೇ ।
ಅಹತಾಂಬರಸವೀತೈಃ ಸರ್ವಗಂಧಫಲಾಕ್ಷತೈಃ ॥ ೫೪ ॥

ಮಧುನಾ ಚ ಬಲಿಂ ದದ್ಯಾನ್ಮಿತ್ರಾಯ ಚ ಮಹಾತ್ಮನೇ ।
ವೃಶ್ಚಿಕೇನ ತಥಾ ಧೂಪಂ ಯವೈರ್ಹೋಮಂ ಚ ಮಾನದ ॥ ೫೫ ॥

ಪುರದ್ವಾರಂ ಕಟಾಹಾಶ್ಚ ಚೂಡಾಕಾಷ್ಠಂ ಸಕಾಂಚನಂ ।
ಧಾರಯೇದ್ದಕ್ಷಿಣಾಂ ದದ್ಯಾತ್ತಥಾ ಚ ಕನಕಂ ದ್ವಿಜ ॥ ೫೬ ॥

ಏವಂ ಮೈತ್ರೇ ಸದಾ ಸ್ನಾತಃ ಸರ್ವಭೂತೈಸ್ಸಮಾಪ್ನುಯಾತ್ ।
ಮೈತ್ರೀಂ ಮನುಜಶಾರ್ದೂಲ ಪುರಂ ವಾ ಕುರುತೇ ವಶೇ ॥ ೫೭ ॥

ತಡಾಗ ಪದ್ಮಿನೀಕೂಲನದೀನದಸಮುದ್ಭವೈಃ ।
ತೋಯೈಃ ಪೂರ್ಣಘಟಾನ್ ಕೃತ್ವಾ ಸರ್ವಬೀಜಸಮನ್ವಿತಾನ್ ॥ ೫೮ ॥

---

೫೪-೫೬. ಮಡಿಯ ವಸ್ತ್ರವನ್ನುಟ್ಟು ಎಲ್ಲಾ ವಿಧವಾದ ಗಂಧಫಲ ಅಕ್ಷತೆಗಳೊಡನೆಯೂ ಜೇನಿನೊಡನೆಯೂ ಸಹ ಮಹಾತ್ಮನಾದ ಸೂರ್ಯನಿಗೆ ಬಲಿಪ್ರಧಾನ ಮಾಡಬೇಕು. ಚೇಳುಕೊಂಡಿಯ ಕಾಯಿನಿಂದ ಧೂಪವನ್ನರ್ಪಿಸಿ ಯವಗಳಿಂದ ಹೋಮ ಮಾಡಬೇಕು. ಪುರದ್ವಾರ ಕಟಾಹಗಳೆಂಬ ಮೂಲಿಕೆಗಳನ್ನು ಚಿನ್ನದಿಂದ ಕೂಡಿದ ಕೇಶಸಾಧನವನ್ನಾಗಿ ಧರಿಸಬೇಕು. ಚಿನ್ನದ ನಾಣ್ಯವನ್ನೇ ದಕ್ಷಿಣೆಯಾಗಿ ಕೊಡಬೇಕು.

೫೭-೫೮. ಈ ರೀತಿ ಅನೂರಾಧಾ ನಕ್ಷತ್ರದಲ್ಲಿ ಸ್ನಾನಮಾಡಿದವನು ಸರ್ವ ಪ್ರಾಣಿಗಳ ಮೈತ್ರಿಯನ್ನೂ ಹೊಂದುತ್ತಾನೆ. ನಗರವನ್ನೂ ಅಧೀನಮಾಡಿಕೊಳ್ಳುತ್ತಾನೆ. ಕೆರೆ, ಪದ್ಮಸರೋವರ, ನದಿಗಳು, ನದಗಳು ಇವುಗಳ ಜಲದಿಂದ ಘಟಗಳನ್ನು ತುಂಬಿ ಎಲ್ಲಾ ವಿಧವಾದ ಬೀಜಗಳಿಂದಲೂ ತುಂಬಬೇಕು.

೫೯-೬೦. ಸರ್ವವಿಧವಾದ ರತ್ನಗಳಿಂದಲೂ ಓಷಧಿಗಳಿಂದಲೂ ಪೂರ್ಣವಾಗಿರುವ ಆ ಮೂರು ಕಲಶಗಳಿಂದಲೂ ಸ್ನಾನ ಮಾಡಬೇಕು, ಅನಂತರ ಪಟ್ಟೆ ವಸ್ತ್ರವನ್ನು ಧರಿಸಿ, ರತ್ನಗಳನ್ನೂ ಪುಷ್ಪಫಲಗಳನ್ನೂ ಸಹ ಪೂರ್ವಾಭಿಮುಖನಾಗಿ

**ಸರ್ವರತ್ನೌಷಧೀಪೂರ್ಣಾನ್ ತ್ರೀನ್ ಸ್ನಾನಂ ತೈಃ ಸಮಾಚರೇತ್ ।**
**ಕ್ಷೌಮವಾಸಾಸ್ತು ರತ್ನಾನಿ ಮಾಲ್ಯಾನಿ ಚ ಫಲಾನಿ ಚ　　॥ ೫೯ ॥**

**ರತ್ನಾನಿ ದದ್ಯಾಚ್ಛಕ್ರಾಯ ಪ್ರಾಙ್ಮುಖಃ ಸುಸಮಾಹಿತಃ ।**
**ಧೂಪಂ ದದ್ಯಾಚ್ಚ ಶೀರ್ಷೇಣವಿಶಾಖಾವನ್ಮಣಿರ್ಭವೇತ್　　॥ ೬೦ ॥**

**ಛತ್ರಂ ಚ ದಕ್ಷಿಣಾ ದೇಯಾ ಜ್ಯೇಷ್ಠಾಯಾಂ ಭೃಗುನಂದನ ।**
**ಸ್ನಾನಮೇವಂ ಸದಾಕೃತ್ವಾ ರಾಜ್ಯಮಾಪ್ನೋತ್ಯಕಂಟಕಂ　　॥ ೬೧ ॥**

**ಕೃಷಿಕಾಮಸ್ಯ ಮೂಲೇನ ಸ್ನಾನಮುಕ್ತಂ ಮಯಾ ಪುರಾ ।**
**ತಥಾ ವಾಣಿಜ್ಯಕಾಮಸ್ಯ ಪ್ರಾಗಷಾಢಾಸು ಭಾರ್ಗವ　　॥ ೬೨ ॥**

**ಅಥೋತ್ತರಾಸು ಷಾಢಾಸು ಕುರ್ಯಾದ್ಘಟ ಚತುಷ್ಟಯಂ ।**
**ಪುಷ್ಪಬೀಜಫಲೋಪೇತಂ ತೇನ ಸ್ನಾತಸ್ತು ಮಾನವಃ　　॥ ೬೩ ॥**

---

ಕುಳಿತು ಶಾಂತಚಿತ್ತನಾಗಿ ಇಂದ್ರನಿಗೆ ಅರ್ಪಿಸಬೇಕು. ತಲೆಯ ಮೇಲಿಟ್ಟುಕೊಂಡು ಧೂಪವನ್ನರ್ಪಿಸಬೇಕು. ವಿಶಾಖಾ ಸ್ನಾನದಲ್ಲಿ ಹೇಳಿರುವಂತೆ ಇಲ್ಲಿಯೂ ಮಣಿಯನ್ನು ಧರಿಸಬೇಕು.

೬೧-೬೨. ಜ್ಯೇಷ್ಠಾ ನಕ್ಷತ್ರದಲ್ಲಿ ಈ ಸ್ನಾನವನ್ನು ಮಾಡಿ ಛತ್ರಿಯನ್ನು ದಕ್ಷಿಣೆಯನ್ನಾಗಿ ಕೊಡಬೇಕು. ಈ ಸ್ನಾನವನ್ನು ಯಾವಾಗಲೂ ಮಾಡುವವನು ರಾಜ್ಯವನ್ನು ನಿಷ್ಕಂಟಕವಾಗಿ ಹೊಂದುತ್ತಾನೆ. ಕೃಷಿಯನ್ನು ಅಪೇಕ್ಷಿಸುವವನು ಮಾಡಬೇಕಾದ ಮೂಲಾನಕ್ಷತ್ರದ ಸ್ನಾನವನ್ನು ನಿನಗೆ ಮೊದಲು ಹೇಳಿರುವೆನು. ಹಾಗೆಯೇ ವಾಣಿಜ್ಯ ವೃತ್ತಿಯನ್ನು ಅಪೇಕ್ಷಿಸುವವನಿಗೆ ಅದರಲ್ಲಿಯೂ ಸಿದ್ಧಿಪ್ರದವಾದ ಆಷಾಡಾನಕ್ಷತ್ರದ ಸ್ನಾನವನ್ನೂ ಹಿಂದೆ ಹೇಳಿರುವೆನು.

೬೩-೬೪. ಉತ್ತರಾಷಾಢಾನಕ್ಷತ್ರದಲ್ಲಿ ನಾನಾ ವಿಧವಾದ ಪುಷ್ಪ ಫಲ, ಬೀಜಗಳಿಂದ ಕೂಡಿದ ನಾಲ್ಕು ಘಟಗಳನ್ನು ನಿರ್ಮಿಸಬೇಕು. ಆ ಘಟಗಳಲ್ಲಿ

ಕ್ಷೌಮವಾಸಾಃ ಸುರಾಂ ಚೈವ ಪಾಯಸಂ ಚ ನಿವೇದಯೇತ್ ।
ಮುದ್ಗಮಿಶ್ರಂ ಚ ಧರ್ಮಜ್ಞ ಮಾಲ್ಯವಾಸಾಂಸಿ ಚೇಚ್ಛಯಾ ॥ ೬೪ ॥

ಹೋಮೋ ಚ ಪಾಯಸಂ ಕುರ್ಯಾದ್ಧೂಪೇಗೋಶೃಂಗಮೇವ ಚ ।
ಧಾತ್ರೀಪುಷ್ಪಶಮೀಬಿಲ್ವೈಃ ಮಣಿರ್ಧಾರ್ಯಃ ಸಕಾಂಚನೈಃ ॥ ೬೫ ॥

ದಕ್ಷಿಣಾಚಾತ್ರ ದಾತವ್ಯಾ ಸುವರ್ಣಂ ರೌಪ್ಯಮೇವ ಚ ।
ರಾಜಶ್ರೇಷ್ಠತ್ವಮಾಪ್ನೋತಿ ವಿವಾದೇಷು ಜಯಂ ತಥಾ ॥ ೬೬ ॥

ಬಿಲ್ವಂ ಚ ತಗರಂ ಚೈವ ಚಂದನಂ ಮಧುಯಷ್ಟಿಕಾಂ ।
ಪ್ರಿಯಂಗುಂ ಚ ಮಧೂಕಂ ಚ ತ್ರಿಷು ಕುಂಭೇಷು ನಿಕ್ಷಿಪೇತ್ ॥ ೬೭ ॥

ಸಂಗಮಾದಾಹೃತಂ ತೋಯಂ ತನ್ಮೃದಂ ಚ ಭೃಗೂತ್ತಮ ।
ತೇನ ಸ್ನಾತಃ ತತಃ ಸ್ನಾನಂ ಕುರ್ಯಾತ್ಸರ್ವೌಷಧೈರ್ದ್ವಿಜ ॥ ೬೮ ॥

---

ಸ್ನಾನಮಾಡಿ ಪಟ್ಟವಸ್ತ್ರವನ್ನುಟ್ಟು ಮದ್ಯವನ್ನೂ ಹೆಸರಿನಿಂದ ಮಾಡಿದ ಪಾಯಸವನ್ನೂ ಸಹ ನೈವೇದ್ಯಕ್ಕೆ ಅರ್ಪಿಸಬೇಕು. ವಸ್ತ್ರಗಳನ್ನೂ ಪುಷ್ಪಗಳನ್ನೂ ಯಥೇಚ್ಛವಾಗಿ ಅರ್ಪಿಸಬೇಕು.

೬೫-೬೬. ಪಾಯಸದಿಂದ ಹೋಮಮಾಡಬೇಕು. ಗೋವಿನ ಕೊಂಬನ್ನು ಧೂಪಕ್ಕಾಗಿ ಉಪಯೋಗಿಸಬೇಕು. ನೆಲ್ಲಿಯ ಹೂವು, ಬನ್ನಿ, ಬಿಲ್ವಪತ್ರ ಇವನ್ನು ಚಿನ್ನದಲ್ಲೇ ಸೇರಿಸಿ ಮಣಿಯನ್ನಾಗಿ ಧರಿಸಬೇಕು. ಈ ಕರ್ಮದಲ್ಲಿ ಚಿನ್ನದ ಮತ್ತು ಬೆಳ್ಳಿಯ ನಾಣ್ಯಗಳನ್ನು ದಕ್ಷಿಣೆಯಾಗಿ ಕೊಡಬೇಕು. ಹೀಗೆ ಮಾಡಿದವನು ರಾಜರಲ್ಲಿ ಶ್ರೇಷ್ಠನಾಗುವನು. ವಿವಾದಗಳಲ್ಲಿಯೂ ಜಯಶಾಲಿಯಾಗುವನು.

೬೭-೬೮. ಬಿಲ್ವಪತ್ರ, ನಂದ್ಯಾವರ್ತದ ಹೂವು, ಗಂಧ, ಅತಿಮಧುರ, ನವಣೆ, ಹಿಪ್ಪೆಯ ಹೂವು ಇವುಗಳನ್ನು ಮೂರು ಕುಂಭಗಳಲ್ಲಿ ಹಾಕಬೇಕು. ನದಿಯ ಸಂಗಮಸ್ಥಲದಿಂದ ತಂದ ನೀರನ್ನೂ, ಮೃತ್ತಿಕೆಯನ್ನೂ ಆ ಕುಂಭಗಳಲ್ಲಿ ಹಾಕಬೇಕು ಆ ನೀರಿನಲ್ಲಿ ಸ್ನಾನಮಾಡಿ ಪುನಃ ಎಲ್ಲಾ ಓಷಧಿಗಳಿಂದಲೂ ಕೂಡಿದ ತೀರ್ಥದಲ್ಲಿ ಸ್ನಾನಮಾಡಬೇಕು.

**ಕುಲುತ್ಥಾನ್ನಂ ಸಶಾಲ್ಯನ್ನಂ ಮುಖ್ಯಾನಿ ಚ ಫಲಾನಿ ಚ ।**
**ಬಲಿಂ ಚ ವಿಷ್ಣವೇ ದದ್ಯಾನ್ಮುದ್ಗೈಃ ಧೂಪಂ ತಥೈವ ಚ	॥ ೬೯ ॥**

**ರಾಜಚ್ಛತ್ರಸ್ಯ ದಂಡಾಗ್ರಾತ್ಕಾಷ್ಠಂ ಶಕ್ರಧ್ವಜಾತ್ತಥಾ ।**
**ಸಿಹ್ಮದಂಷ್ಟ್ರಾಮಣಿಶ್ಚಾತ್ರ ಸರುಕ್ಮಃ ಶಿರಸಿ ಸ್ಮೃತಃ	॥ ೭೦ ॥**

**ದಕ್ಷಿಣಾಚಾತ್ರ ದಾತವ್ಯಾ ಧೇನುಃ ಕಾಂಸ್ಯೋಪದೋಹಿನೀ ।**
**ಏವಂ ತು ಶ್ರವಣಸ್ನಾಯೀ ರಾಜ್ಯಮಾಪ್ನೋತ್ಯಕಂಟಕಂ	॥ ೭೧ ॥**

**ಅನ್ಯದೇಶಾಧಿಪತ್ಯಂ ವಾ ರಾಜ್ಯಮಾಪ್ನೋತಿ ಭಾರ್ಗವ ।**
**ಅತಿಮುಕ್ತಕಪತ್ರಾಣಿ ಬಿಲ್ವಸ್ಯ ಚ ತಥಾ ಕ್ಷಿಪೇತ್	॥ ೭೨ ॥**

**ಕುಂಭೇಷು ಪಂಚಸು ತತಃ ಸ್ನಾನಂ ತೈಸ್ತು ಸಮಾಚರೇತ್ ।**
**ವಾಸ್ತುಭ್ಯಸ್ತು ಬಲಿಂ ದದ್ಯಾತ್ಸುವರ್ಣಂ ಮಾಕ್ಷಿಕೇ ತತಃ	॥ ೭೩ ॥**

---

೬೯–೭೦. ಹುರುಳಿಯಿಂದ ಸಂಸ್ಕರಿಸಲ್ಪಟ್ಟ ಅನ್ನವನ್ನು ಶಾಲ್ಯನ್ನದೊಡನೆಯೂ ಮುಖ್ಯವಾದ ಫಲಗಳೊಡನೆಯೂ ವಿಷ್ಣುವಿಗೆ ಬಲಿಪ್ರದಾನಮಾಡಬೇಕು. ಹೆಸರಿನಿಂದ ಧೂಪವನ್ನು ಏರ್ಪಡಿಸಬೇಕು. ಮತ್ತು ರಾಜನ ಛತ್ರಿಯ ಕೋಲಿನ ಮೇಲು ಭಾಗದಿಂದಲೂ, ಇಂದ್ರನ ಉತ್ಸವದಲ್ಲಿ ಎತ್ತಿ ಹಿಡಿದ ಧ್ವಜದ ಮೇಲ್ಭಾಗದಿಂದಲೂ ಆ ಕಾಷ್ಟದ ಧೂಪವನ್ನೂ ಅರ್ಪಿಸಬೇಕು. ಸಿಂಹದ ಕೋರದಾಡೆಯಿಂದ ಮಾಡಿದ ಮಣಿಯನ್ನು ಚಿನ್ನದೊಡನೆ ಶಿರಸ್ಸಿನಲ್ಲಿ ಧರಿಸಬೇಕು.

೭೧. ಈ ಕರ್ಮದಲ್ಲಿ ಕಂಚಿನ ಕರೆಯುವ ಪಾತ್ರೆಯೊಡನೆ ಗೋವನ್ನು ದಾನಮಾಡಬೇಕು. ಶ್ರವಣ ನಕ್ಷತ್ರದಲ್ಲಿ ಹೀಗೆ ಸ್ನಾನಮಾಡಿದವನು ರಾಜ್ಯವನ್ನು ನಿಷ್ಕಂಟಕವಾಗಿ ಹೊಂದುತ್ತಾನೆ. ಮತ್ತೊಂದು ದೇಶಕ್ಕೂ ಅಧಿಪತಿಯಾಗಿ ರಾಜನಾಗುತ್ತಾನೆ.

೭೨–೭೩. ಕಾಡಿರುವಂತಿಗೆ ಮತ್ತು ಬಿಲ್ವ ಇವುಗಳ ಪತ್ರೆಗಳನ್ನು ಐದು ಕುಂಭಗಳಲ್ಲಿ ಹಾಕಬೇಕು. ಆ ಕುಂಭಗಳಿಂದ ಸ್ನಾನಮಾಡಿ ವಾಸ್ತು ಪುರುಷರಿಗೆ ಜೇನಿನೊಡನೆ ಸುವರ್ಣವನ್ನು ಬಲಿಯ ರೂಪದಿಂದ ಅರ್ಪಿಸಬೇಕು. ಕಾಗೆಯ ಗರಿಗಳಿಂದ ಧೂಪವನ್ನು ಅರ್ಪಿಸಿ ಆಜ್ಯದಿಂದ ಹೋಮಮಾಡಬೇಕು.

ಧೂಪಂ ಪಾಯಸಪಕ್ಷೈಸ್ತು ಹೋಮಃ ಕಾರ್ಯೋ ಘೃತೇನ ತು ।
ಬ್ರಹ್ಮಚಾರಿಶಿಲಾಲೋಪಕಾಕಪಕ್ಷಂ ತಥೈವ ಚ ॥ ೭೪ ॥

ಕಾಕಮಾಚೀಂ ರುಕ್ಮಯುತಾಂ ಮಣಿಂ ಶಿರಸಿ ಧಾರಯೇತ್ ।
ದಕ್ಷಿಣಾ ಚಾತ್ರ ದಾತವ್ಯಾ ಧೇನುಃ ಕಾಂಸ್ಯೋಪದೋಹಿನೀ ॥ ೭೫ ॥

ಧನಂ ಪ್ರಾಪ್ನೋತಿ ಸುಮಹದ್ವಿವಾಹೆ ವಾಪಿ ಕನ್ಯಕಾಂ ।
ಏವಂ ಸ್ನಾತೋ ಧನಿಷ್ಠಾಸು ನಿತ್ಯಮೇವ ಭೃಗೂತ್ತಮ ॥ ೭೬ ॥

ಆರೋಗ್ಯಕಾರಕಂ ಸ್ನಾನಂ ಪೂರ್ವಮುಕ್ತಂ ತು ವಾರುಣಂ ।
ರತ್ನೋದಕೇನ ಸ್ನಾತಸ್ತು ನರಃ ಕುಂಭದ್ವಯೇನ ತು ॥ ೭೭ ॥

ಅಜೈಕಪಾದಾಯ ಬಲಿಂ ಛಾಗಂ ದದ್ಯಾತ್ತು ಪಾಯಸಂ ।
ಶುಕ್ಲಾನಿ ಚೈವಮೂಲ್ಯಾನಿ ಫಲಾನಿ ವಿವಿಧಾನಿ ಚ ॥ ೭೮ ॥

---

೭೪-೭೫. ಅಜವಾನ, ಶಿಲಾಲೋಪವೆಂಬ ಮೂಲಿಕೆಗಳೊಡನೆ ಕಾಕಪಕ್ಷವನ್ನೂ ಸೇರಿಸಿ. ಕಾಚಿಗಣಿಕೆಯನ್ನು ಚಿನ್ನದೊಡನೆ ಮಣಿಯನ್ನಾಗಿ ಧರಿಸಬೇಕು, ಈ ಕರ್ಮದಲ್ಲಿ ಕಂಚಿನ ಕರೆಯುವ ಪಾತ್ರೆಯೊಡನೆ ಕರೆಯುವ ಹಸುವನ್ನು ದಾನ ಮಾಡಬೇಕು. ಹೀಗೆ ಮಾಡಿದವನು ಬಹಳ ಧನವನ್ನು ಹೊಂದುತ್ತಾನೆ. ಕನ್ಯಕೆಯನ್ನೂ ಇಷ್ಟಬಂದಂತೆ ವಿವಾಹಮಾಡಿಕೊಳ್ಳುತ್ತಾನೆ.

೭೬-೭೭. ಧನಿಷ್ಠಾ ನಕ್ಷತ್ರದಲ್ಲಿ ಹೀಗೆ ನಿತ್ಯವೂ ಸ್ನಾನಮಾಡಿದವನು ಮೇಲೆ ಹೇಳಿದ ಫಲವನ್ನೂ ಹೊಂದುತ್ತಾನೆ. ಆರೋಗ್ಯಕಾಮನೆಯಿಂದ ಮಾಡುವ ವಾರುಣಸ್ನಾನವನ್ನು ಮೊದಲು ನಿನಗೆ ಹೇಳಿರುವೆನು. ಎರಡು ಕುಂಭಗಳಲ್ಲಿ ರತ್ನಗಳನ್ನು ಹಾಕಿ ಆ ಕುಂಭದ ಜಲದಿಂದ ಸ್ನಾನಮಾಡಿ ಅಜೈಕಪಾತ್ ಎಂಬ ದೇವತೆಗೆ ಛಾಗವನ್ನು (ಆಡು) ಬಲಿಯನ್ನಾಗಿ ಕೊಟ್ಟು ಪಾಯಸವನ್ನು ನೈವೇದ ಮಾಡಬೇಕು.

೭೮-೮೦. ಬಿಳುಪಾದ ಹೂವುಗಳನ್ನೂ ನಾನಾವಿಧವಾದ ಫಲಗಳನ್ನೂ ಅರ್ಪಿಸಬೇಕು. ಯೋಗದಂಡದಿಂದ ಧೂಪವನ್ನರ್ಪಿಸಿ ಹಾಲಿನಿಂದ ಹೋಮ ಮಾಡಬೇಕು. ಹುಲಿಯ ಕೋರೆಯ ಹಲ್ಲು ಮತ್ತು ಕೂದಲು ಉಗುರುಗಳು

ಖಟ್ವಾಂಗಂ ಚ ತಥಾ ಧೂಪಂ ಹೋಮಂ ಚ ಪಯಸಾ ತಥಾ ।
ವ್ಯಾಘ್ರದಂಷ್ಟ್ರಾ ತಥಾ ಲೋಮನಖಂ ಕನಕಮೇವ ಚ　　|| ೭೯ ||

ಮಣಿರ್ಧರ್ಮ್ಯೋ ಭವೇದ್ರಾಮ ಛಾಗೋ ದೇಯಾ ಚ ದಕ್ಷಿಣಾ ।
ಅಜೈಕಪಾದೇ ಸ್ನಾತಸ್ತು ನಿತ್ಯಮೇವ ಸಮಾಹಿತಃ　　|| ೮೦ ||

ಉದ್ಧರೇತ್ತು ನಿಧಿಂ ರಾಮ ಶತ್ರೂನ್ವಾ ವಿಜಯೇದ್ಧ್ರುವಂ ।
ಅಹಿರ್ಬುಧ್ನ್ಯಂ ತಥಾ ಸ್ನಾನಂ ಗೋಪ್ರದಮುಕ್ತಂ ಪುರಾ ತವ　　|| ೮೧ ||

ಚಂದನಂ ಚ ಹರಿದ್ರಾ ಚ ದರ್ಭಮೂಲಂ ತಥೈವ ಚ ।
ಕೃತ್ವಾ ಕುಂಭೇ ನರಃ ಸ್ನಾಯಾತ್ಕೃತ್ವಾ ಪಿಷ್ಟೇನ ಕನ್ಯಕಾಂ　　|| ೮೨ ||

ಸ್ನಾನಾಲಂಕಾರವಸ್ತ್ರಾದ್ಯಾನ್ ಪೂಷ್ಣೇ ದದ್ಯಾದ್ಬಲಿಂ ತತಃ ।
ಮಧುಲಾಜಾಸ್ತಥೈವಾತ್ರಧೂಪಂ ದದ್ಯಾತ್ ಘೃತೇನ ಚ　　|| ೮೩ ||

---

ಇವುಗಳೊಡನೆ ಚಿನ್ನವನ್ನು ಮಣಿಯನ್ನಾಗಿ ಧರಿಸಬೇಕು. ಈ ಕರ್ಮದಲ್ಲಿ ಆಡನ್ನು ದಕ್ಷಿಣೆಗಾಗಿ ಕೊಡಬೇಕು. ಈ ರೀತಿ ಅಜೈಕಪಾತ್ತಿನಲ್ಲಿ (ಪೂರ್ವಾಭಾದ್ರಾನಕ್ಷತ್ರ) ಸ್ನಾನಮಾಡಿದವನು ಶಾಂತಮನಸ್ಕನಾಗಿದ್ದು ಕರ್ಮಸಮಾಪ್ತಿಯನ್ನು ಹೊಂದಿದ್ದೇ ಆದರೆ ಅವನು ಭೂಮಿಯಿಂದ ನಿಧಿಯನ್ನೂ ತೆಗೆದು ಅನುಭವಿಸುತ್ತಾನೆ. ಶತ್ರುಗಳನ್ನು ನಿಯತವಾಗಿಯೂ ಜಯಿಸುತ್ತಾನೆ.

೮೧–೮೨. ಉತ್ತರಾಭಾದ್ರೆಯಲ್ಲಿ ಮಾಡಬಹುದಾದ ಗೋಪ್ರದವಾದ ಸ್ನಾನವನ್ನು ಹಿಂದೆ ನಿನಗೆ ಹೇಳಿರುವೆನು. ಗಂಧವನ್ನೂ, ಅರಿಶಿನವನ್ನೂ ದರ್ಭೆಯ ಮೂಲಭಾಗವನ್ನೂ ಸಹ ಕುಂಭದಲ್ಲಿ ಹಾಕಿ ಅದರಲ್ಲಿ ಸ್ನಾನಮಾಡಬೇಕು. ಹಿಟ್ಟಿನಿಂದ ಒಂದು ಕನ್ಯೆಯನ್ನು ಮಾಡಿಟ್ಟು ಪೂಷಾ ಎಂಬ ಸೂರ್ಯನನ್ನು ಉದ್ದೇಶಿಸಿ ಸ್ನಾನ ಅಲಂಕಾರ ವಸ್ತ್ರಾದಿಗಳನ್ನು ಅರ್ಪಿಸಬೇಕು ಬಲಿಪ್ರದಾನವನ್ನೂ ಮಾಡಬೇಕು.

೮೩–೮೪. ಬಲಿಪ್ರದಾನಕ್ಕೆ ಜೇನು ಮತ್ತು ಅರಳನ್ನು ಉಪಯೋಗಿಸಬೇಕು. ತುಪ್ಪದಿಂದ ಧೂಪವನ್ನು ಅರ್ಪಿಸಿ ಆ ತುಪ್ಪದಿಂದಲೇ ಹೋಮವನ್ನು ಮಾಡಬೇಕು. ಚಿನ್ನದ ನಾಣ್ಯವನ್ನು ದಕ್ಷಿಣೆಗಾಗಿ ಕೊಡಬೇಕು. ಹೊನಗೊನ್ನೆ

ಹೋಮಂ ಘೃತೇನ ಕರ್ತವ್ಯಂ ದಕ್ಷಿಣಾ ಕನಕಂ ಭವೇತ್ ।
ಬ್ರಾಹ್ಮೀಂ ಸುವರ್ಚಲಾಂ ಹೋಮಂ ಹೇಮಗರ್ಭೋ ಮಣಿರ್ಭವೇತ್

ಏವಂ ಪೌಷ್ಣೇ ಸದಾ ಸ್ನಾತೋ ಯಃ ಸದಾ ಯುಜ್ಯತೇ ನರಃ ।
ಆಶ್ವಿನೇ ಸುಪ್ರದಂ ಸ್ನಾನಂ ಪೂರ್ವಮುಕ್ತಂ ಮಯಾ ತವ ॥ ೮೫ ॥

ವೈಜಯಂತೀಂ ಬಲಾಂ ಚೈವ ಸುಮಂಗಾಂ ಚ ಭೃಗೂತ್ತಮ ।
ಇಂದ್ರಹಸ್ತಾಂ ಮಧೂಕಂ ಚ ಕುರ್ಯಾದ್ರಾಮ ಘಟತ್ರಯೇ ॥ ೮೬ ॥

ತೇನ ಸ್ನಾತೋ ಯಮಾಯಾಥ ಪ್ರಪದ್ಯಾತ್ತಿಲತಂಡುಲಂ ।
ಮಾಲ್ಯಾನಿ ಚೈವ ಚಿತ್ರಾಣಿ ಪೀತಾನಿ ವಸನಾನಿ ಚ ॥ ೮೭ ॥

ಉರಭ್ರಶೃಂಗಂ ಧೂಪಾರ್ಥೇ ಹೋಮಾರ್ಥೇ ಚ ತಥಾ ತಿಲಂ ।
ದಕ್ಷಿಣಾ ಚಾತ್ರ ದಾತವ್ಯಾ ತಿಲಂ ಕನಕಮೇವ ಚ ॥ ೮೮ ॥

---

ಯನ್ನೂ ಸುವರ್ಚಲೆಯನ್ನೂ ಹೋಮಮಾಡಿ ಚಿನ್ನದಿಂದ ಮಾಡಿದ ಮಣಿಯನ್ನು ಧರಿಸಬೇಕು. ಈ ರೀತಿ ರೇವತೀ ನಕ್ಷತ್ರದಲ್ಲಿ ಸ್ನಾನಮಾಡಿದವನು ಯಾವಾಗಲೂ ಇಷ್ಟಸಿದ್ಧಿಯಿಂದ ಕೂಡಿರುತ್ತಾನೆ.

೮೫-೮೬. ಅಶ್ವಿನೀ ನಕ್ಷತ್ರದಲ್ಲಿ ಮಾಡಬೇಕಾದ ಸಿದ್ಧಿಪ್ರದವಾದ ಸ್ನಾನವನ್ನು ಹಿಂದೆ ನಿನಗೇ ಹೇಳಿರುವೆನು. ತಕ್ಕಿಲೆ, ಕಳ್ಳಂಗಡಲೆ, ಮುಟ್ಟಿದರೆಮುನಿಯ ಇಂದ್ರಹಸ್ತಾ, ಹಿಪ್ಪೆಯಹೂವು ಇವನ್ನು ಮೂರು ಕುಂಭಗಳಲ್ಲಿ ಹಾಕಬೇಕು. ಆ ಕುಂಭಗಳ ಜಲದಲ್ಲಿ ಸ್ನಾನಮಾಡಿ ಯಮನಿಗಾಗಿ ಎಳ್ಳಿನಿಂದ ಕೂಡಿದ ಅಕ್ಕಿಯನ್ನು ಅರ್ಪಿಸಬೇಕು.

೮೭-೮೮. ನಾನಾವರ್ಣಗಳುಳ್ಳ ಹೂವುಗಳನ್ನೂ ಹಳದಿಯ ವಸ್ತ್ರಗಳನ್ನೂ ಅರ್ಪಿಸಬೇಕು. ಟಗರಿನ ಕೊಂಬನ್ನು ಧೂಪಕ್ಕಾಗಿ ಉಪಯೋಗಿಸಬೇಕು. ಎಳ್ಳಿನಿಂದ ಹೋಮವನ್ನು ಮಾಡಬೇಕು. ಈ ಕರ್ಮದಲ್ಲಿ ಎಳ್ಳು ಮತ್ತು ಚಿನ್ನದ ನಾಣ್ಯವನ್ನು ದಕ್ಷಿಣೆಗಾಗಿ ಕೊಡಬೇಕು. ಚಿನ್ನದ ಹೊದಿಕೆಯಿಂದ ಕೂಡಿದ ದರ್ಭೆಯ ಬುಡಗಳನ್ನೇ ಮಣಿಯನ್ನಾಗಿ ಮಾಡಿ ಧರಿಸಬೇಕು. ಈ ರೀತಿ ಭರಣೀ ನಕ್ಷತ್ರದಲ್ಲಿ ಸ್ನಾನಮಾಡಿದವನು ದೀರ್ಘವಾದ ಆಯುಸ್ಸನ್ನು ಹೊಂದುತ್ತಾನೆ.

ದರ್ಭಮೂಲೈಃ ಮಣಿಃ ಕಾರ್ಯಃ ಕನಕೇನ ಚ ವೇಷ್ಟಿತಃ ।
ಏವಂ ಸ್ನಾತೋ ನರೋ ಯಾಮ್ಯೇ ದೀರ್ಘಂ ಜೀವಿತಮಾಪ್ನುಯಾತ್ ॥೮೯॥

ಸ್ನಾನಾನಿ ಮುಖ್ಯಾನಿ ತವೋದಿತಾನಿ ಕಾಮ್ಯಾನಿ ಪಾಪಪ್ರಶಮಾಯ ರಾಮ ।
ಏತಾನಿ ಕಾರ್ಯಾಣಿ ಸದಾ ದ್ವಿಜೇಂದ್ರ ಧರಾನ್ವಿತೇನಾಥ ವಿಚಕ್ಷಣೇನ ॥ ೯೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ನಕ್ಷತ್ರಸ್ನಾನ
ಕಥನಂ ನಾಮ ನವನವತಿತಮೋಽಧ್ಯಾಯಃ

---

೯೦. ಎಲೈ ರಾಮನೇ ಪಾಪನಾಶಕ್ಕೆ ಕಾರಣಗಳಾದ ಕಾಮ್ಯಸ್ನಾನಗಳಲ್ಲಿ ಮುಖ್ಯವಾದುವುಗಳನ್ನು ನಿನಗೆ ಹೇಳಿರುತ್ತೇನೆ. ಈ ಸ್ನಾನಗಳನ್ನು ಬುದ್ಧಿಶಾಲಿಯಾದ ದೊರೆಯು ತನ್ನ ಕಾರ್ಯಸಿದ್ಧಿಗಾಗಿ ಅವಶ್ಯಮಾಡಲೇಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯಸಂವಾದ
ದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ನಕ್ಷತ್ರಸ್ನಾನಕಥನವೆಂಬ ತೊಂಭತ್ತೊಂಭತ್ತನೆಯ
ಅಧ್ಯಾಯ ಮುಗಿದಿದೆ.



## ತೊಂಭತ್ತೊಂಭತ್ತನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಫಲಾಪೇಕ್ಷೆಯಿಂದ ಮಾಡಲು ಅರ್ಹವಾದ ಕಾಮ್ಯಕರ್ಮಗಳಲ್ಲಿ ಆಯಾಯ ನಕ್ಷತ್ರಕ್ಕೆ ಅನುಗುಣವಾಗಿ ಮಾಡಬೇಕಾದ ನಕ್ಷತ್ರಸ್ನಾನವನ್ನೂ ಅದರ ಫಲಗಳನ್ನೂ ವಿಧಾನ ಕ್ರಮವನ್ನೂ ನಿರೂಪಿಸಿರುತ್ತಾರೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಶತತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಉಪೋಷ್ಯಚೋತ್ತರಾಷಾಢಾಂ ಬ್ರಹ್ಮಸ್ನಾನಂ ವಿಧೀಯತೇ ।**
**ಸೂರ್ಯೇ ಮಧ್ಯಮನುಪ್ರಾಪ್ತೇ ನರೇಂದ್ರೋ............... || ೧ ||**

**ಸರ್ವೈರ್ಬೀಜೈಸ್ತಥಾ ರತ್ನೈಃ ಫಲೈಃ ಪುಷ್ಪೈಸ್ತಥೌಷಧೈಃ ।**
**ಸ್ನಾತಶ್ಚ ಸೋದಕೈಃ ಕುರ್ಯಾತ್ತತಃ ಪೂಜಾಂ ಸ್ವಯಂಭುವಃ || ೨ ||**

**ಧೂಪಂ ಚ ದದ್ಯಾದ್ಧರ್ಮಜ್ಞ ಕುಶಮೂಲಘೃತಾನ್ವಿತೈಃ ।**
**ಹೋಮಂ ಘೃತಾಕ್ಷತೈಃ ಕುರ್ಯಾದ್ದದ್ಯಾತ್ಕನಕಮೇವ ಚ || ೩ ||**

---

### ನೂರನೆಯ ಅಧ್ಯಾಯ.

೧–೨. ಪುಷ್ಕರನು ಹೇಳುತ್ತಾನೆ :—ಉತ್ತರಾಷಾಢಾನಕ್ಷತ್ರದಲ್ಲಿ ಉಪವಾಸ ಮಾಡಿ ಬ್ರಹ್ಮಸ್ನಾನವನ್ನು ಮಾಡಬೇಕು. ಸೂರ್ಯನು ಮಧ್ಯಾಹ್ನಸಮಯಕ್ಕೆ ಬಂದಕಾಲದಲ್ಲಿ ರಾಜನಾದವನು ಎಲ್ಲಾ ಬೀಜಗಳಿಂದಲೂ, ಫಲಪುಷ್ಪ ಓಷಧಿ ವಿಶೇಷಗಳಿಂದಲೂ ಪೂರ್ಣವಾಗಿರುವ ಕುಂಭಗಳ ತೀರ್ಥದಲ್ಲಿ ಸ್ನಾನಮಾಡಬೇಕು. ಅನಂತರ ಸ್ವಯಂಭುವಿನ ಪೂಜೆಯನ್ನು ಮಾಡಬೇಕು.

೩–೪. ಧೂಪವನ್ನೂ ಅರ್ಪಿಸಿ ದರ್ಭೆಗಳ ಮೂಲ ಮತ್ತು ಆಜ್ಯ ಇವುಗಳಿಂದ ಆ ಧೂಪವನ್ನು ಸಂಸ್ಕರಿಸಿ ಅರ್ಪಿಸಬೇಕು. ಆಜ್ಯದಿಂದ ಕೂಡಿದ ಅಕ್ಷತೆಗಳಿಂದ ಹೋಮಮಾಡಿ ಚಿನ್ನದ ನಾಣ್ಯವನ್ನು ದಕ್ಷಿಣೆಯಾಗಿ ಕೊಡಬೇಕು.

ಕ್ರಿಯಮಾಣೇ ಸ್ರುವೇ ಚೂರ್ಣೇ ತಥಾ ಚೈವ ರಜೋ ದ್ವಿಜ ।
ಸೋಮಂ ಚೂರ್ಣಂ ಚ ತ್ರಿವೃತಂ ಮಣಿಂ ಶಿರಸಿ ಧಾರಯೇತ್ ॥ ೪ ॥

ಸ್ನಾನಂ ತು ರಾಜ್ಯಕಾಮಸ್ಯ ಪ್ರೋಕ್ತಮೇತನ್ಮಯಾ ತವ ।
ಬ್ರಹ್ಮಚರ್ಯಸಕಾಮಸ್ಯ ಸ್ವೇಚ್ಛಯಾ ಚ ಯಥೋದಿತಂ ॥ ೫ ॥

ಬ್ರಾಹ್ಮಂ ತವ ಸ್ನಾನಮಿದಂ ಪ್ರದಿಷ್ಟಂ ಸರ್ವಾಧಿನಾಶಾಯ ಭೃಗುಪ್ರಧಾನ ।
ಕಾರ್ಯಂ ಸದಾ ವಾ ದಿನಮಧ್ಯಯಾತೇ ದಿವಾಕರೇ ಕಾಮಕರಂ ಪ್ರಶಸ್ತಂ ॥೬॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಅಭಿಜಿತ್ಸ್ನಾನ ವರ್ಣನಂ ನಾಮ ಶತತಮೋಽಧ್ಯಾಯಃ

---

ಹೋಮಮಾಡುವ ಸ್ರುವವನ್ನು ಚೂರ್ಣಮಾಡಿ ಆ ಚೂರ್ಣವನ್ನು ಸೋಮಲತೆಯಿಂದ ಮೂರುಸುತ್ತು ಬರುವಂತೆ ಸುತ್ತಿ ಅದನ್ನೇ ಮಣಿಯನ್ನಾಗಿ ಶಿರಸ್ಸಿನಲ್ಲಿ ಧರಿಸಬೇಕು.

೬. ರಾಜ್ಯಾಪೇಕ್ಷೆಯುಳ್ಳವನೂ ಸ್ವಚ್ಛಂದವಾದ ಬ್ರಹ್ಮಚರ್ಯವನ್ನು ಅಪೇಕ್ಷಿಸುವವನೂ ಸಹ ನಾನು ಈಗ ಹೇಳಿರುವ ಈ ಸ್ನಾನವನ್ನು ಮಾಡಬೇಕು. ಬ್ರಾಹ್ಮವೆಂಬ ಈ ಸ್ನಾನವು ಮಾನಸವಾದ ಸರ್ವ ಆತಂಕಗಳಿಗೂ ನಾಶಕವಾದುದು ಪ್ರಶಸ್ತವಾದ ಈ ಕಾಮ್ಯಕರ್ಮವು ಸೂರ್ಯನು ದಿನಮಧ್ಯಕ್ಕೆ ಬಂದ ಕಾಲದಲ್ಲಿ ಆಚರಿಸಲ್ಪಡತಕ್ಕದ್ದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ಅಭಿಜಿತ್ ಸ್ನಾನವೆಂಬ ನೂರನೆಯ ಅಧ್ಯಾಯ ಮುಗಿದಿದೆ.

---

## ನೂರನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಅಭಿಜಿತ್ ಸ್ನಾನವೆಂಬ ಕಾಮ್ಯಕರ್ಮವನ್ನು ನಿರೂಪಿಸಿರುವರು.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ : —

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕೋತ್ತರಶತತಮೋಽಧ್ಯಾಯಃ

**॥ ರಾಮ ಉವಾಚ ॥**

**ಸ್ನಾನಮನ್ಯತ್ಸಮಾಚಕ್ಷ್ವ ಭಗವನ್ ಪುಷ್ಟಿಕಾರಕಂ ।**
**ಯೇನ ನಿತ್ಯಂ ಕೃತೇನೇಹ ಪುರುಷಃ ಪುಷ್ಟಿಮಾಪ್ನುಯಾತ್ ॥ ೧ ॥**

**॥ ಪುಷ್ಕರ ಉವಾಚ ॥**

**ಶ್ರವಣರ್ಕ್ಷಮನುಪ್ರಾಪ್ತೇ ದೇವದೇವೇ ನಿಶಾಕರೇ ।**
**ಭಕ್ತ್ಯಾ ಸಮಾಚರೇತ್ಸ್ನಾನಂ ನದೀದ್ವಿತಯ ಸಂಗಮೇ ॥ ೨ ॥**

**ನಿಮ್ನಗಾಯಾಂ ಸರಸಿ ವಾ ನದೀಸಾಗರಸಂಗಮೇ ।**
**ಸ್ನಾತಃ ಸಂಪೂಜಯೇದ್ದೇವಂ ವಿಷ್ಣುಂ ಮಾಲ್ಯಾನುಲೇಪನೈಃ ॥ ೩ ॥**

---

### ನೂರ ಒಂದನೆಯ ಅಧ್ಯಾಯ.

೧. ಭಾರ್ಗವನು ಪ್ರಶ್ನೆ ಮಾಡುತ್ತಾನೆ:—ಪೂಜ್ಯನೇ ಇಹಲೋಕದಲ್ಲಿ ಪುಷ್ಟಿಯನ್ನು ಅಪೇಕ್ಷಿಸುವವನು ಯಾವ ಸ್ನಾನದಿಂದ ನಿತ್ಯವೂ ಪುಷ್ಟಿಯನ್ನು ಹೊಂದಿರಬಹುದೋ ಅಂತಹ ಪುಷ್ಟಿಕಾರಕವಾದ ಬೇರೆ ಸ್ನಾನವಾವುದೂ ಇದ್ದಲ್ಲಿ ಅದನ್ನೂ ದಯವಿಟ್ಟು ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಚಂದ್ರನು ಶ್ರವಣನಕ್ಷತ್ರವನ್ನು ಹೊಂದಿರುವಾಗ ಎರಡು ನದಿಗಳ ಸಂಗಮದಲ್ಲಿ ಭಕ್ತಿಯಿಂದ ಸ್ನಾನಮಾಡಬೇಕು. ಅಥವಾ ಕೇವಲ ನದಿಯಲ್ಲಾಗಲಿ ಸರೋವರದಲ್ಲಿಯಾಗಲಿ ಸಮುದ್ರಕ್ಕೆ ನದಿಯು ಸಂಗಮ ಹೊಂದುವ ಸ್ಥಲದಲ್ಲಾಗಲಿ ಸ್ನಾನಮಾಡಬಹುದು. ಹೀಗೆ ಸ್ನಾನಮಾಡಿದವನು ಪ್ರಭುವಾದ ವಿಷ್ಣುವನ್ನು ಗಂಧಪುಷ್ಪಾದಿಗಳಿಂದ ಪೂಜಿಸಬೇಕು.

ಧೂಪದೀಪನಮಸ್ಕಾರೈಸ್ತಥಾ ಚೈವಾನ್ನಸಂಪದಾ ।
ಶಾಲ್ಯನ್ನಂ ದಧಿಸಂಯುಕ್ತಂ ವಿಷ್ಣವೇ ವಿನಿವೇದಯೇತ್ ॥ ೪ ॥

ಪೌರುಷೇಣ ಚ ಸೂಕ್ತೇನ ಪಾಯಸಂ ಜುಹುಯಾತ್ತತಃ ।
ರಜತಂ ದಕ್ಷಿಣಾಂ ದದ್ಯಾದ್ಬ್ರಾಹ್ಮಣಾಯ ಭೃಗೂತ್ತಮ ॥
ಉಪವಾಸಂ ವಿನಾಪ್ಯೇತತ್ ಸ್ನಾನಂ ಪುಷ್ಟಿಪ್ರದಂ ಪರಂ ॥ ೫ ॥

ಸ್ನಾತಃ ಸಮಾಪ್ನೋತಿ ಸದಾ ಮನುಷ್ಯಃ
ಕಾಮಾನಭೀಷ್ಟಾನ್ ಶ್ರವಣರ್ಕ್ಷಯೋಗೇ ।
ಪಾಪಂ ಸಮಸ್ತಂ ವಿಜಹಾತಿ ರಾಮ
ಧರ್ಮಂ ಸಮಾಪ್ನೋತಿ ಯಶಶ್ಚ ಮುಖ್ಯಂ ॥ ೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಪುಷ್ಟಿಕಾರಕಶ್ರವಣ ಸ್ನಾನಕಥನಂ ನಾಮೈಕೋತ್ತರಶತತಮೋऽಧ್ಯಾಯಃ

---

೪-೫. ಧೂಪದೀಪ ನಮಸ್ಕಾರಾದ್ಯುಪಚಾರಗಳಿಂದಲೂ, ಸಮೃದ್ಧಿಯಾದ ಅನ್ನದಿಂದಲೂ ಪೂಜಿಸಬೇಕು. ಮೊಸರಿನಿಂದ ಕೂಡಿದ ಶಾಲ್ಯಾನ್ನವನ್ನು ನಿವೇದಿಸಬೇಕು. ಅನಂತರ ಪುರುಷಸೂಕ್ತದಿಂದ ಪಾಯಸವನ್ನು ಹೋಮಮಾಡಬೇಕು. ಬೆಳ್ಳಿಯ ನಾಣ್ಯವನ್ನು ಬ್ರಾಹ್ಮಣನಿಗೆ ದಕ್ಷಿಣೆಯಾಗಿ ಕೊಡಬೇಕು. ಉಪವಾಸ ವಿಲ್ಲದಿದ್ದರೂ ಈ ಸ್ನಾನವು ಬಹಳಮಟ್ಟಿಗೂ ಪುಷ್ಟಿಕರವಾದುದು.

೬. ಇಂತಹ ಶ್ರವಣನಕ್ಷತ್ರಯೋಗವಿರುವಾಗ ಸ್ನಾನಮಾಡಿದ ಮನುಷ್ಯನು ಯಾವಾಗಲೂ ತನ್ನ ಇಷ್ಟಾರ್ಥಗಳನ್ನು ಹೊಂದುತ್ತಾನೆ. ಎಲ್ಲಾ ಪಾಪಗಳನ್ನೂ ಹೋಗಲಾಡಿಸಿಕೊಂಡು ಧರ್ಮವನ್ನೂ ಉತ್ತಮವಾದ ಯಶಸ್ಸನ್ನೂ ಸಹ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಖ್ಯಾನ ದಲ್ಲಿ ಪುಷ್ಟಿಕರವಾದ ಶ್ರವಣನಕ್ಷತ್ರಸ್ನಾನವೆಂಬ ನೂರ ಒಂದನೆಯ ಅಧ್ಯಾಯವು ಮುಗಿದಿದೆ.

## ನೂರ ಒಂದನೇ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ವಿಷ್ಣುವಿನ ಪ್ರೀತಿಯನ್ನುದ್ದೇಶಿಸಿ ಶ್ರವಣನಕ್ಷತ್ರದಲ್ಲಿ ಮಾಡಬಹುದಾದ ಶ್ರವಣಸ್ನಾನವೆಂಬ ಪುಷ್ಟಿಕರವಾದ ಕಾಮ್ಯಕರ್ಮವನ್ನು ಯಥಾ ವಿಧಿಯಾಗಿ ನಿರೂಪಿಸಿರುತ್ತಾರೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ದ್ವ್ಯುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

**ಜನ್ಮನಕ್ಷತ್ರಗೇ ಸೋಮೇ ಸರ್ವೌಷಧಿಸಮನ್ವಿತಂ |**
**ಕುಂಭಂ ಸುಪೂಜಿತಂ ಕೃತ್ವಾ ಸ್ನಪನಂ ತೇನ ಕಾರಯೇತ್ || ೧ ||**

**ಸ್ನಾತಶ್ಚಾಭ್ಯರ್ಚಯೇದ್ದೇವಂ ವಾಸುದೇವಂ ಜಗತ್ಪತಿಂ |**
**ನಕ್ಷತ್ರದೈವತಂ ಚಂದ್ರಂ ನಕ್ಷತ್ರಂ ವಾರುಣಂ ತಥಾ || ೨ ||**

**ವಾಯುಂ ಚಾಯುಧಪೀಠಾದ್ಯಂ ಛತ್ರಂ ಸಂಪೂಜಯೇತ್ತಥಾ |**
**ಯಥೋಕ್ತದೇವತಾಲಿಂಗೈರ್ಮಂತ್ರೈಶ್ಚ ಜುಹುಯಾದ್ಘೃತಂ || ೩ ||**

---

### ನೂರ ಎರಡನೆಯ ಅಧ್ಯಾಯ.

೧–೨. ಚಂದ್ರನು ಜನ್ಮನಕ್ಷತ್ರದಲ್ಲಿರುವಾಗ ಕುಂಭದಲ್ಲಿ ಎಲ್ಲಾ ಔಷಧಿಗಳನ್ನೂ ಹಾಕಿ ಪೂಜಿಸಿ ಆ ಕುಂಭದ ಜಲದಿಂದ ಸ್ನಾನಮಾಡಬೇಕು. ಅನಂತರ ಜಗತ್ಪತಿಯಾದ ಆ ವಾಸುದೇವನನ್ನೂ ನಕ್ಷತ್ರದೇವತೆಯಾದ ಚಂದ್ರನನ್ನೂ ಶತಭಿಷಾನಕ್ಷತ್ರವನ್ನೂ ಸಹ ಪೂಜಿಸಬೇಕು.

೩–೪. ಹಾಗೆಯೇ ವಾಯುವನ್ನೂ, ಆಯುಧಗಳಪೀಠವನ್ನೂ ಛತ್ರಿಯನ್ನೂ ಸಹ ಪೂಜಿಸಬೇಕು. ಮಂತ್ರಗಳಲ್ಲಿರುವ ದೇವತೆಗಳಲಿಂಗಗಳಿಗನುಸಾರವಾಗಿ ಆಯಾಯ ಮಂತ್ರಗಳಿಂದ ಆಜ್ಯವನ್ನು ಆಯಾಯ ದೇವತೆಗಳಿಗೆ ಹೋಮಮಾಡಬೇಕು. (ಲಿಂಗಗಳೆಂದರೆ ಆಯಾಯ ದೇವತೆಗಳ ಆಭರಣ ಆಯುಧಾದಿ

ಶಕ್ತ್ಯಾ ಚ ದಕ್ಷಿಣಾ ದೇಯಾ ಬ್ರಾಹ್ಮಣೇಭ್ಯೋ ಭೃಗೂತ್ತಮ ।
ತತೋऽನುಲಿಪ್ತಃ ಸುರಭಿಃ ಸ್ರಗ್ವೀ ವಿವಿಧಭೂಷಣಃ ॥ ೪ ॥

ತಿಷ್ಠನ್ನನುಜಶಾರ್ದೂಲ ಹವಿಷ್ಯಾಶೀ ಜಿತೇಂದ್ರಿಯಃ ।
ಉಪವಾಸಂ ವಿನಾಪ್ಯೇತತ್ಪವಿತ್ರಂ ಪಾಪನಾಶನಂ ॥ ೫ ॥

ಮಾತೃಸ್ಥಾನೇ ತು ಜಗತಾಂ ಜನ್ಮತಾರಾ ವಿಧೀಯತೇ ।
ಚಂದ್ರರೂಪೀ ಚ ಭಗವಾನ್ಪಿತಾ ವಿಷ್ಣುಃ ಪ್ರಕೀರ್ತಿತಃ ॥ ೬ ॥

ತಸ್ಮಾತ್ಸರ್ವಪ್ರಯತ್ನೇನ ಜನ್ಮನಕ್ಷತ್ರಸಂಸ್ಥಿತಂ ।
ಭಕ್ತ್ಯಾ ತಂ ಪೂಜಯೇಚ್ಚಂದ್ರಂ ಜನರ್ಕ್ಷಂ ಚ ವಿಶೇಷತಃ ॥ ೭ ॥

---

ಅಸಾಧಾರಣ ಚಿಹ್ನೆಗಳು) ತನ್ನ ಶಕ್ತಿಗೆ ತಕ್ಕಂತೆ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು. ಅನಂತರ ತಾನು ಸುಗಂಧಿಯಾದ ಗಂಧದಿಂದ ಅಲಂಕೃತನಾಗಿ ನಾನಾವಿಧವಾದ ವಸ್ತ್ರಭೂಷಣಗಳನ್ನು ಧರಿಸಿ.

೫-೬. ಹವಿಯೋಗ್ಯವಾದ ಅಶನನಿಯಮದಿಂದ (ಕ್ಷಾರಲವಣರಹಿತವಾದ ಭೋಜನದಿಂದ) ಜಿತೇಂದ್ರಿಯನಾಗಿರಬೇಕು. ಉಪವಾಸವಿಲ್ಲದಿದ್ದರೂ ಸಹ ಈ ಸ್ನಾನವು ಬಹಳ ಪವಿತ್ರವಾಗಿಯೂ ಪಾಪನಾಶಕವಾಗಿಯೂ ಇರುತ್ತದೆ. ಜನ್ಮನಕ್ಷತ್ರವು ಎಲ್ಲರಿಗೂ ತಾಯಿಯೆಂದು ಭಾವಿಸಲ್ಪಟ್ಟಿದೆ. ಚಂದ್ರರೂಪದಲ್ಲಿರುವ ಆ ವಿಷ್ಣುವೇ ತಂದೆಯಾಗುತ್ತಾನೆ.

೭-೮. ಆದುದರಿಂದ ಜನ್ಮನಕ್ಷತ್ರದಲ್ಲಿರುವ ಚಂದ್ರನನ್ನೂ ಜನ್ಮನಕ್ಷತ್ರವನ್ನೂ ಸಹ ಸರ್ವಪ್ರಯತ್ನದಿಂದಲೂ ಭಕ್ತಿಯಿಂದ ಪೂಜಿಸಲೇಬೇಕು. ಈ ರೀತಿ ಜನ್ಮನಕ್ಷತ್ರದಲ್ಲಿರುವ ಚಂದ್ರನನ್ನು ಪ್ರಯತ್ನದಿಂದ ಪೂಜಿಸಿದವನು ಸಕಲಮನೋರಥ

ಪೂಜಾಂ ಸದಾ ಚಂದ್ರಮಸಸ್ತು ಕೃತ್ವಾ
ಜನ್ಮರ್ಕ್ಷಸಂಸ್ಥಸ್ಯ ಭೃಗುಪ್ರಧಾನ ।
ಕಾಮಾನವಾಪ್ನೋತಿ ನರಸ್ತು ಸರ್ವಾನ್
ಸುಖೀ ಸದಾ ಸ್ಯಾದ್ಭುವಿ ನಷ್ಟಪಾಪ್ಮಾ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಜನ್ಮರ್ಕ್ಷ
ಸ್ನಾನವರ್ಣನಂ ನಾಮ ದ್ವ್ಯುತ್ತರಶತತಮೋಽಧ್ಯಾಯಃ

---

ಗಳನ್ನೂ ಹೊಂದಿ ಪಾಪಗಳಿಂದ ದೂರನಾಗಿ ಸರ್ವಕಾಲದಲ್ಲಿಯೂ ಸುಖಿಯಾಗಿರುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ಜನ್ಮನಕ್ಷತ್ರ ಸ್ನಾನವರ್ಣನೆಂಬ ನೂರ ಎರಡನೆಯ
ಅಧ್ಯಾಯ ಮುಗಿದಿದೆ.



## ನೂರ ಎರಡನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿಯೂ ಜನ್ಮನಕ್ಷತ್ರದಲ್ಲಿ ಚಂದ್ರನಿರುವಾಗ ಅವನ ಪ್ರೀತಿಗಾಗಿ ಮಾಡಬೇಕಾದ ಸ್ನಾನವನ್ನು ಯಥಾಕ್ರಮವಾಗಿ ನಿರೂಪಿಸಿರುವನು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ತ್ರ್ಯುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

ಚಂದ್ರಮಂಡಲವೃದ್ಧೌ ತು ತಥಾ ಚೈವೋತ್ತರಾಯಣೇ ।
ಶುಭೇ ದಿವಸನಕ್ಷತ್ರೇ ಮುಹೂರ್ತೇ ಚ ತಥಾ ಶುಭೇ || ೧ ||

ತಿಷ್ಯಾಶ್ವಿನಗತೇ ಚಂದ್ರೇ ಹಸ್ತಶ್ರವಣಗೇಽಪಿ ಚ ।
ಪ್ರಾಚೀಂ ವಾಪ್ಯಥವೋದೀಚೀಂ ನಿಷ್ಕ್ರಮ್ಯ ನಗರಾದ್ದಿಶಂ || ೨ ||

ವಾಸ್ತುವಿದ್ಯಾವಿನಿರ್ದಿಷ್ಟೇ ಭೂಮಿಭಾಗೇ ಮನೋಹರೇ ।
ಅಷ್ಟಹಸ್ತಂ ಶುಭೇ ಕುರ್ಯಾಚ್ಚತುರಸ್ರಂ ಚ ಮಂಡಲಂ || ೩ ||

---

### ನೂರ ಮೂರನೆಯ ಅಧ್ಯಾಯ.

೧–೩. ಪುಷ್ಕರನು ಹೇಳುತ್ತಾನೆ ಉತ್ತರಾಯಣದಲ್ಲಿ ಚಂದ್ರನು ವೃದ್ಧಿಯಾಗಿರುವಾಗ ಶುಭವಾದ ನಕ್ಷತ್ರದಿಂದ ಕೂಡಿರುವ ಶುಭ ದಿನದಲ್ಲಿ ಶುಭವಾದ ಮುಹೂರ್ತವನ್ನು ನೋಡಬೇಕು. ಚಂದ್ರನು ಪುಷ್ಯ ಅಥವಾ ಅಶ್ವಿನೀ ಅಥವಾ ಹಸ್ತ, ಶ್ರವಣ ನಕ್ಷತ್ರದಲ್ಲಿರುವಾಗ ತಾನು ವಾಸಮಾಡುವ ನಗರದಿಂದ ಪೂರ್ವದಿಕ್ಕಿಗಾಗಲಿ, ಉತ್ತರದಿಕ್ಕಿಗಾಗಲಿ ಹೊರಟು ವಾಸ್ತುಶಾಸ್ತ್ರದೃಷ್ಟಿಯಿಂದ ಶುದ್ಧವಾಗಿಯೂ ರಮ್ಯವಾಗಿಯೂ ಇರುವ ಭೂಪ್ರದೇಶದಲ್ಲಿ ಎಂಟು ಮೊಳ ವಿಸ್ತಾರವುಳ್ಳ ಚಚ್ಚೌಕವಾಗಿರುವ ಮಂಡಲವನ್ನು ಏರ್ಪಡಿಸಬೇಕು.

ಬಲ್ಯರ್ಥಮಪರಂ ಕುರ್ಯಾದ್ವಹ್ನಿವೇದ್ಯರ್ಥಮೇವ ಚ ।
ಗೋಮಯೇನೋಪಲಿಪ್ತೇ ತು ಸುಧಾಲೇಖಾಸಮನ್ವಿತೇ ॥ ೪ ॥

ಧ್ವಜಾತಪತ್ರವ್ಯಜನಮಾಲ್ಯದಾಮಕುಶಾಕ್ಷತೈಃ ।
ಲಾಜಾಗಂಧಾದಿಭಿರ್ಮುಖ್ಯೈರ್ಮಂಗಲ್ಯೈಸ್ತಂ ಸಮರ್ಚಯೇತ್ ॥ ೫ ॥

ಲಾಜಾಲಾಜೋಪಕರಣೈಸ್ತಥೈವ ಚ ವಿಭೂಷಯೇತ್ ।
ತತಃ ಪ್ರಸ್ರವಣೇಭ್ಯಸ್ತು ಚತುರ್ಭ್ಯಸ್ತು ಘಟಾನ್ನವಾನ್ ॥ ೬ ॥

ಪ್ರತ್ಯೇಕಂ ಕಲ್ಪಯೇದ್ವಿದ್ವಾನ್ಕಲ್ಪಿತೇ ಮಂಡಲದ್ವಯೇ ।
ಸೂಕ್ತಿಷ್ವಥ ಮಹಾಭಾಗ ಬೀಜಮಾತ್ರಸಮನ್ವಿತಾನ್ ॥ ೭ ॥

ತತಸ್ತು ಕಲ್ಪಯೇತ್ಕುಂಭಾನ್ಸಪ್ತ ಮುಖ್ಯಾನ್ನದೀಜಲೈಃ ।
ಸರ್ವೌಷಧಿಯುತಃ ಕಾರ್ಯಃ ಕುಂಭ ಏಕೋ ದ್ವಿಜನ್ಮನಾ ॥ ೮ ॥

---

೪-೫. ಬಲಿಪ್ರದಾನಕ್ಕಾಗಿಯೂ, ಅಗ್ನಿಯವೇದಿಕೆಗಾಗಿಯೂ ಸಹ ಮತ್ತೆರಡು ಸ್ಥಳಗಳನ್ನು ಏರ್ಪಡಿಸಬೇಕು. ಆ ಪ್ರದೇಶವನ್ನು ಗೋಮಯದಿಂದ ಸಾರಿಸಿ ಸುಣ್ಣದ ಪಟ್ಟಿ, ರಂಗವಲ್ಲಿ ಮೊದಲಾದವುಗಳಿಂದ ಅಲಂಕರಿಸಿ ಧ್ವಜ, ಛತ್ರ, ಬೀಸಣಿಗೆ, ಹೂವಿನಮಾಲಿಕೆ, ದರ್ಭೆ, ಅಕ್ಷತೆ, ಅರಳು, ಗಂಧ ಮೊದಲಾದ ಮುಖ್ಯವಾದ ಮಂಗಲದ್ರವ್ಯಗಳಿಂದ ಪೂಜಿಸಬೇಕು.

೬-೭. ಅರಳುಗಳಿಂದಲೂ ಅದಕ್ಕೆ ಸಾಧನವಾದ ಛತ್ರವೇ ಮೊದಲಾದವುಗಳಿಂದಲೂ ಅಲಂಕರಿಸಬೇಕು. ಅನಂತರ ನಾಲ್ಕು ಗಿರಿ, ನದಿ (ಝುರಿ) ಗಳಿಂದ ಹೊಸದಾದ ಕುಂಭಗಳಲ್ಲಿ ಜಲವನ್ನು ತಂದು ಏರ್ಪಡಿಸಿರುವ ಎರಡು ಮಂಡಲಗಳಲ್ಲಿಯೂ ಬೇರೆ ಬೇರೆ ಇಡಬೇಕು. ಆ ಘಟಗಳಲ್ಲಿ ಸೂಕ್ತಿಪೂರ್ವಕವಾಗಿ ಬೀಜಗಳನ್ನು ಹಾಕಬೇಕು.

೮-೧೦. ಅನಂತರ ನದೀಜಲದಿಂದ ಪೂರ್ಣವಾದ ಏಳು ಪ್ರಧಾನ ಕುಂಭಗಳನ್ನು ಏರ್ಪಡಿಸಬೇಕು. ಆ ಏಳು ಕುಂಭಗಳಲ್ಲಿ ಒಂದು ಕುಂಭಕ್ಕೆ ಬ್ರಾಹ್ಮಣನು ಸರ್ವೌಷಧಿಗಳನ್ನೂ ಹಾಕಿಡಬೇಕು ಮತ್ತೊಂದು ಕುಂಭಕ್ಕೆ ಎಲ್ಲಾ ಬೀಜಗಳನ್ನೂ

**ಸರ್ವಬೀಜಯುತೋ ಧಾನ್ಯೈರತ್ನೋಪೇತಸ್ತಥಾಪರಃ ।**
**ತಥಾ ಚೈವಾಪರಂ ಯುಕ್ತಂ ಕಾರ್ಯಂ ವೃಕ್ಷಾಗ್ರಪಲ್ಲವೈಃ ॥ ೯ ॥**

**ಪುಷ್ಪೈಶ್ಚೈವಾಪರಂ ಯುಕ್ತಂ ಫಲೈಶ್ಚೈವಾಪರಂ ತಥಾ ।**
**ಸರ್ವಗಂಧಯುತಂ ಚಾನ್ಯಂ ಸರ್ವಾನೇವ ಸಮರ್ಚಯೇತ್ ॥ ೧೦ ॥**

**ಪೂರ್ವಮಂತ್ರೇಣ ಚ ತಥಾ ಸರ್ವಾನೇವಾಭಿಮಂತ್ರಯೇತ್ ।**
**ತತೋ ಭದ್ರಾಸನಂ ದತ್ವಾ ತತ್ರ ಚರ್ಮಾಸ್ತರೇದ್ಬುಧಃ ॥ ೧೧ ॥**

**ವಿಪ್ರಸ್ಯ ಸ್ನಾತುಕಾಮಸ್ಯ ಸೌರಮಾರ್ಷಭಕಂ ಶುಭಂ ।**
**ಕ್ಷತ್ರಿಯಸ್ಯ ತಥಾ ಸೈಹ್ಮಂ ವೈಯಾಘ್ರಂ ಚ ತಥಾ ವಿಶಃ ॥ ೧೨ ॥**

---

ಧಾನ್ಯವನ್ನೂ ರತ್ನವನ್ನೂ ಹಾಕಿಡಬೇಕು. ಮತ್ತೊಂದು ಕುಂಭಕ್ಕೆ ಮರಗಳಲ್ಲುಂಟಾಗಿರುವ ಹೊಸದಾದ ಚಿಗುರುಗಳನ್ನು ತುಂಬಬೇಕು. ಮತ್ತೆರಡು ಕುಂಭಗಳನ್ನು ಪುಷ್ಪಗಳಿಂದಲೂ, ಫಲಗಳಿಂದಲೂ ಕ್ರಮವಾಗಿ ತುಂಬಬೇಕು. ಉಳಿದ ಕುಂಭವನ್ನು ನಾನಾವಿಧವಾದ ಸುಗಂಧದ್ರವ್ಯಗಳಿಂದ ಪೂರ್ಣಮಾಡಬೇಕು. ಹೀಗೆ ಏರ್ಪಡಿಸಲ್ಪಟ್ಟ ಎಲ್ಲಾ ಕುಂಭಗಳನ್ನೂ ಪೂಜಿಸಬೇಕು.

೧೧-೧೨. ಹಿಂದೆ ಹೇಳಿರುವ "ಆಪಃ ಸೋಮಾದ್ಯಾಃ" ಎಂಬ ಮಂತ್ರದಿಂದ ಎಲ್ಲಾ ಕುಂಭಗಳನ್ನೂ ಅಭಿಮಂತ್ರಿಸಬೇಕು, ಅನಂತರ ಜ್ಞಾನಿಯಾದ ಪುರೋಹಿತನು ಅಲ್ಲಿ ಭದ್ರಾಸನವನ್ನು ಹಾಸಿ ಅದರ ಮೇಲೆ ಚರ್ಮವನ್ನು ಹಾಸಬೇಕು. ಸ್ನಾನ ಮಾಡತಕ್ಕವನು ಬ್ರಾಹ್ಮಣನಾಗಿದ್ದಲ್ಲಿ ದೇವಪ್ರಿಯವಾದ ವೃಷಭದ ಚರ್ಮವು ಶುಭಕರವಾದದ್ದು. ಕ್ಷತ್ರಿಯನಾಗಿದ್ದಲ್ಲಿ ಸಿಂಹದ ಅಥವಾ ಹುಲಿಯ ಚರ್ಮವು ಒಳ್ಳೆಯದು. ವೈಶ್ಯನಾಗಿದ್ದಲ್ಲಿ ಹುಲಿಯ ಚರ್ಮವು ಪ್ರಶಸ್ತವಾದುದು. ಈ ರೀತಿ ವರ್ಣವ್ಯವಸ್ಥೆಗೆ ತಕ್ಕಂತೆ ಚರ್ಮವನ್ನು ಹಾಸಿ ಅಲ್ಲಿ ಫಲಾರ್ಥಿಯಾದವನನ್ನು ಕುಳ್ಳಿರಿಸಬೇಕು.

ದ್ವೀಪಿ ಚರ್ಮ ಚ ವೈಶ್ಯಸ್ಯ ಸ್ಥಾಪ್ಯಸ್ತತ್ರೋಪವೇಶಯೇತ್ ।
ಪ್ರಶಸ್ತಲಕ್ಷಣಾಂ ಭಾರ್ಯಾಂ ವಾಮಭಾಗೇ ತಥೈವ ಚ ॥ ೧೩ ॥

ಉಪೋಷಿತಃ ಶಿರಸ್ನಾತಃ ಸಿದ್ಧಾರ್ಥೈಃ ಕಂಕತಂ ವಿನಾ ।
ಸ್ನಾಪಯೇದ್ಬ್ರಾಹ್ಮಣೋ ವಿದ್ವಾನ್ ಬಹುಭಿಃ ಬ್ರಾಹ್ಮಣೈಸ್ಸಹ ॥ ೧೪ ॥

ಶಂಖಪುಣ್ಯಾಹ ಘೋಷೇಣ ವೀಣಾವೇಣುರವೇಣ ಚ ।
ಜಯಶಬ್ದೇನ ಮಹತಾ ಬಂದಿನಾಂ ನಿಸ್ವನೇನ ಚ ॥ ೧೫ ॥

ಸೌವರ್ಣಂ ಚ ಶತಚ್ಛಿದ್ರಂ ಪಾತ್ರಂ ಶಿರಸಿ ಧಾರಯೇತ್ ।
ತತ್ರ ದದ್ಯಾದ್ಘಟೈಸ್ತೋಯಂ ಕ್ರಮೇಣಾನೇನ ಶಾಸ್ತ್ರವಿತ್ ॥ ೧೬ ॥

ಯಾ ಔಷಧಯ ಇತ್ಯೇಷ ಮಂತ್ರಃ ಸ್ಯಾದೌಷಧೀಘಟೇ ।
ಆಬ್ರಹನ್ ಬ್ರಾಹ್ಮಣೇತ್ಯೇಷ ಬೀಜಕುಂಭೇ ಪ್ರಕೀರ್ತಿತಃ ॥ ೧೭ ॥

---

೧೩-೧೫. ಶುಭಲಕ್ಷಣವುಳ್ಳ ಪತ್ನಿಯನ್ನೂ ಸಹ ಅವನ ಎಡಭಾಗದಲ್ಲಿ ಕುಳ್ಳರಿಸಬೇಕು. ಅನಂತರ ಉಪವಾಸವಿದ್ದು ಕೂದಲುಗಳಿಗೆ ಬಾಚಣಿಗೆಯ ಸಂಬಂಧವಿಲ್ಲದಂತೆ ಬಿಳಿಯ ಸಾಸವೆಯಿಂದ ಶಿರಸ್ನಾನ ಮಾಡಿರುವ ಪಂಡಿತನಾದ ಬ್ರಾಹ್ಮಣೋತ್ತಮನು ಅನೇಕ ಬ್ರಾಹ್ಮಣರೊಡಗೂಡಿ ಅವನಿಗೆ ಸ್ನಾನಮಾಡಿಸಬೇಕು. ಆ ಸ್ನಾನವು ಶಂಖಧ್ವನಿ, ಪುಣ್ಯಾಹಘೋಷ, ವೀಣಾಧ್ವನಿ, ಕೊಳಲಿನ ಧ್ವನಿ ಬಂದಿಗಳು ಹೇಳುವ ಜಯಶಬ್ದ ಇವುಗಳೊಡನೆ ಕೂಡಿ ಮಂಗಲಕರವಾಗಿರಬೇಕು.

೧೬-೧೭. ಅನೇಕ ರಂಧ್ರಗಳುಳ್ಳ ಚಿನ್ನದ ಹರಿವಾಣವನ್ನು ಅವನ ತಲೆಯ ಮೇಲೆ ಹಿಡಿಯಬೇಕು. ಆ ಹರಿವಾಣದಲ್ಲಿ ಕುಂಭಗಳಲ್ಲಿರುವ ಜಲವನ್ನು ಶಾಸ್ತ್ರಜ್ಞನಾದ ಆ ಪುರೋಹಿತನು ಈ ರೀತಿ ಸುರಿಯಬೇಕು ಔಷಧಿಗಳುಳ್ಳ ಕುಂಭದ ಜಲವನ್ನು ಯಾ ಔಷಧಯಃ ಎಂಬ ಮಂತ್ರದಿಂದಲೂ, ಬೀಜಗಳ ಕುಂಭದಲ್ಲಿರುವ ಜಲವನ್ನು ಆಬ್ರಹ್ಮನ್ ಬ್ರಾಹ್ಮಣಃ ಎಂಬ ಮಂತ್ರದಿಂದಲೂ,

ಆಶುಃ ಶಿಶಾನ ಇತಿ ಚ ತಥಾ ರತ್ನಘಟೇ ಭವೇತ್ ।
ಮಂತ್ರಃ ಪುಷ್ಪವತೀತ್ಯೇಷ ಪುಷ್ಪಕುಂಭೇ ಪ್ರಕೀರ್ತಿತಃ ॥ ೧೮ ॥

ಏಷ ಏವ ತಥಾ ಮಂತ್ರಃ ಫಲಕುಂಭೇ ಪ್ರಕೀರ್ತಿತಃ ।
ಗಂಧದ್ವಾರೇಣ ಚ ತಥಾ ಗಂಧಕುಂಭೇ ವಿಧೀಯತೇ ॥ ೧೯ ॥

ಏವಂ ಸ್ನಾತಃ ಪರೀಧಾಯ ಸುಶುಕ್ಲೇ ವಾಸಸೀ ಶುಭೇ ।
ಮಂಗಲ್ಯಾನಿ ಸ್ಪೃಶೇದ್ರಾಮ ಸಂಪಶ್ಯೇದ್ವದನಂ ಘೃತೇ ॥ ೨೦ ॥

ವಿಮಲೇ ಚ ತಥಾದರ್ಶೇ ತತಃ ಸಂಪೂಜಯೇದ್ಧರಿಂ ।
ವೈಷ್ಣವಾಂಶ್ಚ ತಥಾ ಮಂತ್ರಾನ್ ಜುಹುಯಾಜ್ಜಾತವೇದಸಿ ॥ ೨೧ ॥

ತತಸ್ತೂತ್ತರದಿಗ್ಭಾಗೇ ವಹ್ನಿಂ ತಸ್ಯೋಪಕಲ್ಪಯೇತ್ ।
ಭದ್ರಾಸನಂ ಶುಭೇ ದೇಶೇ ಯುಕ್ತಂ ಪೂರ್ವೋಕ್ತಚರ್ಮಣಾ ॥ ೨೨ ॥

---

೧೮–೧೯. ರತ್ನವಿರುವ ಕುಂಭದ ಜಲವನ್ನು ಆಶುಃ ಶಿಶಾನಃ ಎಂಬ ಮಂತ್ರದಿಂದಲೂ, ಪುಷ್ಪಗಳಿರುವ ಕುಂಭದ ಜಲವನ್ನು ಪುಷ್ಪವತೀ ಎಂಬ ಮಂತ್ರ ದಿಂದಲೂ ಅಭಿಷೇಕಮಾಡಬೇಕು. ಫಲಗಳಿರುವ ಕುಂಭದ ಜಲವನ್ನೂ ಇದೇ ಮಂತ್ರದಿಂದ ಅಭಿಷೇಕ ಮಾಡಬೇಕು. ಸುಗಂಧದ್ರವ್ಯಗಳಿರುವ ಕುಂಭದ ಜಲವನ್ನು ಗಂಧದ್ವಾರಾಂ ಎಂಬ ಮಂತ್ರದಿಂದ ಅಭಿಷೇಕಮಾಡಬೇಕು.

೨೦–೨೧. ಈ ರೀತಿ ಸ್ನಾನಮಾಡಿ ಶುಭಕರವಾಗಿಯೂ ಶುಭ್ರವಾಗಿಯೂ ಇರುವ ವಸ್ತ್ರಯುಗ್ಮವನ್ನು ಧರಿಸಿ ಪೂರ್ಣಕುಂಭವೇ ಮೊದಲಾದ ಮಂಗಲವಸ್ತು ಗಳನ್ನು ಸ್ಪರ್ಶಮಾಡಬೇಕು. ತುಪ್ಪದಲ್ಲಿ ಪ್ರತಿಫಲಿತವಾದ ತನ್ನ ಮುಖವನ್ನು ನೋಡಿ ಶುಭ್ರವಾದ ಕನ್ನಡಿಯಲ್ಲಿಯೂ ಮುಖವನ್ನು ನೋಡಿ ಅನಂತರ ಹರಿಯನ್ನು ಪೂಜಿಸಬೇಕು. ವೈಷ್ಣವ ಮಂತ್ರಗಳಿಂದ ಅಗ್ನಿಯಲ್ಲಿ ಹೋಮವನ್ನೂ ಮಾಡಬೇಕು.

೨೨–೨೩. ಅನಂತರ ಆ ಅಭಿಷೇಕಸ್ನಾನಕ್ಕೆ ಉತ್ತರದಿಕ್ಕಿನಲ್ಲಿ ಅಗ್ನಿಯನ್ನು ಪ್ರತಿಷ್ಠಿಸಬೇಕು. (ಈ ವಾಕ್ಯವು ಮೊದಲು ಇರಬೇಕೆಂದು ತೋರುತ್ತದೆ. ಹೋಮ ಮಾಡಿದ ಅನಂತರ ಅಗ್ನಿಪ್ರತಿಷ್ಠೆಗೆ ಫಲವಿಲ್ಲ. ಅರ್ಥಕ್ರಮದ ಪ್ರಾಬಲ್ಯದಿಂದ ಲಾದರೂ ಹೀಗೆಯೇ ಅರ್ಥವನ್ನು ಗ್ರಹಿಸಬೇಕು.) ಹಿಂದೆ ಹೇಳಿರುವ ಚರ್ಮದ

ಶ್ವೇತಾನುಲೇಪನಃ ಸ್ರಗ್ವೀ ಮಂಗಲ್ಯಾಭರಣಸ್ತಥಾ ।
ನಿವಿಶೇತಾಸನೇ ತಸ್ಮಿನ್ ಸಭಾರ್ಯೋ ಭೃಗುನಂದನ ॥ ೨೩ ॥

ಗಂಧದ್ವಾರೇತಿಮಂತ್ರೇಣ ತಸ್ಯ ರೋಚನಯಾ ತತಃ ।
ಕಂಠೇ ಮೂರ್ಧ್ನಿ ತತಃ ಕುರ್ಯಾತ್ತಿಲಕಂ ಬ್ರಾಹ್ಮಣಃ ಸ್ವಯಂ ॥ ೨೪ ॥

ಯೇನ ದೇವಾ ಜ್ಯೋತಿಷೇತಿ ದರ್ಭಾಗ್ರೈರ್ಬ್ರಾಹ್ಮಣಸ್ತತಃ ।
ಪಾದತಸ್ತು ಪ್ರಭೃತ್ಯೇನಂ ಸರ್ವಾಂಗೇಷು ಪ್ರಮಾರ್ಜಯೇತ್ ॥ ೨೫ ॥

ಗುರವೇ ದಕ್ಷಿಣಾಂ ದದ್ಯಾದ್ಬ್ರಾಹ್ಮಣೇಭ್ಯಶ್ಚ ಶಕ್ತಿತಃ ।
ಗಂಧರತ್ನಾಜ್ಯಮಾಲ್ಯಾನಿ ಕನಕಂ ರಜತಂ ತಥಾ ॥ ೨೬ ॥

ಶತಚ್ಛಿದ್ರಂ ಚ ತತ್ಪಾತ್ರಂ ಗುರವೇ ವಿನಿವೇದಯೇತ್ ।
ಮಂಗಲಾಲಂಭನಂ ಕೃತ್ವಾ ಗತಪಾಪೋ ದ್ವಿಜಾಶಿಷಾ ॥ ೨೭ ॥

---

ವ್ಯವಸ್ಥೆಯಿಂದ ಕೂಡಿದ ಭದ್ರಾಸನವನ್ನು ಶುಭಕರವಾದ ಪ್ರದೇಶದಲ್ಲಿ ಇಟ್ಟು ಶುಭ್ರವಾದ ಗಂಧಮಾಲ್ಯಾದಿಗಳಿಂದಲೂ ಮಂಗಲಾಭರಣಗಳಿಂದಲೂ ಕೂಡಿ ಆ ಆಸನದಲ್ಲಿ ಪತ್ನಿಯೊಡನೆ ಪುನಃ ಕುಳಿತುಕೊಳ್ಳಬೇಕು.

೨೪-೨೫. ಆಗ ಬ್ರಾಹ್ಮಣನು ಗಂಧದ್ವಾರಾಂ ಎಂಬ ಮಂತ್ರದಿಂದ ಅವನ ಕಂಠದಲ್ಲಿಯೂ, ತಲೆಯಲ್ಲಿಯೂ ಸಹ ಗೋರೋಚನದಿಂದ ತಿಲಕವನ್ನು ತಾನೇ ಇಡಬೇಕು. ಅನಂತರ ಯೇನ ದೇವಾ ಜ್ಯೋತಿಷಾ ಎಂಬ ಮಂತ್ರದಿಂದ ಆ ಬ್ರಾಹ್ಮಣನೇ ಅವನ ಪಾದ ಮೊದಲು ತಲೆಯವರೆಗೂ ಎಲ್ಲಾ ಅಂಗಗಳನ್ನೂ ದರ್ಭಾಗ್ರದಿಂದ ಮಾರ್ಜನಮಾಡಬೇಕು.

೨೬-೨೭. ಗುರುವಿಗೆ ದಕ್ಷಿಣೆಯನ್ನು ಕೊಡಬೇಕು. ಬ್ರಾಹ್ಮಣರಿಗೂ ಸಹ ಯಥಾಶಕ್ತಿ, ಗಂಧ, ರತ್ನ, ಆಜ್ಯ, ಪುಷ್ಪಗಳು, ಚಿನ್ನ, ಬೆಳ್ಳಿ ನಾಣ್ಯಗಳು ಇವುಗಳನ್ನು ದಕ್ಷಿಣೆಯಾಗಿ ಕೊಡಬೇಕು. ಅನೇಕ ರಂಧ್ರವುಳ್ಳ ಸುವರ್ಣದ ಅಭಿಷೇಕ ಪಾತ್ರೆಯನ್ನು ಗುರುವಿಗೆ ಕೊಡಬೇಕು. ಅನಂತರ ಮಂಗಲಕರವಾದ ಪೂರ್ಣಕುಂಭವೇ ಮೊದಲಾದುವನ್ನು ಸ್ಪರ್ಶಮಾಡಿ ಬ್ರಾಹ್ಮಣರ ಆಶೀರ್ವಾದದಿಂದ ನಿಷ್ಪಾಪನಾಗಿ ಶಂಖ ಪುಣ್ಯಾಹವೇ ಮೊದಲಾದ ಮಂಗಲ ಘೋಷದೊಡನೆ ತನ್ನ ಮನೆಗೆ ಪ್ರವೇಶಿಸಬೇಕು

ಶಂಖಪುಣ್ಯಾಹ ಘೋಷೇಣ ಪ್ರವಿಶೇಚ್ಚ ಗೃಹಂ ಸ್ವಕಂ ।
ವಿನಾಪಿ ಭಾರ್ಯಯಾ ರಾಮ ಸ್ನಾನಂ ಕಾರ್ಯಮಿದಂ ತಥಾ ॥ ೨೮ ॥

ಸಪ್ತರಾತ್ರಮಿದಂ ಸ್ನಾನಂ ಸರ್ವಕಲ್ಮಷನಾಶನಂ ।
ಮಧು ಮಾಂಸಂ ತಥಾ ಕ್ಷೌದ್ರಂ ಮೈಥುನಂ ಚ ವಿವರ್ಜಯೇತ್ ॥ ೨೯ ॥

ಅಲಕ್ಷ್ಮೀಶಮನಂ ಪುಣ್ಯಂ ರಕ್ಷೋಘ್ನಂ ಬುದ್ಧಿವರ್ಧನಂ ।
ಆರೋಗ್ಯದಂ ದೀಪ್ತಿಕರಂ ಯಶಸ್ಯಂ ಶತ್ರುಸೂದನಂ ॥ ೩೦ ॥

ಮಂಗಲ್ಯಂ ಪಾಪಶಮನಂ ಕಲಿದುಸ್ಸ್ವಪ್ನನಾಶನಂ ।
ಬೃಹಸ್ಪತಿರಿದಂ ಚಕ್ರೇ ಸ್ನಾನಂ ಮಘವತಃ ಸ್ವಯಂ ।
ಬ್ರಹ್ಮಹತ್ಯಾಭಿಭೂತಸ್ಯ ವೃತ್ತೇ ವೃತ್ರವಧೇ ಪುರಾ ॥ ೩೧ ॥

---

೨೮-೩೦. ಪತ್ನಿಯು ಇಲ್ಲದೆಯೂ ಈ ಸ್ನಾನವನ್ನು ನಡೆಸಬಹುದು. ಸರ್ವಪಾಪನಾಶಕವಾದ ಈ ಸ್ನಾನವನ್ನು ಏಳು ರಾತ್ರಿ ಮಾಡತಕ್ಕದ್ದು. ಈ ಸ್ನಾನವನ್ನು ಮಾಡುವಾಗ ಮದ್ಯಮಾಂಸ ಮತ್ತು ಜೇನುತುಪ್ಪ ಇವನ್ನೂ ಸ್ತ್ರೀಸಂಗಮವನ್ನು ಸಹ ಬಿಡಬೇಕು. ಅಮಂಗಲವನ್ನು ನಾಶಪಡಿಸುವ ಪುಣ್ಯಕರವಾದ ಈ ಸ್ನಾನವು ರಾಕ್ಷಸನಾಶಕವಾಗಿಯೂ, ಬುದ್ಧಿಗೆ ಉತ್ತೇಜಕವಾಗಿಯೂ, ಆರೋಗ್ಯಪ್ರದವಾಗಿಯೂ, ಕಾಂತಿ, ಯಶಸ್ಸು, ಶತ್ರುನಾಶ ಮುಂತಾದ ಅನೇಕ ಫಲಗಳನ್ನೂ ಉಂಟುಮಾಡುತ್ತದೆ.

೩೧-೩೨. ಮಂಗಲಕರವಾಗಿಯೂ, ಸರ್ವಪಾಪನಾಶಕವಾಗಿಯೂ, ಕಲಿಯ ಸಂಬಂಧದಿಂದಲೂ ದುಸ್ವಪ್ನದಿಂದಲೂ ಉಂಟಾಗುವ ಎಲ್ಲಾ ದೋಷಗಳಿಗೂ ನಾಶಕವಾಗಿಯೂ ಇದೆ. ವೃತ್ರವಧದಿಂದ ಇಂದ್ರನು ಬ್ರಹ್ಮಹತ್ಯಾದೋಷದಿಂದ ದುಃಖಿಸುತ್ತಿರುವಾಗ ಬೃಹಸ್ಪತ್ಯಾಚಾರ್ಯನು ಈ ಸ್ನಾನವನ್ನು ಪೂರ್ವಕಾಲದಲ್ಲಿ ಇಂದ್ರನಿಗಾಗಿ ಮಾಡಿಸಿದನು ಆಗ ಈ ಸ್ನಾನದಿಂದ ನಿಷ್ಪಾಪನಾದ ಇಂದ್ರನುಮನುಷ್ಯ ಲೋಕದಲ್ಲಿಯೂ ಈ ಸ್ನಾನವು ಸರ್ವಪಾಪನಾಶಕವಾಗಿರಲೆಂದು ವರವನ್ನು ಕೊಟ್ಟನು.

ತತೋಽಸ್ಯ ದತ್ತಃ ಸ್ವಯಮೇವ ವಜ್ರಿಣಾ
ವರೋ ನೃಲೋಕೇಽಪಿ ವರೋಽಸ್ಯ ಕಾರಕಃ ।
ಕಾಮಾನಭೀಷ್ಟಾನ್ ಸಮವಾಪ್ಯ ಪೂಜಿತೋ
ಮಹೇಂದ್ರಲೋಕಂ ಸ ಸುಖೀ ಪ್ರಯಾಸ್ಯತಿ ॥ ೩೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಬಾರ್ಹಸ್ಪತ್ಯಸ್ನಾನವರ್ಣನಂ ನಾಮ ತ್ರ್ಯುತ್ತರಶತತಮೋಽಧ್ಯಾಯಃ

---

ಈ ಸ್ನಾನವನ್ನು ಮಾಡಿದವನು ಎಲ್ಲಾ ಮನೋರಥಗಳನ್ನೂ ಈ ಲೋಕದಲ್ಲಿ ಹೊಂದಿ ಸುಖಿಯಾಗಿದ್ದು ಎಲ್ಲರಿಂದಲೂ ಸತ್ಕರಿಸಲ್ಪಟ್ಟು ಇಂದ್ರಲೋಕಕ್ಕೆ ಹೋಗಿ ಅಲ್ಲಿಯೂ ಸುಖಿಯಾಗಿರುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಬಾರ್ಹಸ್ಪತ್ಯಸ್ನಾನವೆಂಬ ನೂರ ಮೂರನೆಯ ಅಧ್ಯಾಯವು ಮುಗಿದಿದೆ.



## ನೂರ ಮೂರನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿಯೂ, ಬಾರ್ಹಸ್ಪತ್ಯಸ್ನಾನವೆಂಬ ಕಾಮ್ಯಕರ್ಮವನ್ನು ಸಪರಿಕರವಾಗಿ ನಿರೂಪಿಸಿರುವರು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಚತುರುತ್ತರಶತತಮೋऽಧ್ಯಾಯಃ

**|| ರಾಮ ಉವಾಚ ||**

**ಸ್ನಾನಮನ್ಯತ್ಸಮಾಚಕ್ಷ್ವ ಭಗವನ್ ದುರಿತಾಪಹಂ ।**
**ಸಕೃದೇವ ಕೃತಂ ಯತ್ತು ಪಾಪೇಭ್ಯೋ ವಿಪ್ರ ಮೋಕ್ಷಯೇತ್ || ೧ ||**

**|| ಪುಷ್ಕರ ಉವಾಚ ||**

**ರಾಜಯಕ್ಷ್ಮಾಭಿಭೂತೇಷು ವಿಷಮಜ್ವರಿತೇಷು ಚ ।**
**ಛಾಯೋನ್ಮಾದೋಪತಪ್ತೇಷು ವಿಷಮಜ್ವರಿತೇಷು ಚ || ೨ ||**

**ವಿನಾಯಕಗ್ರಹಾರ್ತೇಷು ಮೂಢಚಿತ್ತೇಷ್ವತೀವ ಚ ।**
**ಯೇಷಾಂ ನ ಸಿಧ್ಯತೇ ವಿದ್ಯಾ ಸಸ್ಯಂ ಯೇಷಾಂ ನ ರೋಹತಿ || ೩ ||**

---

### ನೂರ ನಾಲ್ಕನೇ ಅಧ್ಯಾಯ.

೧. ಭಾರ್ಗವನು ಪ್ರಶ್ನೆ ಮಾಡುತ್ತಾನೆ:—ಪೂಜ್ಯನೇ ಯಾವ ಸ್ನಾನವು ಒಂದು ಸಲ ಆಚರಿಸಿದರೂ ಸಹ ದೋಷಗಳನ್ನು ಹೋಗಲಾಡಿಸಿ ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಉಂಟುಮಾಡಬಲ್ಲದೋ ಅಂತಹ ಮತ್ತೊಂದು ಸ್ನಾನವನ್ನು ದಯವಿಟ್ಟು ಹೇಳು. ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಕ್ಷಯರೋಗದಿಂದ ಪೀಡಿತರಾಗಿರುವವರಿಗೂ, ಅದರಿಂದುಂಟಾದ ವಿಷಮಜ್ವರದಿಂದ ದುಃಖಪಡುವವರಿಗೂ, ಛಾಯಾರೋಗದಿಂದಲೂ, ಉನ್ಮಾದ (ಹುಚ್ಚು) ದಿಂದಲೂ ವಿಷಮಜ್ವರದಿಂದಲೂ, ದುಃಖಿಸುವವರಿಗೂ, ಗ್ರಹವಿಶೇಷಗಳಿಂದ ದುಃಖಪಡುವವರಿಗೂ, ಬಹಳ ಮಂದಬುದ್ಧಿಗಳಿಗೂ ಶ್ರಮಪಟ್ಟರೂ ವಿದ್ಯೆಯನ್ನು ಹೊಂದದಿರುವವರಿಗೂ, ಹಾಗೆಯೇ ಪ್ರಯತ್ನಿಸಿದರೂ ಸಸ್ಯಫಲವನ್ನು ಹೊಂದಿರುವವರಿಗೂ ಮತ್ತು

ಸೀದೇದ್ಯಸ್ಯ ಕುಟುಂಬಂ ಚ ಪಣ್ಯಂ ನಾಯೊತಿ ವಿಕ್ರಯಂ ।
ನ ಲಭೇತ್ತು ಜಯಂ ಯುದ್ಧೇ ಬಲವಾನಪಿ ಯೋ ನರಃ ॥ ೪ ॥

ಯುಕ್ತಾನ್ಯಪಿ ಚ ಕಾರ್ಯಾಣಿ ವಿಪದ್ಯಂತೇ ಪುನಃಪುನಃ ।
ಕಲಹಶ್ಚ ಭವೇದ್ಯೇಷಾಂ ಸುಹೃತ್ಸ್ವಜನ ಬಾಂಧವೈಃ ॥ ೫ ॥

ಗರ್ಭಃ ಪ್ರಸ್ರವತೇ ಯಸ್ಯಾ ಜಾತೋ ವಾಪಿ ವಿನಶ್ಯತಿ ।
ಪುಷ್ಪಂ ಯಸ್ಯಾಃ ಕ್ಷಯಂ ಯಾತಿ ನ ಚ ಕಿಂಚಿತ್ಪ್ರಜಾಯತೇ ॥ ೬ ॥

ಗೃಹ್ಣಾತಿ ಯಾ ನ ಬೀಜಂ ಚ ಜನಯೇದ್ವಾಪ್ಯಮಾನುಷಾನ್ ।
ನಾಪ್ನೋತಿ ಚ ಪತಿಂ ಕನ್ಯಾ ತಸ್ಮಾತ್ಸ್ನೇಹಮಥಾಪಿ ವಾ ॥ ೭ ॥

ಸೌಭಾಗ್ಯಂ ಚ ನಚಾಯೊತಿ ಸುಹೃತ್ಸ್ವಜನಬಂಧುಷು ।
ಏವಮುಕ್ತೇಷು ಚಾನ್ಯೇಷು ತ್ವನುಕ್ತೇಷು ಚ ಭಾರ್ಗವ ॥ ೮ ॥

---

೪-೫. ಯಾವನ ಸಂಸಾರವು ಅಥವಾ ಗೃಹಿಣಿಯು ದಿನದಿನಕ್ಕೂ ಕ್ಷಯಿಸು ತ್ತಿರುವುದೋ, ಯಾವನಿಗೆ ಪಣ್ಯವಸ್ತುಗಳಿದ್ದರೂ ವ್ಯಾಪಾರವೇ ಆಗುವುದಿಲ್ಲವೋ ಯಾವನು ಬಲಿಷ್ಠನಾಗಿದ್ದರೂ ಸಹ ಯುದ್ಧದಲ್ಲಿ ಜಯಶಾಲಿಯಾಗುವುದೇ ಇಲ್ಲವೋ ಯಾವನಿಗೆ ಸರಿಯಾಗಿ ನಡೆಸಿದ ಕೆಲಸಗಳೂ ಸಹ ಫಲಕಾರಿಯಾಗದೇ ಪುನಃಪುನಃ ನಾಶಹೊಂದುತ್ತವೆಯೋ, ಯಾರಿಗೆ ಸಭ್ಯವೃತ್ತಿಯಲ್ಲಿದ್ದರೂ ಸ್ನೇಹಿತರಿಂದಲೂ, ಸ್ವಜನರಿಂದಲೂ, ಬಂಧುಗಳಿಂದಲೂ ಕಲಹವು ತಪ್ಪುವುದೇ ಇಲ್ಲವೋ ಮತ್ತು,

೬-೭. ಯಾವ ಸ್ತ್ರೀಗೆ ಗರ್ಭವೇ ನಿಲ್ಲದೆ ಸ್ರಾವಹೊಂದುತ್ತದೆಯೋ ನಿಂತರೂ ಹುಟ್ಟಿದೊಡನೆಯೇ ಮಕ್ಕಳು ಸಾಯುವುವೋ, ಯಾವ ಸ್ತ್ರೀಗೆ ಋತುವೇ ನಾಶವಾಗಿ ಪ್ರಜೋತ್ಪತ್ತಿಯೇ ಉಂಟಾಗುವುದಿಲ್ಲವೋ, ಯಾವ ಸ್ತ್ರೀಯು ಗರ್ಭ ಧಾರಣೆಗೆ ಅರ್ಹವಾದ ವೀರ್ಯವನ್ನೇ ಧರಿಸುವುದಿಲ್ಲವೋ, ಧರಿಸಿದರೂ ಮನುಷ್ಯ ರಲ್ಲದ ಪ್ರಾಣಿಗಳನ್ನು ಪ್ರಸವಿಸುತ್ತಾಳೆಯೋ, ಯಾವ ಕನ್ಯೆಯು ಅಭಿಮತನಾದ ಪತಿಯನ್ನು ಹೊಂದದಿರುವಳೋ, ಹೊಂದಿದರೂ ಆ ಪತಿಯ ಪ್ರೀತಿಗೆ ಪಾತ್ರಳಾಗದೆ ಇರುವಳೋ, ಮತ್ತು

೮-೯. ಯಾವನು ಸ್ನೇಹಿತರಲ್ಲಿಯೂ ಬಂಧುಗಳಲ್ಲಿಯೂ ಸೌಭಾಗ್ಯಶಾಲಿ ಯಾಗಿರುವುದಿಲ್ಲವೋ, ಇಂತಹ ದೋಷಗಳನ್ನೂ ನಾವು ಇಲ್ಲಿ ಹೇಳದಿರುವ ಇತರ

ಪ್ರಸಮೀಕ್ಷ್ಯ ವಿಧಾನಜ್ಞಃ ಸ್ನಾನಮೇತತ್ಸಮಾಚರೇತ್ ।
ಸ್ನಾಪಯೇತ್ಸರಿತಸ್ತೀರೇ ಗ್ರಹಾವಿಷ್ಟಾನ್ವಿಚಕ್ಷಣಃ ॥ ೯ ॥

ರಾಜಯಕ್ಷ್ಮಾಭಿಭೂತಾ ಯೇ ವಿಷಮಜ್ವರಿತಾಶ್ಚ ಯೇ ।
ತೇಷಾಂ ದೇವಾಲಯೇ ಸ್ನಾನಂ ಕುರ್ಯಾದ್ವಾ ಸಿದ್ಧಸೇವಿತೇ ॥ ೧೦ ॥

ಛಾಯೋನ್ಮಾದೋಪತಪ್ತಾ ಯೇ ಯೇಽಪಸ್ಮಾರಶೋಷಿಣಃ ।
ತೇಷಾಂ ಮುನಿಗಣಾವಾಸೇ ತೀರ್ಥೇ ವಾ ಸ್ನಾನಮಿಷ್ಯತೇ ॥ ೧೧ ॥

ವಿನಾಯಕಗ್ರಹಾರ್ತಾ ಯೇ ಯೇ ಚ ಮೂಢಾ ವಿಚೇತಸಃ ।
ಸಜ್ಜನಾಚರಿತೇ ದೇಶೇ ತೇಷಾಂ ಸ್ನಾನಂ ವಿಧೀಯತೇ ॥ ೧೨ ॥

ತ್ರೈವಿದ್ಯಾ ಯೇ ನ ಸಿದ್ಧ್ಯಂತಿ ಗುಣಾಯೇಷಾಂ ಪ್ರಪೂಜಿತಾಃ ।
ತೇಷಾಂ ಸ್ನಾನಮಿಹೋದ್ದಿಷ್ಟಂ ಸಿದ್ಧದೇವಸ್ಯ ಮಂದಿರೇ ॥ ೧೩ ॥

---

ದೋಷಗಳನ್ನೂ ಗಮನಿಸಿ ಬುದ್ಧಿಶಾಲಿಯಾದವನು ತಕ್ಕ ವಿಧಾನವನ್ನು ತಿಳಿದು ಇಲ್ಲಿ ಹೇಳಿರುವ ಸ್ನಾನಗಳನ್ನು ಮಾಡಿಸಬೇಕು. ಗ್ರಹಗಳ ಆಕ್ರಮಣದಿಂದ ದುಃಖಪಡುವವರಿಗೆ ಸ್ನಾನವನ್ನು ನದಿಯ ತೀರದಲ್ಲಿ ಮಾಡಿಸಬೇಕು.

೧೦–೧೧. ಯಾರು ಕ್ಷಯರೋಗದಿಂದ ನರಳುತ್ತಾರೆಯೋ ವಿಷಮಜ್ವರದಿಂದ ದುಃಖಪಡುತ್ತಾರೆಯೋ ಅಂತಹವರಿಗೆ ದೇವಾಲಯದಲ್ಲಾಗಲಿ, ಸಿದ್ಧರ ಗುಹೆಗಳಲ್ಲಾಗಲಿ ಸ್ನಾನಮಾಡಿಸಬೇಕು. ಯಾರು ಛಾಯಾರೋಗದಿಂದಲೂ ಉನ್ಮಾದದಿಂದಲೂ ದುಃಖಪಡುತ್ತಾರೆಯೋ ಮತ್ತು ಮೂರ್ಛಾರೋಗದಿಂದ ಕೃಶರಾಗಿರುವರೋ ಅವರಿಗೆ ಮುನಿಗಳ ಆಶ್ರಮದಲ್ಲಾಗಲಿ ಪುಣ್ಯತೀರ್ಥಗಳಲ್ಲಿಯಾಗಲಿ ಸ್ನಾನ ಮಾಡಿಸಬೇಕು.

೧೨–೧೩. ಯಾರು ಗ್ರಹದೇವತೆಗಳಿಂದ ದುಃಖಪಡುತ್ತಾರೆಯೋ, ಯಾರು ಸರಿಯಾದ ಬುದ್ಧಿಯಿಲ್ಲದೆ ಜ್ಞಾನಾಜ್ಞಾನದಿಂದಿರುತ್ತಾರೆಯೋ ಅವರಿಗೆ ಸತ್ಪುರುಷರು ವಾಸಿಸುವ ಸ್ಥಳಗಳಲ್ಲಿ ಸ್ನಾನಮಾಡಿಸಬೇಕು. ಯಾರು ವೇದವಿದ್ಯೆಯನ್ನು ಹೊಂದಿದ್ದರೂ ಗಣ್ಯರಾಗಿರುವುದಿಲ್ಲವೋ ಅವರ ಗುಣಗಳಿಗೂ ಗೌರವವಿರುವುದಿಲ್ಲವೋ ಅಂತಹವರಿಗೆ ಸಿದ್ಧರಿಂದ ಪ್ರತಿಷ್ಠಿತವಾದ ದೇವಾಲಯಗಳಲ್ಲಿ ಸ್ನಾನಮಾಡಿಸಬೇಕು.

ಯೇಷಾಂ ನಾಸ್ತಿ ಜಯೋ ಯುದ್ಧೇ ಯೇಷಾಂ ಸ್ವಜನಸಂಕ್ಷಯಃ ।
ಕಾಂತಾರೇ ವಾ ವನೇ ತೀರ್ಥೇ ತೇಷಾಂ ಸ್ನಾನಂ ಪ್ರಶಸ್ಯತೇ ॥ ೧೪ ॥

ಸತತಂ ಕಲಹೋ ಯೇಷಾಂ ಜಾಯತೇ ಚ ಯತಸ್ತತಃ ।
ತ್ರಿಪಥೇ ವಾ ತಡಾಗೇ ವಾ ಸ್ನಾನಂ ತೇಷಾಂ ಪ್ರಕಲ್ಪಯೇತ್ ॥ ೧೫ ॥

ಪದ್ಮಿನ್ಯಾಂ ಸ್ನಾಪಯೇನ್ನಾರೀಂ ಗರ್ಭೋ ಯಸ್ಯಾಃ ಸ್ರವೇತ್ತಥಾ ।
ಅಶೋಕಸನ್ನಿಧೌ ಸ್ನಾಪ್ಯಾ ಜಾತೋ ಯಸ್ಯಾ ವಿನಶ್ಯತಿ ॥ ೧೬ ॥

ನ ಚ ಗೃಹ್ಣಾತಿ ಯಾ ಶುಕ್ರಂ ಸ್ನಾಪ್ಯಾ ಸಾ ಸಫಲೇ ತರೌ ।
ಮಹೋದಧಿತಟೇ ಸ್ನಾಪ್ಯಾ ಯದಾಪತ್ಯಂ ವಿನಶ್ಯತಿ ॥ ೧೭ ॥

ಅಮಾನುಷಾನ್ಯಾ ಜನಯೇತ್ಸ್ನಾಪಯೇತ್ತಾಂ ಚತುಷ್ಪಥೇ ।
ಯಾದೃಶಂ ಯಾ ಚ ಭರ್ತಾರಂ ನ ಲಭೇತ ವರಾಂಗನಾ ॥ ೧೮ ॥

---

೧೪-೧೫. ಯಾರಿಗೆ ಯುದ್ಧದಲ್ಲಿ ಜಯವೇ ಉಂಟಾಗುವುದಿಲ್ಲವೋ, ಯಾರಿಗೆ ಸ್ವಜನರ ನಾಶವೇ ಆಗಾಗ ಉಂಟಾಗುತ್ತಿದೆಯೋ ಅವರಿಗೆ ದುರ್ಗಮವಾದ ಕಾಡಿನಲ್ಲಾಗಲಿ ಸಾಮಾನ್ಯವಾದ ವನದಲ್ಲಿಯೇ ಆಗಲಿ, ತೀರ್ಥಗಳಲ್ಲಿಯೇ ಆಗಲಿ, ಸ್ನಾನಮಾಡಿಸುವುದು ಪ್ರಶಸ್ತ. ಯಾರಿಗೆ ಯಾವಾಗಲೂ ಯಾರಿಂದಲಾದರೂ ಕಲಹವು ತಪ್ಪದೆ ಉಂಟಾಗುತ್ತದೆಯೋ ಅಂತಹವರಿಗೆ ಮೂರು ದಾರಿ ಸೇರುವ ಸ್ಥಳದಲ್ಲಿಯಾಗಲಿ, ಕೆರೆಯಲ್ಲಿರುವಾಗಲಿ ಸ್ನಾನಮಾಡಿಸಬೇಕು.

೧೬-೧೭. ಯಾವ ಸ್ತ್ರೀಗೆ ಗರ್ಭಸ್ರಾವವುಂಟಾಗುತ್ತದೆಯೋ ಅವಳನ್ನು ಕಮಲ ಸರೋವರದಲ್ಲಿ ಸ್ನಾನಮಾಡಿಸಬೇಕು. ಯಾವ ಸ್ತ್ರೀಗೆ ಹುಟ್ಟಿದ ಮಕ್ಕಳು ಸಾಯುವವೋ ಅವಳನ್ನು ಅಶೋಕ ಮರದ ಕೆಳಗೆ ಸ್ನಾನಮಾಡಿಸಬೇಕು. ಯಾವಳು ಗರ್ಭೋತ್ಪಾದಕವಾದ ವೀರ್ಯವನ್ನೇ ಧರಿಸುವುದಿಲ್ಲವೋ ಅವಳನ್ನು ಫಲಬಿಟ್ಟಿರುವ ಮರದ ಕೆಳಗೆ ಸ್ನಾನಮಾಡಿಸಬೇಕು. ಯಾವಳಿಗೆ ಹುಟ್ಟಿದ ಮಕ್ಕಳು ಸಾಯುವವೋ ಅವಳನ್ನು ಸಮುದ್ರ ತೀರದಲ್ಲಿ ಸ್ನಾನಮಾಡಿಸಬೇಕು.

೧೮-೧೯. ಯಾವಳು ಪುರುಷರಲ್ಲದ ವಸ್ತುಗಳನ್ನು ಪ್ರಸವಿಸುತ್ತಾಳೆಯೋ ಅವಳಿಗೆ ನಾಲ್ಕು ಬೀದಿ ಸೇರುವ ಸ್ಥಳದಲ್ಲಿ ಸ್ನಾನಮಾಡಿಸಬೇಕು. ಯಾವಳು ತನ್ನ ರೂಪಿಗೆ ತಕ್ಕ ಪತಿಯನ್ನು ಹೊಂದದೆ ಇರುವಳೋ ಅವಳಿಗೆ ಏಕಲಿಂಗಕ್ಷೇತ್ರದಲ್ಲಾ

ಸ್ನಾಪಯೇದೇಕಲಿಂಗೇ ವಾ ಸ್ಥಾನೇ ವಾ ವೃಕ್ಷಸಂಕುಲೇ ।
ರೂಪಲಾವಣ್ಯಯುಕ್ತಾ ಯಾ ಸೌಭಾಗ್ಯಂ ಯಾ ನ ವಿಂದತಿ ॥ ೧೯ ॥

ಸ್ನಾನಂ ವೃದ್ಧಿಕರಂ ತಸ್ಯಾಃ ವೇಶ್ಯಾಗಾರೇ ಪ್ರಕಲ್ಪಯೇತ್ ।
ಅನ್ಯೇಷಾಮಥ ಕರ್ತವ್ಯಂ ಸದಾ ಸ್ನಾನಂ ಮನೋಹರಂ ॥ ೨೦ ॥

ಸಮೇ ಸಜ್ಜನಸಂಕೀರ್ಣೇ ಶುಚೌ ದೇಶೇ ವಿಕಂಟಕೇ ।
ಸಹಾಯೈಃ ಪ್ರಯತೈಃ ಸಾರ್ಧಮಹೋರಾತ್ರೋಷಿತೋ ದ್ವಿಜಃ ॥ ೨೧ ॥

ಸ್ನಾನಕರ್ಮ ಪ್ರಯುಂಜೀತ ಸೋಪವಾಸಸ್ಯ ಮಾನದ ।
ಅಹೋರಾತ್ರಾಸಮರ್ಥಸ್ಯ ಕಾರ್ಯಂ ವಾ ಹವಿಷಾಶನಂ ॥ ೨೨ ॥

ಶರದ್ವಸಂತಯೋಃ ಕಾರ್ಯಂ ಸ್ನಾನಂ ಸ್ವಸ್ಥಸ್ಯ ಭಾರ್ಗವ ।
ಸರ್ವಕಾಲೇಷ್ವಥಾರ್ತಸ್ಯ ಗ್ರಹವ್ಯಾಧಿನಿಬರ್ಹಣಂ ॥ ೨೩ ॥

---

ಗಲಿ ಮರಗಳಿಂದ ನಿಬಿಡವಾಗಿರುವ ಪ್ರದೇಶವಲ್ಲಿಯಾಗಲಿ ಸ್ನಾನಮಾಡಿಸಬೇಕು. ರೂಪಲಾವಣ್ಯಗಳಿದ್ದರೂ ಯಾವಳು ಪತಿಯ ಪ್ರೀತಿಯನ್ನು ಗಳಿಸುವುದಿಲ್ಲವೋ ಅವಳಿಗೆ ವೇಶ್ಯಾಗೃಹದಲ್ಲಿ ಸ್ನಾನಮಾಡಿಸುವುದು ಪ್ರಶಸ್ತ.

೨೦–೨೨. ಇತರರಿಗೆಲ್ಲಾ ಸಜ್ಜನರಿಂದ ಕೂಡಿರುವ ಕಂಟಕಗಳಿಲ್ಲದಿರುವ ಶುಚಿಯಾದ ಸಮಭೂಮಿಯಲ್ಲಿ ರಮ್ಯವಾದ ಈ ಸ್ನಾನವನ್ನು ಮಾಡಿಸಬೇಕು. ಹೀಗೆ ಮಾಡಿಸುವ ಬ್ರಾಹ್ಮಣನು ಶುದ್ಧರಾದ ಸಹಾಯಕರೊಡನೆ ತಾನು ಅಹೋರಾತ್ರವೂ ಉಪವಾಸವಿದ್ದು ಮಾಡಬೇಕು. ಯಾರಿಗೆ ಸ್ನಾನಕರ್ಮವನ್ನು ಮಾಡಬೇಕೋ ಅಂತಹ ಫಲಾರ್ಥಿಯಾದವನೂ ಸಹ ಉಪವಾಸವಿರಬೇಕು. ಒಂದು ವೇಳೆ ಅವನು ಅಹೋರಾತ್ರವೂ ಉಪವಾಸಮಾಡಲು ಅಶಕ್ತನಾಗಿದ್ದಲ್ಲಿ ಹವಿಸ್ಸಿನಿಂದ ಮಾತ್ರ (ಕ್ಷಾರಲವಣವರ್ಜನದಿಂದ) ಅವನು ಭೋಜನಮಾಡಬೇಕು.

೨೩–೨೪. ಆರೋಗ್ಯದಿಂದಿರುವವನಿಗೆ ಶರದೃತು ಮತ್ತು ವಸಂತ ಋತುಗಳಲ್ಲಿಯೂ, ವ್ಯಾಧಿಗ್ರಸ್ತನಾಗಿರುವವನಿಗೆ ಗ್ರಹ ಮತ್ತು ವ್ಯಾಧಿಗಳ ನಾಶಕ್ಕಾಗಿ ಮಾಡುವ ಸ್ನಾನವನ್ನು ಸರ್ವಕಾಲದಲ್ಲಿಯೂ ಮಾಡಿಸಬೇಕು. ಬ್ರಾಹ್ಮಣನನ್ನು

ಮುಹೂರ್ತೇ ತತ್ರ ಸಾವಿತ್ರೇ ಬ್ರಾಹ್ಮಣಂ ಸ್ನಾಪಯೇದ್ದ್ವಿಜ ।
ಮೈತ್ರೇಥ ವಿಜಯೇ ಚೈವ ರಾಜನ್ಯಂ ಸ್ನಾಪಯೇತ್ತಥಾ ॥ ೨೪ ॥

ವೈಶ್ಯಂ ಪೈತಾಮಹೇ ಶೂದ್ರಂ ಶೇಷೇಷು ಸ್ನಾಪಯೇತ್ತಥಾ ।
ಪಂಚಮೀ ಸಪ್ತಮೀ ಶ್ರೇಷ್ಠಾ ಸ್ನಪನೇ ಬ್ರಾಹ್ಮಣಸ್ಯ ಚ ॥ ೨೫ ॥

ತ್ರಯೋದಶೀ ತೃತೀಯಾ ಚ ಕ್ಷತ್ರಿಯಸ್ಯ ವಿಶಿಷ್ಯತೇ ।
ದ್ವಿತೀಯಾ ದಶಮೀ ಚೈವ ತಥಾ ವೈಶ್ಯಸ್ಯ ಮಾನದ ॥ ೨೬ ॥

ಷಷ್ಠೀ ಚತುರ್ದಶೀ ಚೈವ ಶೂದ್ರಾಣಾಂ ಸ್ನಾನಕರ್ಮಣಿ ।
ಏಕಾದಶೀ ದ್ವಾದಶೀ ಚ ತಥಾ ಕೃಷ್ಣಚತುರ್ದಶೀ ॥ ೨೭ ॥

ಸರ್ವೇಷಾಮೇವ ವರ್ಣಾನಾಂ ಸ್ನಾನಕರ್ಮಣಿ ಪೂಜಿತಾ ।
ಧ್ರುವೇಷು ವೈಷ್ಣವೇ ಪುಷ್ಯೇ ರೇವತ್ಯಾಂ ಭಗದೈವತೇ ॥ ೨೮ ॥

ಹಸ್ತೇ ಪುನರ್ವಸೌ ಸೌಮ್ಯೇ ಜ್ಯೇಷ್ಠಾಯಾಮಥವಾರುಣೇ ।
ಧನಿಷ್ಠಾಯಾಂ ತಥಾ ಸ್ನಾನಂ ಸರ್ವೇಷಾಮೇವ ಪೂಜಿತಂ ॥ ೨೯ ॥

---

ಸಾವಿತ್ರ ಮುಹೂರ್ತದಲ್ಲಿಯೂ ವಿಜಯಫಲಾರ್ಥಿಯಾದ ರಾಜನನ್ನು ವಿಜಯ ಮತ್ತು ಮೈತ್ರ ಮುಹೂರ್ತದಲ್ಲಿಯೂ ಸ್ನಾನಮಾಡಿಸಬೇಕು.

೨೫–೨೬. ವೈಶ್ಯನನ್ನು ಪೈತಾಮಹ ಮುಹೂರ್ತದಲ್ಲಿಯೂ ಶೂದ್ರನನ್ನು ಇತರ ಮುಹೂರ್ತಗಳಲ್ಲಿಯೂ ಸ್ನಾನಮಾಡಿಸಬೇಕು. ಬ್ರಾಹ್ಮಣನ ಸ್ನಾನಕ್ಕೆ ಪಂಚಮಿ ಮತ್ತು ಸಪ್ತಮಿ ತಿಥಿಗಳು ಶ್ರೇಷ್ಠವಾದುವು. ಕ್ಷತ್ರಿಯನಿಗೆ ತೃತೀಯಾ ಮತ್ತು ತ್ರಯೋದಶೀ ತಿಥಿಗಳು ಪ್ರಶಸ್ತ. ವೈಶ್ಯನಿಗೆ ದ್ವಿತೀಯಾ ಮತ್ತು ದಶಮೀ ತಿಥಿಗಳು ಉತ್ತಮ.

೨೭–೨೯. ಶೂದ್ರರಿಗೆ ಷಷ್ಠೀ, ಚತುರ್ದಶೀ ತಿಥಿಗಳು ಸ್ನಾನಕ್ಕೆ ಅರ್ಹವಾಗುತ್ತವೆ. ಏಕಾದಶೀ, ದ್ವಾದಶೀ, ಕೃಷ್ಣಚತುರ್ದಶೀ ಇವು ಎಲ್ಲಾ ವರ್ಣಗಳಿಗೂ ಸಾಮಾನ್ಯವಾಗಿ ಈ ಸ್ನಾನಕರ್ಮಕ್ಕೆ ಉತ್ತಮವಾದುವು. ಧ್ರುವಮುಹೂರ್ತದಲ್ಲಿ ಶ್ರವಣ, ಪುಷ್ಯ, ರೇವತಿ, ಪೂರ್ವಫಲ್ಗುನಿ, ಹಸ್ತ, ಪುನರ್ವಸು, ಮೃಗಶಿರಾ, ಜ್ಯೇಷ್ಠಾ, ಶತಭಿಷೆ, ಧನಿಷ್ಠೆ ಈ ನಕ್ಷತ್ರಗಳು ಎಲ್ಲರಿಗೂ ಸಾಮಾನ್ಯವಾಗಿ ಸ್ನಾನಕ್ಕೆ ಅರ್ಹವಾಗುತ್ತವೆ.

ವೇತ್ರಾಸನಂ ಭದ್ರಪೀಠಂ ವೈದಲಂ ದಾರವಂ ತಥಾ ।
ವರ್ಣಾನಾಮಾನುಪೂರ್ವ್ಯೇಣ ಪರಿಕೀರ್ತಿತಮಾಸನಂ ॥ ೩೦ ॥

ಕೃಷ್ಣಾಜಿನಂ ಚ ವೈಯಾಘ್ರಂ ರೌರವಂ ಬಾಸ್ತಮೇವ ಚ ।
ಪಾದೋಪಧಾನಂ ವರ್ಣಾನಾಮಾನುಪೂರ್ವ್ಯೇಣ ಕಲ್ಪಯೇತ್ ॥ ೩೧ ॥

ವೃಷಾಶ್ವರಥಪೃಷ್ಠೇ ಚ ಗಜಪೃಷ್ಠೇ ತಥೈವ ಚ ।
ನರಸ್ಕಂಧೇ ಙ್ಗನಾಂಕೇ ವಾ ಸ್ನಾಪಯೇಚ್ಛಿಶೂನ್ ॥ ೩೨ ॥

ಸ್ನಾತುಕಾಮಸ್ಯ ತಸ್ಯಾಥ ಪೂರ್ವಮುತ್ಸಾದನಂ ಸ್ಮೃತಂ ।
ಯೈರ್ದ್ರವ್ಯೈರ್ಭೃಗುಶಾರ್ದೂಲ ತಾನಿ ವಕ್ಷ್ಯಾಮ್ಯತಃ ಪರಂ ॥ ೩೩ ॥

ಪುನರ್ನವಾಂ ರೋಚನಾಂ ಚ ಶತಾಹ್ವಾಗುರುಣೀಂ ತ್ವಚಂ ।
ಮಧೂಕಂ ಚ ರಜನ್ಯೌ ದ್ವೇ ತಗರಂ ನಾಗಕೇಸರಂ ॥ ೩೪ ॥

---

೩೦-೩೧. ಬ್ರಾಹ್ಮಣ, ಕ್ಷತ್ರಿಯ, ವೈಶ, ಶೂದ್ರರ ವರ್ಣಕ್ರಮಕ್ಕೆ ತಕ್ಕಂತೆ ಬೆತ್ತದ ಆಸನ, ಭದ್ರಾಸನ. ಬಿದಿರಿನ ಆಸನ, ಮರದ ಆಸನ ಇವನ್ನು ಕ್ರಮವಾಗಿ ಆಯಾಯ ವರ್ಣಗಳಿಗೆ ಉಪಯೋಗಿಸಬೇಕು. ಹಾಗೆಯೇ ವರ್ಣಕ್ರಮಕ್ಕೆ ತಕ್ಕಂತೆ ಕಾಲಿನ ದಿಂಬಿಗೂ ಕೃಷ್ಣಾಜಿನ, ಹುಲಿಯಚರ್ಮ, ಸಾರಂಗದಚರ್ಮ, ಆಡಿನಚರ್ಮ ಇವನ್ನು ಉಪಯೋಗಿಸಬೇಕು.

೩೨-೩೩. ಸಣ್ಣಮಕ್ಕಳುಗಳಿಗೆ ಸ್ನಾನಮಾಡಿಸಬೇಕಾದ ಪ್ರಸಂಗದಲ್ಲಿ ಎತ್ತು, ಕುದುರೆ, ರಥ, ಆನೆ ಇವುಗಳ ಮೇಲೆ ಕೂರಿಸಿಯೂ ಅಥವಾ ಮನುಷ್ಯನ ಹೆಗಲಿನ ಮೇಲೆಯಾಗಲಿ, ತಾಯಿಯ ತೊಡೆಯಮೇಲೆಯಾಗಲಿ ಕುಳ್ಳಿರಿಸಿ ಸ್ನಾನಮಾಡಿಸಬೇಕು. ಸ್ನಾನಮಾಡತಕ್ಕವನು ಮೊದಲು ತನ್ನ ಮೈಯ್ಯನ್ನು ಚೊಕ್ಕಟವಾಗಿ ತೊಳೆದುಕೊಳ್ಳಬೇಕು. ಹಾಗೆ ತೊಳೆದುಕೊಳ್ಳುವ ಕಾಲದಲ್ಲಿ ಉಪಯೋಗಿಸತಕ್ಕ ಪದಾರ್ಥಗಳನ್ನು ಹೇಳುತ್ತೇನೆ ಕೇಳು.

**೩೪-೩೬.** ಕೊಮ್ಮೆಯಗಿಡ, ಗೋರೋಚನ, (ನಂದ್ಯಾವರ್ತ) ನಾರಾಯಣಿ ಮತ್ತು ಅಗುರುಗಿಡಗಳ ಚಕ್ಕೆ, ಹಿಪ್ಪೆಹೂವು, ಅರಿಶಿನ, ನಂದ್ಯಾವರ್ತ, ನಾಗಸಂಪಿಗೆ, ಆಸುರೀಬೇರು, ಆನೆಬೇಲ, ಜಟಾಮಾಂಸಿ, ಇಂಗು, ಚಂದನ, ನವಣೆ, ಸಾಸವೆ,

ಆಸುರೀಂ ಸರ್ಜಿಕಾಂ ಚೈವ ಮಾಂಸೀಂ ರಾಮಠಚಂದನೇ ।
ಪ್ರಿಯಂಗುಂ ಸರ್ಷಪಾನ್ಕುಷ್ಠಂ ಕುಂಕುಮಂ ಬಹುಪುತ್ರಿಕಾಂ ॥ ೩೫ ॥

ಬಲೇಂದ್ರಹಸ್ತೀಂ ಬ್ರಾಹ್ಮೀಂ ಚ ಪಂಚಗವ್ಯಂ ತಥೈವ ಚ ।
ಸಕ್ತುನಾ ಮಿಶ್ರಯಿತ್ವಾ ಚ ಕಾರ್ಯಮುದ್ವರ್ತನಂ ಭವೇತ್ ॥ ೩೬ ॥

ತತಃ ಸ್ನಾನದಿನೇ ಪ್ರಾಪ್ತೇ ಪ್ರಾಗ್ವದುತ್ಸಾದಯೇತ್ಪುನಃ ।
ತತೋ ಮನೋಹರೇ ದೇಶೇ ಮಂಡಲಂ ಕಲ್ಪಯೇದ್ಬುಧಃ ॥ ೩೭ ॥

ಚತುರಸ್ರಂ ಗೋಮಯೇನ ಸರ್ವತೋಽಷ್ಟದಿಶಂ ಸಮಂ ।
ಸತೋರಣಂ ಚತುರ್ದ್ವಾರಂ ಪ್ರಾಕಾರೈರುಪಶೋಭಿತಂ ॥ ೩೮ ॥

ತತ್ರ ಮಧ್ಯೇ ಲಿಖೇತ್ಪದ್ಮಂ ಅಷ್ಟಪತ್ರಂ ಸುಶೋಭಿತಂ ।
ಕರ್ಣಿಕಾಯಾಂ ಲಿಖೇದ್ವಿಷ್ಣುಂ ಮೇಘಾಭಂ ಪೀತವಾಸಸಂ ॥ ೩೯ ॥

---

ಚಂಗಲುಕೋಷ್ಠ, ಕುಂಕುಮಕೇಸರೀ, ಶತಮೂಲೀಬೇರು, ಕಳ್ಳಂಗಡಲೆ, ಲಕ್ಕೀಗಿಡ, ಹೊನಗೊನ್ನೆ ಮತ್ತು ಪಂಚಗವ್ಯ ಇವುಗಳನ್ನು ಅರಳು ಹಿಟ್ಟಿನಲ್ಲಿ ಮಿಶ್ರಮಾಡಿ ಮೈಯನ್ನು ಉಜ್ಜಿ ಸ್ನಾನಮಾಡಬೇಕು.

೩೭-೩೮. ಮೊದಲು ಈ ರೀತಿ ಸ್ನಾನಮಾಡಿದ್ದವನು ಸ್ನಾನದ ದಿನವು ಬಂದ ಮೇಲೆ ಪುನಃ ಮೊದಲಿನಂತೆಯೇ ಈ ದ್ರವ್ಯಗಳಿಂದ ಕೂಡಿದ ಅರಳಿನ ಹಿಟ್ಟಿನಲ್ಲಿ ಸ್ನಾನಮಾಡಬೇಕು. ಅನಂತರ ರಮ್ಯವಾದ ಪ್ರದೇಶದಲ್ಲಿ ಮಂಡಲವನ್ನೇರ್ಪಡಿಸ ಬೇಕು. ಸಗಣಿಯಿಂದ ಸಾರಿಸಿ ಎಂಟು ದಿಕ್ಕುಗಳಲ್ಲಿಯೂ ಒಂದೇ ಸಮವಾಗಿರು ವಂತೆ ನಾಲ್ಕು ಮೂಲೆಯುಳ್ಳ ಆ ಮಂಡಲವು ನಾಲ್ಕು ದ್ವಾರಗಳಿಂದಲೂ ಪ್ರಾಕಾರ ತೋರಣಗಳಿಂದಲೂ ಅಲಂಕರಿಸಲ್ಪಟ್ಟಿರಬೇಕು.

೩೯-೪೦. ಆ ಮಂಡಲದ ಮಧ್ಯದಲ್ಲಿ ಎಂಟು ದಳಗಳುಳ್ಳ ರಮ್ಯವಾದ ಪದ್ಮವನ್ನು ಬರೆಯಬೇಕು. ಆ ಪದ್ಮದ ಕರ್ಣಿಕೆಯ (ಮಧ್ಯ) ಭಾಗದಲ್ಲಿ ನೀಲ ಮೇಘವರ್ಣನಾಗಿಯೂ, ಪೀತಾಂಬರಧಾರಿಯಾಗಿಯೂ, ಕೌಸ್ತುಭದಿಂದ ಕೂಡಿದ ವಿಶಾಲ ವಕ್ಷವುಳ್ಳವನಾಗಿಯೂ, ಶಂಖಚಕ್ರಗದಾಪಾಣಿಯಾಗಿಯೂ ಇರುವ ವಿಷ್ಣು

ಕೌಸ್ತುಭೋದ್ಭಾಸಿತೋರಸ್ಕಂ ಶಂಖಚಕ್ರಗದಾಧರಂ ।
ಬ್ರಹ್ಮಾಣಂ ದಕ್ಷಿಣೇ ನ್ಯಸ್ಯ ಪದ್ಮವರ್ಣಂ ಸಮಾಲಿಖೇತ್ ॥ ೪೦ ॥

ಅಜಿನಾಂಬರಸಂಯುಕ್ತಂ ಶ್ವೇತಯಜ್ಞೋಪವೀತಿನಂ ।
ರಜತಾಭ್ರನಿಭಂ ವಾಮೇ ಭಾಗೇ ರುದ್ರಂ ಸಮಾಲಿಖೇತ್ ॥ ೪೧ ॥

ವ್ಯಾಘ್ರಚರ್ಮಾಂಬರಧರಂ ತ್ರಿನೇತ್ರಂ ಶೂಲಧಾರಿಣಂ ।
ಪೂರ್ವಪತ್ರೇ ಲಿಖೇಚ್ಛಕ್ರಂ ಸವಜ್ರಂ ಚ ಸುದರ್ಶನಂ ॥ ೪೨ ॥

ಗಜಪೃಷ್ಠಾಧಿರೂಢಂ ತು ಸ್ವರ್ಣಾಭಂ ಪೀತವಾಸಸಂ ।
ಪ್ರಾಗ್ದಕ್ಷಿಣೇ ತಥಾ ಪತ್ರೇ ಲಿಖೇದ್ವಹ್ನಿಂ ಮಹಾಪ್ರಭಂ ॥ ೪೩ ॥

ಧೂಮಾಭವಸನಂ ದೇವಂ ಶುಕಯಾನಗತಂ ಪ್ರಭುಂ ।
ಅತಸೀಪುಷ್ಪಸಂಕಾಶಂ ಪೀತಾಂಬರಧರಂ ಶುಭಂ ॥ ೪೪ ॥

---

ವನ್ನು ಬರೆಯಬೇಕು. ಅವನ ಬಲಭಾಗದಲ್ಲಿ ಚತುರ್ಮುಖ ಬ್ರಹ್ಮನನ್ನು ಬರೆದು ಅವನಿಗೆ ಪದ್ಮದವರ್ಣವನ್ನು ಹಾಕಬೇಕು.

೪೧-೪೨. ಕೃಷ್ಣಾಜಿನದ ವಸ್ತ್ರದಿಂದ ಕೂಡಿಯೂ ಬಿಳುಪಾದ ಯಜ್ಞೋಪವೀತದಿಂದ ಶೋಭಿತನಾಗಿಯೂ ಆ ಬ್ರಹ್ಮನು ಇರಬೇಕು. ಬೆಳ್ಳಿಯ ಮೇಘದಂತೆ ಶುಭ್ರನಾಗಿ ಇರುವ ರುದ್ರದೇವನನ್ನು ಎಡಭಾಗದಲ್ಲಿ ಬರೆಯಬೇಕು. ಆ ರುದ್ರನು ಹುಲಿಯ ಚರ್ಮವನ್ನು ಹೊದ್ದು ಶೂಲಧಾರಿಯಾಗಿಯೂ ತ್ರಿನೇತ್ರನಾಗಿಯೂ ಇರಬೇಕು. ಆ ಕಮಲದ ಪೂರ್ವಭಾಗದ ದಳದಲ್ಲಿ ವಜ್ರಾಯುಧವನ್ನು ಧರಿಸಿರುವ ಇಂದ್ರನನ್ನೂ ಬರೆಯಬೇಕು.

೪೩-೪೪. ಆ ಇಂದ್ರನು ಐರಾವತವೆಂಬ ಗಜಾಧಿರೂಢನಾಗಿಯೂ, ಪೀತಾಂಬರಧಾರಿಯಾಗಿಯೂ ಸುವರ್ಣದಂತೆ ಪ್ರಕಾಶಮಾನನಾಗಿಯೂ ಇರಬೇಕು. ಅಗ್ನಿದಿಕ್ಕಿನ ಆ ಕಮಲಪತ್ರದಲ್ಲಿ ಗಿಣಿಯನ್ನೇ ವಾಹನವನ್ನು ಹೊಂದಿ ಹೊಗೆಯಂತೆ ಮಲಿನವಾದ ವಸ್ತ್ರವುಳ್ಳ ಮಹಾತೇಜಸ್ವಿಯಾದ ಅಗ್ನಿಯನ್ನು ಬರೆಯಬೇಕು. ಅನಂತರ ಆ ಪದ್ಮದ ದಕ್ಷಿಣಭಾಗದ ದಳದಲ್ಲಿ ಅಗಸೆ ಹೂವಿನ ಬಣ್ಣವುಳ್ಳ ಪೀತಾಂಬರ ಧಾರಿಯಾದ ಯಮನನ್ನು ಬರೆಯಬೇಕು, ಆ ಯಮನೂ ಸಹ ಮಹಿಷವಾಹನನಾಗಿಯೂ ದಂಡಾಯುಧ ಧಾರಿಯಾಗಿಯೂ ಇರಬೇಕು.

ಸದಂಡಂ ಮಹಿಷಾರೂಢಂ ಲಿಖೇತ್ಪತ್ರೇ ತು ದಕ್ಷಿಣೇ ।
ಉಷ್ಟ್ರಾರೂಢಂ ವಿರೂಪಾಕ್ಷಂ ಲಿಖೇದ್ದಕ್ಷಿಣಪಶ್ಚಿಮೇ ॥ ೪೫ ॥

ರಕ್ತಾಂಬರಧರಂ ಕೃಷ್ಣಂ ಖಡ್ಗಪಾಣಿಂ ವಿಭೀಷಣಂ ।
ಪಶ್ಚಿಮೇ ವರುಣಂ ದೇವಂ ಸಪಾಶಂ ಹಂಸವಾಹನಂ ॥ ೪೬ ॥

ಸಶುಕ್ಲವಸನಂ ದೇವಂ ಸ್ವಚ್ಛವೈಡೂರ್ಯಸನ್ನಿಭಂ ।
ಪಶ್ಚಿಮೋತ್ತರತೋ ವಾಯುಂ ವಾಯುಮಂಡಲಮಧ್ಯಗಂ ॥ ೪೭ ॥

ಲಿಖೇಚ್ಛುಭ್ರಾಂಬರಂ ಶ್ವೇತಂ ಸರ್ವಾಭರಣಭೂಷಿತಂ ।
ಕುಬೇರಮುತ್ತರೇ ಪತ್ರೇ ವ್ಯೋಮಯಾನಗತಂ ಲಿಖೇತ್ ॥ ೪೮ ॥

ಕವಚೋತ್ತಮಸಂಯುಕ್ತಂ ಗದಿನಂ ಕಮಲಪ್ರಭಂ ।
ವೃಷಾರೂಢಮಥೇಶಾನಂ ಪತ್ರೇ ಪೂರ್ವೋತ್ತರೇ ಲಿಖೇತ್ ॥ ೪೯ ॥

---

೪೫–೪೬. ನೈರುತ್ಯ ದಿಕ್ಕಿನ ದಳದಲ್ಲಿ ಒಂಟೆಯ ಮೇಲೆ ಕುಳಿತಿರುವ ವಿರೂಪಾಕ್ಷನಾದ ನಿಋುಋುತಿಯನ್ನು ಬರೆಯಬೇಕು. ಈ ನಿಋುಋುತಿಯು ಕೆಂಪು ವರ್ಣದ ವಸ್ತ್ರವನ್ನುಟ್ಟು ಖಡ್ಗಪಾಣಿಯಾಗಿಯೂ ಕಪ್ಪಾಗಿ ಭಯಂಕರನಾಗಿಯೂ ಇರಬೇಕು. ಆ ಪದ್ಮದ ಪಶ್ಚಿಮ ಭಾಗದ ದಳದಲ್ಲಿ ಹಂಸವಾಹನನಾಗಿಯೂ, ಪಾಶಾಯುಧಧಾರಿಯಾಗಿಯೂ ಇರುವ ವರುಣನನ್ನು ಬರೆಯಬೇಕು. ಆ ವರುಣನು ಬಿಳುಪಾದ ವಸ್ತ್ರವನ್ನುಟ್ಟು ವೈಢೂರ್ಯವರ್ಣದಿಂದ ಪ್ರಕಾಶಿಸುತ್ತಿರಬೇಕು.

೪೭–೪೮. ವಾಯುವ್ಯ ದಿಕ್ಕಿನ ದಳದಲ್ಲಿ ವಾಯುಮಂಡಲ ಮಧ್ಯದಲ್ಲಿರುವ ವಾಯುವನ್ನು ಬರೆಯಬೇಕು. ಆ ವಾಯುವೂ ಶುಭ್ರವಸ್ತ್ರಧಾರಿಯಾಗಿಯೂ, ಶುಭ್ರವರ್ಣನಾಗಿಯೂ ಸರ್ವಾಭರಣಗಳಿಂದ ಕೂಡಿಯೂ ಇರಬೇಕು. ಉತ್ತರ ದಿಕ್ಕಿನಲ್ಲಿ ವಿಮಾನಾರೂಢನಾಗಿರುವ ಕುಬೇರನನ್ನು ಬರೆಯಬೇಕು. ಆ ಕುಬೇರನೂ ಸಹ ಶ್ರೇಷ್ಠವಾದ ಕವಚವನ್ನು ಧರಿಸಿ ಗದಾಯುಧಧಾರಿಯಾಗಿ ಕಮಲವರ್ಣದಂತೆ ಪ್ರಕಾಶಿಸುತ್ತಿರಬೇಕು.

೪೯–೫೦. ಈಶಾನ್ಯದಿಕ್ಕಿನ ದಳದಲ್ಲಿ ವೃಷಭಾರೂಢನಾದ ರುದ್ರನನ್ನು ಬರೆಯಬೇಕು. ಆ ರುದ್ರನು ಹುಲಿಯಚರ್ಮವನ್ನು ಹೊದ್ದು ಬಾಲಚಂದ್ರನನ್ನು

**ವ್ಯಾಘ್ರಚರ್ಮಾಂಬರಧರಂ ಬಾಲಚಂದ್ರವಿಭೂಷಿತಂ ।**
**ಚತುರ್ಭಿಃ ಸಾಗರೈಃ ಪದ್ಮಂ ಚತುರಸ್ರಂ ಸಮಂತತಃ ॥ ೫೦ ॥**

**ಯಾದೋಗಣಯುತೈಶ್ಚೈವ ಕ್ರಮೇಣ ಪರಿವಾರಯೇತ್ ।**
**ಸಾಗರಾಣಾಂ ತು ಪೂರ್ವೇಣ ಲಿಖೇತ್ಪದ್ಮಂ ಮನೋಹರಂ ॥ ೫೧ ॥**

**ತತಶ್ಚಕ್ರಂ ತಥಾ ದಂಡಂ ವಜ್ರಂ ಮಕರಮೇವ ಚ ।**
**ಶಕ್ತಿಂ ಧ್ವಜಂ ತ್ರಿಶೂಲಂ ತು ಕ್ರಮೇಣೈವ ತು ವಿನ್ಯಸೇತ್ ॥ ೫೨ ॥**

**ತತಃ ಪ್ರಾಕಾರಸಂಲಗ್ನಾನಿಷೂನ್ ದ್ವಾದಶ ವಿನ್ಯಸೇತ್ ।**
**ಚತುರಃ ಸೂಕ್ತಿಷು ತಥಾ ದ್ವಾರೇಷ್ವಷ್ಟೌ ಭೃಗೂತ್ತಮ ॥ ೫೩ ॥**

**ಸುಸಂಹತಾನ್ಸಮಾನ್ ಶ್ಲಕ್ಷ್ಣಾನ್ಸುರಂಗಾನ್ಪತ್ರನಿರ್ಗತಾನ್ ।**
**ವ್ಯಾಮಾರ್ಧಸಮ್ಮಿತಾಂಸ್ತೀಕ್ಷ್ಣಾನ್ಪಾರ್ಶ್ವೇ ತನ್ವವಿಭೂಷಿತಾನ್ ॥ ೫೪ ॥**

---

ಧರಿಸಿರಬೇಕು. ಹೀಗೆ ಬರೆದ ನಂತರ ಆ ಪದ್ಮದ ನಾಲ್ಕುಕಡೆಗಳಲ್ಲಿಯೂ, ಜಲಚರಜಂತುಗಳೊಡನೆ ಕೂಡಿರುವ ನಾಲ್ಕು ಸಮುದ್ರಗಳನ್ನೂ ಆಯಾಯ ದಿಕ್ಕಿನ ಕ್ರಮಕ್ಕೆ ತಕ್ಕಂತೆ ಬರೆದು ಸಮುದ್ರದಿಂದ ಸುತ್ತುವರಿದಿರುವಂತೆ ಬರೆಯಬೇಕು.

೫೧–೫೨. ಆ ಸಮುದ್ರಗಳಲ್ಲಿ ಪೂರ್ವದಿಕ್ಕಿನ ಸಮುದ್ರವನ್ನು ಪ್ರಾರಂಭಿಸಿ ಕ್ರಮವಾಗಿ ಎಂಟು ದಿಕ್ಕುಗಳಲ್ಲಿಯೂ, ಪದ್ಮ, ಚಕ್ರ, ದಂಡ, ವಜ್ರ, ಮಕರ, ಶಕ್ತಿ, ಧ್ವಜ, ತ್ರಿಶೂಲ ಇವುಗಳನ್ನು ಬರೆಯಬೇಕು. ಅನಂತರ ಪ್ರಾಕಾರ ದೇಶಗಳಿಗೆ ಸೇರಿದಂತೆ ಹನ್ನೆರಡು ಬಾಣಗಳನ್ನು (ಬರೆಯಬೇಕು) ನೆಡಬೇಕು.

೫೩–೫೪. ಆ ಹನ್ನೆರಡು ಬಾಣಗಳಲ್ಲಿ ನಾಲ್ಕು ದಿಕ್ಕಿಗೂ ನಾಲ್ಕನ್ನೂ ನಾಲ್ಕು ಬಾಗಿಲುಗಳಲ್ಲಿಯೂ ಎರಡೆರಡರಂತೆ ಎಂಟು ಬಾಣಗಳನ್ನೂ ನಾಟಬೇಕು. ಆ ಬಾಣಗಳು ಒಂದರಿಂದೊಂದಕ್ಕೆ ಸರಿಯಾಗಿಯೂ, ನುಣುಪಾಗಿಯೂ, ತೀಕ್ಷ್ಣವಾಗಿಯೂ, ಗರಿಗಳಿಲ್ಲದೆಯೂ, ಅರ್ಧಮಾರುದ್ದವಾಗಿಯೂ, ಪಾರ್ಶ್ವಪ್ರದೇಶದಲ್ಲಿ ನುಣುಪಾಗಿಯೂ ಇರಬೇಕು. ಆ ಬಾಣಗಳಲ್ಲಿ ಐದುವರ್ಣದ ದಾರವನ್ನು ಕಟ್ಟಬೇಕು.

ಪಂಚರಂಗಂ ತತಃ ಸೂತ್ರಂ ಬಧ್ನೀಯಾತ್ತೇಷು ಭಾರ್ಗವ ।
ಅರುಂಧನ್ ದ್ವಾರಮಾರ್ಗಾಂಸ್ತು ಸುದೃಢಂ ಸುಮನೋಹರಂ ॥ ೫೫ ॥

ವಿತಾನಂ ಮಂಡಲೀಕುರ್ಯಾಚ್ಛ್ವೇತವರ್ಣಂ ಮನೋಹರಂ ।
ಧ್ವಜಂ ಛತ್ರಾಣಿ ಖಡ್ಗಾಂಶ್ಚ ಘಂಟಾದರ್ಶಾಂಶ್ಚತುರ್ದಿಶಂ ॥ ೫೬ ॥

ಪ್ರಾಕಾರೋಪರಿದಂಡೇಷು ಸುದೃಢೇಷ್ವನಿರೋಧಯೇತ್ ।
ಸ್ನಾನೇ ಮಂಡಲಕಾನ್ ಕುರ್ಯಾತ್ಪ್ರಾಕಾರಸ್ಯ ತತೋ ಬಹಿಃ ॥ ೫೭ ॥

ತ್ರಿಸಮಾನ್ಪ್ರಗುಶಾರ್ದೂಲ ಚತುರಸ್ರಾನ್ಮನೋಹರಾನ್ ।
ಜ್ವಾಲಾಮಾಲ್ಯಾರ್ಘ್ಯರಚಿತಾನ್ ದಿಶಾಸು ವಿದಿಶಾಸು ಚ ॥ ೫೮ ॥

ಸ್ನಾನಮಂಡಲಕಾನಾಂ ತು ಸಮೀಪೇಷು ಸಮಂತತಃ ।
ಗಾವಃ ಸವತ್ಸಾಃ ಸಂಸ್ಥಾಪ್ಯಾಃ ವೃಷಭಾಶ್ಚ ಸುಪೂಜಿತಾಃ ॥ ೫೯ ॥

---

೫೫–೫೬. ದ್ವಾರಗಳ ಮಾರ್ಗಕ್ಕೆ ತಡೆ ಇಲ್ಲದಂತೆ ಮನೋಹರವಾಗಿಯೂ ದೃಢವಾಗಿಯೂ ಇರುವ ಮೇಲು ಚಪ್ಪರವನ್ನು ಮಂಡಲಾಕಾರವಾಗಿ ಬಿಳುಪಾದ ವರ್ಣದಿಂದ ಮಾಡಬೇಕು. ಆ ಪ್ರಕಾರದ ಮೇಲ್ಭಾಗದಲ್ಲಿ ದೃಢವಾಗಿರುವ ದಂಡಗಳಿಗೆ ತಡೆಯಾಗದಂತೆ ನಾಲ್ಕು ದಿಕ್ಕುಗಳಲ್ಲಿಯೂ ಧ್ವಜ, ಛತ್ರ, ಖಡ್ಗ, ಘಂಟೆ, ಕನ್ನಡಿ ಇವುಗಳಿಂದ ಅಲಂಕರಿಸಬೇಕು.

೫೭–೫೮. ಆ ಪ್ರಕಾರದ ಹೊರಭಾಗದಲ್ಲಿ ಸ್ನಾನಕ್ಕಾಗಿ ಮಂಡಲಗಳನ್ನು ಮಾಡಬೇಕು. ಅವು ನಾಲ್ಕು ಮೂಲೆಗಳುಳ್ಳವುಗಳಾಗಿಯೂ, ಉದ್ದ, ಅಗಲ, ಎತ್ತರಗಳಲ್ಲಿ ಒಂದೇ ಸಮನಾಗಿಯೂ, ರಮ್ಯವಾಗಿಯೂ, ಇರಬೇಕು. ದಿಕ್ಕುಗಳಲ್ಲಿಯೂ, ವಿದಿಕ್ಕುಗಳಲ್ಲಿಯೂ, ದೀಪಜ್ವಾಲೆಗಳಿಂದಲೂ, ಹೂವಿನಮಾಲಿಕೆಗಳಿಂದಲೂ, ಆ ಮಂಡಲಗಳನ್ನು ಪೂಜಿಸಿರಬೇಕು. ಮತ್ತು ಅಂತಹ ಸ್ನಾನಮಂಡಲಗಳ ಸಮೀಪದಲ್ಲಿ ಸುತ್ತಲೂ.

೫೯–೬೦ ಕರುಗಳಿಂದ ಕೂಡಿದ ಹಸುಗಳನ್ನೂ ಹೋರಿಗಳನ್ನೂ ಇಟ್ಟು ಪೂಜಿಸಬೇಕು. ಮರಿಗಳೊಡನೆ ಆಡುಗಳನ್ನೂ ಜೀವಿಸಿರುವ ಪಕ್ಷಿಗಳನ್ನೂ ಅಲ್ಲಿ ಇಟ್ಟಿರಬೇಕು. ಆ ಪ್ರಾಕಾರದ ಉತ್ತರಭಾಗದಲ್ಲಿ ಅಗ್ನಿಗೋಸ್ಕರ ರಮ್ಯವಾದ

ಅಜಾಶ್ಚಾರ್ಭಕಸಂಪನ್ನಾಃ ಜೀವನ್ಮೋಕ್ಷಾಶ್ಚ ಪಕ್ಷಿಣಃ ।
ಪ್ರಾಕಾರಸ್ಯೋತ್ತರೇ ಭಾಗೇ ವೇದಿಂ ಕುರ್ಯಾತ್ಸುಶೋಭಿತಾಂ ॥ ೬೦ ॥

ದರ್ಭೈರಾಚ್ಛಾದ್ಯ ತಾನ್ಸರ್ವಾನ್ಸಲಿಲೇನ ಸಮುಕ್ಷಯೇತ್ ।
ತತ್ರಾಗ್ನಿಂ ಜುಹುಯಾನ್ಮಂತ್ರೈರ್ಮಹಾವ್ಯಾಹೃತಿಪೂರ್ವಕಂ ॥ ೬೧ ॥

ಯಥೋಕ್ತದೇವತಾಲಿಂಗೈಸ್ತಥಾ ಮಂತ್ರೈಶ್ಚ ಭಾರ್ಗವ ।
ಓಂಕಾರೇಣ ತಥಾಸ್ತ್ರಾಣಾಂ ನಾಮಯುಕ್ತೇನ ವೈ ಪೃಥಕ್ ॥ ೬೨ ॥

ಅಶ್ವತ್ಥೋದುಂಬರಪ್ಲಕ್ಷ ಬಿಲ್ವಾರ್ಕಖದಿರಾಃ ಶಮೀ ।
ಸ್ವರಾಹ್ವಯಮಪಾಮಾರ್ಗಂ ಪಲಾಶಯವಕಾನ್ಯಪಿ ॥ ೬೩ ॥

ವಂಶಿಕಾಚಾಶ್ವಗಂಧಾ ಚ ಕದಂಬಶ್ಚಾರ್ಜುನಾಸನೌ ।
ಏತೇಷಾಂ ಸಮಿಧಃ ಶಸ್ತಾಃ ಕಿಷ್ಕುಮಾತ್ರಾಃ ಘೃತಪ್ಲುತಾಃ ॥ ೬೪ ॥

ಏಕೈಕಮಷ್ಟ್ಯಷ್ಟಶತಂ ಹವ್ಯಂ ಸರ್ಷಪಸಂಯುತಂ ।
ತಿಲಾನ್ಯವಾಂಸ್ತಥಾಕ್ಷೋಟಾನ್ ಲಾಜಾಂಶ್ಚಾಗ್ನೌ ಸಮಾವಪೇತ್ ॥ ೬೫ ॥

---

ವೇದಿಕೆಯನ್ನು ನಿರ್ಮಿಸಬೇಕು. ಆ ವೇದಿಕೆಯನ್ನೂ ಮಂಡಲಗಳನ್ನೂ ದರ್ಭೆಗಳಿಂದ ಮುಚ್ಚಿ ಜಲದಿಂದ ಪ್ರೋಕ್ಷಿಸಬೇಕು.

೬೧-೬೨. ಆ ವೇದಿಕೆಯಲ್ಲಿ ಮಹಾವ್ಯಾಹೃತಿಪೂರ್ವಕವಾಗಿ ಆಯಾಯ ದೇವತೆಗಳ ಲಿಂಗಗಳಿಂದ ಕೂಡಿರುವ ಮಂತ್ರಗಳಿಂದ ಅಗ್ನಿಗೆ ಹೋಮಮಾಡಬೇಕು. ಅಸ್ತ್ರಗಳಿಗೂ ಕೂಡ ಓಂಕಾರಪೂರ್ವಕವಾದ ಆಯಾಯ ನಾಮಗಳಿಂದ ಬೇರೆಬೇರೆ ಹೋಮಮಾಡಬೇಕು.

೬೩-೬೪. ಅರಳಿ, ಅತ್ತಿ, ಜುಲ್ಲೀ, ಬಿಲ್ವ, ಎಕ್ಕ, ಕಗ್ಗಲಿ, ಬನ್ನಿ, ಸರ್ವೆ, ಉತ್ತರಣಿ, ಮುತ್ತುಗ, ಯವಕ, ಒಂದು ಜಾತಿಯ ಬಿದಿರು, ಅಶ್ವಗಂಧಾ, ಕಡಹ ಸಾಲ, ಹೊನ್ನೆ, ಈ ಮರಗಳ ಸಮಿತ್ತುಗಳು ಹೋಮಕ್ಕೆ ಪ್ರಶಸ್ತವಾದುವು. ಇವುಗಳನ್ನು ಒಂದು ಚೋಟು ಉದ್ದಕ್ಕೆ ಕತ್ತರಿಸಿ ಆಜ್ಯದಲ್ಲಿ ನೆನೆಸಿ ಹೋಮ ಮಾಡಬೇಕು.

೬೫-೬೬. ಈ ಸಮಿತ್ತುಗಳಲ್ಲಿ ಒಂದೊಂದನ್ನೂ ಎಂಟುನೂರು ಸಂಖ್ಯೆಯಲ್ಲಿ ಸಾಸವೆಯೊಡನೆ ಅಗ್ನಿಯಲ್ಲಿ ಹೋಮಮಾಡಬೇಕು. ಎಳ್ಳು, ಯವೆ, ತಾರೆಕಾಯಿ

ತತಶ್ಚ ಪಾಠಯೇಚ್ಛಾಂತಿಂ ಬ್ರಾಹ್ಮಣಾನ್ ಗುಣಸಂಯುತಾನ್ ।
ಅಭ್ಯರ್ಚ್ಯ ದಕ್ಷಿಣಾಭಿಶ್ಚ ಪುಷ್ಪಾಕ್ಷತಫಲೈಸ್ತಥಾ ॥ ೬೬ ॥

ತತಸ್ತು ಸ್ಥಾಪಯೇತ್ಕುಂಭಾನ್ ಮಂಡಲೇ ನಾಗರೋಪರಿ ।
ಯಥಾದಿಗ್ದೇವನಾಮಾಂಕಾನ್ ದಿಶಾಸು ವಿದಿಶಾಸು ಚ ॥ ೬೭ ॥

ಕಾಂಚನಾನ್ರಾಜತಾಂಸ್ತಾಮ್ರಾನಥವಾಪಿ ಮಹೀಮಯಾನ್ ।
ನಾಮಾನ್ಯಥೈಷಾಂ ವಕ್ಷ್ಯಾಮಿ ತಾನಿ ಮೇ ಗದತಃ ಶೃಣು ॥ ೬೮ ॥

ಭದ್ರಃ ಸುಭದ್ರಃ ಸಿದ್ಧಾರ್ಥಶ್ಚತುರ್ಥಃ ಪುಷ್ಟಿವರ್ಧನಃ ।
ಅಮೋಕಶ್ಚಿತ್ರಭಾನುಶ್ಚ ಪರ್ಜನ್ಯೋಽಥ ಸುದರ್ಶನಃ ॥ ೬೯ ॥

ವಾಪೀಕೂಪಸರಿದ್ಭ್ಯಶ್ಚ ಪೂಜಯಿತ್ವಾ ಜಲೇನ ತಾನ್ ।
ವನಸ್ಪತಿಸಮಾಯುಕ್ತಾನರ್ಘ್ಯಮಾಲ್ಯಾದಿಪೂಜಿತಾನ್ ॥ ೭೦ ॥

---

ಅರಳು ಇವನ್ನೂ ಅಗ್ನಿಯಲ್ಲಿ ಹೋಮಮಾಡಬೇಕು. ಅನಂತರ ಗುಣಶಾಲಿಗಳಾದ ಬ್ರಾಹ್ಮಣರನ್ನು ದಕ್ಷಿಣೆಯಿಂದ ಸಂತೋಷಪಡಿಸಿ ಪುಷ್ಪಫಲಾಕ್ಷತೆಗಳಿಂದ ಪೂಜಿಸಿ ಅವರಿಂದ ಶಾಂತಿ ಪಾಠವನ್ನು ಮಾಡಿಸಬೇಕು.

೬೭-೬೮. ಅನಂತರ ಅಲ್ಲಿ ಲಿಖಿತವಾಗಿರುವ ನಾಗರಗಳ ಮೇಲೆ ಮಂಡಲಗಳನ್ನು ಮಾಡಿ ಆ ಮಂಡಲಗಳಲ್ಲಿ ಕುಂಭಗಳನ್ನು ಸ್ಥಾಪಿಸಬೇಕು. ಆ ಕುಂಭಗಳು ದಿಕ್ಕುಗಳಲ್ಲಿಯೂ ವಿದಿಕ್ಕುಗಳಲ್ಲಿಯೂ ಆಯಾಯ ದಿಗ್ದೇವತೆಗಳ ನಾಮಗಳಿಂದ ಅಂಕಿತಗಳಾಗಿರಬೇಕು. ಆ ಕುಂಭಗಳು ವೈಭವಕ್ಕೆ ತಕ್ಕಂತೆ ಸುವರ್ಣರಜತಗಳಿಂದಾಗಲಿ ಅಥವಾ ತಾಮ್ರಮಯವಾಗಿಯೋ ಮೃತ್ತಿಕಾಮಯವಾಗಿಯೋ ಇರಬಹುದು. ಆ ಕುಂಭಗಳ ನಾಮಗಳನ್ನು ನಾನು ನಿರ್ದೇಶಮಾಡಿ ಹೇಳುತ್ತೇನೆ ಕೇಳು.

೬೯-೭೦. ಭದ್ರ, ಸುಭದ್ರ, ಸಿದ್ಧಾರ್ಥ, ಪುಷ್ಟಿವರ್ಧನ, ಅಮೋಕ, ಚಿತ್ರಭಾನು, ಪರ್ಜನ್ಯ, ಸುದರ್ಶನ ಈ ಹೆಸರಿನ ಎಂಟು ಕುಂಭಗಳಿರಬೇಕು. ಈ ಘಟಗಳನ್ನು ಭಾವಿ, ಕೊಳ, ನದಿ ಮುಂತಾದ ಜಲಪ್ರದೇಶದಿಂದ ಆ ಜಲದಿಂದ ತುಂಬಿ ಮಾವಿನ ಎಲೆಗಳೊಡನೆ ಗಂಧಪುಷ್ಪಾದಿಗಳಿಂದ ಪೂಜಿಸಿ.

ಮಂತ್ರಾನುಮಂತ್ರಿತಾನೇತಾಂಸ್ತತ್ರ ಮಂತ್ರಂ ನಿಬೋಧ ಮೇ ।
ಸ್ಥಾಪಯಂತು ಘಟಾನೇತಾನ್ಸಾಶ್ವಿರುದ್ರಮರುದ್ಗಣಾಃ ॥ ೭೧ ॥

ವಿಶ್ವೇದೇವಾಸ್ತಥಾದಿತ್ಯಾಃ ವಸವೋ ಮುನಯಸ್ತಥಾ ।
ಅಧಿಶ್ರಯಂತು ಸುಪ್ರೀತಾಃ ತಥಾನ್ಯಾ ಅಪಿ ದೇವತಾಃ ॥ ೭೨ ॥

ಏವಂ ಸಂಸ್ಥಾಪ್ಯ ತಾನ್ಕುಂಭಾನ್ ಸ್ಥಾಪ್ಯಾ ಮಂಡಲಕೇಷ್ವಥ ।
ಐಂದ್ರಾದಿಕ್ರಮಶಃ ಸ್ಥಾಪ್ಯಾಸ್ತ್ವಾಸನೇ ಪೂರ್ವಚೋದಿತೇ ॥ ೭೩ ॥

ಪೂರ್ವೇ ಮಂಡಲಕೇ ಸ್ಥಾಪ್ಯಃ ಶುಕ್ಲಪುಷ್ಪಾಂಬರಾನ್ವಿತಃ ।
ಸರ್ವತ್ರ ಗ್ರಾಹಯೇದ್ವಿಪ್ರೈರ್ವಕ್ಷ್ಯಮಾಣಗುಣಾನ್ ಘಟಾನ್ ॥ ೭೪ ॥

ಪ್ರತ್ಯೇಕಂ ಸ್ಯಾಚ್ಚತುರ್ಭಿಸ್ತು ದ್ವಾರಸ್ಯೋಪರಿ ಭಾರ್ಗವ ।
ಅಪಾಂಪೂರ್ಣಂ ಘಟಂ ತತ್ರ ಯಥಾಶಂ ಚ ಯಥಾ ಸ್ವಕಂ ॥ ೭೫ ॥

---

೭೧–೭೨. ಈ ಮಂತ್ರದಿಂದ ಅಭಿಮಂತ್ರಿಸಿ ತರಬೇಕು. ಆ ಮಂತ್ರವನ್ನೂ ಹೇಳುತ್ತೇನೆ ಕೇಳು. (ಸ್ಥಾಪಯನ್ನು ಮೊದಲು ದೇವತಾಃ ಎಂಬುವವರಿಗೆ ಮಂತ್ರ) ಅಶ್ವಿನೀದೇವತೆಗಳೂ ಮರುತ್ತುಗಳೂ ಈ ಘಟಗಳನ್ನು ಪ್ರತಿಷ್ಠೆಮಾಡಲಿ. ವಿಶ್ವೇದೇವತೆಗಳೂ, ರುದ್ರಗಣಗಳೂ, ಮರುತ್ತುಗಳೂ ಈ ಘಟಗಳನ್ನು ಪ್ರತಿಷ್ಠೆ ಮಾಡಲಿ ವಿಶ್ವೇದೇವತೆಗಳೂ, ದ್ವಾದಶಾದಿತ್ಯರೂ, ವಸುಗಳೂ, ಮುನಿಗಳೂ ಸಹ ಸಂತುಷ್ಟರಾಗಿ ಈ ಘಟದಲ್ಲಿ ಪ್ರತಿಷ್ಠೆಹೊಂದಲಿ.

೭೩–೭೪. ಈ ರೀತಿ ಅಭಿಮಂತ್ರಿಸಿ ಆ ಕುಂಭಗಳನ್ನು ಪ್ರತಿಷ್ಠೆಮಾಡಿ ಹಿಂದೆ ಹೇಳಿರುವ ಮಂಡಲಗಳಲ್ಲಿ ಆಸನಗಳನ್ನಿಟ್ಟು ಐಂದ್ರಾದಿ ದಿಕ್ಕುಗಳ ಕ್ರಮಕ್ಕೆ ತಕ್ಕಂತೆ ಇಡಬೇಕು. ಪೂರ್ವದಿಕ್ಕಿನ ಮಂಡಲದಲ್ಲಿ ಬಿಳಿಯಹೂವು ಮತ್ತು ವಸ್ತ್ರದಿಂದ ಕೂಡಿದ ಕುಂಭವನ್ನಿಡಬೇಕು. ಎಲ್ಲಾ ಮಂಡಲಗಳಲ್ಲಿಯೂ ಮುಂದೆ ಹೇಳುವ ಗುಣಗಳುಳ್ಳ ಕುಂಭಗಳನ್ನು ಬ್ರಾಹ್ಮಣರಿಂದ ಪ್ರತಿಷ್ಠಿಸಬೇಕು.

೭೫–೭೬. ಪ್ರತ್ಯೇಕವಾಗಿ ನಾಲ್ಕು ದ್ವಾರಗಳಿಗೂ ಮೇಲ್ಭಾಗದಲ್ಲಿ ಜಲದಿಂದ ಪೂರ್ಣವಾದ ಘಟಗಳನ್ನಿಡಬೇಕು ಆಯಾಯ ದಿಕ್ಕಿಗೆ ತಕ್ಕಂತೆ ಜಲದಿಂದ ಪೂರ್ಣವಾದ ಘಟಗಳನ್ನೆಲ್ಲಾ ಸ್ನಾನಮಾಡುವವನಿಗೆ ಸ್ನಾನವು ಹೇಗೆ ಸುಖಕರವಾಗ

ತಥಾ ದದ್ಯಾದ್ಯಥಾ ಸ್ನಾನಂ ಸಮ್ಯಕ್ ಸ್ನಾಪ್ಯಸ್ಯ ಜಾಯತೇ ।
ಓಷಧೀಶ್ಚಾತ್ರ ವಕ್ಷ್ಯಾಮಿ ಯಾಸ್ತು ಕುಂಭೇಷು ನಿಕ್ಷಿಪೇತ್ ॥ ೭೬ ॥

ಅಸ್ಥಾಪಿತೇಷು ಧರ್ಮಜ್ಞ ತತಃ ಸಂಸ್ಥಾಪನಂ ಭವೇತ್ ।
ಜಯಾಂ ಜಯಂತೀಂ ವಿಜಯಾಂ ಸೂಕರೀಂ ಮರ್ಕಟೀಂ ವಚಾಂ ॥ ೭೭ ॥

ಕಾಯಸ್ಥಾಂ ಚ ವಯಸ್ಥಾಂ ಚ ಬೃಹತೀಂ ಬಹುಪುತ್ರಿಕಾಂ ।
ಸಹಸ್ರಶತವೀರ್ಯೇ ಚ ತ್ರಾಯಮಾಣಾಂ ಕಟುಂಬರಾಂ ॥ ೭೮ ॥

ಅತಿಚ್ಛತ್ರಾಂ ತಥಾ ಛತ್ರಾಂ ಜೀವಂತೀಮಪರಾಜಿತಾಂ ।
ಜಟಿಲಾಂ ಪೂತನಾಂ ಕೇಶಾಂ ಸುರಾಂ ಯಕ್ಷಸುರಾಂ ತಥಾ ॥ ೭೯ ॥

ಅವೀತರಾಕ್ಷಸೀಂ ವೀರಾಂ ಸ್ಥಿರಾಂ ಭದ್ರಾಂ ಯಶೋಬಲಾಂ ।
ಶಂಖಪುಷ್ಪೀಂ ವಿಷ್ಣುದತ್ತಾಂ ನಾಕುಲೀಂ ಗಂಧನಾಕುಲೀಂ ॥ ೮೦ ॥

ಗೋಲೋಮ್ಯತಿಬಲೇ ಚೈವ ವ್ಯಾಘ್ರೀಮಶ್ವವತೀಂ ತಥಾ॥
ಶ್ಯಾಮಾಂ ಜ್ಯೋತಿಷ್ಮತೀಂ ಚೈವ ತೇಷುಕುಂಭೇಷು ನಿಕ್ಷಿಪೇತ್ ॥ ೮೧ ॥

---

ಬಹುದೋ ಹಾಗೆ ಆಯಾಯ ಘಟಗಳನ್ನು ಪ್ರತಿಷ್ಠಿಸಬೇಕು, ಆ ಕುಂಭಗಳಲ್ಲಿ ಹಾಕಬೇಕಾದ ಓಷಧಿವಿಶೇಷಗಳನ್ನೂ ಹೇಳುತ್ತೇನೆ.

೭೭-೮೦. ಕುಂಭಗಳನ್ನು ಸ್ಥಾಪಿಸುವುದಕ್ಕೆ ಮೊದಲು ಈ ಓಷಧಿಗಳನ್ನು ಅವುಗಳಲ್ಲಿ ಹಾಕಿ ನಂತರ ಸ್ಥಾಪಿಸಬೇಕು. ತಕ್ಕಿಲೆ, ನೆಲ್ಲಿಯ ಒಂದು ಭೇದ, ವಿಜಯಾ, ಸೂಕರೀ, ಹುಲಗಿಲ ಗಿಡ, ಬಜೆ, ಅಳಲೆಕಾಯಿ, ಹೆಗ್ಗುಳ್ಳ, ಶತಮೂಲಿ, ಗರಿಕೆ, ಬಿಳಿಯ ಗರಿಕೆ, ನೀರಾಮ ಬಳ್ಳಿ, ಕಟುಕರೋಹಿಣೀ, ಕಾಡುಸಬ್ಬಸಿಕೆ, ಸಬ್ಬಸಿಗೆ, ಸೀಹಾಲೆ, ವಿಷ್ಣುಕ್ರಾಂತಿ, ಜಟಾಮಾಂಸಿ, ಅಳಲೆಕಾಯಿ, ಉತ್ತರಣೀ, ಶಂಖಪುಷ್ಪೀ, ಬಲಾರಾಕ್ಷಸೀ, ಮೂರೆಲೆಹೊನ್ನೆ, ಕೆಂಪುಕೊನ್ನಾರಿ, ಈಶ್ವರೀ ಹಂಬು, ಸುಗಂಧವುಳ್ಳ ಈಶ್ವರೀಹಂಬು ಮತ್ತು

೮೧-೮೨. ಬಿಳಿಯುಗರಿಕೆ, ಕಾಡುಸಬ್ಬಸಿಗೆ, ಹೆಗ್ಗುಳ್ಳ, ಮತ್ತಿ, ಕರಿಯು ಗಜ್ಜುಗ, ಕಂಗೊಂಗೆ ಇವುಗಳನ್ನು ಆ ಕುಂಭಗಳಲ್ಲಿ ಹಾಕಬೇಕು. ಶ್ರೀಗಂಧ,

ಚಂದನೋಶೀರತಗರಕುಂಭವಾಗರುಕೇಸರಾನ್ ।
ತ್ವಕ್ಪತ್ರಮುಸ್ತಹ್ರೀಬೇರ ಪ್ರಿಯಂಗ್ವೇಲಾರಸಾಂಸ್ತಥಾ ॥ ೮೨ ॥

ಗಂಧಮಾಂಸೀಂ ತಥಾ ಸ್ಪೃಕ್ಕಾಂ ರೋಚನಂ ಸಾಮಕಂ ಬುಟಂ ।
ಕಶೀರುಕಾಮೃತಾನಂ ಚ ಕಕುಭಂ ಪದ್ಮಕಂ ತಥಾ ॥ ೮೩ ॥

ಕಸ್ತೂರಿಕಾಂ ತರುಷ್ಕಂ ಚ ಕರ್ಪೂರಂ ನಾಡಿಕಂ ತಥಾ ।
ಜಾತೀಫಲಂ ಲವಂಗಾಶ್ಚ ಕಕ್ಕೋಲೈಃ ಸಹಚೂರ್ಣಿತಾಃ ॥ ೮೪ ॥

ಗಂಧದ್ರವ್ಯಾಣಿ ಚಾನ್ಯಾನಿ ಯಥಾಲಾಭಂ ವಿನಿಕ್ಷಿಪೇತ್ ।
ಶ್ವೇತಾ ರಕ್ತಾ ತಥಾ ಪೀತಾ ಕೃಷ್ಣಾ ಚೈವ ಹಿ ಮೃತ್ತಿಕಾ ॥ ೮೫ ॥

ಯಾಶ್ಚಾನ್ಯಾ ವಿವಿಧಾಃ ಶಸ್ತಾಃ ಮೃತ್ತಿಕಾಸ್ತಾ ನಿಬೋಧ ಮೇ ।
ವೃಷಾಗ್ರಶೃಂಗಾದ್ವಲ್ಮೀಕಾದ್ದೇವತಾಯತನಾದ್ವ್ರಜಾತ್ ॥ ೮೬ ॥

ಅಗ್ನ್ಯಗಾರಾದ್ಧಸ್ತಿದಂತಾತ್ಸುಭಗಾ ಗಣಿಕಾಗೃಹಾತ್ ।
ರಾಜದ್ವಾರಾತ್ಪುರದ್ವಾರಾತ್ಕೂಪಾದ್ದಾನಗೃಹಾತ್ತಥಾ ॥ ೮೭ ॥

---

ಲಾಮಂಚ, ನಂದ್ಯಾವರ್ತ, ಗುಗ್ಗುಳ, ಅಗರು, ಕೇಸರಿ, ದಾಲ್ಚಿನ್ನಿ, ಕೊನ್ನಾರೆ ಗೆಡ್ಡೆ, ಮುಡಿವಾಳ, ನವಣೆ, ಏಲಕ್ಕಿ ಆನೆಬೇಲ ಮೊದಲಾದ ಸುಗಂಧದ್ರವ್ಯ ಗಳನ್ನೂ,

೮೩-೮೪. ಮುಟ್ಟಿದರೆ ಮುನಿಯು, ಸ್ಪೃಕ್ಕಾ ಎಂಬ ಸುಗಂಧದ್ರವ್ಯ, ಗೋರೋಚನ, ಕೆಂಪುಮತ್ತಿ, ಲಾಮಂಚ, ಕಸ್ತೂರಿ, ಕರ್ಪೂರ, ಜಾಜೀಕಾಯಿ, ಲವಂಗ, ಕಕ್ಕೋಲ ಇವನ್ನು ಚೂರ್ಣಮಾಡಿ ಇತರ ಸುಗಂಧಿವಸ್ತುಗಳನ್ನೂ ಯಥಾಶಕ್ತಿ ಸಂಪಾದಿಸಿ ಕುಂಭಗಳಲ್ಲಿ ಹಾಕಬೇಕು.

೮೫ ೮೭. ಆ ಕುಂಭಗಳಲ್ಲಿ ಹಾಕಬೇಕಾದ ಬೆಳ್ಳಗೂ, ಕೆಂಪಗೂ, ಹಳದಿಯಾಗಿಯೂ ಇನ್ನೂ ಇತರ ವಿಧವಾದ ಯಾವ ಪ್ರಶಸ್ತ ಮೃತ್ತಿಕೆಗಳಿವೆಯೋ ಅದನ್ನೂ ನಾನು ಹೇಳುತ್ತೇನೆ ಕೇಳು, ಎತ್ತಿನ ಕೊಂಬಿನಿಂದಲೂ, ಹುತ್ತದಿಂದಲೂ, ದೇವಾಲಯದಿಂದಲೂ, ಹಸುವಿನ ಕೊಟ್ಟಿಗೆಯಿಂದಲೂ, ಅಗ್ನಿಗೃಹದಿಂದಲೂ, ಆನೆಯ ಕೊಂಬಿನಿಂದಲೂ, ಸೌಭಾಗ್ಯಶಾಲಿನಿಯಾಗಿರುವ ವೇಶ್ಯಾಗೃಹದಿಂದಲೂ, ರಾಜದ್ವಾರದಿಂದಲೂ, ನಗರದ್ವಾರದಿಂದಲೂ, ದಾತೃವಿನ ಮನೆಯಿಂದಲೂ,

ಕುಂಭಕಾರಗೃಹಾನ್ನದ್ಯಾಃ ಪದ್ಮಿನ್ಯಾಃ ಶ್ರೋತ್ರಿಯಾಲಯಾತ್ ।
ಇಂದ್ರನೀಲತಡಾಗಾಚ್ಚ ಹ್ರದಾತ್ಪ್ರಸ್ರವಣಾದಪಿ ॥ ೮೮ ॥

ಚತುಷ್ಪಥಾತ್ಸಪ್ತಪಥಾನ್ಮೃತ್ತಿಕಾಶಕಟಾತ್ತಥಾ ।
ಗಜಾಶ್ವಗಣಶಾಲಾಭ್ಯಸ್ತಥಾಥರ್ವಣವೇಶ್ಮನಃ ॥ ೮೯ ॥

ಅಜಾವಿಕಾನ್ವಿತಾಗಾರಾದ್ರಾಜಕೋಶಾನ್ಮಹಾಸನಾತ್ ।
ಅಶೋಕಾತ್ಕ್ಷೀರವೃಕ್ಷಾಣಾಂ ಸಮೀಪಾತ್ಸಫಲಸ್ಯ ಚ ॥ ೯೦ ॥

ಸದಾಧ್ಯಯನಶಾಲಾತೋ ಯಜ್ಞಭೂಮೇಶ್ಚ ಮೃತ್ತಿಕಾಃ ।
ಪ್ರಗೃಹ್ಯ ಸರ್ವಾಃ ಸಂಭೃತ್ಯ ಪಂಚಗವ್ಯಸಮನ್ವಿತಾಃ ॥ ೯೧ ॥

ಸರ್ವಬೀಜೈಃ ಸಮಾಯೋಜ್ಯ ಸ್ನಾನಕುಂಭೇಷು ನಿಕ್ಷಿಪೇತ್ ।
ತತಃ ಕುಂಭಾನ್ ಪ್ರತಿಷ್ಠಾಪ್ಯ ಸ್ನಾಪ್ಯಂ ಸಂಸ್ಥಾಪಯೇ ದ್ವಿಜಃ ॥ ೯೨ ॥

---

೮೮-೯೦. ಕುಂಬಾರನ ಮನೆಯಿಂದಲೂ, ನದಿಯಿಂದಲೂ, ಪದ್ಮಸರೋವರದಿಂದಲೂ, ಶ್ರೋತ್ರಿಯನ ಮನೆಯಿಂದಲೂ, ಇಂದ್ರನೀಲದ ಕೊಳದಿಂದಲೂ, ದೊಡ್ಡ ಹಳ್ಳಗಳಿಂದಲೂ, ಗಿರಿಗಳ ಝರಿಗಳಿಂದಲೂ, ನಾಲ್ಕುದಾರಿ ಕೂಡುವ ಸ್ಥಳದಿಂದಲೂ, ಏಳುದಾರಿ ಕೂಡುವ ಸ್ಥಳದಿಂದಲೂ, ಮಣ್ಣಿನ ಗಾಡಿಯಿಂದಲೂ, ಗಜಶಾಲೆ ಮತ್ತು ಅಶ್ವಶಾಲೆಗಳಿಂದಲೂ, ಅಥರ್ವಣ ಪ್ರಯೋಗ ನಡೆಯುವ ಮನೆಯಿಂದಲೂ, ಆಡು ಕುರಿಗಳಿರುವ ಮನೆಗಳಿಂದಲೂ, ರಾಜನ ಕೋಶಗೃಹದಿಂದಲೂ, ಅವನು ಕುಳಿತುಕೊಳ್ಳುವ ಆಸನಸ್ಥಾನದಿಂದಲೂ, ಅಶೋಕದ ಮರದ ಬುಡದಿಂದಲೂ ಹಾಲಿರುವ ಆಲ ಮೊದಲಾದ ಮರಗಳ ಮತ್ತು ಫಲಿತವಾಗಿರುವ ಮರದ ಬುಡದಿಂದಲೂ,

೯೧-೯೨. ಯಾವಾಗಲೂ ವೇದಾಧ್ಯಯನವು ನಡೆಯುವ ಶಾಲೆಯಿಂದಲೂ, ಯಜ್ಞಭೂಮಿಯಿಂದಲೂ ಸಹ ಎಲ್ಲಾ ಮೃತ್ತಿಕೆಗಳನ್ನೂ ಶೇಖರಿಸಿ, ಪಂಚಗವ್ಯದೊಡನೆ ಮಿಶ್ರಮಾಡಿ ಎಲ್ಲಾ ವಿಧವಾದ ಬೀಜಗಳನ್ನೂ ಅದಕ್ಕೆ ಸೇರಿಸಿ ಆ ಸ್ನಾನ ಕುಂಭಗಳಲ್ಲಿ ಹಾಕಬೇಕು. ಅನಂತರ ಆ ಕುಂಭಗಳನ್ನು ಪ್ರತಿಷ್ಠೆಮಾಡಿ ಸ್ನಾನ ಮಾಡತಕ್ಕವನನ್ನು ಪುರೋಹಿತನಾದ ಬ್ರಾಹ್ಮಣನು ಅಲ್ಲಿ ಕೂರಿಸಬೇಕು.

ಮಂಡಲೇಷು ಕ್ರಮೇಣೈವ ದಿಶಾಸು ವಿದಿಶಾಸು ಚ ।
ಪೂರ್ವೇ ಮಂಡಲಕೇ ಸ್ನಾಪ್ಯಃ ಶ್ವೇತಮಾಲ್ಯಾನುಲೇಪನಃ　　॥ ೯೩ ॥
ಶ್ವೇತಶ್ಚೈವ ಪಟೋ ಧಾರ್ಯಃ ಚತುರ್ಭಿಃ ಬ್ರಾಹ್ಮಣೈರ್ಭವೇತ್ ।

ಏವಂ ದಕ್ಷಿಣತಸ್ತಸ್ಯ ಸರ್ವಂ ನೀಲಂ ಪ್ರಕಲ್ಪಯೇತ್　　॥ ೯೪ ॥
ಕೃಷ್ಣಂ ಚ ಕಲ್ಪಯೇತ್ಸರ್ವಂ ತಥಾ ದಕ್ಷಿಣಪಶ್ಚಿಮೇ ।

ಪೀತಂ ಪ್ರಕಲ್ಪಯೇತ್ಸರ್ವಂ ತಥಾ ಭಾಗೇ ತು ಪಶ್ಚಿಮೇ ।
ಪಶ್ಚಿಮೋತ್ತರಯೋಃ ಸರ್ವಂ ಶುಕ್ಲವರ್ಣಂ ಪ್ರಕಲ್ಪಯೇತ್　　॥ ೯೫ ॥

ತಥೈವೋತ್ತರದಿಗ್ಭಾಗೇ ಪದ್ಮವರ್ಣಂ ಪ್ರಕಲ್ಪಯೇತ್ ।
ಪ್ರಾಗುತ್ತರೇ ತಥಾಭಾಗೇ ಚಿತ್ರಂ ಸರ್ವಂ ಪ್ರಕಲ್ಪಯೇತ್　　॥ ೯೬ ॥

---

೯೩-೯೪. ಆ ಮಂಡಲಗಳಲ್ಲಿ ಪೂರ್ವಾದಿಕ್ರಮದಿಂದ ದಿಕ್ಕುಗಳಲ್ಲಿಯೂ, ವಿದಿಕ್ಕುಗಳಲ್ಲಿಯೂ ಸ್ನಾನಮಾಡಿಸಬೇಕು. ಪೂರ್ವದಿಕ್ಕಿನ ಮಂಡಲದಲ್ಲಿ ಸ್ನಾನ ಮಾಡುವಾಗ ಬಿಳುಪಾದ ಹೂವು ಮತ್ತು ಗಂಧಗಳನ್ನೂ, ಬಿಳುಪಾದ ವಸ್ತ್ರವನ್ನೂ ಉಟ್ಟು ಸ್ನಾನಮಾಡಬೇಕು. ನಾಲ್ಕು ಬ್ರಾಹ್ಮಣರಿಂದ ಆ ಸ್ನಾನವನ್ನು ನಡೆಸಬೇಕು. ಇದೇರೀತಿ ದಕ್ಷಿಣ ದಿಕ್ಕಿನ ಮಂಡಲದಲ್ಲಿ ಸ್ನಾನಮಾಡುವಾಗ ಎಲ್ಲವೂ ನೀಲವಾಗಿಯೇ ಇರಬೇಕು.

೯೫-೯೬. ನೈಋತ್ಯ ದಿಕ್ಕಿನಲ್ಲಿ ಎಲ್ಲವನ್ನೂ ಕಪ್ಪಾಗಿಯೇ ಇಡಬೇಕು. (ಪಶ್ಚಿಮ ಭಾಗದಲ್ಲಿ ಎಲ್ಲವನ್ನೂ ಹೊಂಬಣ್ಣವಾಗಿಯೇ ಇಡಬೇಕು.) ಪಶ್ಚಿಮ ದಿಕ್ಕಿನಲ್ಲಿಯೂ, ವಾಯುವ್ಯ ದಿಕ್ಕಿನಲ್ಲಿಯೂ, ಎಲ್ಲವನ್ನೂ ಬಿಳುಪಾಗಿಯೇ ಇಡಬೇಕು. ಉತ್ತರದಿಕ್ಕಿನಲ್ಲಿ ಎಲ್ಲವೂ ಪದ್ಮದ ವರ್ಣದಲ್ಲಿರಬೇಕು. ಈಶಾನ್ಯಭಾಗದಲ್ಲಿ ಎಲ್ಲವೂ ಚಿತ್ರ (ನಾನಾವರ್ಣ) ವರ್ಣದಲ್ಲಿರಬೇಕು.

೯೬-೯೮. ರಾಜ್ಯಾಭಿಷೇಕಕ್ಕಾಗಿ ವಿಹಿತವಾಗಿರುವ ಮಂತ್ರವೇ ಈ ಅಭಿಷೇಕಕ್ಕೂ ವಿಹಿತವಾಗಿದೆ. ದಿಕ್ಕುಗಳಲ್ಲಿಯೂ ವಿದಿಕ್ಕುಗಳಲ್ಲಿಯೂ ಇಟ್ಟಿರುವ ಕುಂಭಗಳಲ್ಲಿ ಈ ಮಂತ್ರದಿಂದಲೇ ಬೇರೆ ಬೇರೆಯಾಗಿ ಸ್ನಾನಮಾಡಿಸಬೇಕು.

---

1 ಇದನ್ನು ಕೆಲವು ಪುಸ್ತಕದ ಪಾಠಾಂತರವೆಂದು ಮೂಲದಲ್ಲಿ ಗುರುತಿಸಿರುವರು.

ರಾಜ್ಯಾಭಿಷೇಕವಿಹಿತೋ ಮಂತ್ರಶ್ಚಾತ್ರ ವಿಧೀಯತೇ ।
ಪ್ರತ್ಯೇಕಮಥ ಕುಂಭೇಷು ದಿಶಾಸು ವಿದಿಶಾಸು ಚ ॥ ೯೭ ॥

ಏವಂ ಸ್ನಾಪ್ಯೋ ಮಹಾಭಾಗ ಶಂಖಪುಣ್ಯಾಹನಿಸ್ವನೈಃ ।
ಸ್ನಾತಃ ಶುಕ್ಲಾಂಬರಧರಃ ಶ್ವೇತಮಾಲ್ಯಾನುಲೇಪನಃ ॥ ೯೮ ॥

ಮಂಡಲೇ ತು ನಿವಿಷ್ಟಾನಾಂ ಸುರಾಣಾಂ ಪೂಜನಂ ತತಃ ।
ಕುರ್ವೀತ ಪ್ರಯತಃ ಶುದ್ಧಿಂ ಗಂಧಮಾಲ್ಯಾರ್ಘಸಂಪದಾ ॥ ೯೯ ॥

ದೀಪೈರ್ಧೂಪೈರ್ನಮಸ್ಕಾರೈಃ ವಸ್ತ್ರೈರಾಭರಣೈಸ್ತಥಾ ।
ಅಪೂಪಾನ್ ಪಾಯಸಂ ಭಕ್ಷ್ಯಾನ್ ಶುಕ್ಲಮಾಲ್ಯಾನುಲೇಪನಂ ॥ ೧೦೦ ॥

ವಿವಿಧಂ ಚ ಫಲಂ ಕ್ಷೀರಂ ಬ್ರಾಹ್ಮಣೇಭ್ಯೋ ನಿವೇದಯೇತ್ ।
ದಧ್ನಾ ಚ ಪರಮಾನ್ನೇನ ಶ್ವೇತಮಾಲ್ಯಾನುಲೇಪನೈಃ ॥ ೧೦೧ ॥

ಫಲೈಃ ಪ್ರಸೂನೈಶ್ಚ ತಥಾ ಕೇಶವಾಯ ಹರೇದ್ಬಲಿಂ ।
ಕ್ಷೀರೇಣ ಪರಮಾನ್ನೇನ ದಧ್ನಾ ಸಕೃಸರೇಣ ಚ ॥ ೧೦೨ ॥

---

ಶಂಖ, ಪುಣ್ಯಾಹ ಘೋಷವೇ ಮೊದಲಾದ ಮಂಗಲಧ್ವನಿಯೊಡನೆ ಸ್ನಾನಮಾಡಿ ನಂತರ ಬಿಳಿಯವಸ್ತ್ರವನ್ನುಟ್ಟು ಬಿಳಿಯ ಹೂಮಾಲೆ ಗಂಧಗಳಿಂದ ಅಲಂಕೃತನಾಗಿ,

೯೯-೧೦೦. ಮಂಡಲದಲ್ಲಿ ಸ್ಥಾನಹೊಂದಿರುವ ದೇವತೆಗಳಿಗೆ ಶುದ್ಧಿಯಿಂದ ತಾನೂ ಶುದ್ಧನಾಗಿದ್ದು ಗಂಧಪುಷ್ಪ ಅರ್ಘ್ಯಾದಿ ಸಮೃದ್ಧಿಯಿಂದ ಪೂಜೆಮಾಡಬೇಕು. ಧೂಪ, ದೀಪ, ನಮಸ್ಕಾರ, ವಸ್ತ್ರಾಭರಣಗಳು, ಅಪೂಪಗಳು, ಭಕ್ಷ್ಯಗಳು ಪಾಯಸ ಇವುಗಳನ್ನು ನೈವೇದ್ಯಕ್ಕೆ ಸಮರ್ಪಿಸಿ ಬಿಳಿಯಹೂವು ಗಂಧಗಳಿಂದ ಪೂಜಿಸಬೇಕು.

೧೦೧-೧೦೨. ನಾನಾವಿಧವಾದ ಫಲಗಳನ್ನೂ, ಹಾಲನ್ನೂ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಮೊಸರು ಮತ್ತು ಪರಮಾನ್ನಗಳಿಂದಲೂ, ಬಿಳುಪಾದ ಹೂವು ಮತ್ತು ಗಂಧಗಳಿಂದಲೂ, ನಾನಾವಿಧವಾದ ಫಲಗಳು ಮತ್ತು ಪುಷ್ಪಗಳಿಂದಲೂ ಕೇಶವನಿಗೆ ಬಲಿಯನ್ನು ಅರ್ಪಿಸಬೇಕು. ಹಾಲಿನಿಂದಲೂ ಪರಮಾನ್ನದಿಂದಲೂ ಮೊಸರು ಮತ್ತು ಚಿಗಳಿಯಿಂದಲೂ ಆ ಕಾಲದಲ್ಲಿ ಲಭಿಸುವ ಫಲಪುಷ್ಪಗಳಿಂದಲೂ ಸಹ ಶಂಕರನಿಗೆ ಬಲಿಯನ್ನು ಅರ್ಪಿಸಬೇಕು.

ಫಲೈಃ ಕಾಲೋದ್ಭವೈಃ ಪುಷ್ಪೈಃ ಶಂಕರಾಯ ಹರೇದ್ಬಲಿಂ |
ಅಪೂಪೈಃ ಪರಮಾನ್ನೇನ ಭಕ್ಷ್ಯೈಃ ಕ್ಷೀರೇಣ ಸರ್ಪಿಷಾ || ೧೦೩ ||

ಮಾಲ್ಯಾನುಲೇಪನೈಃ ಶುಕ್ಲೈಃ ಮಹೇಂದ್ರಾಯ ಹರೇದ್ಬಲಿಂ |
ಯವಾನಾಂ ಚ ತಿಲಾನಾಂ ಚ ಗೋಧೂಮಾನಾಂ ತಥಾ ಸಕೃತ್ || ೧೦೪ ||

ಭಕ್ಷ್ಯೈಃ ಸಗುಡಸರ್ಪಿಷ್ಕೈಃ ಬಲಿಂ ಕುರ್ಯಾತ್ತು ವಹ್ನಯೇ |
ಗುಡೋದನ ಗುಡಾಪೂಪಾನ್ ಪಕ್ವಮಾಂಸಂ ತಥಾಮಿಷಂ || ೧೦೫ ||

ಯಮಾಯ ಚ ಬಲಿಂ ದದ್ಯಾದ್ರಕ್ತಮಾಲ್ಯಾನುಲೇಪನಂ |
ಪಕ್ವಮಾಂಸಂ ತಥಾಮಾಂಸಂ ಕೃಷ್ಣಮಾಲ್ಯಾನುಲೇಪನಂ || ೧೦೬ ||

ವಿರೂಪಾಕ್ಷಾಯ ಚ ಸುರಾಂ ದದ್ಯಾತ್ಸೌವೀರಕಂ ತಥಾ |
ಮುದ್ಗಾಪೂಪಾನ್ ತಿಲಾಪೂಪಾನ್ ಜಲಜಾನ್ಮದಿರಾಂಸ್ತಥಾ || ೧೦೭ ||

---

೧೦೩–೧೦೪. ಒಬ್ಬಟ್ಟು ಮೊದಲಾದ ಅಪೂಪಗಳಿಂದಲೂ, ಪರಮಾನ್ನದಿಂದಲೂ, ಭಕ್ಷ್ಯಗಳಿಂದಲೂ, ಹಾಲು ಮತ್ತು ತುಪ್ಪಗಳಿಂದಲೂ-ನೈವೇದ್ಯವನ್ನೇರ್ಪಡಿಸಿ ಬಿಳುಪಾದ ಹೂವು ಮತ್ತು ಗಂಧಗಳಿಂದ ಮಹೇಂದ್ರನಿಗೆ ಬಲಿಯನ್ನು ಅರ್ಪಿಸಬೇಕು. ಯವಧ್ಯಾನ ಮತ್ತು ಎಳ್ಳು, ಗೋಧಿ ಇವುಗಳ ಭಕ್ಷ್ಯಗಳಿಂದಲೂ ಬೆಲ್ಲ ಮತ್ತು ತುಪ್ಪ ಇವುಗಳೊಡನೆಯೂ ಸಹ ಅಗ್ನಿಗೆ ಬಲಿಯನ್ನು ಅರ್ಪಿಸಬೇಕು.

೧೦೫–೧೦೬. ಬೆಲ್ಲದ ಅನ್ನ ಮತ್ತು ಬೆಲ್ಲದ ಅಪೂಪಗಳು ಪಕ್ವವಾದ ಮಾಂಸ ಮತ್ತು ಹಸಿಯಾದ ಮಾಂಸ ಇವುಗಳಿಂದಲೂ ಕೆಂಪಾದ ಹೂವು ಗಂಧ ಇವುಗಳಿಂದಲೂ ಸಹ ಯಮನಿಗೆ ಬಲಿಯನ್ನು ಅರ್ಪಿಸಬೇಕು. ಹಾಗೆಯೇ ಪಕ್ವಮಾಂಸದಿಂದಲೂ, ಹಸಿಯಮಾಂಸದಿಂದಲೂ, ಕೂಡಿದ ಮದ್ಯದಿಂದಲೂ, ಎಲಚಿಯಹಣ್ಣಿನಿಂದಲೂ ಸಹ ಕಪ್ಪಾದ ಹೂವು ಗಂಧಗಳೊಡನೆಯೂ ವಿರೂಪಾಕ್ಷನಾದ ನಿಋುಋತಿಗೆ ಬಲಿಯನ್ನು ಅರ್ಪಿಸಬೇಕು.

೧೦೭–೧೦೮. ಹೆಸರಿನಿಂದ ಮಾಡಿದ ಅಪೂಪಗಳು (ವಡೆ ಮೊದಲಾದುವು) ಎಳ್ಳಿನಿಂದ ಮಾಡಿದ ಅಪೂಪಗಳು ಜಲಜವಾದ ಭಕ್ಷ್ಯವಸ್ತುಗಳು. ಮದ್ಯ ಇವುಗಳಿಂದ ಕೂಡಿದ ಹಳದಿಯ ಬಣ್ಣದ ಪುಷ್ಪ ಗಂಧಾದಿಗಳಿಂದ ವರುಣನಿಗೆ ಬಲಿ

ವರುಣಾಯ ಬಲಿಂ ದದ್ಯಾತ್ಪೀತಂ ಮಾಲ್ಯಾದಿಕಂ ತಥಾ ।
ಯವಗೋಧೂಮಚಣಕಮಾಷಸಕ್ತೂನ್ಸಗೋರಸಾನ್ ॥ ೧೦೮ ॥

ಕುಲ್ಮಾಷಘೃತಸಂಯುಕ್ತಾನ್ಬಲಿಂ ದದ್ಯಾತ್ತು ವಾಯವೇ ।
ಭಕ್ಷ್ಯಾಂಶ್ಚ ಮಧುಸಂಯುಕ್ತಾನ್ ಮುದ್ಗಮಿಶ್ರಾಂಸ್ತಥಾಮಿಷಂ ॥ ೧೦೯ ॥

ಚಿತ್ರಂ ಮಾಲ್ಯಂ ಕುಂಕುಮಂ ಚ ಕುಬೇರಾಯ ಹರೇದ್ಬಲಿಂ ।
ಶಿಂಬಿಧಾನ್ಯ ಭವಾನ್ಭಕ್ಷ್ಯಾನ್ ಶಾಲ್ಯನ್ನಂ ಸಗುಡಂ ದಧಿ ॥ ೧೧೦ ॥

ಈಶಾನಾಯ ಬಲಿಂ ದದ್ಯಾಚ್ಛುಕ್ಲಮಾಲ್ಯಾನುಲೇಪನೈಃ ।
ಶುಕ್ಲೌದನಂ ಶುಕ್ಲಮಾಲ್ಯಂ ಶೂಲಾಯೋಪಹರೇದ್ಬಲಿಂ ॥ ೧೧೧ ॥

ತಥಾ ಪಂಚರಸೈಸ್ಸಿದ್ಧಂ ದದ್ಯಾದ್ವಜ್ರಾಯ ಬುದ್ಧಿಮಾನ್ ।
ಕೃಸರಂ ಗಂಧಪುಷ್ಪಾಢ್ಯಂ ದದ್ಯಾಚ್ಛುಕ್ರಾಯ ಪಾಯಸಂ ॥ ೧೧೨ ॥

---

ಪ್ರದಾನ ಮಾಡಬೇಕು. ಯವ, ಗೋಧಿ, ಕಡಲೆ, ಉದ್ದು, ಅರಳಹಿಟ್ಟು ಇವುಗಳಿಂದ ಕೂಡಿದ ಮಜ್ಜಿಗೆಯೊಡನೆಯೂ ತಡಗಣಿ, ಆಜ್ಯ ಇವುಗಳೊಡನೆಯೂ ವಾಯುವಿಗೆ ಬಲಿಯನ್ನು ಅರ್ಪಿಸಬೇಕು.

೧೦೯–೧೧೦. ಹೆಸರಿನಿಂದ ಮಿಶ್ರವಾದ ಭಕ್ಷ್ಯಗಳನ್ನು ಜೇನಿನೊಡನೆ ಮಿಶ್ರ ಮಾಡಿಯೂ ಮತ್ತು ಮಾಂಸದೊಡನೆಯೂ ನಾನಾವರ್ಣದ ಹೂವುಗಳೊಡನೆ ಕುಂಕುಮವನ್ನೂ ಸಹ ಕುಬೇರನಿಗೆ ಬಲಿಯನ್ನಾಗಿ ಅರ್ಪಿಸಬೇಕು. ಸಿಪ್ಪೆಯುಳ್ಳ ಭತ್ತವೇ ಮೊದಲಾದ ಧಾನ್ಯಗಳಿಂದ ಮಾಡಿದ ಭಕ್ಷ್ಯಗಳನ್ನೂ ಬೆಲ್ಲದೊಡನೆ ಕೂಡಿರುವ ಮೊಸರನ್ನೂ ಸಹ ಬಿಳುಪಾದ ಹೂವು, ಗಂಧಗಳೊಡನೆ ಈಶ್ವರನಿಗೆ ಬಲಿಯನ್ನಾಗಿ ಅರ್ಪಿಸಬೇಕು.

೧೧೧–೧೧೨. ಬಿಳುಪಾದ ಅನ್ನದಿಂದಲೂ, ಬಿಳುಪಾದ ಹೂವುಗಳಿಂದಲೂ, ಶೂಲಾಯುಧಕ್ಕೆ ಬಲಿಯನ್ನು ಅರ್ಪಿಸಬೇಕು. ಹಾಗೆಯೇ ಐದು ವಿಧವಾದ ಮಧುರಾದಿರಸಗಳಿಂದ ಸಂಸ್ಕೃತವಾದ ಅನ್ನವನ್ನು ವಜ್ರಾಯುಧಕ್ಕೆ ಬಲಿಯನ್ನಾಗಿ ಅರ್ಪಿಸಬೇಕು. ಮತ್ತು ಗಂಧಪುಷ್ಪಗಳಿಂದ ಕೂಡಿದ ಚಿಗಳಿಯನ್ನೂ, ಪಾಯಸವನ್ನೂ ಶುಕ್ರನಿಗಾಗಿ ಬಲಿಯನ್ನರ್ಪಿಸಬೇಕು. ಫಲಗಳಿಂದ ಕೂಡಿದ ಅನ್ನವನ್ನೂ. ಕೆಂಪಾದ ಹೂವುಗಳನ್ನೂ ಸಹ ಶಕ್ತ್ಯಾಯುಧಕ್ಕೆ ಬಲಿಯನ್ನಾಗಿ ಅರ್ಪಿಸಬೇಕು.

ಫಲೋದನಂ ರಕ್ತಮಾಲ್ಯಂ ದದ್ಯಾಚ್ಛಕ್ತ್ಯಾ ತಥಾ ಬಲಿಂ ।
ಸ್ನಾನಮಂಡಲಕೇಭ್ಯೋಽಪಿ ಬಲಿಂ ದದ್ಯಾತ್ತತೋ ಬಲಿಂ ॥ ೧೧೩ ॥

ಬಾಲಕ್ರೀಡನಕಾನ್ಭಕ್ಷ್ಯಾನ್ಫಲಾನಿ ವಿವಿಧಾನಿ ಚ ।
ಮತ್ಸ್ಯಾಮಿಷಂ ಸರುಧಿರಂ ಪಾಯಸಂ ತಿಲತಂಡುಲಂ ॥ ೧೧೪ ॥

ಯಕೃದಂತ್ರಾಣಿ ಹೃದಯಂ ಭೂತೇಭ್ಯೋ ಬಲಿ ಮಾಹರೇತ್ ।
ಓಂಕಾರಾದ್ಯೈಃ ಚತುರ್ಥ್ಯಂತ್ಯೈಃ ಸ್ವಾಹಾಕಾರಸಮನ್ವಿತೈಃ ॥ ೧೧೫ ॥

ರಾಜ್ಯಾಭಿಷೇಕ ಮಂತ್ರೋಕ್ತ ದೇವತಾನಾಂ ಪೃಥಕ್‌ಪೃಥಕ್ ।
ನಾಮಭಿರ್ಜುಹುಯಾದ್ವಹ್ನೌ ಯಥಾಶ್ರದ್ಧಂ ಯಥಾಘೃತಂ ॥ ೧೧೬ ॥

ಪೂರ್ಣಾಹುತಿಂ ತತೋದತ್ವಾ ದೇಯಾ ವಿಪ್ರೇಷು ದಕ್ಷಿಣಾ ।
ಕನಕಂ ರಜತಂ ಗಾವೋ ವಾಸಾಂಸಿ ವಿವಿಧಾನಿ ಚ ॥ ೧೧೭ ॥

---

೧೧೩-೧೧೫. ಸ್ನಾನಮಂಡಲಗಳಿಗೂ ಸಹ ಅನಂತರ ಬಲಿಯನ್ನರ್ಪಿಸಬೇಕು. ಹುಡುಗರ ಆಟದ ಸಾಮಾನುಗಳಿಂದಲೂ, ನಾನಾ ವಿಧವಾದ ಭಕ್ಷ್ಯಗಳು ಮತ್ತು ಫಲಗಳಿಂದಲೂ, ರಕ್ತದಿಂದ ಕೂಡಿರುವ ಮತ್ಸ್ಯ ಮಾಂಸದಿಂದಲೂ, ಪಾಯಸ ಮತ್ತು ಎಳ್ಳು, ಅಕ್ಕಿ ಇವುಗಳಿಂದಲೂ ಯಕೃತ್ತು ಮತ್ತು ಕರುಳು ಇವುಗಳಿಂದಲೂ ಸಹ ಭೂತಗಳಿಗೆ ಬಲಿಯನ್ನರ್ಪಿಸಬೇಕು. ಓಂಕಾರ ಮೊದಲು ಮಾಡಿ ಚತುರ್ಥೀವಿಭಕ್ತ್ಯಂತಪದದಿಂದ ಸ್ವಾಹಾಕಾರಪೂರ್ವಕವಾಗಿ,

೧೧೬-೧೧೭. ರಾಜ್ಯಾಭಿಷೇಕ ಮಂತ್ರದಲ್ಲಿ ಹೇಳಿರುವ ದೇವತೆಗಳಿಗೆಲ್ಲಾ ಅವರವರ ನಾಮನಿರ್ದೇಶದಿಂದ ಬೇರೆಬೇರೆಯಾಗಿ ಶ್ರದ್ಧೆಯಿಂದ ಅಗ್ನಿಯಲ್ಲಿ ಆಜ್ಯ ಹೋಮಮಾಡಬೇಕು. ಅನಂತರ ಪೂರ್ಣಾಹುತಿಯನ್ನೂ ಕೊಟ್ಟು ಚಿನ್ನ, ಬೆಳ್ಳಿ, ಗೋವುಗಳು, ನಾನಾವಿಧವಾದ ವಸ್ತ್ರಗಳು ಇವುಗಳನ್ನು ಬ್ರಾಹ್ಮಣರಿಗೆ ದಕ್ಷಿಣೆಯಾಗಿ ಕೊಡಬೇಕು.

ಕರ್ತ್ರೇ ಚ ದಕ್ಷಿಣಾ ದೇಯಾ ತಥಾ ರಾಮ ವಿಶೇಷತಃ ।
ದತ್ತಂ ವಸ್ತ್ರಾದಿ ದೇವೇಭ್ಯಃ ತಥಾ ಸ್ನಾನಘಟಾದಿಕಂ || ೧೧೮ ||
ಕರ್ತಾ ಯಥೇಷ್ಟಂ ವಿಭಜೇತ್ತಸ್ಯ ಭಾಗೋ ಹಿ ಸ ಸ್ಮೃತಃ ।
ಘೃತೇಥವದನಂ ದೃಷ್ಟ್ವಾ ನಮಸ್ಕೃತ್ಯ ಚ ದೇವತಾಃ || ೧೧೯ ||
ಮಂಗಲ್ಯಾಲಂಭನಂ ಕೃತ್ವಾ ಫಲಪಾಣಿರುದಙ್ಮುಖಃ ।
ತಸ್ಮಾದ್ದೇಶಾದ್ವಿನಿರ್ಗತ್ಯ ಗೃಹಂ ಯಾಯಾತ್ತತಃ ಸ್ವಕಂ || ೧೨೦ ||
ತತ್ರ ತಿಷ್ಠೇದ್ಧವಿಷ್ಯಾಶೀ ಬ್ರಹ್ಮಚಾರೀ ಚ ತಾಂ ನಿಶಾಂ ।
ಸ್ನಾಪಿತೋ ಬ್ರಹ್ಮಪೂತೇನ ಸ್ನಾನೇನಾಯಂ ಯಥಾ ಭವೇತ್ || ೧೨೧ ||
ಸರ್ವಾನ್ ಕಾಮಾನವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ।
ಪುರಾ ದೇವಾಸುರೇ ಯುದ್ಧೇ ಶಕ್ರಾಯೈತದ್ಬೃಹಸ್ಪತಿಃ || ೧೨೨ ||
ಕೃತವಾನ್ ಪುರುಹೂತಾಯ ತತಃ ಶಕ್ರಃ ಸುರಾಧಿಪಃ ।
ಜಘಾನ ದೈತ್ಯಮುಖ್ಯಾನಾಂ ನವತೀರ್ನವ ಭಾರ್ಗವ || ೧೨೩ ||

---

೧೧೮-೧೧೯. ಸ್ನಾನಕೃತ್ಯವಾದ ಮೇಲೆ ಪುರೋಹಿತನಿಗೂ ವಿಶೇಷವಾಗಿ ದಕ್ಷಿಣೆಯನ್ನು ಕೊಡಬೇಕು. ದೇವತೆಗಳಿಗಾಗಿ ಕೊಟ್ಟ ವಸ್ತ್ರಾದಿಗಳಲ್ಲಿಯೂ, ಕುಂಭಾದಿಗಳಲ್ಲಿಯೂ ಸಹ ಕರ್ತೃವಾದ ಮುಖ್ಯ ಪುರೋಹಿತನು ತನ್ನ ಇಷ್ಟ ಬಂದಷ್ಟು ವಿಭಾಗಿಸಿ ತೆಗೆದುಕೊಳ್ಳಬಹುದು. ಆ ಭಾಗವೆಲ್ಲವೂ ಅವನಿಗೇ ಸೇರಿದುದು, ಅನಂತರ ಸ್ನಾನಮಾಡಿದವನು ಆಜ್ಯದಲ್ಲಿ ತನ್ನ ಮುಖವನ್ನು ನೋಡಿ ದೇವತೆಗಳೆಲ್ಲರನ್ನೂ ನಮಸ್ಕರಿಸಿ, ಮಂಗಲವಸ್ತುಗಳನ್ನು ಸ್ಪರ್ಶಮಾಡಿ ಕೈಗಳಲ್ಲಿ ಫಲವನ್ನು ಹಿಡಿದು ಉತ್ತರಮುಖನಾಗಿ ಆ ಸ್ನಾನಭೂಮಿಯನ್ನು ಬಿಟ್ಟು ತನ್ನ ಮನೆಗೆ ಬಂದು ಸೇರಬೇಕು.

೧೨೧-೧೨೩. ತನ್ನ ಗೃಹದಲ್ಲಿ ಹವಿರ್ಯೋಗ್ಯವಾದ ಅನ್ನದಿಂದ ಬ್ರಹ್ಮಚರ್ಯದಿಂದ ಆ ರಾತ್ರಿಯನ್ನು ಕಳೆಯಬೇಕು. ಹೀಗಿದ್ದಲ್ಲಿ ಅವನು ಪರಬ್ರಹ್ಮನಂತೆ ಈ ಸ್ನಾನದಿಂದ ಪರಿಶುದ್ಧನಾಗಿ ಆಗುತ್ತಾನೆ. ಈ ಲೋಕದ ಎಲ್ಲಾ ಪುರುಷಾರ್ಥಗಳನ್ನೂ ಅನುಭವಿಸಿ ಸ್ವರ್ಗಲೋಕವನ್ನೂ ಹೊಂದುತ್ತಾನೆ. ಪೂರ್ವದಲ್ಲಿ ದೇವಾಸುರಯುದ್ಧ ನಡೆದ ಕಾಲದಲ್ಲಿ ಬೃಹಸ್ಪತಿಯು ಇಂದ್ರನಿಗೆ ಈ ಸ್ನಾನವನ್ನು ಮಾಡಿಸಿದನು. ಈ ಸ್ನಾನದಿಂದ ಶುದ್ಧನಾದ ಇಂದ್ರನು ಅನಂತರ ಮುಖ್ಯ ಮುಖ್ಯರಾದ ತೊಂಭತ್ತೊಂಭತ್ತು ದೈತ್ಯರನ್ನೆಲ್ಲಾ ನಾಶಪಡಿಸಿ ವಿಜಯಶಾಲಿಯಾದನು.

**ಧನ್ಯಂ ಯಶಸ್ಯಂ ರಿಪುನಾಶಕಾರಿ ರಕ್ಷೋಘ್ನಂ ಪಾಪಹರಂ ಪವಿತ್ರಂ |**
**ರೋಗಾಪಹಂ ವಿಘ್ನವಿನಾಶಕಾರಿ ಸ್ನಾನಂ ಮಯಾ ತೇ**
**ವಿಹಿತಂ ಯಥಾರ್ಹಂ || ೧೨೪ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ದಿಕ್ಪಾಲಸ್ನಾನ ವರ್ಣನಂ ನಾಮ ಚತುರುತ್ತರಶತತಮೋಽಧ್ಯಾಯಃ**

---

೧೨೪. ಈಗ ನಾನು ನಿನಗೆ ಹೇಳಿರುವ ಈ ಸ್ನಾನವು ಆಯಾಯ ಅಧಿಕಾರಿಗೆ ತಕ್ಕಂತೆ ಧನಸಂಪಾದಕವಾಗಿಯೂ, ಯಶಃಪ್ರದವಾಗಿಯೂ, ಶತ್ರು ನಾಶಕವಾಗಿಯೂ, ಸರ್ವಪಾಪನಾಶಕವಾಗಿಯೂ, ಪವಿತ್ರಕರವಾಗಿಯೂ. ಆಗಿ ರಕ್ಷೋದೋಷವನ್ನೂ, ರೋಗಾದಿಗಳನ್ನೂ, ವಿಘ್ನಗಳನ್ನೂ, ನಾಶಪಡಿಸಿ ಬಹು ಸುಖವಾದ ಸೌಖ್ಯಕ್ಕೆ ಕಾರಣವಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದ ದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ದಿಕ್ಪಾಲಸ್ನಾನ ವರ್ಣನವೆಂಬ ನೂರ ನಾಲ್ಕನೆಯ ಅಧ್ಯಾಯವು ಮುಗಿದಿದೆ.



## ನೂರ ನಾಲ್ಕನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಸ್ನಾನಹೊಂದುವ ಅಧಿಕಾರಿಗಳಿಗೆ ತಕ್ಕಂತೆ ಆಯಾಯ ಸ್ಥಳಭೇದವನ್ನು ನಿರೂಪಿಸಿ, ದಿಕ್ಪಾಲಸ್ನಾನವೆಂಬ ಕಾಮ್ಯಸ್ನಾನವನ್ನು ವಿಸ್ತಾರ ವಾಗಿ ನಿರೂಪಿಸಿರುವರು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಪಂಚಾಧಿಕಶತತಮೋಽಧ್ಯಾಯಃ

**|| ರಾಮ ಉವಾಚ ||**

**ಸ್ನಾನಮನ್ಯತ್ಸಮಾಚಕ್ಷ್ವ ಭಗವನ್ ದುರಿತಾಪಹಂ ।**
**ವಿನಾಯಕೋಪಸೃಷ್ಟಾನಾಂ ಸರ್ವಕರ್ಮಪ್ರಸಾಧಕಂ || ೧ ||**

**|| ಪುಷ್ಕರ ಉವಾಚ ||**

**ವಿನಾಯಕಃ ಕರ್ಮವಿಘ್ನಸಿದ್ಧ್ಯರ್ಥಂ ವಿನಿಯೋಜಿತಃ ।**
**ಗಣಾನಾಮಾಧಿಪತ್ಯೇ ಚ ಕೇಶವೇನ ಪಿತಾಮಹೈಃ || ೨ ||**

---

### ನೂರ ಐದನೆಯ ಅಧ್ಯಾಯ.

೧. ಭಾರ್ಗವನು ಪ್ರಶ್ನೆಮಾಡುತ್ತಾನೆ:—ಪೂಜ್ಯನೇ ಹೀಗೆಯೇ ಪಾಪ ನಾಶಕವಾದ ಮತ್ತೊಂದು ಸ್ನಾನವನ್ನೂ ದಯವಿಟ್ಟು ಹೇಳು. ಯಾವ ಆ ಸ್ನಾನ ದಿಂದ ವಿನಾಯಕರೆಂಬ ಗೃಹದೇವತೆಗಳಿಂದ ಪಾರಾಗಿ ಸರ್ವಕಾರ್ಯದಲ್ಲಿಯೂ ಸಿದ್ಧಿಹೊಂದಬಹುದೋ ಅಂತಹ ಸ್ನಾನವನ್ನೂ ಹೇಳು. ಹೀಗೆ ಕೇಳುತ್ತಿರುವ ಭಾರ್ಗವನನ್ನು ಕುರಿತು ಪುಷ್ಕರನು ಹೇಳುತ್ತಾನೆ.

೨-೩. ಗೃಹದಲ್ಲಿರುವ ವಿಘ್ನಕಾರಿಯಾದ ಗ್ರಹವಿಶೇಷವನ್ನು ಕರ್ಮಗಳಿಗೆ ವಿಘ್ನ ಉಂಟುಮಾಡುವುದಕ್ಕೂ, ಗಣಗಳ ಆಧಿಪತ್ಯವನ್ನು ನಡೆಸುವುದಕ್ಕೂ ಸಹ ಕೇಶವನೂ, ಬ್ರಹ್ಮಾದಿಗಳೂ ಸಹ ನಿರ್ಮಿಸಿರುವರು. ಅಂತಹ ಗ್ರಹವಿಶೇಷದಿಂದ

ತೇನೋಪಸೃಷ್ಟೋ ಯಸ್ತಸ್ಯ ಲಕ್ಷಣಾನಿ ನಿಬೋಧಮೇ ।
ಸ್ವಪ್ನೇಽವಗಾಹತೇಽತ್ಯರ್ಥಂ ಜಲಂ ಮುಂಡಂ ಚ ಪಶ್ಯತಿ　　॥ ೩ ॥

ಕಾಷಾಯವಾಸಸಶ್ಚೈವ ಕ್ರವ್ಯಾದಾಂಶ್ಚಾಧಿರೋಹತಿ ।
ಅಂತ್ಯಜೈರ್ಗರ್ದಭೈರುಷ್ಟ್ರೈಃ ಸಹೈಕತ್ರಾವತಿಷ್ಠತೇ　　॥ ೪ ॥

ವ್ರಜಮಾನಸ್ತಥಾತ್ಮಾನಂ ಮನ್ಯತೇಽನುಗತಂ ಪರೈಃ ।
ವಿಮನಾ ವಿಫಲಾರಂಭಃ ಸಂಸೀದನ್ನನಿಮಿತ್ತತಃ　　॥ ೫ ॥

ತೇನೋಪಸೃಷ್ಟೋ ಲಭತೇ ನ ರಾಜ್ಯಂ ರಾಜನಂದನಃ ।
ಯಾ ಕುಮಾರೀ ಚ ಭರ್ತಾರಂ ಅಪತ್ಯಂ ಗರ್ಭಮಂಗನಾ　　॥ ೬ ॥

ಆಚಾರ್ಯತ್ವಂ ಶ್ರೋತ್ರಿಯಶ್ಚ ನ ಶಿಷ್ಯೋಽಧ್ಯಯನಂ ತಥಾ ।
ವಣಿಕ್ ನ ಲಾಭಮಾಪ್ನೋತಿ ನ ಕೃಷಿಂ ತು ಕೃಷೀವಲಃ　　॥ ೭ ॥

---

ಪ್ರಾರಬ್ಧಕರ್ಮಕ್ಕೆ ತಕ್ಕಂತೆ ಕೆಲವರು ಆಕ್ರಾಂತರಾಗುತ್ತಾರೆ. ಅಂತಹವರ ಲಕ್ಷಣವನ್ನು ಹೇಳುತ್ತೇನೆ ಕೇಳು ಆ ರೀತಿ ಗ್ರಹಾಕ್ರಾಂತನಾದವನು ಸ್ವಪ್ನದಲ್ಲಿ ಜಲಪ್ರವಾಹದಲ್ಲಿ ಬೀಳುತ್ತಾನೆ. ತಲೆ ಇಲ್ಲದ ತನ್ನ ಮುಂಡವನ್ನು ತಾನೇ ನೋಡುತ್ತಾನೆ.

೪-೫. ಕಾಷಾಯಧಾರಿಗಳಾದ ಯತಿಗಳನ್ನೂ ಸ್ವಪ್ನದಲ್ಲಿ ನೋಡುತ್ತಾನೆ. ಮಾಂಸಾಹಾರಿಗಳಾದ ಹುಲಿಯೇ ಮೊದಲಾದ ಕ್ರೂರಪ್ರಾಣಿಗಳನ್ನು ಆರೋಹಣ ಮಾಡುತ್ತಾನೆ. ಚಂಡಾಲರೇ ಮೊದಲಾದ ಅಂತ್ಯಜಾತಿಯವರೊಡನೆಯೂ ಕತ್ತೆ, ಒಂಟೆ ಮೊದಲಾದ ಪ್ರಾಣಿಗಳೊಡನೆಯೂ ಒಂದೇ ಕಡೆ ವಾಸಿಸುತ್ತಿರುವಂತೆ ತನ್ನನ್ನು ತಿಳಿಯುತ್ತಾನೆ. ತಾನೊಬ್ಬನೇ ದಾರಿಯಲ್ಲಿ ನಡೆಯುತ್ತಿದ್ದರೂ, ಇತರರು ತನ್ನನ್ನು ಅನುಸರಿಸಿ ಬರುತ್ತಿರುವಂತೆ ತಿಳಿಯುತ್ತಾನೆ. ಯಾವ ಕಾರಣವೂ ಇಲ್ಲದೆ' ವೈಮನಸ್ಯದಿಂದ ಕೂಡಿ ಬೆಪ್ಪುಹಿಡಿದಿರುವವನಂತೆ ಅನುತ್ಸಾಹಿಯಾಗಿಯೂ, ಎಲ್ಲಾ ಕಾರ್ಯಗಳಲ್ಲಿಯೂ ನಿಷ್ಫಲವಾದ ಪ್ರಯತ್ನವುಳ್ಳವನಾಗಿಯೂ ಇರುತ್ತಾನೆ.

೬-೭. ಅಂತಹ ಗ್ರಹದಿಂದ ಆಕ್ರಮಿಸಲ್ಪಟ್ಟವನು ರಾಜಪುತ್ರನಾಗಿದ್ದರೂ ರಾಜ್ಯವನ್ನು ಹೊಂದುವುದಿಲ್ಲ. ಕುಮಾರಿಯಾದ ಸ್ತ್ರೀಯು ಇಷ್ಟನಾದ ಪತಿಯನ್ನು ಹೊಂದುವುದಿಲ್ಲ. ಗರ್ಭವನ್ನು ಹೊಂದಿದ ವನಿತೆಯೂ ಸಹ ಶಿಶುವನ್ನು ಹೊಂದುವು

ಸ್ನಪನಂ ತಸ್ಯ ಕರ್ತವ್ಯಂ ಪುಣ್ಯೇಽಹ್ನೀ ವಿಧಿಪೂರ್ವಕಂ ।
ಹಸ್ತಪುಷ್ಯಾಶ್ವಯುಕ್ಸೌಮ್ಯವೈಷ್ಣವಾನ್ಯತಮೇ ಶುಭೇ ॥ ೮ ॥

ನಕ್ಷತ್ರೇ ಚ ಮುಹೂರ್ತೇ ಚ ಮೈತ್ರೇ ವಾ ಬ್ರಹ್ಮದೈವತೇ ।
ಚರ್ಮಣ್ಯಾನಡುಹೆ ರಕ್ತೇ ಸ್ಥಾಪ್ಯಂ ಭದ್ರಾಸನಂ ಭವೇತ್ ॥ ೯ ॥

ಭದ್ರಾಸನೋಪವಿಷ್ಟಸ್ಯ ಸ್ವಸ್ತಿವಾಚ್ಯಂ ದ್ವಿಜೋತ್ತಮೈಃ ।
ಗೌರಸರ್ಷಪಕಲ್ಕೇನ ಮೇಧ್ಯೇನೋತ್ಸಾದಿತಸ್ಯ ಚ ॥ ೧೦ ॥

ಸರ್ವೌಷಧೈಃ ಸರ್ವಗಂಧೈಃ ಪ್ರಲಿಪ್ತಶಿರಸಸ್ತಥಾ ।
ಚತುರ್ಭಿಃ ಕಲಶೈಃ ಕಾರ್ಯಂ ಸ್ನಪನಂ ಮಂತ್ರಸಂಯುತಂ ॥ ೧೧ ॥

---

ದಿಲ್ಲ. ಸಮಗ್ರವಾದ ವೇದಗಳಲ್ಲಿ ನಿಶಿತ ಪಂಡಿತನಾಗಿದ್ದರೂ ಸಹ ತಾನು ಆಚಾರ್ಯತ್ವವನ್ನು ಹೊಂದುವುದಿಲ್ಲ. ಶಿಷ್ಯನಾಗಿದ್ದವನೂ ಸಹ ನಿರ್ವಿಘ್ನವಾದ ಅಧ್ಯಯನವನ್ನು ಹೊಂದುವುದಿಲ್ಲ. ವಾಣಿಜ್ಯ ವೃತ್ತಿಯಲ್ಲಿರುವವನು ಲಾಭವನ್ನೂ ಹೊಂದುವುದಿಲ್ಲ. ವ್ಯವಸಾಯಗಾರನು ಸರಿಯಾದ ಕೃಷಿಫಲವನ್ನು ಹೊಂದುವುದಿಲ್ಲ.

೮-೯. ಇಂತಹ ಗ್ರಹಾವಿಷ್ಟರಿಗೆ ಪುಣ್ಯಕರವಾದ ದಿನದಲ್ಲಿ ವಿಧಿಪೂರ್ವಕವಾಗಿ ಈ ಸ್ನಾನವನ್ನು ಮಾಡಿಸಬೇಕು. ಹಸ್ತ, ಪುಷ್ಯ, ಅಶ್ವಿನಿ, ಮೃಗಶಿರಾ, ಶ್ರವಣ ಇವುಗಳಲ್ಲಿ ಶುಭವಾದ ಯಾವುದಾದರೊಂದು ನಕ್ಷತ್ರದಲ್ಲಿಯಾಗಲಿ, ಅನೂರಾಧಾ, ರೋಹಿಣಿಗಳಲ್ಲಾಗಲಿ ಶುಭವಾದ ಮುಹೂರ್ತದಲ್ಲಿ ಮಾಡಿಸಬೇಕು. ಕೆಂಪಾಗಿರುವ ಎತ್ತಿನ ಚರ್ಮದ ಮೇಲೆ ಭದ್ರಾಸನವನ್ನಿಡಬೇಕು.

೧೦-೧೧. ಆ ಭದ್ರಾಸನದಲ್ಲಿ ಅವನು ಕುಳಿತ ಮೇಲೆ ಬ್ರಾಹ್ಮಣರಿಂದ ಸ್ವಸ್ತಿವಾಚನಮಾಡಿಸಬೇಕು. ಶುದ್ಧವಾದ ಬಿಳಿಯ ಸಾಸವೆಯ ಪುಡಿಯಿಂದ ಮೈಯನ್ನು ಉಜ್ಜಿ ಸ್ನಾನಮಾಡಿಸಿ, ಎಲ್ಲಾ ವಿಧವಾದ ಓಷಧಿದ್ರವ್ಯಗಳಿಂದಲೂ, ಗಂಧದ್ರವ್ಯಗಳಿಂದಲೂ, ಅವನ ತಲೆಯಲ್ಲಿ ಲೇಪಿಸಿ, ನಾಲ್ಕು ಕಲಶಗಳಿಂದ ಮಂತ್ರ ಪೂರ್ವಕವಾಗಿ ಸ್ನಾನಮಾಡಿಸಬೇಕು.

ತಥೈಕವರ್ಣಾಃ ಕಲಶಾಃ ಕರ್ತವ್ಯಾಸ್ತೇ ಹ್ರದಾಂಭಸಾ ।
ಅಶ್ವಸ್ಥಾನಾದ್ಗಜಸ್ಥಾನಾದ್ವಲ್ಮೀಕಾತ್ಸಂಗಮಾದ್ಧ್ರದಾತ್ || ೧೨ ||

ಮೃತ್ತಿಕಾಂ ರೋಚನಂ ಗಂಧಾನ್ ಗುಗ್ಗುಲಂ ತೇಷು ನಿಕ್ಷಿಪೇತ್ ।
ಸರ್ವೌಷಧೀಶ್ಚ ಬೀಜಾನಿ ಸ್ನಾನಮಂತ್ರಾನತಃ ಶೃಣು || ೧೩ ||

ಸಹಸ್ರಾಕ್ಷಂ ಶತಧಾರಮೃಷಿಭಿಃ ಪಾವನಂ ಕೃತಂ ।
ತೇನ ತ್ವಾಮಭಿಷಿಂಚಾಮಃ ಪಾವಮಾನೀಃ ಪುನಂತು ತೇ || ೧೪ ||

ಭಗಂ ತೇ ವರುಣೋ ರಾಜಾ ಭಗಂ ಶುಕ್ಲೋ ಬೃಹಸ್ಪತಿಃ ।
ಭಗಮಿಂದ್ರಶ್ಚ ವಾಯುಶ್ಚ ಭಗಂ ಸಪ್ತರ್ಷಯೋ ದದುಃ || ೧೫ ||

---

೧೨-೧೩. ಒಂದೇ ಬಣ್ಣವುಳ್ಳ ಕಲಶಗಳನ್ನು ಜಲಾಶಯದ ಜಲದಿಂದ ತುಂಬಿಡಬೇಕು. ಕುದುರೆಯ ಲಾಯದಿಂದಲೂ, ಗಜಶಾಲೆಯಿಂದಲೂ, ಹುತ್ತದಿಂದಲೂ, ನದಿ ಸಮುದ್ರವೊದಲಾದ ಸಂಗಮಸ್ಥಾನದಿಂದಲೂ, ಹೊಂಡದಿಂದಲೂ, ಮೃತ್ತಿಕೆಯನ್ನು ಸಂಗ್ರಹಿಸಿ, ಅದರೊಡನೆ ಗೋರೋಚನ, ಶ್ರೀಗಂಧ, ಗುಗ್ಗುಳ ಇವನ್ನೂ ಎಲ್ಲಾ ಓಷಧಿಗಳನ್ನೂ, ಬೀಜಗಳನ್ನೂ ಆ ಕುಂಭಗಳಲ್ಲಿ ಹಾಕಬೇಕು. ಅನಂತರ ಸ್ನಾನಮಾಡಿಸಬೇಕು, ಆ ಸ್ನಾನಮಂತ್ರಗಳನ್ನು ಹೇಳುತ್ತೇನೆ ಕೇಳು,

೧೪-೧೫. (ಇದು ಪೌರಾಣಿಕವಾದ ಮಂತ್ರ) ಋಷಿಗಳು ಇಂದ್ರನಿಗಾಗಿ ಶತಧಾರೆಯುಳ್ಳ ಪವಿತ್ರವಾದ ಯಾವ ಅಭಿಷೇಕವನ್ನು ಮಾಡಿದರೋ ಅಂತಹ ಅಭಿಷೇಕವನ್ನೇ ನಿನಗೆ ಮಾಡುತ್ತಿದ್ದೇವೆ. ಪವಮಾನಗಳೆಂಬ ಸೂಕ್ತಗಳು ನಿನ್ನನ್ನು ಪವಿತ್ರಗೊಳಿಸಲಿ. ರಾಜನಾದ ವರುಣನೂ, ಪರಿಶುದ್ಧನಾದ ಬೃಹಸ್ಪತಿಯೂ, ಇಂದ್ರನೂ, ವಾಯುವೂ, ಸಪ್ತಮಹರ್ಷಿಗಳೂ ಸಹ ನಿನಗೆ ಐಶ್ವರ್ಯವನ್ನು ಅಥವಾ ಕೀರ್ತಿಯನ್ನು ಉಂಟುಮಾಡಲಿ.

ಯತ್ತೇ ಕೇಶೇಷು ದೌರ್ಭಾಗ್ಯಂ ಸೀಮಂತೇ ಯಚ್ಚ ಮೂರ್ಧನಿ ।
ಲಲಾಟಕರ್ಣಯೋರಕ್ಷ್ಣೋರಾಪಸ್ತದ್ಘ್ನಂತು ತೇ ಸದಾ ॥ ೧೬ ॥

ದರ್ಭಪಿಂಜಲಮಾದಾಯ ವಾಮಹಸ್ತೇ ತತೋ ಗುರುಃ ।
ಸ್ನಾತಸ್ಯ ಸಾರ್ಷಪಂ ತೈಲಂ ಸ್ರುವೇಣೌದುಂಬರೇಣ ತು ॥ ೧೭ ॥

ಜುಹುಯಾನ್ಮೂರ್ಧ್ನಿ ಧರ್ಮಜ್ಞ ಚತುರ್ಥ್ಯಂತೈಶ್ಚ ನಾಮಭಿಃ ।
ಓಂಕಾರಪೂರ್ವೈರ್ಧರ್ಮಜ್ಞ ಸ್ವಾಹಾಕಾರಸಮನ್ವಿತೈಃ ॥ ೧೮ ॥

ಮಿತಾಯ ಸಂಮಿತಾಯಾಥ ಸಾಲಂಕಟಕಟಾಯ ಚ ।
ಕೂಶ್ಮಾಂಡರಾಜಪುತ್ರಾಯ ತಥೈವ ಚ ಮಹಾತ್ಮನೆ ॥ ೧೯ ॥

ನಾಮಭಿರ್ಬಲಿಮಂತ್ರೈಶ್ಚ ವಷಟ್ಕಾರಸಮನ್ವಿತೈಃ ।
ದದ್ಯಾಚ್ಚತುಷ್ಪಥೇ ಶೀರ್ಷೇ ಕುಶಾನಾಸ್ತೀರ್ಯ ಸರ್ವತಃ ॥ ೨೦ ॥

---

೧೬-೧೮. ನಿನ್ನ ಕೇಶಗಳಲ್ಲಿಯೂ, ಬೈತಲೆಯಲ್ಲಿಯೂ, ತಲೆಯಲ್ಲಿಯೂ, ಹಣೆ ಮತ್ತು ಕಿವಿಯ ಪ್ರದೇಶಗಳಲ್ಲಿಯೂ ಕಣ್ಣುಗಳಲ್ಲಿಯೂ ಸಹ ಯಾವ ದೌರ್ಭಾಗ್ಯವು ನೆಲೆಸಿದೆಯೋ ಅದನ್ನು ಈ ತೀರ್ಥೋದಕಗಳು ನಾಶಮಾಡಲಿ. ಈ ಮಂತ್ರದಿಂದ ಅಭಿಷೇಕಮಾಡಿ ಗುರುವಾಗಿರುವ ಪುರೋಹಿತನು ಸ್ನಾನಮಾಡಿದ ಆ ಮನುಷ್ಯನಿಗೆ ತನ್ನ ಎಡಗೈಯಿನಿಂದ ದರ್ಭದ ಪೊದೆಯನ್ನು ಧರಿಸಿ ತಲೆಯ ಮೇಲೆ ಸಾಸವೆಯ ಎಣ್ಣೆಯಿಂದ ಅತ್ತಿಯ ಸ್ರುವದಿಂದ (ಹೋಮಸಾಧನ) ಹೋಮ ಮಾಡಬೇಕು. ಆ ಹೋಮಗಳು ಮುಂದೆ ಹೇಳುವ ದೇವತಾವಾಚಕವಾದ ಚತುರ್ಥ್ಯಂತ ಪದದಿಂದ ಓಂಕಾರ ಪೂರ್ವಕವಾಗಿಯೂ ಸ್ವಾಹಾಕಾರದಿಂದ ಕೂಡಿಯೂ ಇರಬೇಕು,

೧೯-೨೦. ಮಿತನಿಗೂ, ಸಂಮಿತನಿಗೂ, ಸಾಲಂಕಟಕಟನಿಗೂ, ಕೂಶ್ಮಾಂಡ ರಾಜಪುತ್ರನಿಗೂ ಸಹ ಈ ನಾಮಗಳಿಂದಲೂ, ಬಲಿಪ್ರದಾನ ಮಂತ್ರಗಳಿಂದಲೂ, ವಷಟ್ಕಾರಪೂರ್ವಕವಾಗಿ, ನಾಲ್ಕು ದಾರಿಗಳು ಸೇರುವ ಸ್ಥಳದಲ್ಲಿ ನೆಲದ ಮೇಲೆ ದರ್ಭೆಗಳನ್ನು ಹರವಿ ಅದರ ಮೇಲೆ ಕುಳ್ಳಿರಿಸಿ ತಲೆಯ ಮೇಲೆ ಹೋಮ ಮಾಡಬೇಕು

**ಕೃತೇರಕ್ತಾಂಸ್ತಂಡುಲಾಂಶ್ಚ ಪಲಲೌದನಮೇವ ಚ ।**
**ಮತ್ಸ್ಯಾನ್ ಪಕ್ವಾಂಸ್ತಥೈವಾಮಾನ್ಮಾಂಸ ಮೇತಾವದೇವ ತು　　॥ ೨೧ ॥**

**ಪುಷ್ಪಂ ಚಿತ್ರಂ ಸುಗಂಧಂ ತು ಸುರಾಂ ಚ ತ್ರಿವಿಧಾಮಪಿ ।**
**ಮೂಲಕಂ ಪೂರಿಕಾಪೂಪಾಸ್ತಥೈವೈರಂಡಿಕಾಣಿ ಚ　　॥ ೨೨ ॥**

**ಏತಾನ್ಸರ್ವಾನುಪಾಹೃತ್ಯ ಭೂಮೌ ಕೃತ್ವಾ ತತಃ ಶಿರಃ ।**
**ವಿನಾಯಕಸ್ಯ ಜನನೀಮುಪತಿಷ್ಠೇತ್ತತೋಂಬಿಕಾಂ　　॥ ೨೩ ॥**

**ರೂಪಂ ದೇಹಿ ಯಶೋ ದೇಹಿ ಸೌಭಾಗ್ಯಂ ಸುಭಗೇ ಮಮ ।**
**ಪುತ್ರಾನ್ ದೇಹಿ ಧನಂ ದೇಹಿ ಸರ್ವಾನ್ಕಾಮಾಂಶ್ಚ ದೇಹಿ ಮೇ　　॥ ೨೪ ॥**

**ತತಃ ಶುಕ್ಲಾಂಬರಧರಃ ಶುಕ್ಲಮಾಲ್ಯಾನುಲೇಪನಃ ।**
**ಭೋಜಯೇದ್ಬ್ರಾಹ್ಮಣಾನ್ ದದ್ಯಾದ್ವಸ್ತ್ರಯುಗ್ಮಂ ಗುರೋರಪಿ　　॥ ೨೫ ॥**

---

೨೧-೨೨. ಅನಂತರ ಅಕ್ಕಿಯನ್ನು ಕೆಂಪು ಬಣ್ಣದಿಂದ ಸಂಸ್ಕರಿಸಿ ಆ ಕೆಂಪು ಅಕ್ಕಿಯೊಡನೆ ಮಾಂಸಾನ್ನವನ್ನೂ ಪಕ್ವವಾದ ಮತ್ತು ಪಕ್ವವಾಗಗ ಮತ್ಸ್ಯಗಳನ್ನೂ ಅಷ್ಟೇ ಪರಿಣಾಮದ ಮಾಂಸವನ್ನೂ ನಾನಾವಿಧವರ್ಣವುಳ್ಳ ಸುವಾಸನೆಯುಳ್ಳ ಹೂವುಗಳನ್ನೂ ಮೂರು ವಿಧವಾದ (ಪೈಷ್ಟೀ ಮೊದಲಾದ) ಮದ್ಯವನ್ನೂ, ಮೂಲಂಗಿ ಪೂರಿ, ಹರಳುಗಳನ್ನೂ ಸಹ,

೨೩-೨೪. ಇವುಗಳೆಲ್ಲವನ್ನೂ ಸೇರಿಸಿ ಆ ಸ್ನಾನಮಾಡಿದವನ ತಲೆಯನ್ನು ಭೂಮಿಯಲ್ಲಿ ಇಡಿಸಿ ವಿನಾಯಕನ ತಾಯಿಯಾದ ಅಂಬಿಕೆಗೆ ಇದನ್ನು ಅರ್ಪಿಸಿ ಹೀಗೆ ಪ್ರಾರ್ಥಿಸಬೇಕು. ದೇವಿಯೇ ನನಗೆ ಸುರೂಪವನ್ನು ಕೊಡು. ಯಶಸ್ಸನ್ನೂ ಕೊಡು. ಸೌಭಾಗ್ಯಶಾಲಿನಿಯಾದ ನೀನು ನನಗೂ ಸೌಭಾಗ್ಯವನ್ನು ಕೊಡು. ಪುತ್ರರನ್ನೂ, ಧನವನ್ನೂ ಕೊಡು. ನನ್ನ ಎಲ್ಲಾ ಇಷ್ಟಗಳನ್ನೂ ಕೊಡು.

೨೫-೨೬. ಅನಂತರ ಸ್ನಾನಮಾಡಿದ ಅಧಿಕಾರಿಯು ಬಿಳಿಯ ಉಡುಪನ್ನು ಉಟ್ಟು ಬಿಳಿಯ ಹೂವು ಮತ್ತು ಗಂಧಗಳಿಂದ ಅಲಂಕೃತನಾಗಿ ಬ್ರಾಹ್ಮಣರಿಗೆ ಭೋಜನಾದಿಗಳನ್ನು ಮಾಡಿಸಬೇಕು. ಗುರುವಿಗೆ ಎರಡು ವಸ್ತ್ರಗಳನ್ನು ದಾನಮಾಡ

ವಿನಾಯಕಸ್ನಾನಮಿದಂ ಯಶಸ್ಯಂ
ರಕ್ಷೋಹಣಂ ವಿಘ್ನವಿನಾಶಕಾರಿ ।
ಸರ್ವಾಮಯಘ್ನಂ ರಿಪುನಾಶಕಂ ಚ
ಕರ್ತವ್ಯಮೇತನ್ನಿಯಮೇನ ರಾಮ ॥ ೨೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ಭಾರ್ಗವಂಪ್ರತಿ ಪುಷ್ಕರೋಪಾಖ್ಯಾನೇ ವಿನಾಯಕ ಸ್ನಾನವರ್ಣನಂನಾಮ ಪಂಚೋತ್ತರಶತತಮೋಽಧ್ಯಾಯಃ

---

ಬೇಕು. ಎಲೈ ಭಾರ್ಗವನೇ ಈ ವಿನಾಯಕ ಸ್ನಾನವು ಯಶಃಪ್ರದವಾಗಿಯೂ, ರಾಕ್ಷಸನಾಶಕವಾಗಿಯೂ, ಸರ್ವವಿಘ್ನನಾಶಕಾರಿಯೂ ಆಗಿದೆ. ಸರ್ವರೋಗ ನಾಶಕವಾಗಿಯೂ, ಶತ್ರುಸಂಹಾರಕ್ಕೆ ಕಾರಣವಾಗಿಯೂ ಇರುವ ಈ ಸ್ನಾನವನ್ನು ನಿಯತವಾಗಿ ಮಾಡಿಯೇ ಮಾಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ವಿನಾಯಕ ಸ್ನಾನವರ್ಣನವೆಂಬ ನೂರ ಐದನೆಯ ಅಧ್ಯಾಯ ಮುಗಿದಿದೆ.



## ನೂರಐದನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿಯೂ ಕಾಮ್ಯಸ್ನಾನಪ್ರಕರಣಕ್ಕೆ ಅನುಬಂಧಿಸಿರುವ ವಿನಾಯಕ ಸ್ನಾನವೆಂಬ ಕಾಮ್ಯಸ್ನಾನವನ್ನು ಪ್ರಯೋಗಕ್ರಮದೊಡನೆ ವಿಶದವಾಗಿ ನಿರೂಪಿಸಿರುವರು.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷಡುತ್ತರಶತತಮೋಽಧ್ಯಾಯಃ

॥ ಪುಷ್ಕರ ಉವಾಚ ॥

**ಸ್ನಾನಮನ್ಯತ್ಪ್ರವಕ್ಷ್ಯಾಮಿ ತವಾಹಂ ದುರಿತಾಪಹಂ ।**
**ದಾನವೇಂದ್ರಾಯ ಭುವನೇ ಯಜ್ಞಗಾದೋಶನಾಃ ಪುರಾ ॥ ೧ ॥**

**ಧನ್ಯಂ ಯಶಸ್ಯಮಾಯುಷ್ಯಂ ಸರ್ವಶತ್ರುಕ್ಷಯಂಕರಂ ।**
**ಪ್ರಭಾತಾಯಾಂ ತು ಶರ್ವರ್ಯಾಂ ಭಾಸ್ಕರೇಽನುದಿತೇ ತಥಾ ॥ ೨ ॥**

---

### ನೂರ ಆರನೆಯ ಅಧ್ಯಾಯ.

೧-೨. ಪುಷ್ಕರನು ಹೇಳುತ್ತಾನೆ. ಎಲೈ ರಾಮನೇ ಸರ್ವಪಾಪನಾಶಕವಾದ ಮತ್ತೊಂದು ಸ್ನಾನವನ್ನು ನಿನಗೆ ಹೇಳುತ್ತಾನೆ. ಇದನ್ನು ಪೂರ್ವದಲ್ಲಿ ಶುಕ್ರಾಚಾರ್ಯನು ದಾನವರಾಜನಿಗೆ ಹೇಳಿದ್ದನು. ಇದು ಬಹಳ ಉತ್ತಮವಾಗಿಯೂ ಯಶಃ ಪ್ರದವಾಗಿಯೂ, ಆಯುಃ ಪ್ರದವಾಗಿಯೂ ಸರ್ವಶತ್ರುನಾಶಕವಾಗಿಯೂ ಇದೆ. ಈ ಸ್ನಾನವನ್ನು ಬೆಳಗಿನ ಝಾಮದಲ್ಲಿ ಸೂರ್ಯನು ಉದಯಿಸುವುದರೊಳಗೆ ಮುಂದೆ ಹೇಳುವ ಕ್ರಮದಿಂದ ಮಾಡಬೇಕು.

ಸ್ನಾಯೀತ ಭಾರ್ಗವಶ್ರೇಷ್ಠ ವಿಧಿದೃಷ್ಟೇನ ಕರ್ಮಣಾ ।
ಸೌವರ್ಣಂ ರಾಜತಂ ಕುಂಭಮಥವಾಪಿ ಮಹೀಮಯಂ ॥ ೩ ॥

ನಾದೇಯೈಃ ಸಾಗರೈಸ್ತೋಯೈಃ ಕಲ್ಪಯಿತ್ವಾ ಯಥಾವಿಧಿ ।
ಓಷಧೀಃ ವಿನ್ಯಸೇತ್ತತ್ರ ಸಮಭಾಗಾಃ ಸುಚೂರ್ಣಿತಾಃ ॥ ೪ ॥

ಜಯಾ ಚ ವಿಜಯಾ ಚೈವ ತಥಾ ಸೂಕ್ಷ್ಮಫಲಾನಿ ಚ ।
ಪ್ರಸನ್ನಮುಖಬೀಜಾನಿ ಭಾಂಡೀರಕುಸುಮಾನಿ ಚ ॥ ೫ ॥

ಕ್ಷೀರಜಾಪತ್ರನಿರ್ಮಾಲ್ಯಂ ದೇವೀನಿಸ್ಸಾರಮೇವ ಚ ।
ಕಲ್ಲೀ ಪರಾಂಗನಾ ಚೈವ ಗಜೇಂದ್ರಸ್ಯ ಚ ಮಂಜರೀ ॥ ೬ ॥

ಕ್ಷುದ್ರಜಂ ಕರಜಂ ಚೈವ ಧನೇದ್ವೇದ್ವೇ ವಿಭಾವರೀ ।
ಮಹೌಘಂ ಪೂರ್ತದಂ ಚೈವ ಭುವಂ ಯಕ್ಷಭುವಂ ತಥಾ ॥ ೭ ॥

---

೩-೪. ಚಿನ್ನದ ಅಥವಾ ಬೆಳ್ಳಿಯ ಕೊನೆಗೆ ಮಣ್ಣಿನದಾಗಲಿ ಕುಂಭವನ್ನು ಯಥಾ ವಿಧಿಯಾಗಿ ಸ್ಥಾಪಿಸಿ ಆ ಕುಂಭದಲ್ಲಿ ಎಳೆನೀರನ್ನೂ ಸಮುದ್ರಜಲವನ್ನೂ ತುಂಬಬೇಕು. ಆ ಕುಂಭದಲ್ಲಿ ಇಲ್ಲಿ ಹೇಳಲಾಗುವ ಓಷಧಿಗಳನ್ನು ಚೂರ್ಣವಾಡಿ ಸಮಭಾಗವಾಗಿ ಹಾಕಬೇಕು. ಹರೀತಕೀ (ಅಳಲೆಕಾಯಿ) ಹರಿದ್ರಾ (ಅರಿಶಿನ) ಮತ್ತು ಸಣ್ಣಸಣ್ಣ ಫಲಗಳು.

೫-೮. ಮುಂಭಾಗದಲ್ಲಿ ಸ್ಪಷ್ಟವಾದ ಬೀಜಗಳುಳ್ಳ ಮಂಜಿಷ್ಠಾ ಹೂವುಗಳು ಕ್ಷೀರಜಾ ಎಂಬ ಓಷಧಿಯ ಒಣಎಲೆ, ಮುರ್ವಾ ಅಥವಾ ಭೂತುಂಬಿ. ಶಾಖೋಟಕ, ಅರಿಶಿನ, ಶ್ರೀತಾಲೀ, ಸಲ್ಲಕಿಯ ಗೊಂಚಲು, ಆಮಲಕ, ಹುಲಿಯುಗುರುಗಿಡ, ದ್ವಿಗುಣವಾದ ಕೊತ್ತುಂಬರಿ, ಮೇದಾ ಎಂಬ ಗಿಡ, ಎರಡು ವಿಧವಾದ ಆಲದ ಮರದ ಭೇದಗಳು. ಅತಿಬಜೆ ಯಕ್ಷದರಾ, ಪಚ್ಚಕರ್ಪೂರ, ಕಸ್ತೂರಿ, ಆನೆಯ ಮದೋದಕ

ಶಶಾಂಕಂ ಮೃಗದರ್ಪಂ ಚ ದಾನಂ ಚ ಕರಿಣಸ್ತಥಾ ।
ಓಷಧ್ಯಃ ಕಥಿತಾಸ್ತುಭ್ಯಂ ದಾನೇ ಮಂತ್ರಮತಃ ಶೃಣು ॥ ೮ ॥

ಓಂ ನಮೋ ಭಗವತೇ ರುದ್ರಾಯ ಧವಲಪಾಂಡುರೋಪಚಿತಭಸ್ಮಾನುಲಿಪ್ತ
ಗಾತ್ರಾಯ ॥ ತದ್ಯಥಾ ಜಯ ಜಯ ವಿಜಯ ವಿಜಯ ಸರ್ವಾನ್
ಶತ್ರೂನಮುಕಸ್ಯ ಕಲಹವಿಗ್ರಹವಿವಾದೇಷು ಭಂಜ ಭಂಜ ಮಥಮಥ
ಸರ್ವತ್ರಪ್ರತ್ಯಕ್ಷಿಕಾಂ ಯೋಽಸೌಯುಗಾಂತಕಾಲೇ ದಧ್ಯಕ್ಷತೈರಿಮಾಂ
ಪೂಜಾಂ ರೌದ್ರೀಮೂರ್ತಿಸಹಸ್ರಾಂ ಸುಸತ್ವಾಂ ರಕ್ಷತು ಜೀವಿಕಾಂ
ಸಂವರ್ತಕಾಗ್ನಿತುಲ್ಯಶ್ಚ ತ್ರಿಪುರಾರ್ತಿಕರಃ ಯಃ ಸರ್ವದೇವಮಯಃ
ಸೋಽಪಿ ತವ ರಕ್ಷತು ಜೀವಿತಂ ನಿಖಿನಿಖಿನಿಖಿಸ್ವಾಹಾ ॥

ಏವಂಸ್ನಾತಸ್ತ್ವನೇನೈವ ಗಾತ್ರೇಣ ತಿಲತಂಡುಲಂ ।
ಘೃತಾಕ್ತಂ ಜ್ವಲಿತೇ ವಹ್ನೌ ಜುಹುಯಾತ್ಪ್ರಯತಸ್ಸದಾ ॥ ೯ ॥

ತತಃ ಸಂಪೂಜನಂ ಕುರ್ಯಾದ್ದೇವದೇವಸ್ಯ ಶೂಲಿನಃ ।
ಘೃತಕ್ಷೀರಾಭಿಷೇಕೇಣ ಗಂಧಪುಷ್ಪಫಲಾಕ್ಷತೈಃ ॥ ೧೦ ॥

---

ಈ ಔಷಧಿಗಳೆಲ್ಲವನ್ನೂ ನಿನಗೆ ಹೇಳಿದ್ದಾಯಿತು. ಈ ಓಷಧಿಗಳನ್ನು ಕುಂಭಕ್ಕೆ ಹಾಕುವಾಗ ಹೇಳಬೇಕಾದ ಮಂತ್ರವನ್ನು ನಿನಗೆ ಹೇಳುತ್ತೇನೆ ಕೇಳು.

ಓಂ ನಮೋ ಮೊದಲು ನಿಖಿನಿಖ ಸ್ವಾಹಾ, ಈ ಮಂತ್ರದಿಂದ ಹಾಕಬೇಕು

೯–೧೦. ಈ ರೀತಿ ಸ್ನಾನಮಾಡಿ ಸ್ನಾನಹೊಂದಿದ ಆ ದೇಹದಿಂದಲೇ ಎಳ್ಳು ಮತ್ತು ಅಕ್ಕಿಯನ್ನು ತುಪ್ಪದಲ್ಲಿ ನೆನೆಸಿ ಜ್ವಲಿಸುತ್ತಿರುವ ಅಗ್ನಿಯಲ್ಲಿ ಶುಚಿಯಾಗಿದ್ದು ಹೋಮಮಾಡಬೇಕು. ಅನಂತರ ದೇವದೇವನಾದ ಶಂಕರನಿಗೆ ತುಪ್ಪ ಹಾಲು ಇವುಗಳ ಅಭಿಷೇಕದಿಂದಲೂ, ಗಂಧ, ಪುಷ್ಪ, ಫಲ, ಅಕ್ಷತೆ ಇವುಗಳಿಂದಲೂ ಪೂಜೆಯನ್ನು ಮಾಡಬೇಕು.

ದೀಪಧೂಪನಮಸ್ಕಾರೈಃ ತಥಾವಾನ್ನೇನ ಭೂರಿಣಾ ।
ಗೀತವಾದ್ಯೈಃ ಸುಮಧುರೈರ್ಬ್ರಾಹ್ಮಣಾನ್ಸ್ವಸ್ತಿವಾಚನೈಃ ॥ ೧೧ ॥

ಮಾಹೇಶ್ವರಸ್ನಾನಮಿದಂಹಿ ಕೃತ್ವಾ
ರಕ್ಷೋಹಣಂ ಶತ್ರುನಿಬರ್ಹಣಂ ಚ ।
ಕಾಮಾನವಾಪ್ನೋತಿ ನರಸ್ತು
ಸರ್ವಾನ್ಯಾನ್ರಾಮ ಕಾಂಕ್ಷಿನ್ಮನಸೇಚ್ಛತೀತಿ ॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ
ಮಾಹೇಶ್ವರಸ್ನಾನವರ್ಣನಂ ನಾಮ
ಷಡುತ್ತರಶತತಮೋಽಧ್ಯಾಯಃ

---

೧೧. ದೀಪಧೂಪ ನಮಸ್ಕಾರಾದಿ ಉಪಚಾರಗಳಿಂದಲೂ, ಅನ್ನರಾಶಿಯ ನೈವೇದ್ಯದಿಂದಲೂ, ಮಧುರವಾದ ಗೀತನೃತ್ಯಾದಿಗಳಿಂದಲೂ, ಬ್ರಾಹ್ಮಣರ ಸ್ವಸ್ತಿ ವಾಚನದಿಂದಲೂ, ಆ ಪೂಜೆಯು ವಿಜೃಂಭಣೆಯಿಂದ ನಡೆಯಬೇಕು. ಈ ವಿಧವಾದ ಮಾಹೇಶ್ವರಸ್ನಾನವನ್ನು ಮಾಡಿದವನು ರಕ್ಷೋನಾಶವನ್ನೂ ಶತ್ರುನಾಶವನ್ನೂ ಹೊಂದುತ್ತಾನೆ. ಮತ್ತು ಮನಸ್ಸಿನಲ್ಲಿ ತಾನು ಅಪೇಕ್ಷಿಸುವ ಎಲ್ಲಾ ಇಷ್ಟಗಳನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ
ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಮಾಹೇಶ್ವರಸ್ನಾನವರ್ಣನವೆಂಬ ನೂರ ಆರನೆಯ
ಅಧ್ಯಾಯವು ಮುಗಿದಿದೆ.



## ನೂರ ಆರನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿಯೂ ಶುಕ್ರಾಚಾರ್ಯನು ದಾನವ ರಾಜನಿಗೆ ಹಿಂದೆ ಉಪದೇಶ ಮಾಡಿದ್ದ ಮಾಹೇಶ್ವರಸ್ನಾನವೆಂಬ ಕಾಮ್ಯಕರ್ಮವನ್ನು ಪ್ರಯೋಗವಿಧಿಯೊಡನೆ ನಿರೂಪಿಸಿರುತ್ತಾರೆ.

*

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ : —

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಸಪ್ತೋತ್ತರಶತತಮೋಽಧ್ಯಾಯಃ

**॥ ಪುಷ್ಕರ ಉವಾಚ ॥**

**ಸ್ನಾನಾನ್ಯನ್ಯಾನಿ ತೇ ವಕ್ಷ್ಮಿ ನಿಬೋಧ ಗದತೋ ಮಮ ।**
**ರಕ್ಷೋಘ್ನಾನಿ ಯಶಸ್ಯಾನಿ ಮಂಗಲ್ಯಾನಿ ವಿಶೇಷತಃ ॥ ೧ ॥**

**ಸ್ನಾನಂ ಘೃತೇನ ಕಥಿತಂ ಚಾಯುಷೋ ವರ್ಧನಂ ಪರಂ ।**
**ರಾಮ ಗೋಶಕೃತಾ ಸ್ನಾನಂ ಪರಂ ಲಕ್ಷ್ಮೀವಿವರ್ಧನಂ ॥ ೨ ॥**

**ಸ್ನಾನಂ ಚ ಕಥಿತಂ ದಧ್ನಾ ಪರಂ ಲಕ್ಷ್ಮೀವಿವರ್ಧನಂ ।**
**ತಥಾ ದರ್ಭೋದಕಸ್ನಾನಂ ಸರ್ವಪಾಪನಿಬರ್ಹಣಂ ॥ ೩ ॥**

---

### ನೂರ ಏಳನೆಯ ಅಧ್ಯಾಯ.

೧–೨. ಪುಷ್ಕರನು ಹೇಳುತ್ತಾನೆ:—ಎಲೈ ಭಾರ್ಗವನೇ ಇದಕ್ಕಿಂತಲೂ ಬೇರೆಯಾಗಿರುವ ಅನೇಕ ಸ್ನಾನಗಳುಂಟು. ಅವನ್ನೂ ಹೇಳುತ್ತೇನೆ ಕೇಳು. ಈ ಸ್ನಾನಗಳೂ ಕೂಡ ಬಹಳ ಮಟ್ಟಿಗೂ ಪೀಡಾಪರಿಹಾರಕಗಳಾಗಿಯೂ ಇವೆ. ಆಜ್ಯದಿಂದ ಮಾಡುವ ಸ್ನಾನವು ಬಹಳಮಟ್ಟಿಗೂ ಆಯುಸ್ಸಿನ ಅಭಿವೃದ್ಧಿಗೆ ಕಾರಣವಾಗುತ್ತದೆ. ಹಸುವಿನ ಸಗಣಿಯಿಂದ ಮಾಡುವ ಸ್ನಾನವೂ ಕೂಡ ಬಹಳ ಮಟ್ಟಿಗೂ ಐಶ್ವರ್ಯಪ್ರದವಾಗುತ್ತದೆ.

೩–೪. ದಧಿಯ (ಮೊಸರಿನ) ಸ್ನಾನವೂ ಸಹ ಬಹಳಮಟ್ಟಿಗೂ ಸಂಪದಭಿವೃದ್ಧಿಗೆ ಕಾರಣವಾಗುತ್ತದೆ. ಹಾಗೆಯೋ ದರ್ಭೋದಕ ಸ್ನಾನವೂ ಸರ್ವಪಾಪ ನಾಶಕವಾದೀತು. ಮುತ್ತುಗ, ಬಿಲ್ವ, ಕಮಲ, ದರ್ಭ ಇವುಗಳ ಸ್ನಾನವೂ ಸಹ

**ಪಲಾಶಬಿಲ್ವಕಮಲಕುಶಸ್ನಾನಂ ಪುರೋ ಹಿತಂ ।**
**ವಚಾ ಹರಿದ್ರಾ ಮಂಜಿಷ್ಠಾ ತಗರಂ ಚಾರಕಂ ತಥಾ ॥ ೪ ॥**

**ಸ್ನಾನಮೇತದ್ವಿನಿರ್ದಿಷ್ಟಂ ರಕ್ಷೋಘ್ನಂ ಪಾಪಸೂದನಂ ।**
**ವಚಾಹರಿದ್ರಯಾ ಯುಕ್ತಂ ಸ್ನಾನಂ ರಕ್ಷೋಹಣಂ ಪರಂ ॥ ೫ ॥**

**ಆಯುಷ್ಯಂ ಚ ಯಶಸ್ಯಂ ಚ ಧನ್ಯಂ ಮೇಧಾವಿವರ್ಧನಂ ।**
**ಸ್ನಾನಂ ಪವಿತ್ರಂ ಮಂಗಲ್ಯಂ ತಥಾ ಕಾಂಚನವಾರಿಣಾ ॥ ೬ ॥**

**ಕ್ರಮಾದೂನತರೇ ಕಿಂಚಿದ್ರೂಪ್ಯತಾಮ್ರೋದಕೈಸ್ತತಃ ।**
**ತಥಾ ರತ್ನೋದಕಸ್ನಾನಂ ಸಂಗ್ರಾಮವಿಜಯಾವಹಂ ॥ ೭ ॥**

**ವೈಡೂರ್ಯಂ ಮಧ್ಯತಃ ಕೃತ್ವಾ ಪ್ರವಾಲೈಃ ಪರಿವಾರಯೇತ್ ।**
**ತೇನ ಪಾತ್ರೇಣ ಯತ್ ಸ್ನಾನಂ ಸರ್ವಕಾಮಕರಂ ಹಿತಂ ॥ ೮ ॥**

---

ಮುಂದಿನ ಅಭ್ಯುದಯಕ್ಕೆ ಹಿತಕರವಾದೀತು. ಬಜೆ, ಅರಿಶಿನ, ಮಂಜಿಷ್ಠಾ, ನಂಧ್ಯಾವರ್ತ, ಅಂತರದಾವರೆ ಇವುಗಳಿಂದ ಮಾಡಬಹುದಾದ ಸ್ನಾನವೂ ಸಹ ಹಾಗೆಯೇ ಹಿತಪ್ರದ.

೫-೬. ಈ ಸ್ನಾನವೂ ರಾಕ್ಷಸಾದಿ ಬಾಧಾನಿವರ್ತಕವೆಂದೂ, ಪಾಪನಾಶಕ ವೆಂದೂ ಹೇಳಲ್ಪಟ್ಟಿದೆ. ಬಜೆ ಮತ್ತು ಅರಿಶಿನ ಇವುಗಳಿಂದ ಕೂಡಿದ ಸ್ನಾನವೂ ಸಹ ಬಹಳ ಮಟ್ಟಿಗೂ ಪೀಡಾಪರಿಹಾರಕವಾಗುತ್ತದೆ. ಆಯಸ್ಸನ್ನೂ, ಯಶಸ್ಸನ್ನೂ ಧನಸಮೃದ್ಧಿಯನ್ನೂ, ಬುದ್ಧಿಶಕ್ತಿಯನ್ನೂ ಹೆಚ್ಚಿಸತಕ್ಕದ್ದು. ಹಾಗೆಯೇ ಸುವರ್ಣೋ ದಕ ಸ್ನಾನವೂ ಸಹ ಪವಿತ್ರವಾದ ಮತ್ತು ಮಂಗಲಪ್ರದವಾದ ಸ್ನಾನ.

೭-೮. ಹೀಗೆಯೇ ಬೆಳ್ಳಿಯ ಮತ್ತು ತಾಮ್ರದ ತೀರ್ಥದಿಂದ ಮಾಡಬಹು ದಾದ ಸ್ನಾನಗಳೂ ಇದಕ್ಕಿಂತ ಸ್ವಲ್ಪ ಮಟ್ಟಿಗೆ ಕಡಮೆಯ ಅಂತಸ್ತಿಗೆ ಸೇರುತ್ತವೆ ಹಾಗೆಯೇ ರತ್ನತೀರ್ಥದಿಂದ ಮಾಡಬಹುದಾದ ಸ್ನಾನವು ಯುದ್ಧದಲ್ಲಿ ಜಯಪ್ರದ ವಾದೀತು. ವೈಡೂರ್ಯಮಣಿಯನ್ನು ಮಧ್ಯದಲ್ಲಿ ಇಟ್ಟು ಅದರ ಸುತ್ತಲೂ ಚಿಗುರುಗಳಿಂದ ಅಥವಾ ಹವಳಗಳಿಂದ ಅದನ್ನು ಸುತ್ತಿಟ್ಟು ಅಂತಹ ಪಾತ್ರದ ಜಲದಲ್ಲಿ ಮಾಡಬಹುದಾದ ಆ ಸ್ನಾನವೂ ಸಹ ಸಕಲವಿಧವಾದ ಇಷ್ಟಸಿದ್ಧಿಗೂ ಕಾರಣವಾದೀತು.

ಸ್ನಾನಂ ಸರ್ವೌಷಧೈರ್ಮುಖ್ಯಂ ವಿವಾದೇ ವಿಜಯಪ್ರದಂ ।
ಸರ್ವಗಂಧೋದಕಸ್ನಾನಂ ಸೌಭಾಗ್ಯಾರೋಗ್ಯಕಾರಕಂ ॥ ೯ ॥

ತಥಾ ಬೀಜೋದಕಸ್ನಾನಂ ಸರ್ವಕರ್ಮಪ್ರಸಾಧಕಂ ।
ತಥೈವಾಮಲಕಸ್ನಾನಮಲಕ್ಷ್ಮೀನಾಶನಂ ಪರಂ ॥ ೧೦ ॥

ತಿಲಸಿದ್ಧಾರ್ಥಕೈಃ ಸ್ನಾನಮಮಂಗಲ್ಯಪ್ರಣಾಶನಂ ।
ಕೇವಲೈರ್ವಾ ತಿಲೈಃ ಸ್ನಾನಮಥವಾ ಗೌರಸರ್ಷಪೈಃ ॥ ೧೧ ॥

ಸ್ನಾನಂ ಪ್ರಿಯಂಗುನಾ ಪ್ರೋಕ್ತಂ ತಥಾ ಸೌಭಾಗ್ಯವರ್ಧನಂ ।
ಸೌಭಾಗ್ಯಕಂ ತಥಾ ಸ್ನಾನಂ ನಾಗಕಾಂತಾ ಪ್ರಿಯಂಗುಭಿಃ ॥ ೧೨ ॥

---

೯-೧೦. ಎಲ್ಲಾ ವಿಧವಾದ ಓಷಧಿಗಳಿಂದ ಮಾಡಬಹುದಾದ ಸ್ನಾನವು ಬಹಳ ಮುಖ್ಯವಾದುದು ಇದು ವಿವಾದದಲ್ಲಿ ವಿಜಯವನ್ನು ಗಳಿಸಲು ಬಹಳ ಸಹ ಕಾರಿಯಾದೀತು. ಎಲ್ಲಾ ಸುಗಂಧ ದ್ರವ್ಯಗಳಿಂದ ಮಾಡಬಹುದಾದ ಗಂಧೋದಕ ಸ್ನಾನವೂ ಬಹಳ ಮಟ್ಟಿಗೂ ಭಾಗ್ಯಪ್ರದವಾದೀತು. ಹಾಗೆಯೇ ಎಲ್ಲಾ ಬೀಜ ಗಳನ್ನೂ ಸಂಗ್ರಹಿಸಿ ಮಾಡಬಹುದಾದ ಬೀಜೋದಕ ಸ್ನಾನವೂ ಎಲ್ಲಾ ಕಾರ್ಯ ದಲ್ಲಿಯೂ ಸಿದ್ಧಿಪ್ರದವಾದೀತು. ಹಾಗೆಯೇ ಆಮಲಕ (ನೆಲ್ಲಿ) ಸ್ನಾನವೂ ಸಹ ಎಲ್ಲಾ ಅಮಂಗಳಗಳಿಗೂ ಔಷಧವಾದೀತು. (ಮಂಗಳಪ್ರದವೆಂದು ತಾತ್ಪರ್ಯ.)

೧೧-೧೨. ಎಳ್ಳು ಮತ್ತು ಬಿಳಿಯ ಸಾಸವೆ ಇವುಗಳಿಂದ ಕೂಡಿದ ಸ್ನಾನವೂ ಸಹ ಬಹುಮಟ್ಟಿಗೂ ಅಮಂಗಲಕ್ಕೆ ನಾಶಕವಾದೀತು ಕೇವಲ ಎಳ್ಳಿನಿಂದಾಗಲಿ, ಕೇವಲ ಬಿಳಿಯ ಸಾಸವೆಯಿಂದಲಾಗಲಿ, ನವಣೆಯಿಂದಲಾಗಲಿ ಮಾಡಬಹುದಾದ ಸ್ನಾನವೂ ಸಹ ಬಹಳಮಟ್ಟಿಗೂ ಭಾಗ್ಯಪ್ರದವೆಂದು ಹೇಳಲ್ಪಟ್ಟಿದೆ. ಹಾಗೆಯೇ ನಾಗಕಾಂತಾ, ಮತ್ತು ನವಣೆ ಇವುಗಳ ಸ್ನಾನವೂ ಸಹ ಸೌಭಾಗ್ಯಪ್ರದವೆಂದು ಹೇಳಲಾಗಿದೆ.

ಪುರೋಚಾರುಕಕುಷ್ಠೈಶ್ಚ ತಥೈವ ಚ ವಿನಿರ್ದಿಶೇತ್ ।
ಧಾತ್ರೀಫಲೇನ ಪದ್ಮೈಶ್ಚ ತಥಾಮಲಕವಾರಿಣಾ ॥ ೧೩ ॥

ಲಕ್ಷ್ಮೀವೃದ್ಧಿಕರಂ ಸ್ನಾನಂ ಕಥಿತಂ ಭಾರ್ಗವೋತ್ತಮ ।
ಪದ್ಮೋತ್ಪಲಕದಂಬೈಶ್ಚ ತಥಾ ಲಕ್ಷ್ಮೀವಿವರ್ಧನಂ ॥ ೧೪ ॥

ಬಲಾಮತಿಬಲಾಂ ಚೈವ ತಥಾ ನಾಗಬಲಾಮಪಿ ।
[1]ಬಲಾಂಮೋಟೀಂ ಚತುರ್ಥೀಂ ತು ಸ್ನಾನಂ ವೈ ಬಲವರ್ಧನಂ ॥ ೧೫ ॥

ಬ್ರಹ್ಮಾ ಕರ್ಕೋಟಕೀಮೂಲಂ ಕುಮಾರೀ ಪದ್ಮಚಾರಿಣೀ ।
ಸ್ನಾನೇ ರೋಗವಿನಾಶಾಯ ಸ್ಮೃತಾಃ ಪ್ರತ್ಯೇಕಶೋ ದ್ವಿಜ ॥ ೧೬ ॥

ಮಾಂಸೀ ಮುರಾ ಚೋರಕ ನಾಗಪುಷ್ಪೈಃ
ಸ್ನಾನಂ ಸಮಸ್ತಾಶುಭನಾಶಕಾರಿ ।

---

೧೩-೧೪. ಪುರಾ ಎಂಬ ಸುಗಂಧಿದ್ರವ್ಯ, ಶರಬೀಜ ಮತ್ತು ಚಂಗಲ್ ಕೋಷ್ಠದಿಂದಲೂ ಹೀಗೆಯೇ ಸ್ನಾನಮಾಡಿಸಬೇಕು. ನೆಲ್ಲಿಯ ಫಲಗಳಿಂದಲೂ ಪದ್ಮಗಳಿಂದಲೂ ನೆಲ್ಲಿಯ ಜಲದಿಂದಲೂ ಮಾಡಬಹುದಾದ ಸ್ನಾನವು ಐಶ್ವರ್ಯಪ್ರದವೆಂದೂ ಹೇಳಲ್ಪಟ್ಟಿದೆ. ಪದ್ಮ, ನೈದಲೆ, ಕದಂಬ ಇವುಗಳ ಸ್ನಾನವೂ ಸಹ ಐಶ್ವರ್ಯಪ್ರದವೆಂದು ಹೇಳಿರುವರು.

೧೫-೧೬. ಕಳ್ಳಂಗಡಲೆ, ಭಾರದ್ವಾಜೀ, ಬೋಳಂಗಡಲೆ, ನಾಗದಮನೀ ಗಿಡ ಇವುಗಳ ಸ್ನಾನವೂ ಸಹ ಬಲವೃದ್ಧಿಗೆ ಕಾರಣವಾದೀತು. ಹೂವರಚಿಮರ ಲೋಳಿರಸದ ಬೇರು, ಸಣ್ಣಗೋರಂಟಿ ಬೆಟ್ಟದಾವರೆ ಇವುಗಳ ಪ್ರತ್ಯೇಕ ಸ್ನಾನವೂ ಸಹ ರೋಗನಾಶಕ್ಕೆ ಕಾರಣವಾಗುತ್ತದೆ. ಒಟ್ಟುಗೂಡಿಸುವುದರಿಂದಲ್ಲದೆ ಬೇರೆ ಬೇರೆಯಾಗಿ ಸ್ನಾನಕ್ಕೆ ಉಪಯೋಗಿಸಿದರೂ ರೋಗನಾಶರೂಪವಾದ ಫಲ ಉಂಟು ಎಂದು ತಾತ್ಪರ್ಯ.

೧೭. ಜಟಾಮಾಂಸೀ, ಮುರಿ ಎಂಬ ಗಂದಿಗರ ದಿನಸು, ಕಂಟುಕಚೋರ, ಸಂಪಿಗೆ ಹೂವು ಇವುಗಳ ಸ್ನಾನವೂ ಸಹ ಎಲ್ಲಾ ಅಶುಭಗಳಿಗೂ ನಾಶಕವಾಗುತ್ತದೆ.

---

1 ಬಲಾಮೋಟಾಂ ಎಂದು ಪಾಠವಿರಬೇಕು.

ತುರುಷ್ಕಕಕ್ಕೋಲಕಜಾತಿಪೂಗೈಃ
ಫಲೈಃ ಸಮಸ್ತೈಃ ಸುತರಾಂ ಪ್ರದದ್ಯಾತ್ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ನಾನಾವಿಧ ಸ್ನಾನವರ್ಣನಂ ನಾಮ ಸಪ್ತೋತ್ತರಶತತಮೋಽಧ್ಯಾಯಃ

---

ಲೋಬಾನವೆಂಬ ತುರುಷ್ಕ ದೇಶದ ಹಾಲುಮಡ್ಡಿ, ಕಕ್ಕೋಲವೆಂಬ ಮರದ ಪರಿಮಳದ್ರವ್ಯ, ಜಾಜಿ ಹೂವು, ಜಾಜಿ ಕಾಯಿ, ಇವುಗಳೆಲ್ಲವನ್ನೂ ಸೇರಿಸಿ ಮಾಡುವ ಸ್ನಾನವೂ ಸಹ ಬಹಳಮಟ್ಟಿಗೂ ಅಶುಭನಾಶಕವಾದೀತು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದ ದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ನಾನಾವಿಧ ಸ್ನಾನವರ್ಣನವೆಂಬ ನೂರ ಏಳನೆಯ ಅಧ್ಯಾಯ ಮುಗಿದಿದೆ.



## ನೂರ ಏಳನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿಯೂ ನಾನಾವಿಧವಾದ ಇತರ ಸ್ನಾನಗಳನ್ನೂ ಸಂಗ್ರಹ ವಾಗಿ ನಿರೂಪಿಸಿರುವರು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಷ್ಟೋತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

ಸ್ನಾನಾನಾಮಿಹ ಸರ್ವೇಷಾಂ ಯತ್ಸ್ನಾನಮತಿರಿಚ್ಯತೇ ।
ತನ್ಮಮಾಚಕ್ಷ್ವ ಸಕಲಂ ಸರ್ವಕಲ್ಮಷನಾಶನಂ || ೧ ||

|| ಪುಷ್ಕರ ಉವಾಚ ||

ಶೃಣು ಪಾದೋದಕಸ್ನಾನಂ ಸರ್ವಕಿಲ್ಬಿಷನಾಶನಂ ।
ಶ್ರವಣರ್ಕ್ಷಂ ವಿನಾ ಹ್ಯೇತದ್ಭವತ್ಯರ್ಧಫಲಂ ಯತಃ || ೨ ||

ತತಃ ಕಾರ್ಯಂ ಪ್ರಯತ್ನೇನ ಶ್ರವಣರ್ಕ್ಷೇ ವಿಶೇಷತಃ ।
ಅಥೋತ್ತರಾಸುಷಾಢಾಸು ನಿರಾಹಾರೋ ಜಿತೇಂದ್ರಿಯಃ || ೩ ||

---

### ನೂರ ಎಂಟನೆಯ ಅಧ್ಯಾಯ.

೧. ಪುನಃ ಭಾರ್ಗವನು ಪ್ರಶ್ನೆಮಾಡುತ್ತಾನೆ:—ಈ ಸ್ನಾನಗಳಲ್ಲಿ ಎಲ್ಲಾ ಸ್ನಾನಗಳಿಗೂ ಮೇಲ್ಪಟ್ಟ ಸಕಲ ಪಾಪನಾಶವಾಗಿರುವ ಸ್ನಾನವಾವುದು. ಅದನ್ನು ನನಗೆ ಸಮಗ್ರವಾಗಿ ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಸರ್ವಪಾಪನಾಶಕವಾದ ಹರಿಪಾದೋದಕ ಸ್ನಾನವನ್ನು ಹೇಳುತ್ತೇನೆ ಕೇಳು. ಶ್ರವಣನಕ್ಷತ್ರವನ್ನು ಬಿಟ್ಟು ಇತರ ದಿನಗಳಲ್ಲಿ ಮಾಡಿದ ಈ ಸ್ನಾನವು ಅರ್ಧಫಲವನ್ನೇ ಕೊಡುವುದಾದುದರಿಂದ ಶ್ರವಣನಕ್ಷತ್ರದಲ್ಲಿಯೇ ಇದನ್ನು ಮಾಡಲು ವಿಶೇಷಪ್ರಯತ್ನ ಹೊಂದಬೇಕು. ಮೊದಲು ಉತ್ತರಾಷಾಢಾ ನಕ್ಷತ್ರದದಿನ ಉಪವಾಸವಿದ್ದು ಜಿತೇಂದ್ರಿಯನಾಗಬೇಕು.

ಸರ್ವೌಷಧ್ಯೈಃ ಸರ್ವಗಂಧೈರ್ದೇವದೇವಸ್ಯ ಚಕ್ರಿಣಃ ।
ಪಾದಂ ಪ್ರಲೇಪಯೇದ್ವಿದ್ವಾನ್ ಕ್ರಮೇಣ ಚತುರಾತ್ಮನಃ ॥ ೪ ॥

ತತಸ್ತು ಕಲಶಾನ್ ಕುರ್ಯಾಚ್ಚತುರಃ ಸುದೃಢಾನ್ನವಾನ್ ।
ಸೌವರ್ಣಾನ್ರಾಜತಾನ್ ತಾಮ್ರಾನಥವಾಪಿ ಮಹೀಮಯಾನ್ ॥ ೫ ॥

ತತೋಽನಿರುದ್ಧಚರಣೌ ಕೂಪಾದ್ಭಿಃ ಕ್ಷಾಲಯೇತ್ತತಃ ।
ತಾಭಿಸ್ತು ಕಲಶಂ ಪೂರ್ಣಂ ಸ್ಥಾಪನೀಯಂ ತದಗ್ರತಃ ॥ ೬ ॥

ತತಃ ಪ್ರದ್ಯುಮ್ನಚರಣೌ ಕ್ಷಾಲ್ಯಾ ಪ್ರಸ್ರವಣೋದಕೈಃ ।
ಕಲಶಂ ಪೂರಿತಂ ತಚ್ಚ ಭವೇತ್ಸ್ಥಾಪ್ಯಂ ತದಗ್ರತಃ ॥ ೭ ॥

ಸಂಕರ್ಷಣಸ್ಯ ಚರಣೌ ಕ್ಷಾಲ್ಯಾ ತೋಯೈಶ್ಚ ಸಾರಸೈಃ ।
ತೈಸ್ತು ಸಂಪೂರ್ಣಕಲಶಂ ಸ್ಥಾಪ್ಯಂ ತಸ್ಯಾಗ್ರತೋ ಭವೇತ್ ॥ ೮ ॥

---

೪-೫. ಸರ್ವವಿಧವಾದ ಓಷಧಿದ್ರವ್ಯಗಳಿಂದಲೂ ವಾಸನಾದ್ರವ್ಯಗಳಿಂದಲೂ ದೇವಾಧಿಪನಾದ ಹರಿಯನ್ನು ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧರೆಂಬ ನಾಲ್ಕು ಆಕಾರದಿಂದ ಭಾವಿಸಿ ಅವನ ಪಾದಗಳಿಗೆ ಲೇಪಿಸಬೇಕು. ಆ ಕುಂಭಗಳು ಸುವರ್ಣಮಯವಾಗಿಯೋ, ರಜತಮಯವಾಗಿಯೋ, ತಾಮ್ರಮಯವಾಗಿಯೋ ಮೃಣ್ಮಯವಾಗಿಯೋ ಇರಬಹುದು.

೬-೭. ಅನಂತರ ಅನಿರುದ್ಧನ ಪಾದಗಳನ್ನು ಭಾವಿಯನೀರಿನಿಂದ ತೊಳೆದು ಆ ಜಲದಿಂದ ಪೂರ್ಣವಾದ ಒಂದು ಕುಂಭವನ್ನು ಅನಿರುದ್ಧನ ಮುಂದೆ ಇಡಬೇಕು. ಅನಂತರ ಪ್ರದ್ಯುಮ್ನನ ಪಾದಗಳನ್ನು ಗಿರಿಝರಿಯ ಜಲದಿಂದ ತೊಳೆಯಬೇಕು. ಆ ಜಲದಿಂದ ಪೂರ್ಣವಾದ ಮತ್ತೊಂದು ಕುಂಭವನ್ನು ಆ ಪ್ರದ್ಯುಮ್ನನ ಮುಂದೆ ಸ್ಥಾಪಿಸಬೇಕು.

೮-೯. ಅನಂತರ ಸಂಕರ್ಷಣನ ಪಾದಗಳನ್ನು ಸರೋವರದ ಜಲದಿಂದ ತೊಳೆಯಬೇಕು. ಆ ಜಲದಿಂದ ಪೂರ್ಣವಾದ ಆ ಕಲಶವನ್ನು ಸಂಕರ್ಷಣನ ಮುಂದೆ ಸ್ಥಾಪಿಸಬೇಕು. ಅನಂತರ ವಾಸುದೇವನ ಪಾದಗಳನ್ನು ಎಳನೀರಿನಿಂದ

ವಾಸುದೇವಸ್ಯ ಚರಣೌ ನಾದೇಯೈಃ ಕ್ಷಾಲಯೇದ್ಬುಧಃ ।
ಕಲಶಂ ಪೂರಿತಂ ತೈಶ್ಚ ಸ್ಥಾಪನೀಯಂ ತದಗ್ರತಃ ॥ ೯ ॥

ತತಃ ಪೂಜಾ ತು ಕರ್ತವ್ಯಾ ಯಥಾವಚ್ಚತುರಾತ್ಮನಃ ।
ಕಲಶಾನ್ ಪೂಜಯೇತ್ತಾಂಶ್ಚ ಗಂಧಮಾಲ್ಯಫಲಾಕ್ಷತೈಃ ॥ ೧೦ ॥

ತತಃ ಪ್ರಾಪ್ತೇ ದ್ವಿತೀಯೇಹ್ನಿ ಸ್ನಾತಃ ಪೂರ್ವಮುಪೋಷಿತಃ ।
ಸಮ್ಮುಖಶ್ಚಾನಿರುದ್ಧಸ್ಯ ಸ್ನಾಪ್ಯಶ್ಚ ಕಲಶೇ ಭವೇತ್ ॥ ೧೧ ॥

ಪ್ರದ್ಯುಮ್ನಸ್ಯ ಚ ದೇವಸ್ಯ ತತಃ ಸಂಕರ್ಷಣಸ್ಯ ಚ ।
ತತಶ್ಚ ವಾಸುದೇವಸ್ಯ ಯಥಾ ರಾಮಸ್ಯ ಚಕ್ರಿಣಃ ॥ ೧೨ ॥

ಸವಿತ್ರಮಂತ್ರೈಃ ಸರ್ವೇಷಾಂ ಘಟಾನಾಮಭಿಮಂತ್ರಣಂ ।
ಕರ್ತವ್ಯಂ ಸಾತ್ವತೇನಾಥ ಶುಚಿನಾ ಭಾರ್ಗವೋತ್ತಮ ॥ ೧೩ ॥

---

ತೊಳೆಯಬೇಕು. ಆದರಿಂದ ತುಂಬಿದ ಕಲಶವನ್ನೂ ಸಹ ಆ ವಾಸುದೇವನ ಮುಂದೆ ಸ್ಥಾಪಿಸಬೇಕು.

೧೦-೧೧. ಅನಂತರ ವಾಸುದೇವನೇ ಮೊದಲಾದ ನಾಲ್ಕು ವ್ಯೂಹಮೂರ್ತಿಯನ್ನೂ ಆ ಕಲಶಗಳನ್ನೂ ಸಹ ಗಂಧಪುಷ್ಪ ಅಕ್ಷತೆ ಮೊದಲಾದವುಗಳಿಂದ ಪೂಜಿಸಬೇಕು. ಶ್ರವಣನಕ್ಷತ್ರದಿಂದ ಕೂಡಿದ ಮೂರನೆಯ ದಿನ ಬಂದನಂತರ ಆ ದಿನದಲ್ಲಿ ಉಪವಾಸವಿದ್ದವನು ಮೊದಲು ಸ್ನಾನಮಾಡಿ ಅನಿರುದ್ಧನ ಎದುರಿಗೆ ಸ್ಥಾಪಿತವಾಗಿರುವ ಕಲಶದಲ್ಲಿ ಸ್ನಾನಮಾಡಬೇಕು.

೧೨-೧೩. ಅನಂತರ ಪ್ರದ್ಯುಮ್ನನ ಕಲಶದಲ್ಲಿಯೂ ಅನಂತರ ಚಕ್ರಪಾಣಿಯಾದ ವಾಸುದೇವನ ಕಲಶದಲ್ಲಿಯೂ ಕ್ರಮವಾಗಿ ಸ್ನಾನಮಾಡಿಸಬೇಕು. ಎಲ್ಲಾ ಕಲಶಗಳಿಗೂ ಸ್ನಾನಕ್ಕೆ ಮೊದಲು ಪಾಂಚರಾತ್ರವೆಂಬ ಭಗವಚ್ಛಾಸ್ತ್ರದಲ್ಲಿ ಕಂಡ ಕ್ರಮವನ್ನು ಅನುಸರಿಸಿ ಶುಚಿಯಾಗಿದ್ದು ಪವಿತ್ರ ಮಂತ್ರಗಳಿಂದ ಅಭಿಮಂತ್ರಣ ಮಾಡಬೇಕು.

**ಅಥ ಮಂತ್ರಾನ್ ಪ್ರವಕ್ಷ್ಯಾಮಿ ಕಲಶೇಷು ಚತುರ್ಷ್ವತೇ ।**
**ಮಂಗಲ್ಯಾಂಶ್ಚ ಯಶಸ್ಯಾಂಶ್ಚ ಸರ್ವಾಘವಿನಿಷೂದನಾನ್ ॥ ೧೪ ॥**

**[1]ಅರುದ್ಧಮಾರ್ಗಃ ಸರ್ವತ್ರ ಸರ್ವತ್ರಾಪರಾಜಿತಾಃ ।**
**ವಾಯುಮೂರ್ತಿರಚಿಂತ್ಯಾತ್ಮಾ ಸೋಽನಿರುದ್ಧಃ ಸ್ವಯಂಪ್ರಭುಃ ॥ ೧೫ ॥**

**ಪಾದೋದಕೇನ ದಿವ್ಯೇನ ಶಿವೇನಾಘವಿನಾಶಿನಾ ।**
**ತಥಾಘಮುಪಹೃತ್ಯಾಶು ಶಿವಂ ವರ್ಧಯತಾಂ ಪ್ರಭುಃ ॥ ೧೬ ॥**

**ಲೋಕಾನ್ ಪ್ರದ್ಯೋತಯತಿ ಯಃ ಪ್ರದ್ಯುಮ್ನೋ ಭಾಸ್ಕರಪ್ರಭಃ ।**
**ಹುತಾಶನಃ ಸತೇಜಸ್ವೀ ಮಂಗಲಂ ವಿದಧಾತು ಮೇ ॥ ೧೭ ॥**

---

೧೪-೧೫. ಅನಂತರ ಸ್ನಾನಕಾಲದಲ್ಲಿ ಉಪಯೋಗಿಸುವ ಮಂತ್ರಗಳನ್ನು ಹೇಳುತ್ತೇನೆ. ನಾಲ್ಕು ಕಲಶಗಳಿಗೂ ಈ ಮಂತ್ರಗಳು ಆಯಾಯ ದೇವತಾ ನಾಮಕ್ರಮದಿಂದ ಉಪಯೋಗಿಸತಕ್ಕವು. ಈ ಮಂತ್ರಗಳು ಮಂಗಲಪ್ರದವಾಗಿಯೂ, ಯಶಃಪ್ರದವಾಗಿಯೂ, ಸರ್ವಪಾಪನಾಶಕವಾಗಿಯೂ ಇವೆ. (ಇದು ಪೌರಾಣಿಕ ಮಂತ್ರ) ಎಲ್ಲಾ ಕಡೆಯಲ್ಲಿಯೂ ತಡೆಯಿಲ್ಲದ ಸಂಚಾರ ಉಳ್ಳವನಾಗಿಯೂ, ಎಲ್ಲಾ ಕಡೆಯಲ್ಲೂ ವಿಜಯಶಾಲಿಯಾಗಿಯೂ, ವಾಯುರೂಪಿಯಾಗಿಯೂ, ಅಚಿಂತ್ಯ ಮಹಿಮನಾಗಿಯೂ ಸ್ವಯಂ ಪ್ರಭುವಾಗಿ ಯಾವ ಅನಿರುದ್ಧನಿರುವನೋ.

೧೬-೧೭. ಅವನು ಮಂಗಳಕರವಾಗಿಯೂ, ಸರ್ವಪಾಪನಾಶಕವಾಗಿಯೂ, ದಿವ್ಯವಾಗಿಯೂ ಇರುವ ಈ ಪಾದೋದಕದಿಂದ ನನ್ನ ಮಂಗಳವನ್ನು ಅಭಿವೃದ್ಧಿ ಪಡಿಸಲಿ. ಸೂರ್ಯನಂತೆ ಜ್ವಲಿಸುವ ಯಾವ ಪ್ರದ್ಯುಮ್ನಮೂರ್ತಿಯು ಲೋಕಗಳೆಲ್ಲವನ್ನೂ ಪ್ರಕಾಶಗೊಳಿಸುತ್ತಿರುವನೋ ಅಗ್ನಿರೂಪಿಯಾದ ಆ ಪ್ರದ್ಯುಮ್ನನು ತನ್ನ ತೇಜಸ್ಸಿನಿಂದ ನನಗೆ ಮಂಗಳವನ್ನುಂಟುಮಾಡಲಿ.

---

1 ಇಲ್ಲಿ ಅಪುದ್ಧಮಾರ್ಗಃ ಎಂದು ಏಕವಚನಪಾಠವಿರಬೇಕೆಂದು ತೋರುತ್ತದೆ.

ಕಾಮದೇವೋ ಜಗದ್ಯೋನಿಃ ಸರ್ವಶಃ ಪ್ರಭುರೀಶ್ವರಃ ।
ದುಃಖಹರ್ತಾ ಜಗನ್ನಾಥೋ ಮಂಗಲಾನಿ ದದಾತು ತೇ ॥ ೧೮ ॥

ಜಗತಾಂ ಕರ್ಷಣಾದ್ದೇವೋ ಯಃ ಸ ಸಂಕರ್ಷಣಃ ಪ್ರಭುಃ ।
ರುದ್ರಮೂರ್ತಿರಚಿಂತ್ಯಾತ್ಮಾ ಸರ್ವಗಃ ಸರ್ವಹಾರಕಃ ॥ ೧೯ ॥

ಕಾಮಪಾಲೋಽರಿದಮನಃ ಸರ್ವಭೂತಸ್ಯ ಶಂಕರಃ ।
ವಿಶ್ವಯೋನಿರ್ಮಹಾತೇಜಾ ಮಂಗಲಾನಿ ದದಾತು ತೇ ॥ ೨೦ ॥

ಸರ್ವಾವಾಸೋ ವಾಸುದೇವೋ ಭೂತಾತ್ಮಾ ಭೂತಭಾವನಃ ।
ಸರ್ವಗಶ್ಚಾಪ್ರಮೇಯಶ್ಚ ಪುರುಷಃ ಪರಮೇಶ್ವರಃ ॥ ೨೧ ॥

---

೧೮–೨೦. ಯಾವ ಪ್ರದ್ಯುಮ್ನಮೂರ್ತಿಯು ಕಾಮನರೂಪದಿಂದ ಜಗತ್ಕಾರಣನಾಗಿ ಎಲ್ಲಾ ವಿಧವಾದ ಪ್ರಭುತ್ವದಿಂದ ಕೂಡಿ ದುಃಖಹಾರಿಯಾಗಿಯೂ ಜಗತ್ಪ್ರಭುವಾಗಿಯೂ ಇರುವನೋ ಅಂತಹ ಪ್ರದ್ಯುಮ್ನನು ನಿನಗೆ ಮಂಗಳವನ್ನುಂಟು ಮಾಡಲಿ. ಯಾವ ಪ್ರಭುವು ಜಗತ್ತನ್ನೆಲ್ಲಾ ಸಂಹರಿಸೋಣದರಿಂದ ಸಂಕರ್ಷಣನೆಂದು ಹೇಳಲ್ಪಡುವನೋ ರುದ್ರಮೂರ್ತಿಯಾಗಿಯೂ, ಅಚಿಂತ್ಯಮಹಿಮನಾಗಿಯೂ ಸರ್ವವ್ಯಾಪಿಯಾಗಿಯೂ, ಸರ್ವನಾಶಕನಾಗಿಯೂ, ಮನ್ಮಥನನ್ನೂ ರಕ್ಷಿಸಿ ಶತ್ರುನಾಶವನ್ನೂ ಮಾಡಿ ಸರ್ವ ಪ್ರಾಣಿಗಳಿಗೂ ಮಂಗಲಪ್ರದನಾಗಿರುವನೋ ಅಂತಹ ವಿಶ್ವಕರ್ತನಾದ ಪ್ರಭುವು ನಿನಗೆ ಮಂಗಲವನ್ನುಂಟುಮಾಡಲಿ.

೨೧–೨೨. ಎಲ್ಲಾ ಜಗತ್ತಿಗೂ ಆವಾಸಸ್ಥಾನನಾಗಿಯೂ, ಎಲ್ಲಾ ಚೇತನರಿಗೂ ಆತ್ಮನಾಗಿಯೂ, ಪ್ರಾಣಿಗಳ ಉತ್ಪತ್ತಿಗೆಲ್ಲಾ ಕಾರಣನಾಗಿಯೂ, ಸರ್ವವ್ಯಾಪಕನಾಗಿಯೂ, ಅಚಿಂತ್ಯನಾಗಿಯೂ, ಪುರುಷೋತ್ತಮನಾಗಿಯೂ, ಪರಮೇಶ್ವರಸ್ವರೂಪನಾಗಿಯೂ, ಅಪರಿಚ್ಛಿನ್ನನಾಗಿಯೂ, ಸರ್ವದೇವತೆಗಳಿಗೂ ಪ್ರಭುವಾಗಿಯೂ, ಜಗತ್ತಿಗೆ ಆಧಾರನಾಗಿಯೂ, ಸರ್ವವಿಘ್ನನಾಶಕನಾಗಿಯೂ ಇರುವ ಆ ವರದನು ನಿನಗೆ ಸಂಪತ್ತನ್ನುಂಟುಮಾಡಲಿ. (ಈ ಸಂದರ್ಭದಲ್ಲಿ ತೇ, ತವ,

ಅನಂತಃ ಸರ್ವದೇವೇಶೋ ಜಗದಾಧಾರಕಾರಣಃ ।
ಅಘಾಪಹಾರೀ ವರದೋ ವಿದಧಾತು ಶ್ರೇಯಂ ತವ ॥ ೨೨ ॥

ಏವಂ ಸ್ನಾತಃ ತತಸ್ತ್ಯಕ್ತ್ವಾ ತತ್ರೈವ ಸ್ನಾನವಾಸಸೀ ।
ಶುಕ್ಲವಾಸಾ ಉಪಸ್ಪೃಶ್ಯ ಪೂಜಾಂ ಕುರ್ಯಾತ್ಕ್ರಮೇಣ ತು ॥ ೨೩ ॥

ಗಂಧೈಃ ಪುಷ್ಪೈಃ ಫಲೈರ್ಮುಖ್ಯೈಃ ದೀಪೈರ್ಧೂಪೈಃ ಸುಗಂಧಿಭಿಃ ।
ನೈವೇದ್ಯೈರ್ವಿವಿಧೈಶ್ಚೈವ ಸಾತ್ವತಾನಾಂ ಚ ಪೂಜನೈಃ ॥ ೨೪ ॥

ಏವಂ ದೇವಾರ್ಚನಂ ಕೃತ್ವಾ ಸಾತ್ವತಾಂ ಶಾಂತಿದಂ ಶುಭಂ ।
ಭೋಜನಂ ಗೋರಸಪ್ರಾಯಂ ಕೃತ್ವಾ ತಿಷ್ಠೇತ್ಸುಯಂತ್ರಿತಂ ॥ ೨೫ ॥

ಪ್ರಾದುರ್ಭಾವಾಣಿ ಮುಖ್ಯಾನಿ ಶೃಣುಯಾತ್ಕೇಶವಸ್ಯ ಚ ।
ಪಾಖಂಡಿಪತಿತಾನಾಂ ಚ ವರ್ಜಯೇದ್ದರ್ಶನಂ ತಥಾ ॥ ೨೬ ॥

---

ಎಂದಿರುವ ಮಂತ್ರಗಳು ಪುರೋಹಿತನಾಗಿದ್ದವನು ಹೇಳುವ ಮಂತ್ರಗಳೆಂದೂ ಮೇ, ಮಮ, ಎಂದಿರುವ ಮಂತ್ರಗಳು ಸ್ನಾನಮಾಡುವ ಅಧಿಕಾರಿಯು ಹೇಳುವ ಮಂತ್ರ ಗಳೆಂದೂ ವಿವೇಚಿಸಿ ತಿಳಿಯಬೇಕು.)

೨೩–೨೪. ಈ ರೀತಿ ಸ್ನಾನಮಾಡಿದವನು ಸ್ನಾನವಸ್ತ್ರವನ್ನು ಅಲ್ಲಿಯೇ ಬಿಟ್ಟು ಬಿಳಿಯ ವಸ್ತ್ರವನ್ನುಟ್ಟು ಆಚಮನಮಾಡಿ ಕ್ರಮವಾಗಿ ಗಂಧಪುಷ್ಪ ಇವುಗಳಿಂದಲೂ ಮುಖ್ಯವಾದ ಫಲಗಳಿಂದಲೂ, ಸುಗಂಧಿಗಳಾದ ಧೂಪದೀಪಾದಿಗಳಿಂದಲೂ, ವಿವಿಧ ವಾದ ನೈವೇದ್ಯ ಸಮರ್ಪಣದಿಂದಲೂ, ಪಾಂಚರಾತ್ರೋಕ್ತ ಪೂಜೆಗಳಿಂದಲೂ, ಭಗವಂತನನ್ನು ಉಪಚರಿಸಬೇಕು.

೨೫–೨೬. ಈ ರೀತಿ ದೇವತಾರ್ಚನೆಯನ್ನು ನೆರವೇರಿಸಿ ಭಾಗವತರಿಗೆ ಮನಶ್ಶಾಂತಿಕರವಾದ ಹಾಲು ಮೊಸರುಗಳಿಂದ ಕೂಡಿದ ಶುಭವಾದ ಭೋಜನವನ್ನು ಮಾಡಿಸಬೇಕು. ತಾನೂ ಜಿತೇಂದ್ರಿಯನಾಗಿದ್ದು ಹರಿಯ ಮುಖ್ಯವಾದ ಅವತಾರದ ಉಪಾಖ್ಯಾನಗಳನ್ನು ಕೇಳಬೇಕು. ಪತಿತರ ಮತ್ತು ಪಾಷಂಡಿಗಳ ದರ್ಶನವನ್ನು ವರ್ಜಿಸಬೇಕು.

ಇತಿ ಪಾದೋದಕಸ್ನಾನಂ ಪ್ರೋಕ್ತಂ ರಕ್ಷೋಹಣಂ ತವ ।
ಮಂಗಲ್ಯಂ ಪಾಪಶಮನಮಲಕ್ಷ್ಮೀನಾಶನಂ ಪರಂ ॥ ೨೭ ॥

ಸರ್ವವಿಘ್ನಪ್ರಶಮನಂ ಸರ್ವಬಾಧಾವಿನಾಶನಂ ।
ದುಃಸ್ವಪ್ನಾರಿಷ್ಟಶಮನಂ ಸರ್ವವ್ಯಾಧಿಹರಂ ಶಿವಂ ॥ ೨೮ ॥

ಯಾತ್ರಾಸಿದ್ಧಿಕರಂ ಧನ್ಯಂ ಕರ್ಮಣಾಂ ಸಿದ್ಧಿಕಾರಕಂ ।
ಶತ್ರುಘ್ನಂ ಬುದ್ಧಿದಂ ಮೇಧ್ಯಂ ಬಲಾಯುಃ ಸ್ಮೃತಿವರ್ಧನಂ ।
ಸೌಭಾಗ್ಯದಂ ಕಾಮಕರಂ ಯಶಃಪುತ್ರವಿವರ್ಧನಂ ॥ ೨೯ ॥

ಅಮೋಘವೀರ್ಯಂ ಪುರುಷೋತ್ತಮಸ್ಯ
ಪಾದೋದಕಸ್ನಾನಮಿದಂ ಪ್ರದಿಷ್ಟಂ ।

---

೨೭-೨೮. ಸಮಸ್ತ ಪೀಡಾಪರಿಹಾರಕವಾಗಿಯೂ, ಮಂಗಳಪ್ರದವಾಗಿಯೂ, ಪಾಪನಾಶಕವಾಗಿಯೂ, ಅಮಂಗಳನಾಶಕವಾಗಿಯೂ, ಸರ್ವವಿಘ್ನವನ್ನೂ ನಾಶಪಡಿಸತಕ್ಕುದಾಗಿಯೂ, ಎಲ್ಲಾ ವಿಧವಾದ ಬಾಧಕಗಳನ್ನೂ ತೊಲಗಿಸತಕ್ಕುದಾಗಿಯೂ, ದುಃಸ್ವಪ್ನದ ಅನಿಷ್ಟವನ್ನು ಹೋಗಲಾಡಿಸತಕ್ಕುದಾಗಿಯು, ಸರ್ವವ್ಯಾಧಿನಿವಾರಕವಾಗಿಯೂ, ಮಂಗಲಕರವಾಗಿಯೂ ಇರುವ ಈ ಪಾದೋದಕಸ್ನಾನವನ್ನು ಈ ರೀತಿ ನಿನಗೆ ಹೇಳಿರುವೆನು.

೨೯-೩೦. ಈ ಸ್ನಾನವು ಯಾತ್ರಾಸಾದ್ಗುಣ್ಯಕ್ಕೆ ಕಾರಣವಾಗಿಯೂ, ಐಶ್ವರ್ಯಪ್ರದವಾಗಿಯೂ, ಎಲ್ಲಾ ಕಾರ್ಯಗಳಿಗೂ ಸಿದ್ಧಿಪ್ರದವಾಗಿಯೂ, ಶತ್ರುನಾಶಕವಾಗಿಯೂ, ಬುದ್ಧಿಪ್ರದವಾಗಿಯೂ, ಬಲ, ಆಯುಸ್ಸು, ಸ್ಮರಣಸಾಮರ್ಥ್ಯ ಇವುಗಳಿಗೆ ಕಾರಣವಾಗಿಯೂ, ಸೌಭಾಗ್ಯಕಾರಕವಾಗಿಯೂ, ಮನೋರಥಸಿದ್ಧಿಗೆ ಕಾರಣವಾಗಿಯೂ, ಯಶಸ್ಸು, ಪುತ್ರ ಮೊದಲಾದ ಶುಭಸಮೃದ್ಧಿಗೆ ಕಾರಣವಾಗಿಯೂ, ಅಪ್ರತಿಹತವಾದ ಸಾಮರ್ಥ್ಯವುಳ್ಳದ್ದಾಗಿಯೂ ಇದೆ. ಇಂತಹ

ಸ್ನಾನೋತ್ತಮಂ ತೇ ರಣಚಂಡವೇಗ
ಭೂಯಸ್ತು ಕಿಂ ತೇ ಕಥಯಾಮಿ ರಾಮ ॥ ೩೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ
ಪುರುಷೋತ್ತಮಪಾದೋದಕಸ್ನಾನವರ್ಣನಂ
ನಾಮಾಷ್ಟೋತ್ತರಶತತಮೋಽಧ್ಯಾಯಃ

---

ಪುರುಷೋತ್ತಮನ ಪಾದೋದಕಸ್ನಾನವನ್ನು ನಿನಗೆ ಹೇಳಿರುವೆನು. ಇದು ಎಲ್ಲಾ ಸ್ನಾನಗಳಲ್ಲಿಯೂ ಉತ್ಕೃಷ್ಟವಾದುದು. ಇನ್ನು ಮುಂದೆ ನಿನಗೆ ಏನನ್ನು ಹೇಳಬೇಕು, ಹೇಳು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಪುರುಷೋತ್ತಮ ಪಾದೋದಕಸ್ನಾನವೆಂಬ ನೂರ ಎಂಟನೆಯ
ಅಧ್ಯಾಯ ಮುಗಿದಿದೆ.



### ನೂರ ಎಂಟನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಎಲ್ಲಾ ಸ್ನಾನಗಳಿಗಿಂತಲೂ ಮೇಲಾದ ಸ್ನಾನವಾವುದು ಎಂದು ಭಾರ್ಗವನು ಮಾಡಿದ ಪ್ರಶ್ನೆಗೆ ಉತ್ತರವಾಗಿ ಪುರುಷೋತ್ತಮ ಪಾದೋದಕ ಸ್ನಾನವೆಂಬ ಉತ್ತಮಸ್ನಾನವನ್ನು ಫಲಶ್ರುತಿಯೊಡನೆ ಯಥಾವಿಧಿಯಾಗಿ ನಿರೂಪಿಸಿರುವರು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ನವೋತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

**ಮಣೀನಾಮಥ ಕಾಮ್ಯಾನಾಂ ಶ್ರೋತುಮಿಚ್ಛಾಮ್ಯಹಂ ವಿಧಿಂ ।**
**ಸರ್ವಕಾಮಕರಂ ಮುಖ್ಯಂ ತಥಾ ಚ ದುರಿತಾಪಹಂ || ೧ ||**

|| ಪುಷ್ಕರ ಉವಾಚ ||

**ಆಥರ್ವಣೇನ ವಿಧಿನಾ ಮಣಿಕರ್ಮ ನಿಬೋಧ ಮೇ ।**
**ಧ್ರುವಸ್ತ್ವಿಷ್ಯೇತ್ಯೃಚಾ ವೃಕ್ಷಂ ಪ್ರತ್ಯಕ್ಷಮನುಮಂತ್ರಯೇತ್ || ೨ ||**

**ಪಾದೋನಯಾ ಮಣಿಸ್ಥಾನಂ ಪ್ರೋಕ್ಷಯೇತ್ತು ದ್ವಿತೀಯಯಾ ।**
**ಅಸ್ಯಾಃ ಪಾದೇನೋತ್ತರೇಣ ನಿರ್ಮಿಮೀತ ಮಣಿಂ ತತಃ || ೩ ||**

---

### ನೂರ ಒಂಭತ್ತನೆಯ ಅಧ್ಯಾಯ.

೧. ರಾಮನು ಪುನಃ ಪ್ರಶ್ನೆಮಾಡುತ್ತಾನೆ :—ಕಾಮ್ಯವಾದ ಮಣಿಗಳ ವಿಧಾನಕ್ರಮವೇನು. ಇಷ್ಟಾರ್ಥಪ್ರದವಾಗಿಯೂ, ಪಾಪನಾಶಕವಾಗಿಯೂ ಇರುವ ಈ ಮಣಿಗಳ ವಿಧಾನಕ್ರಮವನ್ನು ಕೇಳಲು ನಾನು ಇಚ್ಛಿಪಡುತ್ತಿದ್ದೇನೆ. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಆಥರ್ವಣ ವಿಧಿಯಿಂದ ಮಣಿಯನ್ನು ನಿರ್ಮಾಣಮಾಡಿ ಹೊಂದುವ ಕ್ರಮವನ್ನು ಹೇಳುತ್ತೇನೆ ಕೇಳು, ಧ್ರುವಸ್ತ್ವಿಷ್ಯ ಎಂಬ ಮಂತ್ರದ ಮೊದಲಿನ ಮೂರು ಪಾದಗಳಿಂದ ಮರದ ಹತ್ತಿರಕ್ಕೆ ಹೋಗಿ ಅಭಿಮಂತ್ರಿಸಬೇಕು. ಎರಡನೆಯ ಋಕ್ಕಿನಿಂದ ಮಣಿಯ ಪ್ರದೇಶವನ್ನು ಪ್ರೋಕ್ಷಿಸಬೇಕು. ಅನಂತರ ಆ ಋಕ್ಕಿನ ಕೊನೆಯ ಪಾದದಿಂದ ಮಣಿಯನ್ನು ನಿರ್ಮಾಣಮಾಡಬೇಕು.

**ಸಬಂಧುಶ್ಚೇತಿ ತಮೃಚಾ ತಸ್ಮಾಚ್ಛಿಂದ್ಯಾದಿತಿ ಶ್ರುತಿಃ ।**
**ಆಹರೇತ ಮಣಿಂ ತಸ್ಮಾತ್ಸೂಕ್ತಾದಸ್ಮಾತ್ತೃತೀಯಯಾ ॥ ೪ ॥**

**ಸರ್ವತ್ರ ತು ಮಣೀನಾಂ ಚ ನಿರ್ಮಾಣಂ ಕೇವಲಂ ಭವೇತ್ ।**
**ಉಪಯುಕ್ತಾಸ್ತು [1]ಕೇವಾಕ್ಷಾ ದ್ರವ್ಯಾಸ್ತೇ ಪರಿಕೀರ್ತಿತಾಃ ॥ ೫ ॥**

**ಅಂಗುಷ್ಠಪರ್ವಮಾತ್ರಾಸ್ತೇ ಕರ್ತವ್ಯಾಸ್ತು ಸಮಂತತಃ ।**
**ಸಮ್ಯಗುತ್ಪಾದಯೇತ್ತೇಷಾಂ ಸಮ್ಯಗ್ಗ್ರಂಥಿ ಚತುಷ್ಟಯಂ ॥ ೬ ॥**

**ಅಗ್ರತೋ ಮೂಲತೋ ವಾಪಿ ಕಲ್ಪಮಾನೇಽತಿರಿಚ್ಯತೇ ।**
**ಅರಾತೀಯೋರಿತ್ಯನಯಾ ಛಿಂದ್ಯಾಚ್ಛಸ್ತ್ರೇಣ ತತ್ವವಿತ್ ॥ ೭ ॥**

**[2]ಅರ್ಧಂ ಚ ಸುಷಿರಃ ಕೃತ್ವಾ ತತಃ ಪ್ರಕ್ಷಾಲ್ಯ ವಾರಿಣಾ ।**
**ಪಾತ್ರಂ ತಮಗ್ನೌ ಕೃತ್ವಾ ತು ಸಮ್ಯಗೇವ ಯಥಾವಿಧಿ ॥ ೮ ॥**

೪–೫. ಸಬಂಧುಶ್ಚ ಎಂಬ ಋಕ್ಕಿನಿಂದ ಆ ಮಣಿಯನ್ನು ಅಲ್ಲಿಂದ ಕತ್ತರಿಸಿ ತೆಗೆಯಬೇಕು. ಎಂದು ಶ್ರುತಿಸಿದ್ಧವಾದ ಕ್ರಮ. ಅನಂತರ ಮೂರನೆಯ ಸೂಕ್ತದಿಂದ ಆ ಮಣಿಯನ್ನು ತೆಗೆದುಕೊಂಡು ಬರಬೇಕು. ಎಲ್ಲಾ ಮಣಿಗಳ ನಿರ್ಮಾಣ ಕ್ರಮವೂ ಸಾಮಾನ್ಯವಾಗಿ ಇದೇರೀತಿಯಲ್ಲಿದೆ. ಆದರೆ ವೃಕ್ಷಸಂಬಂಧಿಯಾದ ಆ ವಸ್ತುಗಳೇ ಬಹಳಮಟ್ಟಿಗೂ ಉಪಯುಕ್ತವಾಗುತ್ತವೆ ಎಂದು ಹೇಳಿರುವರು.

೬–೭. ಆ ಮಣಿಗಳನ್ನು ಅಂಗುಷ್ಠದ ಗಿಣ್ಣಿನ ಪ್ರಮಾಣದಷ್ಟು ಮಾಡಬೇಕು. ಅವುಗಳಿಗೆ ಎಲ್ಲಾ ಕಡೆಯಲ್ಲಿಯೂ ನಾಲ್ಕು ಗ್ರಂಥಿಗಳನ್ನು ಸರಿಯಾಗಿ ಮಾಡಬೇಕು. ಮರದ ಅಗ್ರಭಾಗದಿಂದಲಾಗಲಿ ಬೇರಿನಿಂದಲಾಗಲಿ ಈ ಮಣಿಯನ್ನು ಮಾಡುವ ಸಂದರ್ಭದಲ್ಲಿ ವಿಧಾನಕ್ರಮವು ಸ್ವಲ್ಪ ಬೇರೆಯಾಗುತ್ತದೆ. ಅರಾತೀಯಯೋಃ ಎಂಬ ಋಕ್ಕಿನಿಂದ ಅದನ್ನು ಛೇದಿಸಬೇಕು.

೮–೯. ಅದರ ಅರ್ಧಭಾಗವನ್ನು ಮೊನಚಾಗಿ ಮಾಡಿ ಒಂದು ಪಾತ್ರೆಯಲ್ಲಿ ನೀರಿಟ್ಟು ಆ ನೀರಿನಲ್ಲಿ ಅದನ್ನು ತೊಳೆದು ಆ ಪಾತ್ರೆಯನ್ನು ಅಗ್ನಿಯ ಮೇಲೆ ಹಿಡಿದು ಅನಂತರ ಯತ್ರಾಚಕ್ರುಃ ಎಂಬ ಋಕ್ಕಿನಿಂದ ಆ ಪಾತ್ರೆಯ ಉತ್ತರಭಾಗ

1 ತೇವಾರ್ಕ್ಷ್ಣ.  2 ಅರ್ಧಂ.

ಯತ್ರಾಚಕ್ರುರಿತ್ಯನಯಾ ಸಸೂತ್ರಮತ ಉತ್ತರಂ ।
ಕುರ್ಯಾತ್ತದಗ್ನಿಕುಂಡಂ ಚ ಪ್ರಬೋಧ್ಯ ಜುಹುಯಾದ್ಘೃತಂ ॥ ೯ ॥

ಪ್ರತ್ಯೃಚಾ ಸ್ವೇನ ಮಂತ್ರೇಣ ಸಂಪಾತಾನಯನಂ ಭವೇತ್ ।
ಕೃತಶಾಂತ್ಯುದಕೇ ಪಾತ್ರೇ ರಮ್ಯೇ ಲೋಹಮಯೇ ದೃಢೇ ॥ ೧೦ ॥

ಸ್ವಲಿಂಗೋದ್ಧೃತಮಂತ್ರೇಣ ದರ್ವೀದಂಡಾದತಃ ಪರಂ ।
ವಿಮುಚ್ಯ ಸರ್ವಂ ತೇನೈವ ಮಂತ್ರೇಣ ಭ್ರಾಮಯೇನ್ಮಣಿಂ ॥ ೧೧ ॥

ಪಾತ್ರೇ ತಸ್ಮಿನ್ ತತಸ್ತಸ್ಮಾದುದ್ಧೃತ್ಯಾಬಂಧನಂ ಭವೇತ್ ।
ಸಕಲೇನೈವ ಮಂತ್ರೇಣ ಮಂತ್ರಯೇಚ್ಚ ತಥೋದ್ಧೃತಂ ॥ ೧೨ ॥

ಸಾಮಾನ್ಯಮಿದಮುಕ್ತಂ ತೇ ಶೃಣು ವೈಶೇಷಿಕಂ ದ್ವಿಜ ।
ಅಭೀವರ್ತಮಣೌ ಕರ್ಮ ತವ ವಕ್ಷ್ಯಾಮ್ಯತಃ ಪರಂ ॥ ೧೩ ॥

---

ದಲ್ಲಿ ಸೂತ್ರವೇಷ್ಟನ ಪೂರ್ವಕವಾಗಿ ಅಗ್ನಿ ಕುಂಡವನ್ನು ಮಾಡಬೇಕು ಅಗ್ನಿಯನ್ನು ಜ್ವಲಿಸುವಂತೆ ಮಾಡಿ ಆಜ್ಯದಿಂದ ಹೋಮಮಾಡಬೇಕು.

೧೦–೧೧. ಆಯಾಯ ಋಕ್ಕಿನಿಂದ ಆಜ್ಯಧಾರೆಯು ಅವಿಚ್ಛಿನ್ನವಾಗಿ ಬೀಳುವಂತೆ ಹೋಮಮಾಡಬೇಕು. ಅನಂತರ ದೃಢವಾಗಿಯೂ ರಮ್ಯವಾಗಿಯೂ ಇರುವ ಪಾತ್ರೆಯಲ್ಲಿ ಶಾಂತ್ಯುದಕವನ್ನಿಟ್ಟು ಆಯಾಯ ಲಿಂಗದಿಂದ ಕೂಡಿದ ಮಂತ್ರದಿಂದ ದರ್ವಿಯದಂಡವನ್ನು ಆ ಪಾತ್ರೆಯಲ್ಲಿಟ್ಟು ಮಣಿಯು ಭ್ರಮಣ ಹೊಂದುವಂತೆ ಸುತ್ತಬೇಕು.

೧೧–೧೩. ಆ ಪಾತ್ರೆಯಿಂದ ತೆಗೆದು ಮಣಿಯನ್ನು ಧರಿಸಬೇಕು. ಹಾಗೆ ತೆಗೆದ ಮಣಿಯನ್ನು ಎಲ್ಲಾ ಮಂತ್ರಭಾಗದಿಂದಲೂ ಮಂತ್ರಿಸಿ ಉದ್ಧರಿಸಿ ಧರಿಸಬೇಕು. ಇದು ಎಲ್ಲಾ ಮಣಿಗಳಿಗೂ ಸಾಮಾನ್ಯವಾಗಿ ಅನ್ವಯಿಸುವ ಕ್ರಮ. ಇದರಲ್ಲಿ ವಿಶೇಷವನ್ನು ಹೇಳುತ್ತೇನೆ ಕೇಳು. ಇನ್ನು ಮುಂದೆ ಅಭೀವರ್ತವೆಂಬ ಮಣಿಯ ವಿಧಾನವನ್ನು ಹೇಳುತ್ತೇನೆ ಕೇಳು.

ಅಭೀವರ್ತೇನ ಮಣಿನೇತ್ಯಾದ್ಯಾಭಿಸ್ತಿಸೃಭಿರ್ಮಣೌ ।
[1]ಅತ್ರಾಯಂ ವಾಸವಂ ಪಾತ್ರಂ ದ್ವೇಭ್ಯಶ್ಚ ಪ್ರತ್ಯೃಚಂ ಪುನಃ ॥ ೧೪ ॥

ದತ್ವಾತ್ತು ಸರ್ವೇಣ ಸೂಕ್ತೇನ ಮಣೇರಾಧನ್ವನಂ ಭವೇತ್ ।
ಅಭೀವರ್ತಮಣಿಃ ಪ್ರೋಕ್ತೋ ನೋವಾ ಕಾಷ್ಠಾನ್ ಭೃಗೂತ್ತಮ ॥ ೧೫ ॥

ಅಯಂ ಯೋನಿರತ ಇತಿ ತಸ್ಯ ಹೋಮೋ ವಿಧೀಯತೆ ।
ಶಶಕೇಷ್ವಿಹ ಯೋ ಶ್ರಾಂತವತ್ಸಭೈಷಜ್ಯಭಾಜನಂ ॥ ೧೬ ॥

ಕ್ಷುದ್ರೇಷು ಯದಪಾಮಾರ್ಗಮಣಿಃ ಶಾಂತವಿಸಂಜ್ಞಕಃ ।
ಇತ್ಯೇತೇ ಯೋವಮುಕ್ತಾಃ ಸ್ಯುಃ ವಿವಾಹಮಧುರಾಶ್ಚ ಯೇ ॥ ೧೭ ॥

ಪೂರ್ವೋಕ್ತೇನ ಭವೇದ್ಧರ್ಮ ಏತೇಷಾಮಿತಿ ಮೇ ಮತಿಃ ।
ದ್ರವ್ಯೌಷಧಿಮಣೀನಾಂ ಚ ಸಭಾಯಾರ್ಣಾಂ ತಥೈವ ಚ ॥ ೧೮ ॥

---

೧೪–೧೫. ಅಭೀವರ್ತಮಣೀನಾ ಎಂಬ ಮೂರು ಋಕ್ಕುಗಳಿಂದಲೂ ಮಣಿಯನ್ನು ಮಂತ್ರಿಸಿ ವಾಸವವೆಂಬ ಪಾತ್ರದಲ್ಲಿ ಪ್ರತಿಯೊಂದು ಋಕ್ಕನ್ನೂ ಎರಡಾವರ್ತಿ ಉಚ್ಚರಿಸಿ ಪುನಃ ಮಂತ್ರಿಸಿ ಹಾಕಬೇಕು. ಅನಂತರ ಆ ಪಾತ್ರದಿಂದ ತೆಗೆದು ಸರ್ವಸೂಕ್ತಜಪಪೂರ್ವಕವಾಗಿ ಆ ಮಣಿಯನ್ನು ಧರಿಸಬೇಕು. ಇದು ಅಭೀವರ್ತಮಣಿ ಎಂದು ಹೇಳಲ್ಪಡುತ್ತದೆ. ಇದು ಕಾಷ್ಠಗಳಿಂದ ಆಗತಕ್ಕದ್ದಲ್ಲ.

೧೬–೧೭. ಅಯಂಯೋನಿರತಃ ಎಂಬ ಮಂತ್ರದಿಂದ ಹೋಮಮಾಡಬೇಕು ಶಶಕೆಷ್ವಿಹಯೆ ಎಂಬ ಮಂತ್ರವನ್ನು ಆಯಾಸಹೊಂದಿರುವ ಕರುಗಳ ರೋಗನಿವೃತ್ತಿಗಾಗಿ ಉಪಯೋಗಿಸತಕ್ಕದ್ದು. ಸಾಮಾನ್ಯವಿಷಯದಲ್ಲಿ ಶಾಂತವಿ ಎಂಬ ಅಪಾಮಾರ್ಗಮಣಿಯು ಉಪಯೋಗಕರವಾಗುತ್ತದೆ. ಇವೂ ಮತ್ತು ಇನ್ನೂ ಕೆಲವು ಮಣಿಗಳು ವಿವಾಹವೇ ಮೊದಲಾದ ಶುಭ ಕಾರ್ಯಗಳಲ್ಲಿ ಉಪಯೋಗಿಸಲು ಅರ್ಹವಾಗಿವೆ.

೧೮–೧೯. ಪೂರ್ವೋಕ್ತಕ್ರಮದಿಂದ ಈ ಮಣಿಗಳಿಗೂ ಧರ್ಮಸಾಧನತ್ವ ಉಂಟೆಂಬುದು ನನ್ನ ಅಭಿಪ್ರಾಯ. ದ್ರವ್ಯ, ಓಷಧಿ ಇವುಗಳಿಂದ ಉಂಟುಮಾಡಿದ

---

1 ಅತ್ರಾಮುಂ ವಾಸವೆ ಪಾತ್ರೇ ದ್ವಾಭ್ಯಾಂ ಚಪ್ರತ್ಯೃಚಂ ಪುನಃ....

ದಾಕ್ಷಾಯಣಮಣೀನಾಂ ಚ ಭವೇದ್ಧೋಮಾಧಿಕೋ ವಿಧಿಃ ।
ಓಷಧೀನಾಮಿಹೇದಾನೀಂ ವಿಧಾನಂ ಶೃಣು ಭಾರ್ಗವ ॥ ೧೯ ॥

ವ್ರೀಹೀಣಾಂ ವಾ ಯವಾನಾಂ ವಾ ಮೂಲೇತು ಪರಿತಃ ಕಿರೇತ್ ।
ಯದಿ ಸೌಮ್ಯ ಸುಮಂತ್ರೇಣ ಫಲಕಾನ್ಯೇಕವಿಂಶತಿಃ ॥ ೨೦ ॥

ಅಮುಷ್ಮಿನ್ ಸ್ಥಾನರೂಢಾಸು ಯಥಾಭಿಲಷಿತಾಂ ಬುಧಃ ।
ಯೋಜಯೇನ್ನಾಮ ಸಂಭೂತಾಂ ಅಮುಕಸ್ಯ ವಿಭೂತಯೇ ॥ ೨೧ ॥

ಘೃತಾಹುತೇತಿ ಚ ದ್ವಾಭ್ಯಾಂ ಘೃತೇನ ಪ್ರೋಕ್ಷಯೇತ್ತತಃ ।
ಮಾತೇರಿಷಸೀತ್ಯನಯಾ ಹ್ಯುತ್ವಾ ತಮಭಿಮಂತ್ರಯೇತ್ ॥ ೨೨ ॥

ಗಂಧಂ ಸಂಛಾದಯೇಚ್ಚೈವ ತತೋ ಭೂಮೇತ್ಯನಂತರಂ ।
ಇತ್ಯೌಷಧೀನಾಂ ಸರ್ವಾಸಾಂ ಸಾಮಾನ್ಯೋಯಂ ವಿಧಿಃ ಸ್ಮೃತಃ ॥ ೨೩ ॥

---

ಮಣಿಯನ್ನು ಭಾರ್ಯಾಸಹಿತನಾಗಿಯೇ ಧರಿಸಬೇಕು. ದಾಕ್ಷಾಯಣ ಮಣಿಗಳಿಗೆ ಹೋಮವನ್ನು ಅಧಿಕವಿಧಿಯನ್ನಾಗಿ ಮಾಡಬೇಕು. ಓಷಧಿಗಳ ಮಣಿಯ ನಿರ್ಮಾಣ ಕ್ರಮವನ್ನು ಮುಂದೆ ಹೇಳುತ್ತೇನೆ ಕೇಳು.

೨೦–೨೧. ಬೆಳೆದಿರುವ ಭತ್ತದ ಅಥವಾ ಯವೆಯ ಸುತ್ತಲೂ ಗುರಾಣಿಗಳ ಆಕಾರದ ಇಪ್ಪತ್ತೊಂದು ರೇಖೆಯನ್ನು ಯದಿ ಸೌಮ್ಯ ಎಂಬ ಮಂತ್ರದಿಂದ ಬರೆಯಬೇಕು. ಆ ಸ್ಥಳದಲ್ಲಿ ಹುಟ್ಟಿದ ಪೈರಿನಿಂದ ತನಗೆ ಅಭಿಮತವಾದ ಫಲಕ್ಕೆ ತಕ್ಕಂತೆ ಮಣಿಯ ಹೆಸರನ್ನು ಇಂತಹವನಿಗೋಸ್ಕರ ಈ ಫಲಕ್ಕೋಸ್ಕರ ಇದನ್ನು ಧರಿಸುತ್ತೇನೆ ಎಂದು ನಿರ್ದೇಶಿಸಬೇಕು.

೨೨–೨೩. ಅನಂತರ ಘೃತಾಹುತಾ ಎಂಬ ಎರಡು ಮಂತ್ರಗಳಿಂದಲೂ ಆಜ್ಯದಿಂದ ಪ್ರೋಕ್ಷಿಸಬೇಕು. ಮಾತೇರಿಷಸಿ ಎಂಬ ಮಂತ್ರದಿಂದ ಅದನ್ನು ತೆಗೆದುಕೊಂಡು ಅಭಿಮಂತ್ರಿಸಬೇಕು. ಅನಂತರ ಭೂಮಾ ಎಂಬ ಮಂತ್ರದಿಂದ ಅದರ ಗಂಧವನ್ನು ಆಚ್ಛಾದಿಸಬೇಕು. ಓಷಧಿಮಣಿಗಳಿಗೆಲ್ಲಕ್ಕೂ ಇದು ಸಾಮಾನ್ಯವಾದ ವಿಧಾನಕ್ರಮ.

[1]ಏಕಕಾದ್ಯಾಸ್ತು ಮಣಯಃ ಸಲಿಂಗಂ ನಿಖನೇದ್ಬುಧಃ ।
ಮಂತ್ರೇಣ ತಾನ್ ಪ್ರವಕ್ಷ್ಯಾಮಿ ಯಥಾವದನುಪೂರ್ವಶಃ　　॥ ೨೪ ॥

ಏಕಾಂಕ ಏಕಕಾಮಾಯೇತ್ಯೇಕಾಂಕೇ ವಿಧಿವತ್ಖನೇತ್ ।
ಆಕ್ರಂದಯತಿಸೂಕ್ತೇನ [2]ಪ್ರದಧ್ಯಾಂ ಯದ್ಯಥಾವಿಧಿ　　॥ ೨೫ ॥

ಇಯಂ ವೀರುದಿತ್ಯನಯಾ ವಿಧಿವನ್ಮಧುಘಃ ಖನೇತ್ ।
ಸೂಕ್ತೇನ ಸುಕಲೇನಾಸ್ಯ ಮಣೇರಾಬಂಧನಂ ಭವೇತ್　　॥ ೨೬ ॥

ಇಮಾಂ ಖನಾಮಿತ್ಯನಯಾ ನಿತನೀಲಿಂಗಯಾ ಖನಿಂ ।
ಪ್ರತೀಚೀ ಸೋಮಮುಸಿತಾಂ ಬಧ್ನೀಯಾತ್ತು ಯಥಾವಿಧಿ　　॥ ೨೭ ॥

ಯಾತ್ವಾ ಗಂಧರ್ವ ಇಂದ್ರಾಭ್ಯಾಂ ಕಪಿಕಚ್ಛುಂ ಖನೇದ್ಬುಧಃ ।
ಸೂಕ್ತೇನಾನೇನ ತನ್ಮೇಢ್ರೇ ಪ್ರಬಧ್ನೀಯಾದಿತಿ ಸ್ಥಿತಿಃ　　॥ ೨೮ ॥

---

೨೪–೨೫. ಏಕಾಂಕವೇ ಮೊದಲಾದ ಮೂಲಿಕೆಯ ಮಣಿಗಳನ್ನು ಆಯಾಯ ಮೂಲಿಕೆಗಳ ನಾಮಧೇಯದಿಂದ ಕೂಡಿರುವ ಮಂತ್ರದಿಂದ ಬುದ್ಧಿವಂತನಾದವನು ಅಗೆದು ತೆಗೆಯಬೇಕು. ಆ ಮಣಿಗಳನ್ನೂ ಯಥಾಕ್ರಮವಾಗಿ ಹೇಳುತ್ತೇನೆ. ಏಕಾಂಕವೆಂಬ ಮೂಲಿಕೆಯನ್ನು ಏಕಾಂಕಕಾಮಾಯ ಎಂಬ ಮಂತ್ರದಿಂದ ಯಥಾವಿಧಿಯಾಗಿ ಅಗೆದು ತೆಗೆಯಬೇಕು. ಆಕ್ರಂವಯತಿ ಎಂಬ ಸೂಕ್ತದಿಂದ ಯಥಾವಿಧಿಯಾಗಿ ಬಂಧಿಸಬೇಕು.

೨೬–೨೭. ಇಯಂವೀರುತ್ ಎಂಬ ಋಕ್ಕಿನಿಂದ ಮಧುಘ (ಕೊರಟಿಗೆ) ವನ್ನು ಯಥಾವಿಧಿಯಾಗಿ ಅಗೆದು ತೆಗೆಯಬೇಕು. ಸುಕಲಸೂಕ್ತದಿಂದ ಈ ಮಣಿಯನ್ನು ಧರಿಸಬೇಕು. ಇಮಾಂಖನಾಮಿ ಎಂಬ ಋಕ್ಕಿನಿಂದ ಖನಿ ಎಂಬ ಓಷಧಿಯನ್ನು ಅಗೆಯಬೇಕು. ಪ್ರತೀಚೀಸೋಮಂ ಎಂಬ ಮಂತ್ರದಿಂದ ಅದನ್ನು ಯಥಾವಿಧಿಯಾಗಿ ಧರಿಸಬೇಕು.

೨೮–೨೯. ಯಾತ್ವಾ, ಗಂಧರ್ವಃ, ಇಂದ್ರಾಭ್ಯಾಂ ಎಂಬ ಋಕ್ಕಿನಿಂದ ಕಪಿಕಚ್ಛು (ನಸುಗುನ್ನಿ) ವನ್ನು ಅಗೆಯಬೇಕು. ಈ ಸೂಕ್ತದಿಂದಲೇ ಅದನ್ನು

---

1 ಏಕಾಂಕಾದ್ಯಾಸ್ತು.　2 ಪ್ರಬಧ್ನೀಯಾದ್ಯಥಾವಿಧಿ.

ಇಮಾಂ ಖನಾಮಿತ್ಯನಯಾ ದಶಧಾ ಸ್ಪ್ರತಯಾ ಖನೇತ್ ।
ಪಾಠಾಸೂಕ್ತೇನ ಬಧ್ನೀಯಾದೇಕರಾಜ್ಞೀಮಿತಿ ಶ್ರುತಿಃ ॥ ೨೯ ॥

ದಶಶೀರ್ಷಇತಿ ದ್ವಾಭ್ಯಾಂ ಮಹಾಖ್ಯಂ ವಿಧಿವತ್ಖನೇತ್ ।
ಆಪಃಪುನಂತ್ವಿತ್ಯನೇನ ಬಧ್ನೀಯಾತ್ತಾಂ ಯಥಾವಿಧಿ ॥ ೩೦ ॥

ಇಮಾಂ ಖನಾಮ್ಯೋಷಧೀಂ ತ್ವಾ [1]ಥಬೀಂ ನಾಮ ತಥೋತ್ಖನೇತ್ ।
ಕಾಂಡೀಯಾಋಕ್ತಯಾ ತ್ವೇತೇ ಬಧ್ನಿಯಾತ್ತು ಯಥಾವಿಧಿ ॥ ೩೧ ॥

ಯ ಆತ್ಮಜಾ ಇತ್ಯನಯಾ ಖನ್ಯಾದಿತಿ ತಥೈವ ತಾಂ ।
ಅನೇನೈವ ಪ್ರಬಧ್ನೀಯಾದ್ವಿದ್ವಾನ್ ಸೂಕ್ತೇನ ತಂ ಮಣಿಂ ॥ ೩೨ ॥

ಅರಿಷ್ಟಸ್ತ್ವಾ ಖನತು ವೈ ಪಿಪ್ಪಲಂ ತು ಖನೇತ್ತಥಾ ।
ಯಾವದ್ಯೌರಿತಿ ಸೂಕ್ತೇನ ತಸ್ಯ ಚಾಬಂಧನಂ ಭವೇತ್ ॥ ೩೩ ॥

---

ಲಿಂಗಪ್ರದೇಶದಲ್ಲಿ ಧರಿಸಬೇಕೆಂದು ಪದ್ಧತಿ ಇದೆ. ಇಮಾಂಖನಾಮಿ ಎಂಬ ಋಕ್ಕನ್ನು ಹತ್ತಾವರ್ತಿ ಪಠಿಸಿ ಏಕರಾಜ್ಞೀ ಎಂಬ ಮೂಲಿಕೆಯನ್ನು ಅಗೆಯಬೇಕು ಪಾಠಾಸೂಕ್ತದಿಂದ ಅದನ್ನು ಬಂಧಿಸಬೇಕೆಂದು ಶ್ರುತಿ ಇದೆ.

೩೦–೩೧. ದಶಶೀರ್ಷವೆಂಬ ಎರಡು ಮಂತ್ರಗಳಿಂದ ಮಹಾಖ್ಯ ಓಷಧಿಯನ್ನು ಅಗೆಯಬೇಕು ಆಪಃ ಪುನಂತು ಎಂಬ ಮಂತ್ರದಿಂದ ಅದನ್ನು ಬಂಧಿಸಬೇಕು. ಇಮಾಂಖನಾಮ್ಯೋಷಧೀಂ ಎಂಬ ಮಂತ್ರದಿಂದ [1]ಥಬೀ ಎಂಬ ಓಷಧಿಯನ್ನು ಅಗೆಯಬೇಕು. ಕಾಂಡೀಯ ಋಕ್ಕಿನಿಂದ ಅವನ್ನು ಬಂಧಿಸಬೇಕು.

೩೨–೩೩. ಯ ಆತ್ಮಜಾ ಎಂಬ ಋಕ್ಕಿನಿಂದ ಆತ್ಮಜಾ ಎಂಬ ಓಷಧಿಯನ್ನು ಅಗೆಯಬೇಕು. ಆ ಸೂಕ್ತದಿಂದಲೇ ಆ ಮಣಿಯನ್ನೂ ಬಂಧಿಸಬೇಕು. ಅರಿಷ್ಟಸ್ತ್ವಾಖನತು ವೈ ಎಂಬ ಋಕ್ಕಿನಿಂದ ಹಿಪ್ಪಲಿಯನ್ನು ಅಗೆಯಬೇಕು. ಯಾವದ್ಯೌಃ ಎಂಬ ಸೂಕ್ತದಿಂದ ಅದನ್ನು ಬಂಧಿಸಬೇಕು.

---

1 ಇಲ್ಲಿ ಥಬೀ ಎಂಬುದು ಯಾವ ಕೋಶದಲ್ಲಿಯೂ ದುರ್ಲಭವಾಗಿದೆ. ಡಹುಂ ಎಂದು ಪಾಠವಿದ್ದಲ್ಲಿ ಗಜನಿಂಬೆ ಎಂದು ಅರ್ಥವಾಗುತ್ತದೆ.

ಸಾಹಸೀನಾವಚೇತ್ಯೇವಂ ಸ್ಯೈಥಕಂ ಚ ತಥಾ ಖನೇತ್ ।
ಅನೇನೈವಪ್ರಬಧ್ನೀಯಾ ತ್ಸೂತ್ರೇಣ ತು ಯಥಾವಿಧಿ　　|| ೩೪ ||

ಪಯೋಸೀತ್ಯಥವಾ ಖನ್ಯಾತ್ಸ್ವರ್ಗಪತ್ರೀಂ ಯಥಾವಿಧಿ ।
ಸೂಕ್ತೇನ ತಾಂ ಪ್ರಬಧ್ನೀಯಾದನೇನೈವ ಯಥಾಕ್ರಮಂ　　|| ೩೫ ||

ಇಮಾಂ ಖನಾಮೀತ್ಯನಯಾ ಮಾಷಪರ್ಣೀಂ ತಥಾ ಖನೇತ್ ।
ದ್ವಾಭ್ಯಾಂ 2ಚಾನರ್ಥಸಕ್ತಸ್ತ್ವ ಪ್ರಬಧ್ನೀಯಾದಿತಿ ಶ್ರುತಿಃ　　|| ೩೬ ||

ತತಃ ಖಂಡಾರಿಕಾಂ ಖನ್ಯಾದ್ರಾಜಾ ತ್ವಾಂ ವರುಣಃ ಖನೇತ್ ।
ಋಚಾನಯಾ ಸಮಸ್ತೇನ ಸೂಕ್ತೇನಾಬಂಧನಂ ಭವೇತ್　　|| ೩೭ ||

ಏಕಾರ್ಕಪ್ರಭೃತೀನಾಂ ತು ಲಿಂಗೈಃ ಕಲ್ಪ್ಯಂ ಫಲಂ ಬುಧೈಃ ।
ಸಾಮಿಯಾತ್ವಾಹ ವರುಣೇತ್ಯೇವಮಾದಿಷು ಸಂಶ್ರಿತಾಃ　　|| ೩೮ ||

---

೩೪–೩೫. ಸಾಹಸೀನಾವಚಾ ಎಂಬ ಮಂತ್ರದಿಂದ ಸ್ಯೈಥಕವೆಂಬ ಓಷಧಿಯನ್ನು ಅಗೆಯಬೇಕು. ಈ ಮಂತ್ರದಿಂದಲೇ ಯಥಾವಿಧಿಯಾಗಿ ಸೂತ್ರದಿಂದ ಬಂಧನವನ್ನೂ ಮಾಡಬೇಕು. ಸ್ವರ್ಗಪತ್ನೀ ಎಂಬ ಓಷಧವನ್ನು ಪಯೋಸಿ ಎಂಬ ಮಂತ್ರದಿಂದಾದರೂ ಅಗೆಯಬೇಕು. ಈ ಸೂಕ್ತದಿಂದಲೇ ಅವನ್ನೂ ಸಹ ಯಥಾಕ್ರಮವಾಗಿ ಬಂಧಿಸಬೇಕು.

೩೬–೩೭. ಇಮಾಂ ಖನಾಮೀ ಎಂಬ ಋಕ್ಕಿನಿಂದ ಕಾಡುದ್ದಿನಗಿಡವನ್ನು ಅಗೆಯಬೇಕು. ಹಿಂದೆ ಹೇಳಿರುವ ಎರಡು ಮಂತ್ರಗಳಿಂದ ಅದನ್ನು ಬಂಧಿಸಬೇಕು ಎಂದು ಶ್ರುತಿ ಇದೆ. ಖಂಡಾರಿಕ ಎಂಬ ಓಷಧಿಯನ್ನು ರಾಜಾ ತ್ವಾಂ ವರುಣಃ ಎಂಬ ಮಂತ್ರದಿಂದ ಅಗೆಯಬೇಕು. ಸಮಸ್ತವಾದ ಸೂಕ್ತದಿಂದಲೇ ಅದನ್ನು ಬಂಧಿಸಬೇಕು.

೩೮–೩೯. ಏಕಾರ್ಕವೇ ಮೊದಲಾದ ಓಷಧಿಗಳಿಗೆ ಮಂತ್ರಗಳಲ್ಲಿ ಕಂಡಂತೆ ಫಲವನ್ನು ಪಂಡಿತರಾದವರು ಊಹಿಸಿ ಕಲ್ಪಿಸಬೇಕು. ಸಾಮಿಯಾತ್ವಾಹ ವರುಣಾ

---

2 ಚಾನನ್ತರೋಕ್ತಾಭ್ಯಾಂ ಎಂದು ಪಾಠವಿರಬೇಕು.

ಸಾಮೀದಯಃ ಪದಾರ್ಥಾಸ್ತೇ ಉಪಕ್ಲೃಪ್ತಾಸ್ತಥಾ ಸ್ಮೃತಾಃ ।
ದ್ರವ್ಯೈಸ್ತೈಸ್ತು ಮಣಿಂ ಕುರ್ಯಾದಾಮ್ನಾಯೋಕ್ತೈರ್ಯಥಾವಿಧಿ ॥ ೩೯ ॥

ತಲ್ಲಿಂಗೇನತು ಮಂತ್ರೇಣ ಯಥಾವದನುಪೂರ್ವಶಃ ।
ಕುಷ್ಠಸ್ಯ ಮಣಯಃ ಪಂಚ ಉದಪಾತ್ರೇ ವಿದುರ್ಬುಧಾಃ ॥ ೪೦ ॥

ಪ್ರತ್ಯೇಕಪಾಠಸಂಸ್ಕಾರಶುದ್ಧಯೇ ವೇತಿ ನ ಶ್ರುತಂ ।
ಚತುರಸ್ರಂ ಪ್ರಬಧ್ನೀಯಾನ್ಮಣಿಮಂಜನವತ್ತಥಾ ॥ ೪೧ ॥

ಸೈಂಧವಂ ಲವಣಂ ಸಿದ್ಧಮುಭಯತ್ರ ಪರಿಗ್ರಹಾತ್ ।
ಕುರ್ಯಾದ್ವಾಕ್ಷ್ಯಂ ಚ ಸಂಸ್ಕಾರಂ ವ್ಯಾಪ್ರುತ್ಯೈಪಮಣೌ ತಥಾ ॥ ೪೨ ॥

ಚತುರಸ್ರಾ ತು ಕರ್ತವ್ಯಾ ಮಣೀಕಾರಣಕಾಲಜೌ ।
ನೈಮಿತ್ತಿಕಾಶ್ಚ ಮಣಯೋಽಮಣಯಃ ಸಂವಿದುಶ್ಚ ಯೇ ॥ ೪೩ ॥

---

ಇತ್ಯಾದಿ ಮಂತ್ರಗಳಲ್ಲಿಸಾಮಿದಯವೇ ಮೊದಲಾದ ಪದಾರ್ಥಗಳನ್ನು ಹೇಳಿರುವರು ಅಲ್ಲಿ ಹೇಳಿರುವ ದ್ರವ್ಯಗಳಿಂದ ವೇದೋಕ್ತಕ್ರಮವನ್ನನುಸರಿಸಿ ಮಣಿಯನ್ನು ನಿರ್ಮಿಸಬೇಕು.

೪೦–೪೧. ಇಂತಹ ಮಣಿಗಳನ್ನು ನಿರ್ಮಿಸುವಾಗ ಆ ಯಾಯಮಣಿಗಳ ನಾಮಧೇಯಗಳಿಂದ (ಲಿಂಗ) ಕೂಡಿರುವ ಮಂತ್ರಗಳನ್ನೇ ಕ್ರಮವಾಗಿ ಉಪಯೋಗಿಸಬೇಕು. ಇಂತಹ ಮಣಿಗಳಲ್ಲಿ ಚಂಗಲ್ ಕೋಷ್ಟದಿಂದಲೂ ಐದು ಮಣಿಗಳನ್ನು ಉದ್ಧರಿಸಿ ಉದಕಪಾತ್ರದಲ್ಲಿ ಸಂಸ್ಕರಿಸಿ ಧರಿಸಬೇಕೆಂದೂ ಪಂಡಿತರು ಹೇಳುತ್ತಾರೆ. ಪ್ರತ್ಯೇಕವಾಗಿ ಶ್ರುತಿಗಳಲ್ಲಿ ಪಾಠವಿರುವುದರಿಂದ ಸಂಸ್ಕಾರವೂ ಶುದ್ಧಿಯೂ ಪ್ರತ್ಯೇಕವಾಗಿಯೇ ಆಗಬೇಕು. ಎಂಬುದನ್ನು ಈ ಮಣಿಗಳ ವಿಷಯದಲ್ಲಿ ನಾವು ಕೇಳಿದ್ದೇವೆ. ಈ ಮಣಿಗಳನ್ನೂ ಅಂಜನದೊಡನೆ ಫಲಾರ್ಥಿಯಾದವನು ಯಥಾ ಶಾಸ್ತ್ರವಾಗಿ ಧರಿಸಬೇಕೆಂಬುದು ನಮ್ಮ ಅಭಿಪ್ರಾಯ.

೪೨–೪೩. ಜಲಜಸ್ಥಲಜಭೇದದಿಂದ ಉಭಯವಿಧವಾಗಿಯೂ ಗ್ರಾಹ್ಯವಾಗಿರುವ ಸೈಂಧವಲವಣವನ್ನು ವಾಕ್ಯವೆಂಬ ಕ್ರಮದಿಂದ ಸಂಸ್ಕರಿಸಬೇಕು ಅನ್ಯಥಾ ಆ ಮಣಿಯು ದುಷ್ಟವಾದಲ್ಲಿ ಘಾತುಕವಾದೀತು. ಈ ವಿಧವಾದ ನೈಮಿತ್ತಿಕ

ಸ್ವಂಸ್ವಂ ಮಂತ್ರಂ ಭವೇತ್ತೇಷಾಮಿತಿ ಮೇ ನಿಶ್ಚಿತಾ ಮತಿಃ ।
ನೈಮಿತ್ತಿಕಾನಾಂ ಘೋರಾಸ್ತೇ ತೇಷಾಂ ನೈಮಿತ್ತಿಕಂ ಭವೇತ್ ॥ ೪೪ ॥

ಸಮೃದ್ಧಾನಾಂ ತಥಾ ಮಧ್ಯೇ ಸಾಂಪ್ರದಂ ನಾತ್ರ ಸಂಶಯಃ ।
ಸೋಮಾತ್ರ್ಯಾತ್ವಾಹೇತ್ಯನೇನ ಸೋಮಸಂ ಜನವದ್ಭವೇತ್ ॥ ೪೫ ॥

ಪಿಶಾಚಶಾತನಃ ಪುಂಸಾಂ ಯಾತುಧಾನವಿನಾಶನಃ ।
ಮಂತ್ರಲಿಂಗಾದಯಂ ಜ್ಞೇಯೋ ಮಂತ್ರಶ್ಚಾಸ್ಯ ಪ್ರವಕ್ಷ್ಯತೇ ॥ ೪೬ ॥

ಶರಕಾಷ್ಠೇ ತು ಸಂಯೋಜ್ಯ ಸೀಸಂ ಕೃತ್ವೇತಿ ಬುದ್ಧಿಮಾನ್ ।
ಭಾಙ್ಗೀಂ ಜ್ಯಾಂ ಧನುಷಃ ಕೃತ್ವಾ ಬಾಧಕೇನಾಥ ತೇನ ತತ್ ॥ ೪೭ ॥

ಭೂಮೌ ಪಿಶಾಚಮಾಲಿಖ್ಯ ಭಗವೇನ ತು ತಾಡಯೇತ್ ।
ಉತ್ತರೇಣ ಶರೇಣೈವ ಪಿಶಾಚೋ ನಾಶಮಾಪ್ನುಯಾತ್ ॥ ೪೮ ॥

---

ಮಣಿಗಳು ಕಾಲಭೇಧದಿಂದಲೂ ಉಂಟಾಗುತ್ತವೆ. ಇವನ್ನು ನಾಲ್ಕು ಮೂಲೆಯುಳ್ಳಂತೆ ಮಾಡಬೇಕು. ಇಂತಹ ನೈಮಿತ್ತಿಕಮಣಿಗಳನ್ನೂ ಸಹ ಮಣಿಗಳೆಂದೇ ತಿಳಿಯುತ್ತಾರೆ.

೪೪-೪೬. ಇಂತಹ ನೈಮಿತ್ತಿಕ ಮಣಿಗಳಿಗೆ ಆಯಾಯ ನಾಮ ಮಂತ್ರವೇ ಮಂತ್ರಗಳೆಂದು ನನಗೆ ತೋರುತ್ತದೆ. ನೈಮಿತ್ತಿಕ ಮಣಿಗಳಿಗೆ ನಿಮಿತ್ತಗಳು ಘೋರವಾಗಿರುತ್ತವೆ. ಸಮೃದ್ಧಿಪ್ರದವಾದವುಗಳಿಗೆ ಶುಭಕರವಾಗಿರುತ್ತವೆ. ಸೋಮಾತ್ರ್ಯಾತ್ವಾಹ ಎಂಬ ಮಂತ್ರದಿಂದ ಸೋಮ ಸಂಜನವೆಂಬುವ ಮಣಿಯನ್ನು ನಿರ್ಮಿಸಬೇಕು. ಈ ಮಣಿಯು ಮನುಷ್ಯರಿಗೆ ಉಂಟಾಗುವ ಪಿಶಾಚ ಬಾಧೆ ಮತ್ತು ರಾಕ್ಷಸ ಬಾಧೆ ಇವುಗಳಿಗೆಲ್ಲಾ ನಾಶಕವಾಗುತ್ತದೆ ಮಂತ್ರಲಿಂಗದಿಂದ ಈ ವಿಷಯವನ್ನು ತಿಳಿಯಬಹುದಾಗಿದೆ. ಇದರ ಮಂತ್ರವನ್ನು ಹೇಳುತ್ತೇನೆ.

೪೭-೪೮. ಅಭಿಜ್ಞನಾದವನು ಕೃತ್ವಾ ಎಂಬ ಮಂತ್ರದಿಂದ ಬಾಣದ ತುದಿಗೆ ಸೀಸವನ್ನು ಸೇರಿಸಿ ಧನುಸ್ಸಿಗೆ ಲವಂಗಪಟ್ಟೆಯಿಂದ ಮೌರ್ವಿಯನ್ನು ಮಾಡಿಕೊಂಡು ಭೂಮಿಯ ಮೇಲೆ ಪಿಶಾಚವನ್ನು ಬರೆದು ಆ ಬಾಣದಿಂದ ಭಗವವೆಂಬ ತಾಡನಕ್ರಮದಿಂದ ಹೊಡೆಯಬೇಕು. ಆ ಕೊನೆಯ ಬಾಣದಿಂದಲೇ ಪಿಶಾಚವು ನಾಶಹೊಂದುತ್ತದೆ.

ಶಂಕುಧಾರಮಣೇರ್ಮಂತ್ರಃ ಅನುಸೂರ್ಯೇಮಿತಿಸ್ಮೃತಿಃ ।
ಪ್ರಜ್ಞಾತವರ್ಣಶಬ್ದಾಚ್ಚ ರೋಹಿತಸ್ಯ ಪರಿಗ್ರಹಃ ॥ ೪೯ ॥

ಚರ್ಮಣಃ ಸ್ಯಾತ್ತಥಾವಗೋ ರೋಹಿತಾಸಾ ಭವೇಚ್ಚ ಗಾಃ ।
ಶಂಕುರ್ನಿಧೀಯತೇ ಯತ್ರ ವಿಸ್ತರಾರ್ಥಂ ತು ಚರ್ಮಣಃ ॥ ೫೦ ॥

ತಸ್ಮಾದ್ದೇಶಾನ್ಮಣಿಃ ಕಾರ್ಯಃ ಶಂಕುರ್ಧನಪರಿಗ್ರಹಃ ।
ಮಣಿರ್ಧನಂ ಚ ಮಗ್ಧಂ ಸ್ಯಾದುಪವಿಷ್ಟಾಯ ಚರ್ಮಣಿ ॥ ೫೧ ॥

ಯಜಮಾನಾಯ ಧರ್ಮಜ್ಞ ಉದಪಾತ್ರಂ ತಥಾಮಯಾ ।
ಅತಿಕಾಮಲರೋಗಘ್ನಮಾಯುಷ್ಯಂ ಚ ತಥಾ ಮಣಿಃ ॥ ೫೨ ॥

ಇಮಂ ಮೇ ಕುಷ್ಠೇತ್ಯನೇನ ಪಂಚಾನಾಂ ಸ್ಯಾತ್ಪರಿಗ್ರಹಃ ।
ಅತ್ಯರ್ಥಮೇವ ನೈತೇಷಾಂ ಜಲಂ ಕುಷ್ಠೇನ ಸಂಯುತಂ ॥ ೫೩ ॥

---

೪೯-೫೨. ಅನುಸೂರ್ಯಂ ಎಂಬ ಮಂತ್ರದಿಂದ ಶಂಕುದಾರ ಮಣಿಯನ್ನು ಸಂಗ್ರಹಿಸಬೇಕು. ಈ ಮಂತ್ರದ ಶಬ್ದ ಮತ್ತು ವರ್ಣಗಳಿಂದಲೇ ಇದರ ಪ್ರಸಿದ್ಧಿಯು ಗೊತ್ತಾಗುತ್ತದೆ. ರೋಹಿತವೆಂಬ ಹುಲ್ಲೆಯ ಚರ್ಮದಿಂದ ಇದನ್ನು ನಿರ್ಮಿಸಬೇಕು. ಇದರಿಂದ ಗೋವುಗಳೂ ಹಿತಗಳಾಗುತ್ತವೆ. ಆರೋಹಿತ ಮೃಗದ ಚರ್ಮವನ್ನು ವಿಸ್ತರಿಸುವುದಕ್ಕಾಗಿ ಯಾವ ನೆಲದ ಮೇಲೆ ಶಂಕುಗಳನ್ನು ಹಾಕುತ್ತಾರೆಯೋ ಆ ಸ್ಥಳದಿಂದ ಈ ಮಣಿಯನ್ನು ಸಂಸ್ಕರಿಸಿ ನಿರ್ಮಿಸಬೇಕು. ಇದು ಧನಪ್ರಾಪ್ತಿಗೆ ಕಾರಣವಾಗುತ್ತದೆ. ಆ ಚರ್ಮದ ಮೇಲೆ ಕುಳಿತುಕೊಂಡ ಯಜಮಾನನಿಗೆ ಧನಪ್ರಾಪ್ತಿಯೂ. ಕ್ಷಿರಪ್ರಾಪ್ತಿಯೂ ಆಗುತ್ತದೆ. ಯಜಮಾನನ ಕೈಯಲ್ಲಿ ಹಶಿಯ ಮಣ್ಣಿನ ಉದಕಪಾತ್ರವನ್ನೂ ಕೊಡಬೇಕು. ಇದು ಅತಿಕಾಮಲ ರೋಗವನ್ನು ನಾಶಮಾಡುತ್ತದೆ ಆಯುಸ್ಸನ್ನೂ ಕೊಡುತ್ತದೆ.

೫೩-೫೪. ಇಮಂಮೆ ಕುಷ್ಠ ಎಂಬ ಮಂತ್ರದಿಂದ ಚಂಗಲ್ ಕೋಷ್ಠದ ಐದು ಮಣಿಗಳನ್ನು ಈ ಪಾತ್ರೆಯಲ್ಲಿ ಹಾಕಿ ಸಂಸ್ಕರಿಸಬೇಕು. ಇವುಗಳಿಗೆ ಹೆಚ್ಚಾಗದಂತೆ ಚಂಗಲ್ ಕೋಷ್ಠದ ಮಣಿಗಳೊಡನೆ ಸೇರಿಕೊಳ್ಳುವಂತೆ ಜಲವನ್ನು ಹಾಕಬೇಕು. ಸಂಸ್ಕರಿಸಿದ ನಂತರ ಯಜಮಾನನು ಆ ನೀರನ್ನು ಕುಡಿಯಬೇಕು.

ಸತ್ಕೃತ್ಯ ಸ್ಥಾನಯೋಗತ್ವಾದ್ಯಜಮಾನಃ ಪಿಬೇತ್ತತಃ ।
ಮಣಯಃ ಪಂಚ ಕುಷ್ಠೇ ದ್ವೌ ಮಣಿಶಬ್ದಪರಿಗ್ರಹಂ ॥ ೫೪ ॥

ತುಲ್ಯೇನ ವಿಧಿನಾ ಕಾರ್ಯಾಃ ಫಲಂ ತೇಷಾಂ ಪೃಥಕ್ಪೃಥಕ್ ।
ಶಿರೋಽರ್ತಿನಾಶನಃ ಪೂರ್ವೋ ದ್ವಿತೀಯೋ ವಿಷದೂಷಕಃ ॥ ೫೫ ॥

ತೃತೀಯಶ್ಚ ತಥಾ ಪ್ರೋಕ್ತೋ ವಿಷಮಜ್ವರನಾಶನಃ ।
ಚತುರ್ಥಶ್ಚ ತಥಾ ಪ್ರೋಕ್ತಃ ಸತತಜ್ವರನಾಶನಃ ॥ ೫೬ ॥

ಚಕ್ಷುಷ್ಯಃ ಪಂಚಮಃ ಪ್ರೋಕ್ತೋ ಮಣಿರ್ಭಾರ್ಗವನಂದನ ।
ಕೃತ್ವೋದಪಾತ್ರಂ ಕುಷ್ಠಾಂಭೋ ನವನೀತವಿಮಿಶ್ರಿತಂ ॥ ೫೭ ॥

ಭೂಯಃ ಕುಷ್ಠಂ ಕ್ಷಿಪೇತ್ತತ್ರ ಮಣಿಂ ತತ್ರಾವತಾರಯೇತ್ ।
ಮಣಿಬಂಧಂ ತತಃ ಕೃತ್ವಾ ತೋಯಂ ತತ್ಪಾಯಯೇನ್ನರಂ ॥ ೫೮ ॥

---

ಮಣಿ ಎಂಬ ವ್ಯವಹಾರವಿರುವುದರಿಂದ ಮಣಿಗಳಂತೆಯೇ ಐದನ್ನೂ ಸಂಸ್ಕರಿಸಬೇಕು. ಈ ಸಂಸ್ಕಾರವು ಒಂದೇ ರೀತಿಯಾಗಿ ನಡೆದರೂ ಇವುಗಳ ಫಲ ಮಾತ್ರ ಬೇರೆ ಬೇರೆಯಾಗಿರುತ್ತವೆ.

೫೫–೫೮. ಮೊದಲನೆಯದು ಶಿರೋವ್ಯಾಧಿಯನ್ನು ನಾಶಪಡಿಸುತ್ತದೆ. ಎರಡನೆಯದು ವಿಷದಿಂದ ಉಂಟಾಗುವ ದೋಷವನ್ನು ಹೋಗಲಾಡಿಸುತ್ತದೆ. ಮೂರನೆಯದು ವಿಷಮಜ್ವರಕ್ಕೆ ನಾಶಕವಾಗುತ್ತದೆ. ನಾಲ್ಕನೆಯದು ಸಂತತಜ್ವರಕ್ಕೆ ನಾಶಕವಾಗುತ್ತದೆ. ಐದನೆಯದು ಕಣ್ಣಿಗೆ ಹಿತಕರವಾಗುತ್ತದೆ. ಆ ಉದಕ ಪಾತ್ರೆಯಲ್ಲಿರುವ ಚಂಗಲ್‌ಕೋಷ್ಠದ ನೀರಿಗೆ ಬೆಣ್ಣೆಯನ್ನು ಮಿಶ್ರಮಾಡಿ ಪುನಃ ಆ ಚಂಗಲ್‌ಕೋಷ್ಠವನ್ನು ಅದರಲ್ಲಿ ಹಾಕಬೇಕು. ಮಣಿಯನ್ನು ಅದರಲ್ಲಿಟ್ಟು ಅನಂತರ ಅದನ್ನು ತೆಗೆದು ಕಟ್ಟಿಕೊಳ್ಳಬೇಕು. ಅದರಲ್ಲಿರುವ ನೀರನ್ನೂ ಮಣಿಯನ್ನು ಧರಿಸಿದವನಿಗೆ ಕುಡಿಸಬೇಕು.

ಲಿಪ್ಯೇಚ್ಚ ಸರುಜಂ ದೇಶಮುದಪಾತ್ರೇಜಲೇನ ತು ।
ಯಾಃಪುರಸ್ತಾದಿತ್ಯನೇನ ಮಣಿಃ ಸ್ಯಾಲ್ಲವಣಸ್ಯ ತು ॥ ೫೯ ॥

ಪಿತುರ್ವಸ್ತ್ರಪುಟೇ ಬದ್ಧ್ವಾ ಲವಣಸ್ಯ ತು ತನ್ಮಣಿಂ ।
ಆಬಂಧೇ ಪಷ್ಮವತ್ಸ್ಯಾಚ್ಚ ಯಾತುಧಾನವಿನಾಶನಃ ॥ ೬೦ ॥

ವ್ಯಾಘ್ರರೂಪ ಇತ್ಯನೇನ ಖಂತವ್ಯಂ ಪಾಟರೂಪಕಂ ।
ವ್ಯಾಘ್ರರೂಪ ಇತಿ ದ್ವಾಭ್ಯಾಮೃಗ್ಭ್ಯಾಮಾಬಂಧನಂ ಭವೇತ್ ॥ ೬೧ ॥

ಪಿಶಾಚನಾಶಕಸ್ತ್ವೇವಂ ಸ ಮಣಿಃ ಸ್ಯಾದಸಂಶಯಂ ।
ಏವಮೇವೋತ್ತರಾಭ್ಯಾಂ ಚ ಭವೇತ್ಕೃತ್ಯಭಿಚಾರಕಃ ॥ ೬೨ ॥

ವಿಷ್ಕಂದಸ್ಯೇತ್ಯನೇನಾಹ ತ್ರಿಪರ್ಣೀ ವಿಶ್ವಭೇಷಜೀ ।
ಸ್ಕಂದಸ್ಯೋಪರಿ ಯಃ ಸ್ಕಂದೋ ಭವೇತ್ತಸ್ಯ ವಿನಾಶಿನೀ ॥ ೬೩ ॥

---

೫೯–೬೨. ಮತ್ತು ಆ ಪಾತ್ರೆಯಲ್ಲಿರುವ ನೀರಿನಿಂದ ರೋಗವಿರುವ ಸ್ಥಳದಲ್ಲಿ ಲೇಪಿಸಬೇಕು. ಯಾಃ ಪುರಸ್ತಾತ್ ಎಂಬ ಮಂತ್ರದಿಂದ ಲವಣದ ಮಣಿಯನ್ನು ನಿರ್ಮಿಸಬೇಕು. ಆ ಮಣಿಯನ್ನು ತಂದೆಯ ಪಂಚೆಯ ಕೊನೆಗೆ ಕಟ್ಟಿ ಸಂಸ್ಕರಿಸಿ ಚಂಗಲ್‌ಕೋಷ್ಠ ಮಣಿಯಂತೆಯೇ ಧರಿಸಬೇಕು. ಇದು ರಾಕ್ಷಸರ ಬಾಧೆಗೆ ನಾಶಕವಾಗುತ್ತದೆ. ವ್ಯಾಘ್ರರೂಪ ಎಂಬ ಮಂತ್ರದಿಂದ ಪಾಟರೂಪಕವೆಂಬ ಔಷಧಿಯನ್ನು ಅಗೆದು ತೆಗೆಯಬೇಕು. ವ್ಯಾಘ್ರರೂಪ ಎಂಬ ಎರಡು ಋಕ್ಕುಗಳಿಂದಲೇ ಅದನ್ನು ಕಟ್ಟಿಕೊಳ್ಳಬೇಕು. ಈ ಮಣಿಯು ಪಿಶಾಚಗಳ ನಾಶಕ್ಕೆ ಕಾರಣವಾಗಿಯೇ ಆಗುತ್ತದೆ. ಹೀಗೆಯೇ ಈ ಮಂತ್ರದ ಉತ್ತರಭಾಗವು ಅಭಿಚಾರ ಶಮನಕ್ಕಾಗಿ ಆಚರಿಸಲಾಗುವ ಕರ್ಮದಲ್ಲಿ ವಿನಿಯೋಗ ಹೊಂದುತ್ತದೆ.

೬೩–೬೬. ವಿಷ್ಕಂಧಸ್ಯ ಎಂಬ ಮಂತ್ರದಿಂದ ಎಲ್ಲಾ ವ್ಯಾಧಿಗಳಿಗೂ ಔಷಧವಾದ ತ್ರಿಪರ್ಣೀ ಎಂಬ ಮಣಿಯು ಹೇಳಲ್ಪಟ್ಟಿದೆ. ಭುಜದಮೇಲೆ ಮತ್ತೊಂದು ಭುಜವು ವ್ಯಾಧಿಯಿಂದ ಉಂಟಾದಲ್ಲಿ ಈ ಮಣಿಯು ಅದಕ್ಕೆ ನಾಶಕವಾಗುತ್ತದೆ.

ಯಸ್ಮಾದಂಗಾದಿತಿ ಭವೇದ್ಗಣಾದಿಶ್ಚಾತ್ಪರಿಗ್ರಹಃ ।
ಗಣಸ್ಯ ಕರ್ಮಸಾಮಾನ್ಯಂ ಪ್ರತಿಸೂಕ್ತಂ ನಕಾರಯೇತ್ || ೬೪ ||

ಗೋರಾಚ ವಾರಿಕರ್ಮಾಣಿ ಹನ್ತ್ವಾನ್ಯಾನೀವಮಾದಿಭಿಃ[1] ।
ಪತಂಗಾದ್ಯಾಶ್ಚ ಚತ್ವಾರಃ ಸಂಸ್ಕೃತ್ಯ ಪ್ರಾಣಿನೋ ಬುಧಃ || ೬೫ ||

ತೃಷ್ಣತ್ವಪ್ತ್ಯೈಶ್ಚ ಮಂತ್ರೇಣ ಗಾತ್ರಂ ಪ್ರಕ್ಷಾಲಯೇತ್ಖಿಲಂ ।
ಪ್ರಥಮೇನ ತು ಸೂಕ್ತೇನ ವೇಣುಪೌತ್ರೇ ದ್ರವೋ ಮಣಿಃ || ೬೬ ||

ವೇಣುಃ ಕುರ್ಯಾದ್ಭವೇದ್ಧರ್ಮೋ ವಾರ್ಕ್ಷವದ್ದೇವದಾರುಣಃ ।
ಸಂಸ್ಕೃತ್ಯ ಪೂರ್ವಮಂತ್ರೇಣ ಮಾಷಕಾದೀನ್ಪ್ರಮರ್ದಯೇತ್ || ೬೭ ||

ಗಾತ್ರಸಂಸ್ಕಾರಸಹಿತೈಃ ಪಿಷ್ಟೈರ್ವಾ ಪ್ರಕೃತಿರ್ಭೃಶಂ ।
ಕೇವಲೇನೈವ ಮಂತ್ರೇಣ ಮರ್ದಯೇತ್ತು ವಿನಶ್ಯತಿ || ೬೮ ||

---

ಯಸ್ಮಾದಂಗಾತ್ ಎಂಬ ಮಂತ್ರವನ್ನು ಗಣಕಾರ್ಯಕ್ಕೆ ಮೊದಲು ವಿನಿಯೋಗಿಸಬೇಕು. ಗಣಕ್ಕೆ ಸೇರಿದ ಸಾಮಾನ್ಯ ಕರ್ಮವನ್ನು ಪ್ರತಿಯೊಂದು ಸೂಕ್ತದಿಂದಲೂ ಮಾಡಕೂಡದು ಪತಂಗವೇ ಮೊದಲಾದ ನಾಲ್ಕು ಪ್ರಾಣಿಗಳನ್ನು ಸಂಸ್ಕರಿಸಿ ತೃಷ್ಣತ್ವಪ್ತ್ಯೈ ಎಂಬ ಮಂತ್ರದಿಂದ ಭಂಗಹೊಂದಿರುವ ಶರೀರಭಾಗವನ್ನು ತೊಳೆಯಬೇಕು. ಈ ಮಂತ್ರದ ಪ್ರಥಮ ಸೂಕ್ತದಿಂದ ವೇಣುಪೌತ್ರವೆಂಬ ದ್ರವರೂಪವಾದ ಮಣಿಯಾಗುತ್ತದೆ.

೬೭-೭೦. ವೇಣುಃ ಕುರ್ಯಾತ್ ಎಂಬ ಮಂತ್ರದಿಂದ ದೇವದಾರು ವೃಕ್ಷದಿಂದ ಮಣಿಯನ್ನು ಉದ್ಧರಿಸಬೇಕು. ವೃಕ್ಷಗಳ ಮಣಿಯಂತೆಯೇ ಇದನ್ನು ಪೂರ್ವಮಂತ್ರದಿಂದಲೇ ಸಂಸ್ಕರಿಸಿ ಉದ್ದಿನೊಡನೆ ಮರ್ದಿಸಬೇಕು. ಇದನ್ನು ಶತ್ರುವಿನ ಅವಯವ ಸಂಸ್ಕಾರಕ್ಕೆ ತಕ್ಕಂತೆ ಮರ್ದಿಸಿದ ಪಿಷ್ಟದಿಂದ ಬೊಂಬೆಯನ್ನು ಮಾಡಬೇಕು. ಅಥವಾ ಕೇವಲ ಮಂತ್ರದಿಂದಲೇ ಮರ್ದಿಸಬೇಕು. ಹೀಗೆ ಮಾಡಿದಲ್ಲಿ

---

1 ಇದು ಬಹಳ ಅಶುದ್ಧವಾದ ಭಾಗ

ತಥಾ ಸ್ವಲೋಮಪ್ರಭೃತೀ ವಿಧೂಲೋಧೂಶಿರೋಯುತಿಃ ।
ದೇವಪ್ರವೇಶಂ ಜತುನಾ ಸ್ಥಗಯಿತ್ವಾ ತು ರಕ್ತಿಕಾ ॥ ೬೯ ॥

ದೂಷ್ಯಾ ಇತಿ ಪ್ರತೀಕೇನ ಕುರ್ಯಾತ್ಪ್ರತಿಸರಂ ಮಣಿಂ ।
ಕೃತ್ವಾ ದೂಷಣಮಾಯುಷ್ಯಂ ತದಾಪ್ರತ್ಯಭಿವಾದಕಃ ॥ ೭೦ ॥

ಅಯಂ ಪ್ರತಿಸರಃ ಪಾಣೌ ಯಾತ್ರಾಕಾಲೇ ಸಪತ್ನಹಾ ।
ಸೂತ್ರೇಣಾನೇನ ಬಧ್ನೀಯಾಲ್ಲಿಂಗಾತ್ಪ್ರತಿಸರೋऽಪರಃ ॥ ೭೧ ॥

ಅನೇನ ವಿಧಿನಾ ವೃತ್ರಂ ನಿಜಘಾನ ಶತಕ್ರತುಃ ।
ಅಶಂಸ ಇತಿ ಮಂತ್ರೇಣ ಪ್ರಬಧ್ನೀಯಾದ್ಯಥಾವಿಧಿ ॥ ೭೨ ॥

ಭೂತಿ ಶ್ರೀಪ್ರಭೃತೀನಾಂ ಚ ವಿಘ್ನಮೇವಂ ಕರೋತಿ ಯಃ ।
ವಿನಾಶನಂ ತಸ್ಯ ಭವೇದಾ ಬಂಧಾದ್ಯಕ್ಷನಾಶನಂ ॥ ೭೩ ॥

---

ಶತ್ರುವು ನಾಶಹೊಂದುತ್ತಾನೆ. ಅದೇ ರೀತಿ ವಿಘೂಲೋಘೂಶಿರೋ ಎಂಬ ಮಂತ್ರದಿಂದ ತನ್ನ ದೇಹದ ರೋಮಗಳನ್ನು ಸಂಗ್ರಹಿಸಿ ಆ ರೋಮದ್ವಾರಗಳನ್ನು ಅರಗಿನಿಂದ ಮರೆಮಾಡಿ, ರಕ್ತಿಕಾ, ದೂಷ್ಯಾ ಎಂಬ ಮಂತ್ರಪ್ರತೀಕಗಳಿಂದ ಪ್ರತಿಸರವೆಂಬ ಮಣಿಯನ್ನು ಸಂಸ್ಕರಿಸಬೇಕು. ಕೃತ್ವಾ ದೂಷಣಂ ಎಂಬ ಮಂತ್ರದಿಂದ ಧರಿಸಿದಲ್ಲಿ ಅಭಿಚಾರಕ್ಕೆ ಪ್ರತೀಕಾರವು ಲಭಿಸುತ್ತದೆ.

೭೧-೭೩. ಈ ಪ್ರತಿಸರವು (ಕಂಕಣ) ಕೈಯಲ್ಲಿದ್ದಲ್ಲಿ ಪ್ರಯಾಣಕಾಲದಲ್ಲಿ ಶತ್ರುಗಳ ಬಾಧೆಯನ್ನು ಹೋಗಲಾಡಿಸುತ್ತದೆ. ಇದೇ ಸೂತ್ರದಿಂದಲೇ ಮಂತ್ರಲಿಂಗಕ್ಕೆ ತಕ್ಕಂತೆ ಮತ್ತೊಂದು ಕಂಕಣವನ್ನೂ ಮಾಡಿ ಕಟ್ಟಿಕೊಳ್ಳಬೇಕು. ಈ ವಿಧಾನದಿಂದಲೇ ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ನಾಶಮಾಡಿದನು. ಆಶಂಸ ಎಂಬ ಮಂತ್ರದಿಂದ ಮತ್ತೊಂದು ಕಂಕಣವನ್ನೂ ಯಥಾವಿಧಿಯಾಗಿ ಕಟ್ಟಿಕೊಳ್ಳಬೇಕು. ಯಾವನು ತನ್ನ ಐಶ್ವರ್ಯ ಮತ್ತು ವೈಭವಗಳಿಗೆ ವಿಘ್ನಮಾಡುತ್ತಾನೆಯೋ ಅಂತಹ ಶತ್ರುವಿನ ನಾಶವು ಇದರಿಂದ ಲಭಿಸುತ್ತದೆ. ಇದನ್ನು ಕಟ್ಟಿಕೊಂಡಲ್ಲಿ ಯಕ್ಷರ ನಾಶವೂ ಉಂಟಾಗುತ್ತದೆ.

ಜ್ಯಾಸೂತ್ರಪ್ರೋಥಿತಾಃ ಸಪ್ತವಂಶಪ್ರಾಪ್ತಾಃ ಸಮುದ್ಭವಾಃ ।
ರಕ್ತಾತ್ಯನ್ತರವ್ಯವಹಿತಾ ಗರ್ಭಿಣ್ಯಾ ಉದ್ಧರೇದ್ಬುಧಃ ॥ ೭೪ ॥

ಮಾಸೇ ಚತುರ್ಥೇ ಬಧ್ನೀಯಾನ್ಮಂತ್ರೇಣಾನೇನ ಬುದ್ಧಿಮಾನ್ ।
ಏಕೈಕಸ್ಮಿನ್ನತೀತೇ ತು ಮಾಸೇ ಸೂತ್ರಾನ್ತರೇ ಮಣಿಃ ॥ ೭೫ ॥

ಏಕೈಕಂ ಪ್ರಕ್ಷಿಪೇದ್ಧೀಮಾನ್ಸಸೂತ್ರಂ ಪಶ್ಚಿಮಂ ತಥಾ ।
ಪ್ರಾಚೀದಿಗಿತಿ ಮಂತ್ರೇಣ ಉದೀಚೀ ಭಯನಾಶಿನೀ ॥ ೭೬ ॥

ಅಕ್ಷೀಯಾಭ್ಯಾಮಿತ್ಯನೇನ ದಾಪ್ಯಃ ಸ್ಯಾದ್ಯಕ್ಷ್ಮನಾಶನಃ ।
ಸಂಧಾನಾರ್ಥಂಶೀತಮಗ್ನೇ ರಾತ್ರೀಮಾತೇತನೋಹನಃ ।
ಮಯೂರಗೋಸುರವೃದ್ಧಾ ದ್ವಾವೇತೀತಿ ಪ್ರಕೀರ್ತಿತಂ ॥ ೭೭ ॥

---

೭೪-೭೬. ಬಿದಿರಿನಿಂದ ತೆಗೆದ ಏಳು ಮಣಿಗಳನ್ನು ಧನುಸ್ಸಿನ ಮೌರ್ವಿ (ಹಗ್ಗ) ಯಲ್ಲಿ ಪೋಣಿಸಬೇಕು. ಇದನ್ನು ಗರ್ಭಿಣಿಯಾಗಿರುವ ಸ್ತ್ರೀಗೆ ಉಂಟಾಗುವ ಯಕ್ಷ್ಮ ಎಂಬ (ಬಾಣಂತೀಕ್ಷಯ) ರೋಗನಿವೃತ್ತಿಗಾಗಿ ಉದ್ಧರಿಸಿ ಬಿದಿರಿನಿಂದ ತೆಗೆಯಬೇಕು. ಹೀಗೆ ತೆಗೆದ ಮಣಿಯನ್ನು ಮುಂದೆ ಹೇಳುವ ಮಂತ್ರದಿಂದ ನಾಲ್ಕನೆಯ ತಿಂಗಳಲ್ಲಿ ಗರ್ಭಿಣಿಯ ಕೈಗೆ ಕಟ್ಟಬೇಕು. ಬೇರೆ ಬೇರೆ ಸೂತ್ರಗಳಿಂದ ಕಟ್ಟಿರುವ ಈ ಮಣಿಗಳಲ್ಲಿ ಒಂದೊಂದು ತಿಂಗಳು ಕಳೆದನಂತರ ಒಂದೊಂದು ಸೂತ್ರವನ್ನು ತೆಗೆದುಹಾಕಬೇಕು. ಅದರಲ್ಲಿರುವ ಮಣಿಯನ್ನು ತೆಗೆದು ಮತ್ತೊಂದು ಸೂತ್ರಕ್ಕೆ ಸೇರಿಸಬೇಕು. ಮುಂದಿನ ತಿಂಗಳಿನಿಂದ ಮಣಿಯೊಡನೆ ಹಳೆಯ ಸೂತ್ರಗಳನ್ನು ತೆಗೆಯುತ್ತಿರಬೇಕು ಪ್ರಾಚೀದಿಕ್, ಉದೀಚೀ, ಭಯನಾಶಿನೀ, ಅಕ್ಷೀಯಾಭ್ಯಾಂ ಮತ್ತು,

೭೭. ಸಂಧಾನಾರ್ಥಂ ಶೀತಮಗ್ನೇ, ರಾತ್ರೀ ಮಾತೇತಿ, ಮಯೂರ ಗೋಸುರವೃದ್ಧಾ, ದ್ವಾವಾ-ಎಂಬ ಈ ಏಳು ಮಂತ್ರಗಳಿಂದಲೂ ಪ್ರಯೋಗವನ್ನು ನಡೆಸಬೇಕು.

ಪ್ರೋಕ್ತಾಸ್ತಥೈತೇ ಮಣಯೋ ನೃವೀರ
ಕಾಮ್ಯಾ ಮಯಾ ಸರ್ವಹಿತಾಯ ಪುಣ್ಯಾಃ ।
ಯೇಷಾಂ ಹಿ ಬಂಧೋ ದುರಿತಾಪಹಾರೀ
ಭಯಾಪಹಃ ಕೇವಲವೃದ್ಧಿಕಾರೀ ॥ ೭೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಮಣಿಬಂಧ ವರ್ಣನಂ ನಾಮ ನವೋತ್ತರಶತತಮೋಽಧ್ಯಾಯಃ

೭೮. ಎಲೈ ವೀರಾಗ್ರೇಸರನೇ, ಕಾಮ್ಯಫಲಗಳಿಗೆ ಸಾಧಕಗಳಾದ ಮತ್ತು ಪುಣ್ಯಕರಗಳಾದ ಈ ಮಣಿಗಳೆಲ್ಲವನ್ನೂ ಸರ್ವಜನರ ಹಿತರಕ್ಷಣೆಗಾಗಿ ನಾನು ಈ ರೀತಿ ಹೇಳಿದ್ದೇನೆ ಈ ಮಣಿಗಳ ಬಂಧನವು ಪಾಪನಾಶಕವಾಗಿಯೂ ಭಯ ನಾಶಕವಾಗಿಯೂ ಬಹುಮಟ್ಟಿಗೂ ವೃದ್ಧಿಪ್ರದವಾಗಿಯೂ ಆಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನ ದಲ್ಲಿ ಮಣಿಬಂಧವರ್ಣನವೆಂಬ ನೂರ ಒಂಭತ್ತನೆಯ ಅಧ್ಯಾಯವು ಮುಗಿದಿದೆ.



## ನೂರ ಒಂಭತ್ತನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಮಣಿಬಂಧನವೆಂಬ ಆಥರ್ವಣಿಕ ಶಾಂತಿಕರ್ಮಗಳನ್ನು ನಾನಾ ವಿಧವಾದ ಮಣಿಗಳ ನಿರ್ಮಾಣಕ್ರಮದಿಂದ ನಿರೂಪಿಸಿರುತ್ತಾರೆ. ಇದು ಅಥರ್ವವೇದದ ಮಂತ್ರ ಮತ್ತು ಪ್ರಯೋಗ ಕ್ರಮವನ್ನು ತಿಳಿದಿರುವವರಿಗೇ ಆಚರಿ ಸಲು ಸಾಧ್ಯವಾಗುತ್ತದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ದಶೋತ್ತರಶತತಮೋಽಧ್ಯಾಯಃ

**|| ರಾಮ ಉವಾಚ ||**

**ಭಗವನ್ ಶ್ರೋತುಮಿಚ್ಛಾಮಿ ಕರ್ಮ ಕಾಮ್ಯಮಹಂ ನೃಣಾಂ |**
**ಕೃತೇನ ಯೇನ ಕಾಮಾನಾಂ ನರೋ ಭವತಿ ಭಾಜನಂ || ೧ ||**

**|| ಪುಷ್ಕರ ಉವಾಚ ||**

**ಸರ್ವೇಷಾಮೇವ ಕಾಮಾನಾಮೀಶ್ವರೋ ಭಗವಾನ್ ಹರಿಃ |**
**ತಸ್ಯ ಸಂಪೂಜನಾದೇವ ಸರ್ವಾನ್ ಕಾಮಾನುಪಾಶ್ನುತೇ || ೨ ||**

**ಸ್ನಾಪಯಿತ್ವಾ ಘೃತಕ್ಷೀರೈಶ್ಚಂದನೇನಾನುಲೇಪಯೇತ್ |**
**ಶುಕ್ಲೈಃ ಸಂಪೂಜ್ಯ ಪುಷ್ಪೈಶ್ಚ ಸಪ್ತ ಸಸ್ಯಬಲಿಂ ಹರೇತ್ || ೩ ||**

---

### ನೂರ ಹತ್ತನೆಯ ಅಧ್ಯಾಯ.

೧. ಭಾರ್ಗವನು ಪುನಃ ಪ್ರಶ್ನೆಮಾಡುತ್ತಾನೆ:—ಪೂಜ್ಯನೇ ಮನುಷ್ಯನು ಯಾವ ಕಾಮ್ಯಕರ್ಮವನ್ನು ಆಚರಿಸಿದಲ್ಲಿ ಸರ್ವವಿಧವಾದ ಮನೋರಥಫಲಗಳಿಗೂ ಭಾಗಿಯಾಗುವನೋ ಅಂತಹ ಕಾಮ್ಯಕರ್ಮವನ್ನು ಕೇಳಬೇಕೆಂದು ನನಗೆ ಇಚ್ಛೆಯಾಗುತ್ತಿದೆ. ದಯವಿಟ್ಟು ಅಂತಹ ಕರ್ಮವನ್ನು ಹೇಳಬೇಕು ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಎಲ್ಲಾ ಮನೋರಥ ಫಲಗಳಿಗೂ ಸರ್ವಶಕ್ತನಾದ ಹರಿಯೇ ಪ್ರಭುವಾಗಿರುವನು. ಅವನ ಪೂಜೆಯಿಂದ ಎಲ್ಲಾ ಫಲಗಳನ್ನೂ ಹೊಂದಬಹುದು. ಆಜ್ಯ, ಕ್ಷೀರ ಇವುಗಳಿಂದ ಆ ಹರಿಯನ್ನು ಅಭಿಷೇಕಮಾಡಿ ಸುಗಂಧಿಯಾದ ಚಂದನದಿಂದ ಲೇಪಿಸಬೇಕು. ಬಿಳುಪಾದ ಹೂವುಗಳಿಂದ ಪೂಜಿಸಿ ಸಸ್ಯಗಳಿಂದ ಮಾಡಿದ ಏಳು ವಿಧವಾದ ಬಲಿಯನ್ನು ಅರ್ಪಿಸಬೇಕು.

ರಕ್ತಪಿತ್ತಾನ್ನರೋ ಘೋರಾನ್ಮುಚ್ಯತೇ ನಾತ್ರ ಸಂಶಯಃ ।
ತೈಲಕ್ಷೌದ್ರಘೃತೈರ್ದೇವಂ ಸ್ನಾಪಯಿತ್ವಾ ಜನಾರ್ದನಂ ॥ ೪ ॥

ಭಸ್ಮತ್ರಯೇಣಾನುಲಿಪ್ಯ ಸಂಪೂಜ್ಯ ಕುಸುಮೈಃ ಸಿತೈಃ ।
ಪಂಚಮುದ್ಗಬಲಿಂ ದದ್ಯಾದತೀಸಾರಾತ್ಪ್ರಮುಚ್ಯತೇ ॥ ೫ ॥

ಸಂಸ್ನಾಪ್ಯ ಪಂಚಗವ್ಯೇನ ದತ್ವಾ ಪಂಚಾನುಲೇಪನಂ ।
ಪಂಚಸಸ್ಯ ಬಲಿಂ ದತ್ವಾ ಸುಖಂ ಕುಷ್ಠಾತ್ಪ್ರಮುಚ್ಯತೇ ॥ ೬ ॥

ತ್ರಿರಸಸ್ನಾಪಿತಂ ದೇವಂ ತ್ರಿಸುಗಂಧೇನ ಲೇಪಿತಂ ।
ಕೃತ್ವಾ ದತ್ವಾ ತ್ರಿಸೂತ್ರಂ ಚ ಬಲಿಂ ಕಾಮಾದ್ವಿಮುಚ್ಯತೇ ॥ ೭ ॥

ಸ್ನಾಪಯಿತ್ವಾ ತು ತೈಲೇನ ತ್ರಿಭಿರುಷ್ಣೈರ್ವಿಲೇಪಯೇತ್ ।
ಪಂಚಮಾಷಬಲಿಂ ದತ್ವಾ ವಾತವ್ಯಾಧಿಂ ವಿಮುಂಚತಿ ॥ ೮ ॥

---

೪-೫. ಈ ರೀತಿ ಹರಿಯನ್ನು ಪೂಜಿಸಿದವನು ಘೋರವಾದ ರಕ್ತಪಿತ್ತ ವ್ಯಾಧಿಯಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ಎಣ್ಣೆ, ಜೇನು, ಆಜ್ಯ ಇವುಗಳಿಂದ ಆ ಜನಾರ್ದನ ಮೂರ್ತಿಯನ್ನು ಅಭಿಷೇಕಮಾಡಿ ಮೂರುವಿಧವಾದ ಭಸ್ಮದಿಂದ ಲೇಪಿಸಿ ಬಿಳುಪಾದ ಹೂವುಗಳಿಂದ ಪೂಜಿಸಿ ಹೆಸರಿನಿಂದ ಮಾಡಿದ ಐದು ಬಲಿಗಳನ್ನು ಅರ್ಪಿಸಬೇಕು. ಈ ರೀತಿ ಹರಿಯನ್ನು ಪೂಜಿಸಿದವನು ಅತಿಸಾರವೆಂಬ ವ್ಯಾಧಿಯಿಂದ ನಿವೃತ್ತಿ ಹೊಂದುತ್ತಾನೆ.

೬-೭. ಪಂಚಗವ್ಯದಿಂದ ಹರಿಯನ್ನು ಸ್ನಾನಮಾಡಿಸಿ ಐದು ವಿಧವಾದ ಸುಗಂಧಿದ್ರವ್ಯಗಳಿಂದ ಲೇಪಿಸಿ ಐದು ವಿಧವಾದ ಸಸ್ಯಬಲಿಯನ್ನು ಅರ್ಪಿಸಿ ಕುಷ್ಠ ರೋಗದಿಂದ :ಬಿಡುಗಡೆ ಹೊಂದುತ್ತಾನೆ. ಮತ್ತು ಮೂರುವಿಧವಾದ ರಸಗಳಿಂದ ಹರಿಯನ್ನು ಸ್ನಾನಮಾಡಿಸಿ ಮೂರು ವಿಧವಾದ ಗಂಧವುಳ್ಳ ಬಲಿಯನ್ನು ಸಮರ್ಪಿಸಿ ದವನು ಕಾಮವೆಂಬ ಮನೋದೋಷದಿಂದ ಬಿಡುಗಡೆ ಹೊಂದುತ್ತಾನೆ.

೮-೧೧. ತೈಲದಿಂದ ಹರಿಗೆ ಅಭಿಷೇಕಮಾಡಿ ಮೂರುವಿಧವಾದ ಬಿಸಿ ಯಾದ ಗಂಧಗಳಿಂದ ಲೇಪಿಸಿ ಉದ್ದಿನಿಂದ ಮಾಡಿದ ಐದು ಬಲಿಗಳನ್ನು ಅರ್ಪಿಸಿ ದಲ್ಲಿ ಅವನು ವಾತವ್ಯಾಧಿಯಿಂದ ಬಿಡುಗಡೆ ಹೊಂದುತ್ತಾನೆ. ಮತ್ತು ಎರಡು

ದ್ವಿಸ್ನೇಹಸ್ನಪಿತಂ ದೇವಂ ಶೀತೋಷ್ಣೇನಾನುಲೇಪಿತಂ ।
ಪಂಚಭಿಃ ಸ್ನಾಪಯಿತ್ವಾ ಚ ರಸೈರ್ದೇವಂ ಜನಾರ್ದನಂ　　॥ ೯ ॥

ಅನುಲಿಪ್ಯ ಚ ಧರ್ಮಜ್ಞ ತಥಾ ಪಂಚ ಸುಗಂಧಿನಾ ।
ಪಂಚವರ್ಣಾನಿ ಪುಷ್ಪಾಣಿ ತಥಾ ದತ್ವಾ ಯಥಾವಿಧಿ　　॥ ೧೦ ॥

ಧೂಪಂ ಚ ಪಂಚನಿರ್ಯಾಸಂ ದತ್ವಾ ಚೈವಾಸ್ಯನುತ್ತಮಂ ।
ತತಶ್ಚ ಪಂಚಮಧುರಂ ಬಲಿಂ ಸಮ್ಯಕ್ ನಿವೇದಯೇತ್　　॥ ೧೧ ॥

ಅನೇನ ರೋಗತಃ ಶೀಘ್ರಂ ಮುಚ್ಯತೇ ನಾತ್ರ ಸಂಶಯಃ ।
ವಿಷ್ಣುಂ ಸಹಸ್ರಮೂರ್ಧಾನಂ ಚರಾಚರಗುರುಂ ಹರಿಂ　　॥ ೧೨ ॥

ಸ್ತುವನ್ನಾಮಸಹಸ್ರೇಣ ಜ್ವರಾನ್ಸರ್ವಾನ್ ವ್ಯಪೋಹತಿ ।
ಘೃತೇನ ಸ್ನಾಪಿತಂ ದೇವಂ ಚಂದನೇನಾನುಲೇಪಯೇತ್　　॥ ೧೩ ॥

ಪಂಚಭಿರ್ಜಲಜೈಃ ಪುಷ್ಪೈಸ್ತತಃ ಸಂಪೂಜಯೇದ್ವಿಭುಂ ।
ಧೂಪಂ ದದ್ಯಾತ್ತ್ರಿವಾರಂ ಚ ಪಂಚಗವ್ಯಂ ತಥಾ ಬಲಿಂ　　॥ ೧೪ ॥

---

ವಿಧವಾದ ತೈಲದಿಂದ ಹರಿಗೆ ಅಭಿಷೇಕಮಾಡಿ ಶೀತವಾಗಿಯೂ ಉಷ್ಣವಾಗಿಯೂ ಇರುವ ಎರಡು ವಿಧವಾದ ಗಂಧಗಳಿಂದ ಲೇಪಿಸಿ ಪುನಃ ಐದು ವಿಧವಾದ ರಸಗಳಿಂದ ಸ್ನಾನಮಾಡಿಸಿ ಹಾಗೆಯೇ ಐದು ವಿಧ ವರ್ಣವುಳ್ಳ ಹೂವುಗಳಿಂದ ಪೂಜಿಸಿ ಮರದ ಹಾಲಿನಿಂದ ಉಂಟಾದ ಐದು ವಿಧವಾದ ಹಾಲುಮಡ್ಡಿಯಿಂದ ಧೂಪವನ್ನರ್ಪಿಸಿ ಐದು ವಿಧವಾದ ಮಧುರ ರಸದಿಂದ ಕೂಡಿದ ಬಲಿಯನ್ನು ನಿವೇದಿಸಬೇಕು. ಈ ವಿಧಾನದಿಂದ ಎಲ್ಲಾ ವಿಧವಾದ ರೋಗದಿಂದಲೂ ಬಿಡುಗಡೆ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

೧೨-೧೪. ಸಹಸ್ರತಲೆಗಳಿಂದ ಕೂಡಿ ಚರಾಚರ ಪ್ರಪಂಚಗಳಿಗೆಲ್ಲಾ ಗುರುವಾಗಿರುವ ಆ ವಿಷ್ಣುವನ್ನು ಸಹಸ್ರನಾಮದಿಂದ ಸ್ತೋತ್ರಮಾಡಿದಲ್ಲಿ ಎಲ್ಲಾ ವಿಧವಾದ ಜ್ವರಗಳಿಂದಲೂ ನಿವೃತ್ತಿ ಹೊಂದುತ್ತಾನೆ. ಆ ಹರಿಯನ್ನು ಆಜ್ಯದಿಂದ ಸ್ನಾನಮಾಡಿಸಿ ಚಂದನವನ್ನು ಲೇಪಿಸಬೇಕು. ನೀರಿನಲ್ಲಿ ಹುಟ್ಟಿದ ಐದು ವಿಧವಾದ ಹೂವುಗಳಿಂದ ನಂತರ ಪೂಜಿಸಬೇಕು. ಮೂರಾವರ್ತಿ ಪಂಚಗವ್ಯಧೂಪವನ್ನು ಅರ್ಪಿಸಿ ಬೆಲ್ಲದಿಂದ ಮಾಡಿದ ಐದು ಬಲಿಯನ್ನು ಅರ್ಪಿಸಿದಲ್ಲಿ ಬಂಧಿತನಾದವನು ಆ ಬಂಧದಿಂದ ಬಿಡುಗಡೆ ಹೊಂದುತ್ತಾನೆ.

ಪಂಚಗೌಡಂ ತಥಾ ರಾಮ ಬದ್ಧೋ ಮುಚ್ಯೇತ ಬಂಧನಾತ್ ।
ತ್ರಿಶೀತಸ್ನಾಪಿತಂ ದೇವಂ ತ್ರಿಶೀತೇನಾನುಲೇಪಯೇತ್ ॥ ೧೫ ॥

ತ್ರಿಶೀತೈಃ ಕುಸುಮೈಃ ಪೂಜ್ಯ ಧೂಪಂ ದದ್ಯಾತ್ತ್ರಿಶೀತಲಂ ।
ತ್ರಿಶೀತಂ ಚ ಬಲಿಂ ದತ್ವಾ ರಾಜಕೋಪಾದ್ವಿಮುಚ್ಯತೇ ॥ ೧೬ ॥

ಶೀತೋಷ್ಣಸ್ನಾಪಿತಂ ದೇವಂ ತ್ರಿಶೀತೈರನುಲೇಪಯೇತ್ ।
ಧೂಪಂ ದತ್ವಾ ಚ ಶೀತೋಷ್ಣಂ ಶೀತೋಷ್ಣಂ ಚ ತಥಾ ಬಲಿಂ ॥ ೧೭ ॥

ಗುರುಪ್ರಸಾದಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಯಮಲಸ್ನಾಪಿತಂ ದೇವಂ ಯಮಲೇನಾನುಲೇಪಿತಂ ॥ ೧೮ ॥

ಅಭ್ಯರ್ಚ್ಯ ಯಮಲೈಃ ಪುಷ್ಪೈಃ ಧೂಪಂ ಚ ಯಮಲಂ ದಹೇತ್ ।
ಯಮಲಂ ಚ ಬಲಿಂ ದತ್ವಾ ಸೌಭಾಗ್ಯಂ ಪ್ರಾಪ್ನುಯಾನ್ನರಃ ॥ ೧೯ ॥

---

೧೫-೧೬. ತಣ್ಣಗಿರುವ ತೀರ್ಥದಿಂದ ಮೂರಾವರ್ತಿ ಹರಿಗೆ ಸ್ನಾನಮಾಡಿಸಿ ತಣ್ಣಗಿರುವ ಮೂರು ವಿಧವಾದ ಗಂಧದಿಂದಲೇ ಲೇಪಿಸಿ, ಶೀತಲವಾಗಿರುವ ಹೂವುಗಳಿಂದ ಮೂರಾವರ್ತಿ ಪೂಜಿಸಿ ಇಂಪಾಗಿರುವ ಧೂಪವನ್ನು ಮೂರಾವರ್ತಿ ಸಮರ್ಪಿಸಿ, ಶೀತಲವಾದ ಮೂರುವಿಧವಾದ ಬಲಿಯನ್ನು ಅರ್ಪಿಸಿದಲ್ಲಿ ಅಂತಹವನಿಗೆ ರಾಜ ಕೋಪದಿಂದ ಬಿಡುಗಡೆಯುಂಟಾಗುತ್ತದೆ.

೧೭. ಶೀತಜಲದಿಂದಲೂ, ಉಷ್ಣಜಲದಿಂದಲೂ ಹರಿಯನ್ನು ಸ್ನಾನಮಾಡಿಸಿ ಶೀತಲವಾದ ಲೇಪನದ್ರವ್ಯದಿಂದ ಮೂರಾವರ್ತಿ ಅಥವಾ ಮೂರು ವಿಧವಾದ ಶೀತಲ ಲೇಪನದಿಂದ ಲೇಪಿಸಿಬೇಕು. ಶೀತವಾಗಿಯೂ ಉಷ್ಣವಾಗಿಯೂ ಇರುವ ಧೂಪವನ್ನು ಅರ್ಪಿಸಿ ಶೀತವಾಗಿಯೂ, ಉಷ್ಣವಾಗಿಯೂ ಇರುವ ಬಲಿಯನ್ನು ಅರ್ಪಿಸಿದವನು ಗುರುವಿನ ಅನುಗ್ರಹವನ್ನು ಹೊಂದುತ್ತಾನೆ. ಇದರಲ್ಲಿ ಸಂದೇಹವಿಲ್ಲ.

೧೮-೨೦. ಒಂದೇ ಕಾಲದಲ್ಲಿ ಯುಗ್ಮಾಭಿಷೇಕದಿಂದ ಹರಿಗೆ ಸ್ನಾನಮಾಡಿಸಿ ಹಾಗೆಯೇ ಎರಡು ವಿಧವಾದ ಲೇಪನದಿಂದ ಒಂದೇ ಕಾಲದಲ್ಲಿ ಲೇಪಿಸಿ, ಅವಳಿಯ ಹೂವುಗಳಿಂದಲೂ ಯಮಳಧೂಪದಿಂದಲೂ ಪೂಜಿಸಿ ಯುಗ್ಮವಾದ ಬಲಿಯನ್ನು

**ಸೌಭಾಗ್ಯಕಾಮಾ ನಾರೀ ಚ ಸೌಭಾಗ್ಯಂ ಮಹದಾಪ್ನುಯಾತ್ ।**
**ಸೌಭಾಗ್ಯಕಾಮೋಽಪಿ ನರಃ ಸೌಭಾಗ್ಯಂ ಮಹದಶ್ನುತೇ ॥ ೨೦ ॥**

**ತ್ರಿಭಿಃ ಸಂಸ್ನಾಪಿತಂ ದೇವಂ ಸೌಭಾಗ್ಯಂ ಮಹದಾಪ್ನುಯಾತ್ ।**
**ತ್ರಿಭಿಃ ಫಲೈಃ ಸ್ನಾಪಯಿತ್ವಾ ತ್ರಿಸಾರೇಣಾನುಲೇಪಯೇತ್ ॥ ೨೧ ॥**

**ತ್ರಿಶೀತಂ ಚ ಬಲಿಂ ದದ್ಯಾದ್ಯಶಃ ಪ್ರಾಪ್ನೋತ್ಯನುತ್ತಮಂ ।**
**ತ್ರಿತೈಲಸ್ನಾಪಿತಂ ದೇವಂ ತ್ರಿರಕ್ತೇನಾನುಲೇಪಿತಂ ॥ ೨೨ ॥**

**ಧೂಪಯೇನ್ಮಹಿಷಾಕ್ಷೇಣ ತ್ರಿರಕ್ತಂ ಚ ಬಲಿಂ ಹರೇತ್ ।**
**[1]ರೌದ್ರಕರ್ಮ ತು ಪ್ರಾಪ್ನೋತಿ ಸಿದ್ಧಿರಸ್ತಿ ನ ಸಂಶಯಃ ॥ ೨೩ ॥**

**ತ್ರಿಗಂಧಸ್ನಾಪಿತಂ ದೇವಂ ತ್ರಿಶೀತೇನಾನುಲೇಪಿತಂ ।**
**ಪೂಜಯೇಚ್ಛ್ವೇತಪದ್ಮಾನಾಂ ಸಹಸ್ರೇಣ ಮಹಾಭುಜಂ ॥ ೨೪ ॥**

---

ಪ್ರದಾನವಮಾಡಿದವನು, ಸೌಭಾಗ್ಯವನ್ನು ಹೊಂದುತ್ತಾನೆ. ಸೌಭಾಗ್ಯವನ್ನು ಅಪೇಕ್ಷಿಸುವ ಸ್ತ್ರೀಯಾಗಲಿ ಪುರುಷನಾಗಲಿ ಈ ವಿಧಾನದಿಂದ ಸೌಭಾಗ್ಯವನ್ನು ಹೊಂದುತ್ತಾರೆ

೨೧–೨೨. ಮೂರು ಬಾರಿ ಹರಿಗೆ ಅಭಿಷೇಕವಮಾಡಿದವನೂ ಹೆಚ್ಚಾದ ಸೌಭಾಗ್ಯವನ್ನು ಹೊಂದುತ್ತಾನೆ. ಮೂರು ವಿಧವಾದ ಫಲಗಳಿಂದ ಅಭಿಷೇಕ ಮಾಡಿ ಉತ್ತಮವಾದ ಮೂರು ವಿಧ ಗಂಧಗಳಿಂದ ಲೇಪಿಸಬೇಕು. ತಣ್ಣಗಿರುವ ಮೂರು ವಿಧವಾದ ಬಲಿಯನ್ನೂ ಅರ್ಪಿಸಿದವನು ಅಸದೃಶವಾದ ಯಶಸ್ಸನ್ನು ಹೊಂದುತ್ತಾನೆ. ಮೂರು ವಿಧವಾದ ತೈಲದಿಂದ ಅಭಿಷೇಕವಮಾಡಿ ಮೂರು ವಿಧವಾದ ರಕ್ತಚಂದನದಿಂದ ಅನುಲೇಪಿಸಿ ಮಹಿಷಾಕ್ಷವೆಂಬ ಹಾಲುಮಡ್ಡಿಯಿಂದ ಧೂಪಿಸಬೇಕು. ರಕ್ತವರ್ಣದಿಂದ ಕೂಡಿದ ಮೂರು ವಿಧವಾದ ಬಲಿಯನ್ನರ್ಪಿಸಬೇಕು.

೨೩–೨೪. ಈ ವಿಧಾನವನ್ನು ಆಚರಿಸಿದವನು ಭಯಂಕರವಾದ ಸಾಹಸ ಕರ್ಮದಲ್ಲಿಯೂ ಸಿದ್ಧಿಯನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ. ಮೂರು ವಿಧವಾದ ಗಂಧಗಳಿಂದ ಹರಿಯನ್ನು ಸ್ನಾನಮಾಡಿಸಿ ಶೀತಲವಾಗಿರುವ ಮೂರು ವಿಧವಾದ ಗಂಧಗಳಿಂದ ಅನುಲೇಪಿಸಿ, ಒಂದುಸಾವಿರ ಬಿಳಿಯ ಕಮಲಗಳಿಂದ ಆ ಮಹಾಭುಜನನ್ನು ಪೂಜಿಸಬೇಕು. ಹೀಗೆ ಪೂಜಿಸಿ ಪರಮಾನ್ನವನ್ನು ನೈವೇದ್ಯ ಮಾಡಿದವನು ಉತ್ತಮವಾದ ಸಂಪತ್ತನ್ನು ಹೊಂದುತ್ತಾನೆ.

---

1 ರೌದ್ರೇಕರ್ಮಣಿ ಸಿದ್ಧಿಂ ತು ಪ್ರಾಪ್ನೋತಿ ನಹಿ ಸಂಶಯಃ ಎಂದು ಪಾಠವಿರಬೇಕು.

ನಿವೇದ್ಯ ಪರಮಾನ್ನಂ ಚ ಶ್ರಿಯಂ ಪ್ರಾಪ್ನೋತ್ಯನುತ್ತಮಾಂ ।
ಘೃತೇನ ಸ್ನಾಪಿತಂ ದೇವಂ ಚಂದನೇನಾನುಲೇಪಿತಂ ॥ ೨೫ ॥

ಪರಮಾನ್ನಂ ಬಲಿಂ ದತ್ವಾ ಯಥೇಷ್ಟಂ ಕಾಮಮಾಪ್ನುಯಾತ್ ।
ಘೃತೇನ ಸ್ನಾಪಿತಂ ದೇವಂ ಚಂದನೇನಾನುಲೇಪಿತಂ ॥ ೨೬ ॥

ಅಪೂಪೈಃ ಪರಮಾನ್ನೇನ ಕುಲ್ಮಾಷೇಣ ಚ ಪೂಜಯೇತ್ ।
ಆಮ್ರಾತಕಾನಾಂ ಮುಖ್ಯಾನಾಂ ತತಸ್ತ್ವಷ್ಟಾಧಿಕಂ ಶತಂ ॥ ೨೭ ॥

ಕ್ಷೌದ್ರಂ ತ್ರಿವೃತ್ತಂ ದೇವಾಯ ಯಥಾವದ್ವಿನಿವೇದಯೇತ್ ।
ಸೌಭಾಗ್ಯಂ ಮಹದಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೨೮ ॥

ಪಂಚಗವ್ಯಬಲಿಂ ದತ್ವಾ ಧನಮಾಪ್ನೋತ್ಯನುತ್ತಮಂ ।
ತ್ರಿರಕ್ತಸ್ನಾಪಿತಂ ದೇವಂ ತ್ರಿರಕ್ತೇನಾನುಲೇಪಿತಂ ॥ ೨೯ ॥

---

೨೫-೨೭. ಆಜ್ಯದಿಂದ ಹರಿಯನ್ನು ಸ್ನಾನಮಾಡಿಸಿ, ಚಂದನದಿಂದ ಲೇಪಿಸಿ ಪರಮಾನ್ನದ ಬಲಿಯನ್ನು ಅರ್ಪಿಸಿದಲ್ಲಿ ಅಭಿಮತವಾದ ಫಲವನ್ನು ಹೊಂದುತ್ತಾನೆ. ಹಾಗೆಯೇ ಆಜ್ಯದಿಂದ ಅಭಿಷೇಕಮಾಡಿ ಚಂದನದಿಂದ ಲೇಪಿಸಿ ಒಬ್ಬಟ್ಟು ಮೊದಲಾದ ಅಪೂಪಗಳಿಂದಲೂ ಪರಮಾನ್ನದಿಂದಲೂ, ತಡಗಣಿಯಿಂದಲೂ ನೈವೇದ್ಯವನ್ನು ಸಮರ್ಪಿಸಿ ಪೂಜಿಸಬೇಕು. ಗೊಂಚಲಿನ ಮುಂಭಾಗದಲ್ಲಿ ಹುಟ್ಟಿರುವ ನೂರ ಎಂಟು ಅಮಟೆಯ ಫಲಗಳಿಂದಲೂ,

೨೮-೩೦. ಮೂರು ಬಾರಿ ಅರ್ಪಿಸಿದ ಜೇನಿನಿಂದಲೂ ನೈವೇದ್ಯವನ್ನು ಸಮರ್ಪಿಸಬೇಕು. ಹೀಗೆ ಮಾಡಿದವನು ಹೆಚ್ಚಾದ ಸೌಭಾಗ್ಯವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ. ಪಂಚಗವ್ಯದಿಂದ ಬಲಿಯನ್ನು ಸಮರ್ಪಿಸಿದವನು ಹೆಚ್ಚಾದ ಧನವನ್ನು ಹೊಂದುತ್ತಾನೆ. ಮೂರು ವಿಧವಾದ ರಕ್ತದಿಂದ ಹರಿಯನ್ನು ಸ್ನಾನಮಾಡಿಸಿ, ಮೂರು ವಿಧವಾದ ರಕ್ತದಿಂದ ಅನುಲೇಪಿಸಿ ಕೆಂಪಾದ ಮೂರು ಹೂವುಗಳಿಂದ ಪೂಜಿಸಿ, ಮೂರು ವಿಧವಾದ ರಕ್ತದಿಂದ

ರಕ್ತಪುಷ್ಪೈಃ ಸಮಭ್ಯರ್ಚ್ಯ ತ್ರಿಭಿರೇವ ಯಥಾವಿಧಿ ।
ತ್ರಿರಕ್ತಂ ಚ ಬಲಿಂ ದತ್ವಾ ಹುತ್ವಾ ವೈ ಸರ್ಷಪತ್ರಯಂ ॥ ೩೦ ॥

ತ್ರಿಲೋಹಂ ದಕ್ಷಿಣಾಂ ದತ್ವಾ ಶತ್ರುನಾಶಮವಾಪ್ನುಯಾತ್ ।
ತ್ರಿಫಲಸ್ನಾಪಿತಂ ದೇವಂ ತ್ರಿರಕ್ತೇನಾನುಲೇಪಿತಂ ॥ ೩೧ ॥

ತ್ರಿಶೀತಂ ಚ ಬಲಿಂ ದತ್ವಾ ಪುನ್ನಾಮಕುಸುಮಾನಿ ಚ ।
ಪುನ್ನಾಮಕಾನಿ ಮುಖ್ಯಾನಿ ಫಲಾನಿ ವಿವಿಧಾನಿ ಚ ॥ ೩೨ ॥

ಪುತ್ರಜನ್ಮ ಸಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಘೃತೇನ ಸ್ನಾಪಿತಂ ದೇವಂ ತ್ರಿರಕ್ತೇನಾನುಲೇಪಿತಂ ॥ ೩೩ ॥

ಕೃತ್ವಾ ತದೇವ ಧೂಪಂ ತು ದತ್ವಾ ಕ್ಷೀರಂ ನಿವೇದಯೇತ್ ।
ಘೃತಪೂರಂ ಬಲಿಂ ದತ್ವಾ ನರಃ ಪ್ರಾಪ್ನೋತಿ ಜೀವಿಕಾಂ ॥ ೩೪ ॥

---

ಕೂಡಿದ ಬಲಿಯನ್ನು ಅರ್ಪಿಸಿ ಮೂರು ಸಾಸವೆಯನ್ನು ಹೋಮಮಾಡಿ ಮೂರು ವಿಧವಾದ ಲೋಹಗಳನ್ನು ದಕ್ಷಿಣೆಗಾಗಿ ದಾನಮಾಡಿದವನು ಶತ್ರುನಾಶವೆಂಬ ಕಾಮ್ಯಫಲವನ್ನು ಹೊಂದುತ್ತಾನೆ.

೩೧–೩೨. ಮೂರು ವಿಧವಾದ ಫಲಗಳಿಂದ ಹರಿಗೆ ಸ್ನಾನಮಾಡಿಸಿ ಮೂರು ವಿಧವಾದ ರಕ್ತಚಂದನದಿಂದ ಲೇಪಿಸಿ, ಮೂರು ವಿಧವಾದ ತಣ್ಣಗಿರುವ ಬಲಿಯನ್ನರ್ಪಿಸಿ, ಪುರುಷನಾಮಧೇಯದಂತೆ ನಾಮಧೇಯವುಳ್ಳ ಹೂಗಳನ್ನರ್ಪಿಸಿ, ಪುರುಷ ನಾಮಧೇಯವುಳ್ಳ ವಿವಿಧವಾದ ಮುಖ್ಯಮುಖ್ಯವಾದ ಫಲಗಳನ್ನರ್ಪಿಸಿದವನು ಪುತ್ರನನ್ನು ಹೊಂದುತ್ತಾನೆ. ಇದರಲ್ಲಿ ವಿಚಾರಮಾಡಬೇಕಾದುದಿಲ್ಲ.

೩೩–೩೪. ಆಜ್ಯದಿಂದ ಹರಿಗೆ ಸ್ನಾನಮಾಡಿಸಿ, ಮೂರುವಿಧವಾದ ರಕ್ತ ಚಂದನಧಿಂದ ಲೇಪಿಸಿ, ಆ ರಕ್ತಚಂದನದಿಂದಲೇ ಧೂಪವನ್ನೂ ಅರ್ಪಿಸಿ, ಹಾಲನ್ನು ನೈವೇದ್ಯಕ್ಕೆ ಅರ್ಪಿಸಿ, ಆಜ್ಯಪ್ರವಾಹವುಳ್ಳ ಬಲಿಯನ್ನೂ ದಾನಮಾಡಿದವನು ಜೀವಿಕೆಯನ್ನು ಹೊಂದುತ್ತಾನೆ.

ಕ್ಷೀರಾಜ್ಯಸ್ನಾಪಿತಂ ದೇವಂ ಚಂದನೇನಾನುಲೇಪಿತಂ ।
ತದೇವ ಧೂಪಂ ದಾತವ್ಯಂ ಜಾತೀಪುಷ್ಪಾಣಿ ಚಾಪ್ಯಥ ॥ ೩೫ ॥

ಪಂಚಗವ್ಯಬಲಿಂ ದತ್ವಾ ಹುತ್ವಾ ವಹ್ನೌ ತಥಾ ಘೃತಂ ।
ಗಾಂ ಚ ದತ್ವಾ ಮಹಾಭಾಗ ಗಾಃ ಸಮಾಪ್ನೋತಿ ಮಾನವಃ ॥ ೩೬ ॥

ಯಮಲಸ್ನಾಪಿತಂ ದೇವಂ ಯಮಲೇನಾನುಲೇಪಿತಂ ।
ಅಭ್ಯರ್ಚ್ಯ ಯಮಲೈಃ ಪುಷ್ಪೈಃ ಧೂಪಂ ಚ ಯಮಲಂ ದಹೇತ್ ॥ ೩೭ ॥

ಯಮಲಂ ಚ ಬಲಿಂ ದತ್ವಾ ಜುಹುಯಾದಕ್ಷತಾಂಸ್ತಥಾ ।
ತಿಲಸಿದ್ಧಾರ್ಥಕಯುತಾನ್ ಸರ್ಪಿಃ ಕ್ಷೀರಂ ಘೃತಂ ತಥಾ ॥ ೩೮ ॥

ಅಶ್ವಂ ಚ ದಕ್ಷಿಣಾಂ ದತ್ವಾ ಹಯಾನ್ ಪ್ರಾಪ್ನೋತ್ಯನುತ್ತಮಾನ್ ।
ಘೃತೇನ ಸ್ನಾಪಿತಂ ದೇವಂ ತಥೈವ ಘೃತಲೇಪಿತಂ ॥ ೩೯ ॥

---

೩೫-೩೬. ಹಾಲು ಮತ್ತು ಆಜ್ಯಗಳಿಂದ ಹರಿಗೆ ಸ್ನಾನಮಾಡಿಸಿ, ಚಂದನ ದಿಂದ ಲೇಪಿಸಿ ಆ ಚಂದನದಿಂದಲೇ ಧೂಪವನ್ನು ಅರ್ಪಿಸಿ, ಜಾಜಿ ಹೂವುಗಳಿಂದ ಪೂಜಿಸಿ ಪಂಚಗವ್ಯದಿಂದ ಬಲಿಪ್ರದಾನವನ್ನು ಮಾಡಿ, ಅಗ್ನಿಯಲ್ಲಿ ಆಜ್ಯವನ್ನು ಹೋಮಮಾಡಿ ಗೋದಾನವನ್ನು ಮಾಡಿದವನು ಗೋವುಗಳನ್ನು ಯಥೇಷ್ಟವಾಗಿ ಹೊಂದುತ್ತಾನೆ.

೩೭-೩೮. ಯುಗ್ಮಾಭಿಷೇಕದಿಂದ ಹರಿಗೆ ಸ್ನಾನಮಾಡಿಸಿ ಯುಗ್ಮವಾದ ಗಂಧದಿಂದ ಅನುಲೇಪಿಸಿ ಅವಳಿಯ ಹೂವುಗಳಿಂದ ಪೂಜಿಸಿ ಎರಡು ವಿಧವಾದ ಧೂಪವನ್ನು ಅರ್ಪಿಸಿ, ಎರಡು ವಿಧವಾದ ಬಲಿಯನ್ನೂ ಅರ್ಪಿಸಿ, ಎಳ್ಳು ಮತ್ತು ಬಿಳಿಯ ಸಾಸವೆಯಿಂದ ಕೂಡಿದ ಅಕ್ಷತೆಯನ್ನು ಅಗ್ನಿಯಲ್ಲಿ ಹೋಮಮಾಡಬೇಕು. ಹಾಲು ಆಜ್ಯ ಮೊದಲಾದುವುಗಳನ್ನೂ ಹೋಮಮಾಡಿ ಕುದುರೆಯನ್ನೇ ದಕ್ಷಿಣೆ ಯಾಗಿ ಕೊಡಬೇಕು. ಹೇಗೆ ಮಾಡಿದವನು ಉತ್ತಮವಾದ ಕುದುರೆಗಳನ್ನು ಹೊಂದುತ್ತಾನೆ.

೩೯-೪೧. ಆಜ್ಯದಿಂದ ಹರಿಗೆ ಅಭಿಷೇಕಮಾಡಿ ಆಜ್ಯದಿಂದಲೇ ಲೇಪಿಸಿ ನಾಲ್ಕು ವಿಧವಾದ ಹೂವುಗಳಿಂದ ಪೂಜಿಸಿ ನಾಲ್ಕು ವಿಧವಾದ ಧೂಪವನ್ನು ಒಂದೇ ಕಾಲದಲ್ಲಿ

ಪುಷ್ಪೈಃ ಚತುರ್ಭಿಃ ಸಂಪೂಜ್ಯ ಧೂಪಂ ದತ್ವಾ ಚತುಃಸಮಂ ।
ತ್ರಿಶೂಕಂ ಚ ತಥಾ ದತ್ವಾ ತಥೈವ ಪಾನಕತ್ರಯಂ ॥ ೪೦ ॥

ತ್ರಿಶೂಕಂ ಚ ತಥಾ ಹುತ್ವಾ ತ್ರಿಸ್ನೇಹೇನ ಸಮನ್ವಿತಂ ।
ತ್ರಿಲೋಹಂ ದಕ್ಷಿಣಾಂ ದತ್ವಾ ಗಾಣಪತ್ಯಮವಾಪ್ನುಯಾತ್ ॥ ೪೧ ॥

ಮಧುರತ್ರಿತಯೇನಾಥ ಸ್ನಾಪಯಿತ್ವಾ ಜನಾರ್ದನಂ ।
ಅನುಲಿಂಪೇತ್ತ್ರಿಶೀತೇನ ಪೂಜಯೇಚ್ಚಮಕೈಸ್ತಥಾ ॥ ೪೨ ॥

ಧೂಪಂ ದಹೇತ್ತ್ರಿಶಿತೇನ ದದ್ಯಾತ್ತ್ರಿಮಧುರಂ ಬಲಿಂ ।
ಮಧೂಕಪುಷ್ಪಾಣಿ ತಥಾ ದ್ರಾಕ್ಷಾಂ ಖರ್ಜೂರಮೇವ ಚ ॥ ೪೩ ॥

ಸರ್ವಭೂತೈಃ ಸಹಾಪ್ನೋತಿ ಸಖ್ಯಮೇವ ನ ಸಂಶಯಃ ।
ಘೃತೇನ ಸ್ನಾಪಿತಂ ದೇವಂ ವಚಯಾ ನಿಶಯಾ ತಥಾ ॥ ೪೪ ॥

---

ಅರ್ಪಿಸಿ, ಮೂರುವಿಧವಾದ ಭಕ್ತ್ಯವೇ ಮೊದಲಾದ ಮುಳ್ಳಿರುವ ಧಾನ್ಯವನ್ನೂ ಮೂರು ವಿಧವಾದ ಧಾನ್ಯವನ್ನೂ ಮೂರುವಿಧವಾದ ಪಾನಕವನ್ನೂ ಅರ್ಪಿಸಿ ಅಂತಹ ಧಾನ್ಯದಿಂದಲೇ ಹೋಮವನ್ನು ಮಾಡಿ ಮೂರುವಿಧವಾದ ಎಣ್ಣೆಮೊದಲಾದ ಸ್ನೇಹವಸ್ತುಗಳೊಡನೆ ಮೂರುಲೋಹಗಳನ್ನು ದಕ್ಷಿಣೆಯಾಗಿ ಕೊಟ್ಟು ಈ ವಿಧಾನವನ್ನು ಆಚರಿಸಿದವನು ಗಣಾಧಿಪತ್ಯವನ್ನು ಹೊಂದುತ್ತಾನೆ.

೪೨-೪೩. ಮೂರು ವಿಧವಾದ ಮಧುರರಸಗಳಿಂದ ಆ ಜನಾರ್ದನನನ್ನು ಅಭಿಷೇಕಮಾಡಿ, ಶೀತಲವಾದ ಮೂರುವಿಧ ಗಂಧದಿಂದ ಲೇಪಿಸಿ, ಚಮಕಸೂಕ್ತದಿಂದ ಪೂಜಿಸಬೇಕು. ಶೀತಲವಾಗಿರುವ ಮೂರುವಿಧ ಧೂಪಗಳಿಂದ ಧೂಪಿಸಿ, ಮೂರು ವಿಧವಾದ ಮಧುರರಸವುಳ್ಳ ಬಲಿಯನ್ನು ಅರ್ಪಿಸಬೇಕು. ಹಿಪ್ಪೆಯ ಹೂವುಗಳನ್ನೂ ದ್ರಾಕ್ಷಿ, ಖರ್ಜೂರ ಇವನ್ನೂ ಆ ಬಲಿಗೆ ಉಪಯೋಗಿಸಬೇಕು. ಹೀಗೆ ಮಾಡಿದವರಿಗೆ ಸರ್ವಭೂತಗಳೊಡನೆಯೂ ಸಖ್ಯವುಂಟಾಗುತ್ತದೆ. ಇದರಲ್ಲಿ ಸಂದೇಹವಿಲ್ಲ.

ಚಂದನೇನಾನುಲಿಂಪೇತ್ತು ಜಾತೀಪುಷ್ಪೈರಥಾರ್ಚಯೇತ್ ।
ಘೃತಕ್ಷೌದ್ರಯುತಂ ದತ್ವಾ ತಥಾ ಧೂಪಂ ಚ ಗುಗ್ಗುಲಂ ॥ ೪೫ ॥

ತ್ರಿಶೂಕಂ ಚ ಬಲಿಂ ದತ್ವಾ ತಥಾ ತ್ರಿಲವಣಂ ನರಃ ।
ಕನಕಂ ದಕ್ಷಿಣಾಂ ದತ್ವಾ ವಿದ್ಯಾಮಾಪ್ನೋತ್ಯಭೀಪ್ಸಿತಾಂ ॥ ೪೬ ॥

ಚಂದನಮಾಜ್ಯಂ ಜಾತೀ ಪರಮಾನ್ನಂ
ಗುಗ್ಗುಲುಂ ಚ ದೇವಾಯ ।
ದತ್ವಾ ಭಕ್ತ್ಯಾ ಪುರುಷಃ ಸರ್ವಾನ್
ಕಾಮಾನವಾಪ್ನೋತಿ ॥ ೪೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಭಗವದನು
ಲೇಪನಸ್ನಾನವರ್ಣನಂ ನಾಮ ದಶೋತ್ತರಶತತಮೋಽಧ್ಯಾಯಃ

---

೪೪–೪೬. ಹರಿಯನ್ನು ಆಜ್ಯದಿಂದ ಸ್ನಾನಮಾಡಿಸಿ, ಬಜೆ ಮತ್ತು ಅರಿಶಿನ ಇವುಗಳ ಗಂಧದಿಂದ ಲೇಪಿಸಬೇಕು. ಅನಂತರ ಜಾಜೀಹೂವುಗಳಿಂದ ಪೂಜಿಸಿ, ತುಪ್ಪ ಮತ್ತು ಜೇನುಗಳಿಂದ ಕೂಡಿದ ನೈವೇದ್ಯವನ್ನು ಅರ್ಪಿಸಿ, ಗುಗ್ಗುಳವನ್ನು ಧೂಪಿಸಬೇಕು. ಮುಳ್ಳಿನೊಡನೆ ಕೂಡಿರುವ ಗೋಧಿ, ಯವೆ, ಭತ್ತ ಇವುಗಳಿಂದ ಮೂರು ವಿಧವಾದ ಉಪ್ಪುಗಳಿಂದ ಕೂಡಿದ ಬಲಿಯನ್ನು ಅರ್ಪಿಸಿ, ಚಿನ್ನದ ನಾಣ್ಯ ವನ್ನು ದಕ್ಷಿಣೆಗಾಗಿ ಕೊಟ್ಟಲ್ಲಿ ಅಂತಹವನು ತನಗೆ ಇಷ್ಟವಾದ ವಿದ್ಯೆಯನ್ನು ಹೊಂದುತ್ತಾನೆ.

೪೭. ಚಂದನವನ್ನೂ, ಆಜ್ಯವನ್ನೂ, ಜಾಜಿಯಹೂವನ್ನೂ, ಪರಮಾನ್ನ ವನ್ನೂ, ಗುಗ್ಗುಲು ಧೂಪವನ್ನೂ ಭಕ್ತಿಯಿಂದ ಹರಿಗೆ ಸಮರ್ಪಿಸಿದವನು ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ಅಭಿಜಿತ್ ಸ್ನಾನವೆಂಬ ನೂರಹತ್ತನೆಯ ಅಧ್ಯಾಯ ಮುಗಿದಿದೆ.

## ನೂರ ಹತ್ತನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಯಾವ ಕಾಮ್ಯಕರ್ಮವನ್ನು ಆಚರಿಸಿದಲ್ಲಿ ಮನುಷ್ಯನು ಎಲ್ಲಾ ಮನೋರಥಗಳನ್ನೂ ಹೊಂದಬಹುದೋ ಅಂತಹ ಕಾಮ್ಯಕರ್ಮವಾವುದು ಎಂದು ಭಾರ್ಗವನು ಕೇಳಿದ ಪ್ರಶ್ನೆಗೆ ಉತ್ತರವಾಗಿ ಎಲ್ಲಾ ಫಲಗಳಿಗೂ ಪುರುಷೋತ್ತಮನಾದ ಹರಿಯೇ ಪ್ರಭುವಾಗಿರುವನು. ಅವನ ಪೂಜೆಯೇ ಎಲ್ಲಾ ಫಲಗಳಿಗೂ ಸಾಧಕವಾಗುತ್ತದೆ. ಎಂದು ಉಪಕ್ರಮಿಸಿ, ವ್ಯಾಧಿಗ್ರಸ್ತರೇ ಮೊದಲಾದ ನಾನಾವಿಧಾಧಿಕಾರಿಗಳಿಗೆ ಅವರವರ ಕಾಮನೆಗೆ ತಕ್ಕಂತೆ ಆಯಾಯ ಫಲಗಳಿಗೆ ಕಾರಣಗಳಾದ ಭಗವಂತನ ಅನುಲೇಪನ ಸ್ನಾನಗಳನ್ನು ವಿಸ್ತಾರವಾಗಿ ನಿರೂಪಿಸಿರುವರು, ರೋಗನಿವೃತ್ತಿ, ಭೋಗ, ಭಾಗ್ಯ, ವಿದ್ಯಾ, ಅರ್ಥಸಂಪತ್ತಿ ಎಲ್ಲವೂ ಇಲ್ಲಿ ನಿರೂಪಿಸಿರುವ ಅನುಲೇಪನಸ್ನಾನಾದಿಗಳಿಂದ ತೃಪ್ತನಾದ ಹರಿಯ ಅನುಗ್ರಹದಿಂದ ಉಂಟಾಗುತ್ತವೆ ಎಂದು ಅಭಿಪ್ರಾಯ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕಾದಶೋತ್ತರಶತತಮೋಽಧ್ಯಾಯಃ

**|| ರಾಮ ಉವಾಚ ||**

**ಭಗವನ್ ಶ್ರೋತುಮಿಚ್ಛಾಮಿ ಪಾಪಾನಾಂ ಕರ್ಮಣಾಂ ಫಲಂ ||**
**ತ್ವತ್ತಃ ಕಮಲಪತ್ರಾಕ್ಷ ತನ್ಮಮಾಚಕ್ಷ್ವ ಪೃಚ್ಛತಃ || ೧ ||**

**|| ಪುಷ್ಕರ ಉವಾಚ ||**

**ಭುಕ್ತ್ವಾನ್ನಮಭೋಜ್ಯಂ ತು ನರಕಂ ಯಾತಿ ಮಾನವಃ ।**
**ವ್ರತಲೋಪೇ ತದರ್ಧಂ ಚ ಪ್ರಕೀರ್ಣೇ ತು ದಶಾಹಕಂ || ೨ ||**

---

### ನೂರ ಹನ್ನೊಂದನೆಯ ಅಧ್ಯಾಯ.

೧. ಪೂಜ್ಯನೇ, ಪಾಪಕರ್ಮಗಳಿಂದ ಯಾವ ಯಾವ ಫಲ ಉಂಟಾಗುತ್ತದೆ ಎಂಬುದನ್ನು ಪ್ರಸನ್ನನಾಗಿರುವ ನಿನ್ನಿಂದ ತಿಳಿಯಲು ಆಶಿಪಡುತ್ತಿದ್ದೇನೆ. ದಯವಿಟ್ಟು ಹೇಳು ಎಂದು ಭಾರ್ಗವನು ಪ್ರಶ್ನೆಮಾಡಲಾಗಿ ಪುಷ್ಕರನು ಹೇಳುತ್ತಾನೆ

೨-೩. ಅಭೋಜ್ಯಾನ್ನವನ್ನು ಭುಂಜಿಸಿದವನು, ನರಕವನ್ನು ಹೊಂದುತ್ತಾನೆ. ವ್ರತಲೋಪ ಉಂಟಾದರೂ, ಸಾಂಕರ್ಯ ಉಂಟಾದರೂ ಸಹ ಹತ್ತು ದಿನದ ನರಕವನ್ನು ಹೊಂದುತ್ತಾನೆ. ಅಗ್ನಿಹೋತ್ರಿಯೂ, ಸಮಿದ್ಯಾಜಿಯೂ, ವ್ರತಲೋಪ ಹೊಂದಿದ್ದಾದರೆ ಸಾವಿರವರ್ಷ ಪರ್ಯಂತ ನರಕವನ್ನು ಅನುಭವಿಸಬೇಕಾಗುತ್ತದೆ.

ಅಗ್ನಿಹೋತ್ರಸಮಿ[1]ದ್ಯಾದೀನ್ ಸಹಸ್ರಂ ಯಾತಿ ವತ್ಸರಾನ್ ।
ಮಹಾಪಾತಕಿನಃ ಸರ್ವೇ ಕಲ್ಪಂ ಪಶ್ಯಂತಿ ಭಾರ್ಗವ ॥ ೩ ॥

ಮನ್ವಂತರಂ ತು ತಾಂ ಕೃತ್ವಾ ನರಕಂ ಪ್ರತಿಪದ್ಯತೇ ।
ಚತುರ್ಯುಗಂ ಕ್ಷತ್ರಿಯಹಾ ವೈಶ್ಯಹಾ ತ್ರಿಯುಗಂ ತಥಾ ॥ ೪ ॥

ಶೂದ್ರಂ ಹತ್ವಾ ಮಹಾಭಾಗ ಯುಗಂ ತು ನರಕಂ ವ್ರಜೇತ್ ।
ಯಾವಂತಿ ಪಶುರೋಮಾಣಿ ತಾವತ್ಕೃತ್ವೇಹ ಮಾನವಃ ॥ ೫ ॥

ವೃಥಾ ಪಶುಘ್ನಃ ಪ್ರಾಪ್ನೋತಿ ವರ್ಷಾಣಿ ನರಕಂ ನರಃ ।
ದ್ರವ್ಯಾಣಾಮಲ್ಪಸಾರಾಣಾಂ ಸ್ತೇಯಂ ಕೃತ್ವಾನ್ಯವೇಶ್ಮತಃ ॥ ೬ ॥

ಯಾತಿ ಸಂವತ್ಸರಶತಂ ಗುರುಬ್ರಾಹ್ಮಣತಾಡನಾತ್ ।
ತಚ್ಛಸ್ತ್ರವರ್ತೀ ನೃಪತಿಃ ಕಲ್ಪಂ ಪಶ್ಯತಿ ಮಾನದ ॥ ೭ ॥

---

ಮಹಾಪಾತಕ ಹೊಂದಿರುವವರು ಕಲ್ಪಪರ್ಯಂತವಾಗಿಯೂ ನರಕವನ್ನೇ ನೋಡುತ್ತಾರೆ.

೪-೫. ಕ್ಷತ್ರಿಯನನ್ನು ವಧಮಾಡಿದವನು ಮನ್ವಂತರಪರ್ಯಂತವೂ ನರಕವನ್ನು ಹೊಂದುತ್ತಾನೆ. ವೈಶ್ಯನನ್ನು ವಧಮಾಡಿದವನು ಮೂರುಯುಗ ಪರ್ಯಂತವೂ ಶೂದ್ರನನ್ನು ವಧಮಾಡಿದವನು ಒಂದು ಯುಗ ಪರ್ಯಂತವೂ ನರಕವನ್ನು ಹೊಂದುತ್ತಾನೆ. ವ್ಯರ್ಥವಾಗಿ ಪಶುಹನನ ಮಾಡಿದವನು ಆ ಪಶುವಿನಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷಪರ್ಯಂತ ನರಕವಾಸವನ್ನು ಅನುಭವಿಸುತ್ತಾನೆ.

೬-೭. ಸ್ವಲ್ಪ ಬೆಲೆಯುಳ್ಳ ಪದಾರ್ಥಗಳನ್ನು ಮತ್ತೊಬ್ಬನ ಮನೆಯಿಂದ ಕದ್ದು ತಂದು ಜೀವಿಸಿದವನು ನೂರುವರ್ಷ ಪರ್ಯಂತವೂ ನರಕವಾಸವನ್ನು ಹೊಂದುತ್ತಾನೆ. ದೊರೆಯಾದವನು ಗುರು ಮತ್ತು ಬ್ರಾಹ್ಮಣ ಇವರನ್ನು ಶಸ್ತ್ರದಿಂದ ಹೊಡೆದದ್ದೇ ಆದರೆ ಆ ಶಸ್ತ್ರದಿಂದ ಜೀವಿಸುವ ಆ ದೊರೆಯು ಕಲ್ಪಪರ್ಯಂತವಾಗಿಯೂ ನರಕದಲ್ಲಿ ಬೀಳುತ್ತಾನೆ. ವ್ಯವಹಾರಗಳಲ್ಲಿ ನ್ಯಾಯನಿರ್ಣಯಕ್ಕಾಗಿ ಏರ್ಪಡಿಸಲ್ಪಟ್ಟ ಸಭ್ಯನು ಉಭಯಪಕ್ಷದಲ್ಲಿಯೂ ಸಮದೃಷ್ಟಿಯಿಂದಿರದೆ ಪಕ್ಷಪಾತದಿಂದ ಒಂದು ಪಕ್ಷಕ್ಕೆ ಅನುಕೂಲನಾಗಿ ವರ್ತಿಸದಲ್ಲಿ ಅವನೂ ಸಹ ಕಲ್ಪಪರ್ಯಂತವಾಗಿ ನರಕದಲ್ಲಿ ಬೀಳುತ್ತಾನೆ.

---

1 ಇಲ್ಲಿ ಪಾಠವು ಅಶುದ್ಧವಾಗಿದೆ.

ಪಕ್ಷಪಾತೀ ತಥಾ ಸಭ್ಯಸ್ತಾವದೇವ ಭೃಗೂತ್ತಮ ।
ಬ್ರಾಹ್ಮಣಸ್ಯ ಚ ಶೂದ್ರಸ್ಯ ಸಹಸ್ರಂ ಭೃಗುಸತ್ತಮ ॥ ೮ ॥

ಶೋಣಿತಂ ಯಾವತಃ ಪಾಂಸೂನ್ಸಂಗೃಹ್ಣಂತಿ ಮಹೀತಲೇ ।
ತಾವದ್ವರ್ಷ ಸಹಸ್ರಾಣಿ ನರಕಂ ಪ್ರತಿಪದ್ಯತೇ ॥ ೯ ॥

ರಾಜನಿ ಪ್ರಹರೇದ್ಯಸ್ತು ಕೃತಾಗಾ ಅಪಿ ದುರ್ಮತಿಃ ।
ಅರಾಜಾ ನರಕಂ ಯಾತಿ ಸತು ಕಲ್ಪಶತಂ ನರಃ ॥ ೧೦ ॥

ನಿತ್ಯಾನ್ನಕುರ್ವನ್ ಧರ್ಮಾಣಿ ತಥಾ ವರ್ಷಶತಂ ವ್ರಜೇತ್ ।
ದ್ರುಮಾಣಾಂ ಛೇದನೇ ರಾಮ ಪಂಚಾಶದ್ವರ್ಷಮೇವ ತು ॥ ೧೧ ॥

ಗುಲ್ಮವಲ್ಲೀಲತಾನಾಂ ತು ದಶವರ್ಷಾಣಿ ಭಾರ್ಗವ ।
ಅನಾಗಸಾಮಥಾಕ್ರೋಶೇ ತಿರಶ್ಚಾಮಥ ತಾಡನೇ ॥ ೧೨ ॥

---

೮-೧೦. ಬ್ರಾಹ್ಮಣನ ಮತ್ತು ನಿರಪರಾಧಿಯಾದ ಶೂದ್ರನ ವಧದಿಂದ ಪಾತಕಿಯಾದವನು ಹಾಗೆ ವಧಹೊಂದಿದ ಬ್ರಾಹ್ಮಣನ ಮತ್ತು ಶೂದ್ರನ ಸಹಸ್ರ ಪರಿಮಾಣದಷ್ಟು ರಕ್ತವು ಭೂಮಿಯಲ್ಲಿ ಬಿದ್ದದ್ದೇ ಆದರೆ ಎಷ್ಟು ಧೂಳಿಯನ್ನು ಅದು ಆವರಿಸಬಲ್ಲದೋ ಅಷ್ಟು ಸಹಸ್ರವರ್ಷ ಪರ್ಯಂತವೂ ವಧಮಾಡಿದ ಪಾಪಿಯು ನರಕವನ್ನು ಹೊಂದುತ್ತಾನೆ. ಯಾವ ದುರ್ಬುದ್ಧಿಯು ತಾನು ಅಪರಾಧಿಯಾಗಿದ್ದರೂ ತನಗೆ ಶಿಕ್ಷಕನಾದ ರಾಜನನ್ನೇ ಪ್ರಹರಿಸುತ್ತಾನೆಯೋ ಅವನೂ ಸಹ ನೂರು ಕಲ್ಪಗಳವರಿಗೂ ನರಕವನ್ನು ಹೊಂದುತ್ತಾನೆ, ಆದರೆ ಅಂತಹವನು ರಾಜನಾಗಿರಕೂಡದು. ರಾಜನಾದವನು ಹಾಗೆ ಪ್ರತಿಭಟಿಸಿದಲ್ಲಿ ಬಾಧಕವಿಲ್ಲವೆಂದು ತಾತ್ಪರ್ಯ.

೧೧-೧೨. ನಿತ್ಯಕರ್ಮಗಳನ್ನು ತ್ಯಜಿಸಿದವನು ನೂರುವರ್ಷ ಪರ್ಯಂತವೂ ನರಕವಾಸವನ್ನು ಅನುಭವಿಸುತ್ತಾನೆ. ಫಲವೃಕ್ಷಗಳನ್ನು ಕಡಿದುಹಾಕಿದವನು ಐವತ್ತು ವರ್ಷಪರ್ಯಂತ ನರಕವನ್ನು ಅನುಭವಿಸುತ್ತಾನೆ. ಪೊದರುಗಳು, ಲತೆಗಳು, ಸಣ್ಣ ಬಳ್ಳಿಗಳು ಇವುಗಳನ್ನು ನಾಶಮಾಡಿದವನು ಹತ್ತು ವರ್ಷಪರ್ಯಂತ ನರಕವನ್ನು ಅನುಭವಿಸುತ್ತಾನೆ. ನಿರಪರಾಧಿಗಳ ವಿಷಯದಲ್ಲಿ ಕೋಪಮಾಡಿದವನೂ ತಿರ್ಯಕ್ಪ್ರಾಣಿಗಳನ್ನು ಹೊಡೆದವನೂ ಸಹ ಅವನಂತೆಯೇ ಹತ್ತು ವರ್ಷ ಪರ್ಯಂತ ನರಕದಲ್ಲಿ ಬೀಳುತ್ತಾನೆ.

ತಾವದೇವ ಯಥಾಕಾಲಂ ನರಕಂ ಪ್ರತಿಪದ್ಯತೇ ।
ಅಗಮ್ಯಾಗಾಮಿನಃ ಸರ್ವೇ ಮಹಾಪಾತಕಿಭಿಃ ಸಮಾಃ ॥ ೧೩ ॥

ಅನಿವಿಷ್ಟಾಂ ಭೃತಿಂ ಭುಕ್ತ್ವಾ ದ್ವೇ ಶತೇ ಪ್ರತಿಪದ್ಯತೇ ।
ತಥಾ ಪುಸ್ತಕಹಾರೀ ಚ ಸಹಸ್ರಂ ಯಾತಿ ವತ್ಸರಾನ್ ॥ ೧೪ ॥

ಸಸ್ಯಾನಾಂ ನಾಶಕಾರೀ ಚ ನರಕಂ ಪ್ರತಿಪದ್ಯತೇ ।
ಅಗಾರವನದಾಹೀ ಚ ನಾಸ್ತಿಕಶ್ಚ ತಥಾ ನರಃ ॥ ೧೫ ॥

ಕಲ್ಪಮೇಕಂ ಪ್ರಪದ್ಯಂತೇ ನರಕಂ ನಾತ್ರ ಸಂಶಯಃ ।
ದೇವತಾನಾಂ ದ್ವಿಜಾತೀನಾಂ ಶಾಸ್ತ್ರಾಣಾಂ ನಿಂದಕಸ್ತಥಾ ॥ ೧೬ ॥

ಶ್ರುತೀನಾಂ ದೂಷಕಶ್ಚೈವ ತಾವದೇವ ದ್ವಿಜೋತ್ತಮ ।
ಪ್ರತಿಶ್ರುತ್ಯ ತಥಾ ಚಾರ್ಥಂ ಯೋ ನ ದದ್ಯಾನ್ಮಹಾಭುಜ ॥ ೧೭ ॥

---

೧೩-೧೪. ಅಗಮ್ಯಳಾದ ಸ್ತ್ರೀಯಲ್ಲಿ ಪ್ರವೇಶಿಸಿದವರೆಲ್ಲರೂ ಮಹಾಪಾತಕಿಗಳೊಡನೆ ಸಮನಾಗುತ್ತಾರೆ. ಗೊತ್ತಾದ ಕೂಲಿಗಿಂತಲೂ ಹೆಚ್ಚಾದ ಕೂಲಿಯನ್ನು ಅನುಭವಿಸಿದ್ದೇ ಆದರೆ ಎರಡುನೂರು ವರ್ಷಪರ್ಯಂತವಾಗಿಯೂ ಅವನು ನರಕದಲ್ಲಿ ಬೀಳುತ್ತಾನೆ ಹಾಗೆಯೇ ಪುಸ್ತಕವನ್ನು ಅಪಹರಿಸಿದವನೂ ಸಾವಿರವರ್ಷ ಪರ್ಯಂತ ನರಕದಲ್ಲಿ ಬೀಳುತ್ತಾನೆ. ಸಸ್ಯಗಳನ್ನು ನಾಶಮಾಡಿದವನೂ ನರಕವನ್ನು ಹೊಂದುತ್ತಾನೆ.

೧೫-೧೬. ಮನೆ ಕಾಡು ಮುಂತಾದುವನ್ನು ಸುಡುವವನು ಮತ್ತು ನಾಸ್ತಿಕನಾದ ಮನುಷ್ಯನೂ ಕೂಡ ಒಂದು ಕಲ್ಪಪರ್ಯಂತವೂ ನರಕವನ್ನು ಅನುಭವಿಸುತ್ತಾರೆ. ದೇವತೆಗಳನ್ನೂ, ಬ್ರಾಹ್ಮಣರನ್ನೂ, ಶಾಸ್ತ್ರಗಳನ್ನೂ ಸಹ ನಿಂದಿಸುವವನು ವೇದದೂಷಕನೂ ಸಹ ಇದೇ ಪರಿಮಾಣದ ನರಕದಲ್ಲಿ ಬೀಳುತ್ತಾರೆ.

೧೭-೧೮. ಯಾವನೊಬ್ಬನು ಅರ್ಥವನ್ನು ಕೊಡುವುದಾಗಿ ಪ್ರತಿಜ್ಞೆಮಾಡಿದ್ದರೂ ಕೊಡದೆ ಮೋಸಮಾಡುತ್ತಾನೆಯೋ ಮತ್ತು ಆಶ್ರಯಿಸಿರುವವನನ್ನು ಯಾವ ಕಾರಣವೂ ಇಲ್ಲದೆ ಯಾವನು ಪರಿತ್ಯಾಗಮಾಡುತ್ತಾನೆಯೋ ಮತ್ತು ಯಾವ

ಆಶ್ರಿತಸ್ಯ ಪರಿತ್ಯಾಗಂ ವೃಥಾ ಕುರ್ಯಾದ್ವಿಜೋತ್ತಮ ।
ಅಪರಾಧಂ ತಥಾ ರಾಮ ವೃಥಾ ಭಾರ್ಯಾವಮನ್ತಕಃ ॥ ೧೮ ॥

ಕ್ರತುಹಾ ಚೈವ ಧರ್ಮಜ್ಞ ಸಹಸ್ರಂ ಪ್ರತಿಪದ್ಯತೇ ।
ಬಹೂನಿ ರಾಮ ಪಾಪಾನಿ ಪಾಪೇಷೂಕ್ತೇಷು ಭಾರ್ಗವ ।
ಅಂತರ್ಭಾವಂ ಪ್ರಪದ್ಯಂತೇ ತಾನಿ ಚಿಂತ್ಯಾನಿ ಧರ್ಮತಃ ॥ ೧೯ ॥

ನರಕಾಣಾಂ ಗಣನಮುದಿತಂ ಪಾಪಾನಾಂ ತೇ ಮಯಾ ರಾಮ ।
ಏತಚ್ಚ ಭವತಿ ಘೋರಂ ತ್ವನುಬಂಧಕೃತಂ ಮನುಷ್ಯಾಣಾಂ ॥ ೨೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಪಾಪನಿಶ್ಚಯೋ ನಾಮೈಕಾದಶೋತ್ತರಶತತಮೋಽಧ್ಯಾಯಃ

---

ಅಪರಾಧವೂ ಇಲ್ಲದಿದ್ದರೂ ಸಹ ಯಾವನು ಪತ್ನಿಯನ್ನು ಧಿಕ್ಕರಿಸಿ ಅವಮಾನಪಡಿಸುತ್ತಾನೆಯೋ ಮತ್ತು ಯಾವನು ಸಾತ್ವಿಕರ ಯಜ್ಞಗಳಿಗೆ ನಾಶಕನಾಗುತ್ತಾನೆಯೋ ಇವರೆಲ್ಲರೂ ಸಾವಿರವರ್ಷ ಪರ್ಯಂತ ನರಕಪಾತವನ್ನು ಹೊಂದುತ್ತಾರೆ.

೧೯–೨೦. ಎಲೈ ಭಾರ್ಗವೋತ್ತಮನೇ, ಈಗ ನಾನು ಹೇಳಿರುವ ಪಾಪಗಳಲ್ಲದೆ ಇನ್ನೂ ಅನೇಕ ಪಾಪಗಳಿರುವುವು. ಅವುಗಳೂ ಸಹ ನಾನು ಹೇಳಿರುವ ಪಾಪಗಳಲ್ಲಿಯೇ ಸಾಮ್ಯದಿಂದ ಅಂತರ್ಭಾವವನ್ನು ಹೊಂದುತ್ತವೆ. ಅವುಗಳನ್ನೂ ಸಹ ಧರ್ಮದೃಷ್ಟಿಯಿಂದ ಪರಿಶೀಲಿಸಿ ಗೌರವಲಾಘವ ಭಾವಗಳನ್ನು ನಿಶ್ಚೈಸಬೇಕು. ಪಾಪಗಳ ಮತ್ತು ಆ ಪಾಪಗಳಿಂದ ಉಂಟಾಗುವ ನರಕಗಳ ಗಣನೆಯನ್ನು ನಾನು ಈ ರೀತಿ ಹೇಳಿರುವೆನು. ಈ ಪಾಪಗಳೂ ಸಹ ಜನ್ಮಪರಂಪರಾ ಸಂಬಂಧದಿಂದ ಮನುಷ್ಯರಿಗೆ ದುಸ್ಸಹವಾದ ಮತ್ತು ಘೋರವಾದ ದುಃಖವಾಗಿ ಪರಿಣಮಿಸುತ್ತವೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಪಾಪನಿಶ್ಚಯವೆಂಬ ನೂರಹನ್ನೊಂದನೆಯ ಅಧ್ಯಾಯ ಮುಗಿದಿದೆ.



## ನೂರ ಹನ್ನೊಂದನೆಯ ಅಧ್ಯಾಯದ ಸಾರಾಂಶ.



ಪರಮಾತ್ಮನ ಆರಾಧನದಿಂದ ಸಕಲ ಮನೋರಥಗಳೂ ಸಿದ್ಧಿಸುವುವೆಂಬ ಹಿಂದಿನ ಅಧ್ಯಾಯಾರ್ಥ ಪ್ರಸಂಗದಿಂದ ಪಾಪಕರ್ಮಗಳ ಫಲವೇನೆಂಬ ಪ್ರಶ್ನೆಗೆ ಅನುಗುಣವಾಗಿ ಪಾಪಕರ್ಮಗಳನ್ನೂ ಅವುಗಳ ಫಲವಾದ ನರಕಗಳನ್ನೂ ಸಾಮಾನ್ಯ ರೀತಿಯಿಂದ ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ದ್ವಾದಶೋತ್ತರಶತತಮೋಽಧ್ಯಾಯಃ

**॥ ರಾಮ ಉವಾಚ ॥**

**ಜಂತುಃ ಕಥಂ ಸಂಭವತಿ ಕಥಂ ಚೈವ ವಿಪದ್ಯತೇ ।**
**ಕಥಂ ದೇಹಾಂತರಂ ಯಾತಿ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥**

**॥ ಪುಷ್ಕರ ಉವಾಚ ॥**

**ವಿಶ್ವಸ್ಯಾವರಣಂ ರಾಮ ತಥೈವಾಂಡಂ ನ ಹೇಮ ಯತ್ ।**
**ತಥಾ ಪ್ರಾಣಿ ಶರೀರಸ್ಯ ಪಾರ್ಥಿವತ್ವಂ ಮಹಾಭುಜ ॥ ೨ ॥**

---

### ನೂರ ಹನ್ನೆರಡನೆಯ ಅಧ್ಯಾಯ.

೧. ರಾಮನು ಪ್ರಶ್ನೆಮಾಡುತ್ತಾನೆ:—ಲೋಕದಲ್ಲಿ ಪ್ರಾಣಿಯಾದವನು ಹುಟ್ಟುವ ಬಗೆ ಹೇಗೆ ಸಾಯುವ ಬಗೆ ತಾನೆ ಹೇಗೆ. ಆ ಪ್ರಾಣಿಯು ದೇಹಾಂತರವನ್ನೂ ಸಹ ಹೇಗೆ ಹೊಂದುತ್ತಾನೆ ಇದನ್ನು ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಎಲೈ ಭಾರ್ಗವನೇ, ವಿಶ್ವಕ್ಕೆಲ್ಲಾ ಆವರಣರೂಪದಿಂದ ಬ್ರಹ್ಮಾಂಡವಿರುವುದಷ್ಟೆ. ಆ ಬ್ರಹ್ಮಾಂಡವು ಹೇಗೆ ಸ್ವರ್ಣವೇ ಮೊದಲಾದ ಲೋಹರೂಪವಾಗಿರದೆ ಪಾರ್ಥಿವರೂಪವಾಗಿಯೇ ಇರುತ್ತದೆಯೋ (ಪಂಚೀಕೃತವಾದ ಪಂಚಭೂತ

**ಆಕಾಶೇ ನರಶಾರ್ದೂಲ ಯಥೈವಾಂಡಂ ವ್ಯವಸ್ಥಿತಂ ।**
**ಸುಷಿರಂ ತದ್ವದೇವೇಹ ಪುರುಷಸ್ಯ ಶರೀರಗಂ ॥ ೩ ॥**

**ಧಾರಯಂತಿ ಯಥಾ ವಿಶ್ವಮಂಡಸ್ಯಾಭ್ಯಂತರೇ ಸ್ಥಿತಾಃ ।**
**ವಾಯ್ವಗ್ನಿಸೋಮಾಃ ಸತತಂ ತಥಾ ದೇಹಂ ಶರೀರಿಣಾಂ ॥ ೪ ॥**

**ಆಧಾರಭೂತೇ ದ್ವೇ ಭೂತೇ ಆದ್ಯಂತೇ ಸರ್ವದೇಹಿನಾಂ ।**
**ಪ್ರಪದ್ಯಂತೇ ಮಹಾಭಾಗ ಕಲಲತ್ವಂ ಹಿ ತತ್ಕ್ಷಣಾತ್ ॥ ೫ ॥**

**ಕರೋತಿ ತತ್ರ ಚ ತತಃ ಪ್ರವೇಶಂ ಕರ್ಮಚೋದಿತಃ ।**
**ವಾಯುಭೂತಃ ತಥಾ ಜೀವಸ್ತ್ಯಕ್ತ್ವಾ ಭೋಗವಿವರ್ಧನಂ ।**
**ಸ್ವರ್ಗಾದ್ವಾ ನರಕಾದ್ದೇಹಂ ತಿರ್ಯಗ್ಯೋನಾವಥಾಪಿ ವಾ ॥ ೬ ॥**

---

ಗಳಿಂದ ಬ್ರಹ್ಮಾಂಡವು ಉಂಟಾದುದರಿಂದ ಪ್ರಾಣಿಗೆ ಶರೀರವಾಗಿರುವ ಅಚೇತನ ಭಾಗವೂ ಸಹ ಪೃಥಿವೀ ಮೊದಲಾದ ಭೂತಗಳ ಪರಿಣಾಮರೂಪವಾದುದರಿಂದ ಅದರಲ್ಲಿಯೂ ಪೃಥಿವೀ ಭಾಗದ ಆಧಿಕ್ಯದಿಂದ ಪಾರ್ಥಿವವೆಂದೇ ಕರೆಯಲ್ಪಡುತ್ತದೆ. ಎಂದು ತಾತ್ಪರ್ಯ) ಅಂತಹ ಅಂಡವು ಒಳಭಾಗದಲ್ಲಿರುವ ಅವಕಾಶರೂಪವಾದ ಆಕಾಶದ ಅವಲಂಬನದಿಂದ ಹೇಗೆ ನಿಂತಿದೆಯೋ ಅದೇ ರೀತಿಯಾಗಿ ಪುರುಷನ ಶರೀರದಲ್ಲಿಯೂ ಆ ಆಕಾಶವು ರಂಧ್ರರೂಪದಲ್ಲಿ ಈ ಶರೀರಕ್ಕೆ ಆಶ್ರಯವಾಗಿ ನಿಂತಿದೆ.

೪–೫. ಆ ಅಂಡದ ಒಳಭಾಗದಲ್ಲಿರುವ ವಾಯು, ಅಗ್ನಿ, ಚಂದ್ರ ಇವರು ವಿಶ್ವವೆಲ್ಲವನ್ನೂ ಹೇಗೆ ಧರಿಸಿರುವರೋ ಹಾಗೆಯೇ ಪ್ರಾಣಿಗಳ ದೇಹವನ್ನೂ ಸಹ ಅವರೇ ಯಾವಾಗಲೂ ಧರಿಸಿರುವರು. ಎಲ್ಲಾ ಪ್ರಾಣಿಗಳಿಗೂ ಸಹ ಆದ್ಯಂತದಲ್ಲಿರುವ ಎರಡೇ ಭೂತಗಳು ಆಧಾರವಾಗಿವೆ. ಆ ಭೂತಗಳು ಅಗ್ನಿಯ ಸಂಪರ್ಕದಿಂದುಂಟಾದ ಪಾಕ ವಿಶೇಷದಿಂದ ಕಲಲವೆಂಬ ಅವಸ್ಥೆಯನ್ನು ಹೊಂದುತ್ತದೆ. (ಕಲಲವೆಂದರೆ ಹಾಲು ಹೆಪ್ಪಾಗುವಾಗ ಹಾಲಿನ ಅವಸ್ಥೆಯು ಕಳೆದು ಅದು ಮೊಸರಾಗುವುದಕ್ಕೆ ಮುಂಚೆ ಉಂಟಾಗುವ ಒಂದು ಅವಸ್ಥೆ)

೬–೭. (ಆ ಕಲಲದಲ್ಲಿ) ವಾಯುರೂಪದಿಂದ ಸೂಕ್ಷ್ಮನಾಗಿರುವ ಜೀವನು ತನ್ನ ಪ್ರಾಚೀನಕರ್ಮದಿಂದ ಪ್ರೇರಿತನಾಗಿ ತನಗೆ ಭೋಗಸಾಧನವಾಗಿದ್ದ ದೇಹವನ್ನು ಬಿಟ್ಟು ಸ್ವರ್ಗದಿಂದಾಗಲಿ ನರಕದಿಂದಾಗಲಿ ತಿರ್ಯಕ್ ಪ್ರಾಣಿಯ ದೇಹದಿಂದಾಗಲಿ

ಏವಂ ಪ್ರವೇಶಂ ಸ ಕರೋತಿ ಗರ್ಭೇ
ಜೀವಸ್ತದಾ ಕರ್ಮವಶಾನುಬಂಧಾತ್ ।
ತತಃ ಪ್ರವಿಷ್ಟಸ್ತು ತಥಾ ಸ ಮೂಢೋ
ಮಾಸಾಂಶ್ಚ ಷಟ್ ತಿಷ್ಠತಿ ವೇದನಿತ್ಯಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಗರ್ಭಸಂಕ್ರಾಂತಿ ವರ್ಣನಂ ನಾಮ ದ್ವಾದಶೋತ್ತರಶತತಮೋಽಧ್ಯಾಯಃ

---

ಹೊರಟು ಇಲ್ಲಿರುವ ಈ ಕಲಲದಲ್ಲಿ ಬಂದು ಪ್ರವೇಶಿಸುತ್ತಾನೆ. ಈ ರೀತಿ ಕರ್ಮವಶನಾದ ಜೀವನು ಗರ್ಭದಲ್ಲಿ ಪ್ರವೇಶಿಸಿ ಅಲ್ಲಿಯೇ ಸ್ಥೈರ್ಯಹೊಂದಿ ಆರುತಿಂಗಳವರಿಗೂ ತನ್ನ ಪೂರ್ವಜನ್ಮದ ಜ್ಞಾನಾನುವೃತ್ತಿಯಿಂದ ಅಲ್ಲಿಯೇ ಇರುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ಗರ್ಭಸಂಕ್ರಾಂತಿ ವರ್ಣನವೆಂಬ ನೂರ ಹನ್ನೆರಡನೆಯ ಅಧ್ಯಾಯ ಮುಗಿದಿದೆ.



## ನೂರ ಹನ್ನೆರಡನೆಯ ಅಧ್ಯಾಯದ ಸಾರಾಂಶ.

ಪುಣ್ಯಪಾಪ ಫಲಗಳನ್ನು ಅನುಭವಿಸುವ ಜೀವನಿಗೆ ಈ ಅಧ್ಯಾಯದಲ್ಲಿ ಆ ಫಲಾನುಭವಕ್ಕೆ ಉಪಯುಕ್ತವಾದ ಜನ್ಮವನ್ನು ನಿರೂಪಿಸಲು ಕಲಲವೆಂಬ ಭೌತಿಕ ವಸ್ತುವಿನಲ್ಲಿ ಜೀವನು ಗರ್ಭದಲ್ಲೇ ಸಂಕ್ರಾಂತಿಹೊಂದುವುದನ್ನು ನಿರೂಪಿಸಿರುತ್ತಾರೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ತ್ರಯೋದಶೋತ್ತರಶತತಮೋಽಧ್ಯಾಯಃ

**|| ರಾಮ ಉವಾಚ ||**

**ಭೋಗದೇಹಂ ಕಥಂ ತ್ಯಕ್ತ್ವಾ ಜೀವೋ ಗರ್ಭಂ ಪ್ರಪದ್ಯತೇ ।**
**ಭೋಗದೇಹಶ್ಚ ಕಃ ಪ್ರೋಕ್ತಃ ತಂ ಮಮಾಚಕ್ಷ್ವ ಪೃಚ್ಛತಃ || ೧ ||**

**|| ಪುಷ್ಕರ ಉವಾಚ ||**

**ಆತಿವಾಹಿಕಗರ್ಭಸ್ಯ ದೇಹೋ ಭವತಿ ಭಾರ್ಗವ ।**
**ಕೇವಲಂ ತಂ ಮನುಷ್ಯಾಣಾಂ ಮೃತ್ಯುಕಾಲ ಉಪಸ್ಥಿತೇ || ೨ ||**

**ಯಾಮ್ಯೈರ್ನರೈರ್ಮನುಷ್ಯಾಣಾಂ ತಚ್ಛರೀರಂ ಭೃಗೂತ್ತಮ ।**
**ನೀಯತೇ ಯಾಮ್ಯಮಾರ್ಗೇಣ ನಾನ್ಯೇಷಾಂ ಪ್ರಾಣಿನಾಂ ದ್ವಿಜ || ೩ ||**

---

### ನೂರ ಹದಿಮೂರನೆಯ ಅಧ್ಯಾಯ.

೧. ಭಾರ್ಗವನು ಪುನಃ ಪ್ರಶ್ನೆಮಾಡುತ್ತಾನೆ :—ಜೀವನು ತನ್ನ ಭೋಗ ಶರೀರವನ್ನು ಬಿಟ್ಟು ಗರ್ಭಕ್ಕೆ ಹೇಗೆ ಬಂದು ಸೇರುತ್ತಾನೆ. ಭೋಗದೇಹವೆಂದರೆ ಯಾವುದು ಇದನ್ನು ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಮನುಷ್ಯನಿಗೆ ಮೃತ್ಯುವು ಸಮೀಪಿಸಿದಾಗ ಯಮನಭಟರು ದಕ್ಷಿಣ ದಿಕ್ಕಿನ ಮಾರ್ಗವಾಗಿ ಯಾವ ದೇಹದಿಂದ ಕೂಡಿದ ಇವನನ್ನು ಒಯ್ಯುತ್ತಾರೆಯೋ ಅದೇ ಭೂತಸೂಕ್ಷ್ಮಗಳಿಂದ ಕೂಡಿದ ದೇಹವು ಆತಿವಾಹಿಕ ದೇಹವೆಂದು ಹೇಳಲ್ಪಡುತ್ತದೆ. ಇದು ಮನುಷ್ಯನಿಗೆ ಮಾತ್ರ ಉಂಟಾಗುವ ಸೂಕ್ಷ್ಮವಾದ ದೇಹ. ಇತರ ಪ್ರಾಣಿಗಳಿಗೆ ಇರುವುದಿಲ್ಲ.

ಮನುಷ್ಯಾಃ ಪ್ರತಿಪದ್ಯಂತೇ ಸ್ವರ್ಗಂ ನರಕಮೇವ ಚ ।
ನೈವಾನ್ಯೇ ಪ್ರಾಣಿನಃ ಕೇಚಿತ್ಸರ್ವೇ ತೇ ಫಲಭೋಗಿನಃ ॥ ೪ ॥

ಶುಭಾನಾಮಶುಭಾನಾಂ ವಾ ಕರ್ಮಣಾಂ ಭೃಗುನಂದನ ।
ಸಂಚಯಃ ಕ್ರಿಯತೇ ಲೋಕೇ ಮನುಷ್ಯೈರೇವ ಕೇವಲಂ ॥ ೫ ॥

ತಸ್ಮಾನ್ಮನುಷ್ಯಸ್ತು ಮೃತೋ ಯಮಲೋಕಂ ಪ್ರಪದ್ಯತೇ ।
ನಾನ್ಯಃ ಪ್ರಾಣೀ ಮಹಾಭಾಗ ಫಲಯೋನೌ ವ್ಯವಸ್ಥಿತಃ ॥ ೬ ॥

ಗಚ್ಛನ್ ಲೋಕೇ ಪ್ರಸನ್ನಸ್ಯ ಪುರುಷಸ್ಯ ತಥಾ ಯಮಃ ।
ಯೋನೀಶ್ಚ ನರಕಾಂಶ್ಚೈವ ನಿರೂಪಯತಿ ಕರ್ಮಣಾಂ ॥ ೭ ॥

---

೪-೫. ಏತಕ್ಕೆಂದರೆ ಸ್ವರ್ಗನರಕರೂಪವಾದ ಸುಖದುಃಖಸ್ಥಾನಗಳನ್ನು ಹೊಂದುವವರು ಮನುಷ್ಯರೇ ಹೊರತು ಬೇರೆ ಪ್ರಾಣಿಗಳಲ್ಲ. ಬೇರೆ ಪ್ರಾಣಿಗಳು ಆಯಾಯ ದೇಹದಲ್ಲಿದ್ದು ಫಲಭೋಗವನ್ನು ಮಾತ್ರ ಹೊಂದುತ್ತವೆ. ಮನುಷ್ಯನು ಮಾತ್ರ ಈ ರೀತಿಯಲ್ಲಿಲ್ಲ. ಪರಲೋಕದ ಶುಭಾಶುಭ ಫಲಗಳಿಗೆ ಸಾಧಕವಾದ ಕರ್ಮಗಳನ್ನು ಈ ಲೋಕದಲ್ಲಿ ಸಂಗ್ರಹಿಸುವವನು ಮನುಷ್ಯನೇ ಹೊರತು ಇತರ ಪ್ರಾಣಿಗಳಲ್ಲ. (ಶಾಸ್ತ್ರಗಳಿಂದ ಸುಖದುಃಖ ಸ್ವರೂಪಗಳನ್ನೂ ಅವುಗಳ ಸಾಧನಗಳನ್ನೂ ತಿಳಿದು ಸುಖಪ್ರಾಪ್ತಿಗೂ ದುಃಖನಿವೃತ್ತಿಗೂ ತಕ್ಕಂತೆ ಶಾಸ್ತ್ರೀಯವಾದ ವರ್ತನವು ಮನುಷ್ಯಾಧಿಕಾರಿಕವೇ ಹೊರತು ಇತರ ಪಾಣಿಗಳಿಗೆ ಸೇರಿದುದಲ್ಲವೆಂದು ತಾತ್ಪರ್ಯ).

೬-೭. ಆದುದರಿಂದ ಮೃತಿಹೊಂದಿದ ಮೇಲೆ ಯಮಲೋಕಕ್ಕೆ ಹೋಗತಕ್ಕವನು ಶುಭಾಶುಭ ಕರ್ಮಸಂಗ್ರಹವುಳ್ಳ ಮನುಷ್ಯನೇ ಹೊರತು ಇತರ ಪ್ರಾಣಿಯಲ್ಲ. ಆದುದರಿಂದ ಅಂತಹ ಕರ್ಮಗಳಿಗೆ ತಕ್ಕ ಫಲದಲ್ಲಿ ಮನುಷ್ಯನೇ ಅಧಿಕೃತನಾಗುತ್ತಾನೆ. ಹಾಗೆ ಯಮಲೋಕಕ್ಕೆ ಹೋಗುವ ಮನುಷ್ಯನಿಗೆ ಅಲ್ಲಿರುವ ಯಮನೇ ಆಯಾಯ ಕರ್ಮಗಳಿಗೆ ತಕ್ಕ ಫಲಗಳ ಅನುಭವಕ್ಕಾಗಿ ಈ ಮನುಷ್ಯನಿಗೆ ಉತ್ಪತ್ತಿಸ್ಥಾನವನ್ನೂ ನರಕವನ್ನೂ ಸಹ ನಿರೂಪಿಸಿ ತೋರಿಸುತ್ತಾನೆ.

**ಪೂಜನೀಯಾಶ್ಚ ತೇ ತೇನ ವೈವಸ್ವತಮುಪೇಕ್ಷ್ಯತಾಂ ।**
**ಮರಣಾನಂತರಂ ಪ್ರೋಕ್ತಂ ತಿರಶ್ಚಾಂ ಗರ್ಭಸಂಭವಂ ॥ ೮ ॥**

**ವಾಯುಭೂತಾಶ್ಚ ತೇ ಗರ್ಭಂ ಪ್ರಪದ್ಯಂತೇ ನ ಸಂಶಯಃ ।**
**ಮನುಷ್ಯಸ್ತು ಮೃತೋ ರಾಮ ನೀಯತೇ ಯಮಮಂದಿರಂ ॥ ೯ ॥**

**ತಥಾ ಕರ್ಮಾನುರೂಪೇಣ ಯಮಂ ಪಶ್ಯತ್ಯಸೌ ತತಃ ।**
**ಘೋರಂ ಪಾಪಸ್ತಥಾ ಧರ್ಮೀ ನಿವಿಷ್ಟಃ ಸೌಮ್ಯದರ್ಶನಂ ॥ ೧೦ ॥**

**ಧರ್ಮಿಷ್ಠಃ ಪೂಜ್ಯತೇ ತತ್ರ ಹ್ಯಾಸನೇನೋದಕೇನ ಚ ।**
**ಪಾಶಬದ್ಧಗಲಃ ಪಾಪಃ ಪೀಡ್ಯತೇ ವೈ ಯಮಾಗ್ರತಃ ॥ ೧೧ ॥**

**ಚಿತ್ರಗುಪ್ತಾಸ್ತತಸ್ತಸ್ಯ ಸ್ವರ್ಗಂ ನರಕಮೇವ ಚ ।**
**ನಿವೇದಯಂತಿ ಧರ್ಮಜ್ಞ ಸ ತು ಪಿಂಡಾಶನಸ್ತತಃ ॥ ೧೨ ॥**

---

೮–೯. ಆ ನರಕಗಳನ್ನೂ ಉತ್ಪತ್ತಿ ಸ್ಥಾನಗಳನ್ನೂ ಸಹ ಅವರು ಅನುಭವಿಸಲು ಪುರಸ್ಕರಿಸಲೇಬೇಕು. ತಿರ್ಯಕ್ ಪ್ರಾಣಿಗಳು ಮಾತ್ರ ಮರಣ ಹೊಂದಿದ ನಂತರ ಯಮನನ್ನು ನೋಡದೆಯೇ ಪುನಃ ದೇಹಧಾರಣೆಗಾಗಿ ವಾಯುವಿನಂತೆ ಸೂಕ್ಷ್ಮಾವಸ್ಥೆಯನ್ನು ಹೊಂದಿ ಗರ್ಭವನ್ನು ಸೇರುತ್ತವೆ. ಮನುಷ್ಯನು ಮಾತ್ರ ಮೃತನಾದ ಒಡನೆಯೇ ಯಮನ ಮನೆಗೆ ಒಯ್ಯಲ್ಪಟ್ಟು ಅಲ್ಲಿ ಯಮನನ್ನು ನೋಡಿ ತನ್ನ ಕರ್ಮಗತಿಗೆ ತಕ್ಕಂತೆ ಅವನ ನಿಯೋಗವನ್ನು ಹೊಂದುತ್ತಾನೆ.

೧೦–೧೨. ಹಾಗೆ ನೋಡುವಾಗ ಪಾಪಿಷ್ಠನಾದವನಿಗೆ ಆ ಯಮನು ಘೋರ ರೂಪಿಯಾಗಿಯೂ ಧರ್ಮಿಷ್ಠನಾದ ಸಾಧುವಿಗೆ ಸುಖದರ್ಶನನಾಗಿಯೂ ಗೋಚರನಾಗುತ್ತಾನೆ. ಧರ್ಮಿಷ್ಠನಾದ ಸಾಧುವು ಅಲ್ಲಿ ಆ ಯಮನಿಂದ ಆಸನ ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಲ್ಪಡುತ್ತಾನೆ. ಪಾಪಿಯಾದವನು ಕತ್ತಿನಲ್ಲಿ ಪಾಶದಿಂದ ಸುತ್ತಲ್ಪಟ್ಟು ಆ ಯಮನ ಎದುರಿಗೆ ಹಿಂಸಿಸಲ್ಪಡುತ್ತಾನೆ. ಅಲ್ಲಿ ಚಿತ್ರಗುಪ್ತಾದಿ ಯಮಕಿಂಕರರು ಇವನ ಕರ್ಮಕ್ಕೆ ತಕ್ಕ ಸ್ವರ್ಗ ನರಕಾದಿಗಳನ್ನು ಆಗ ನಿರ್ಧರಿಸಿ ಹೇಳುತ್ತಾರೆ. ಹಾಗೆ ಅವರಿಂದ ಅಪ್ಪಣೆ ಪಡೆದ ಆ ಮನುಷ್ಯನು ಭೂಮಿಯಲ್ಲಿ ತನ್ನ ಪುತ್ರಾದಿಗಳಿಂದ ಕೊಡಲ್ಪಟ್ಟ ಪಿಂಡೋದಕದಿಂದ ಅಲ್ಲಿ ಜೀವಿಸಿಕೊಂಡಿದ್ದು.

ತದಾ ತ್ಯಕ್ತ್ವಾ ತು ತದ್ದೇಹಂ ಪ್ರೇತದೇಹಂ ಪ್ರಪದ್ಯತೇ ।
ಪ್ರೇತಲೋಕೇ ತು ವಸತಿರ್ವರ್ಷಂ ತಸ್ಯ ತು ಕೀರ್ತಿತಾ ॥ ೧೩ ॥

ಕ್ಷುತ್ತೃಷ್ಣೇ ಪ್ರತ್ಯಹಂ ತತ್ರ ಭವತೋ ಭೃಗುನಂದನ ।
ಅಹೋರಾತ್ರಂ ತು ತತ್ರಾಪಿ ಮಾನುಷ್ಯಂ ಪರಿಕೀರ್ತಿತಂ ॥ ೧೪ ॥

ಆಮಶ್ರಾದ್ಧಾಸ್ತಥಾ ದತ್ತಾ ಭುಜ್ಯಂತೇ ತತ್ರ ಮಾನವೈಃ ।
ಆತಿವಾಹಿಕದೇಹಾತ್ತು ಪ್ರೇತಪಿಂಡೈರ್ವಿನಾ ನರಃ ॥ ೧೫ ॥

ನ ಹಿ ಮೋಕ್ಷಮವಾಪ್ನೋತಿ ಪಿಂಡಾಂಸ್ತತ್ರೈವ ಸೋऽಶ್ನುತೇ ।
ಕೃತೇ ಸಪಿಂಡೀಕರಣೇ ನರಃ ಸಂವತ್ಸರಾತ್ಪರಂ ॥ ೧೬ ॥

ಪ್ರೇತದೇಹಂ ಸಮುತ್ಸೃಜ್ಯ ಭೋಗದೇಹಂ ಪ್ರಪದ್ಯತೇ ।
ತದಾದೌ ಭುಜ್ಯತೇ ತತ್ರ ಯತ್ ಸ್ತೋಕಂ ಭೃಗುನಂದನ ॥ ೧೭ ॥

---

೧೩-೧೪. ಅಲ್ಲಿ ಆ ದೇಹವನ್ನು ಬಿಟ್ಟು ಪ್ರೇತದೇಹವನ್ನು ಹೊಂದಿ ಪ್ರೇತಲೋಕದಲ್ಲಿ ಒಂದು ವರ್ಷ ಪರ್ಯಂತರವೂ ಇರುತ್ತಾನೆ. ಆ ದೇಹದಿಂದ ಪ್ರೇತಲೋಕದಲ್ಲಿರುವ ಅವನಿಗೆ ಹಸಿವು ಬಾಯಾರಿಕೆಗಳು ಹೆಚ್ಚಾಗಿ ಆಗುತ್ತವೆ. ಅಲ್ಲಿಯೂ ಮನುಷ್ಯಲೋಕದಲ್ಲಿರುವಂತೆ ಅಹೋರಾತ್ರಿಗಳೂ ಉಂಟಾಗುತ್ತವೆ.

೧೫-೧೬. ಆ ಪ್ರೇತಲೋಕದಲ್ಲಿರುವಾಗ ಭೂಲೋಕದಲ್ಲಿ ಪುತ್ರಾದಿಗಳಿಂದ ಕೊಡಲ್ಪಟ್ಟ ಆಮಶ್ರಾದ್ಧಾದಿಗಳನ್ನೇ ಅವರು ಭುಂಜಿಸುತ್ತಾರೆ. ಅಲ್ಲಿರುವ ಅವರಿಗೆ ಪ್ರೇತಪಿಂಡಗಳಿಂದಲ್ಲದೆ ಮತ್ತಾವ ಕಾರಣದಿಂದಲೂ ಭೂತಸೂಕ್ಷ್ಮಮಯವಾದ ಆತಿವಾಹಿಕ ದೇಹದಿಂದ ಬಿಡುಗಡೆಯುಂಟಾಗುವುದಿಲ್ಲ ಈ ಪ್ರೇತಪಿಂಡಗಳನ್ನೆಲ್ಲಾ ಅಲ್ಲಿಯೇ ಅವನು ಭುಂಜಿಸುತ್ತಾನೆ. ಹೀಗೆ ಒಂದು ವರ್ಷವಾದ ನಂತರ ಸಪಿಂಡೀಕರಣವು ಮಾಡಲ್ಪಟ್ಟ ಮೇಲೆ ಅವನು ಆ ಪ್ರೇತದೇಹವನ್ನು ಬಿಟ್ಟು ಭೋಗದೇಹವನ್ನು ಹೊಂದುತ್ತಾನೆ.

೧೭-೧೮. ಅದು ಮೊದಲು ಅವನು ಅಲ್ಲಿ ಅಲ್ಪ ಸ್ವಲ್ಪ ಸುಖದುಃಖಗಳನ್ನು ಅನುಭವಿಸಲು ಅವಕಾಶವಾಗುತ್ತದೆ. ಭೋಗದೇಹಗಳೂ ಸಹ ಶುಭದೇಹವೆಂದೂ ಅಶುಭದೇಹವೆಂದೂ ಎರಡು ವಿಧವಾಗಿದೆ. ದೇವರೂಪವನ್ನು ಹೊಂದಿದ ಅವನಿಗೆ

ಭೋಗದೇಹಾವುಭೌ ಪ್ರೋಕ್ತೌ ಶುಭಾಶುಭಕಸಂಜ್ಞಕೌ ।
ಭೋಗದೇಹಂ ಶುಭಂ ತಸ್ಯ ದೇವರೂಪಸ್ಯ ಜಾಯತೇ ॥ ೧೮ ॥

ನಾನಾಪ್ರಕಾರಮಶುಭಂ ನೀರೂಪಂ ಘೋರದರ್ಶನಂ ।
ಯಾದೃಶಂ ತಸ್ಯ ಮಾನುಷ್ಯಂ ರೂಪಮಾಸೀತ್ಪುರಾತನಂ ॥ ೧೯ ॥

ಕಿಂಚಿತ್ತಸ್ಯ ತು ಸಾದೃಶ್ಯಂ ತತ್ರಾಪಿ ಪ್ರತಿಪದ್ಯತೇ ।
ಭುಕ್ತ್ವಾ ಸ ಭೋಗದೇಹೇನ ಯಥಾಕಾಲಂ ತ್ರಿವಿಷ್ಟಪಂ ॥ ೨೦ ॥

ಕರ್ಮಣ್ಯಲ್ಪಾವಶೇಷೇ ತು ತ್ರಿದಿವಾದ್ವಿನಿಪಾತ್ಯತೇ ।
ತ್ರಿದಿವಾತ್ಪತಿತಂ ತಸ್ಯ ಭೋಗದೇಹಂ ತು ರಾಕ್ಷಸಾಃ ॥ ೨೧ ॥

ಭಕ್ಷಯಂತಿ ತದಾ ಭೂಮೌ ವಿಕೃತಾ ಭೀಮದರ್ಶನಾಃ ।
ಪಾಪೇ ತಿಷ್ಠತಿ ಚೇತ್ಸ್ವರ್ಗೇ ತೇನ ಭುಕ್ತೇ ತಥಾ ದ್ವಿಜ ॥ ೨೨ ॥

---

ಶುಭವೆಂಬ ಭೋಗದೇಹವು ಉಂಟಾಗುತ್ತದೆ. ಅಶುಭದೇಹವೂ ಸಹ ನಾನಾ ವಿಧವಾಗಿಯೂ ಅರೂಪವಾಗಿಯೂ ಭಯಂಕರವಾಗಿಯೂ ಜನಿಸುತ್ತದೆ.

೧೯-೨೦. ಅವನು ಹಿಂದೆ ಯಾವ ವಿಧವಾದ ಮನುಷ್ಯನ ದೇಹವನ್ನು ಹೊಂದಿದ್ದನೋ ಆ ದೇಹದೊಡನೆ ಸ್ವಲ್ಪ ಮಟ್ಟಿಗೆ ಸದೃಶವಾಗಿಯೇ ಇರುವ ದೇಹವನ್ನು ಹೊಂದುತ್ತಾನೆ. ಭೋಗದೇಹವನ್ನು ಹೊಂದಿದವನು ದೇವರೂಪಿಯಾಗಿದ್ದು ಆ ದೇಹದಿಂದಲೇ ನಿರ್ದಿಷ್ಟಕಾಲಪರ್ಯಂತಗವಾಗಿಯೂ ಸ್ವರ್ಗಸುಖವನ್ನನುಭವಿಸಿ ಸುಖಸಾಧಕವಾದ ಕರ್ಮವೆಲ್ಲವೂ ಅನುಭವದಿಂದ ಮುಗಿಯುತ್ತಾ ಬಂದು ಸ್ವಲ್ಪ ಮಟ್ಟಿಗೆ ಉಳಿದಿರುವಾಗಲೇ ಅವನು ಆ ಸ್ವರ್ಗದಿಂದ ಕೆಳಕ್ಕೆ ತಳ್ಳಲ್ಪಡುತ್ತಾನೆ.

೨೧-೨೨. ಸ್ವರ್ಗದಿಂದ ಬಿದ್ದ ಅವನ ಭೋಗದೇಹವನ್ನು ಘೋರರೂಪರಾದ ರಾಕ್ಷಸರು ಭೂಮಿಯಲ್ಲಿ ಭಕ್ಷಿಸಿ ಬಿಡುತ್ತಾರೆ. ಪಾಪಿಯಾದವನು ಅಲ್ಪಸ್ವಲ್ಪ ಸುಕೃತಕ್ಕೆ ತಕ್ಕಂತೆ ಸ್ವರ್ಗವನ್ನು ಅನುಭವಿಸಿದ ನಂತರ ಪಾಪವೇ ಉಳಿ

ತದಾ ದ್ವಿತೀಯಂ ಗೃಹ್ಣಾತಿ ಭೋಗದೇಹಂ ತು ಪಾಪಿನಂ ।
ಭುಕ್ತ್ವಾ ಪಾಪಂ ತು ತೇ ಪಶ್ಚಾತ್ತೇನ ಭುಕ್ತಂ ತ್ರಿವಿಷ್ಟಪಂ  ॥ ೨೩ ॥

ಶುಚೀನಾಂ ಶ್ರೀಮತಾಂ ಗೇಹೇ ಸ್ವರ್ಗಭ್ರಷ್ಟೋಽಭಿಜಾಯತೇ ।
ಪುಣ್ಯೇ ತಿಷ್ಠತಿ ಚೇತ್ಪಾಪಂ ತೇನ ಭುಕ್ತಂ ತದಾ ಭವೇತ್  ॥ ೨೪ ॥

ತಸ್ಮಿನ್ ಸಂಭಕ್ಷಿತೇ ದೇಹೆ ಶುಭಂ ಗೃಹ್ಣಾತಿ ವಿಗ್ರಹಂ ।
ಕರ್ಮಣ್ಯಲ್ಪಾವಶೇಷೇ ತು ನರಕಾದಪಿ ಮುಚ್ಯತೇ  ॥ ೨೫ ॥

ಯುಕ್ತಸ್ತು ನರಕಾದ್ಯಾತಿ ತಿರ್ಯಗ್ಯೋನಿಮಸಂಶಯಂ ।
ತತ್ರಾಪ್ಯಶೇಷತಃ ಪಾಪಂ ನ ತದಶ್ನಾತಿ ಭಾರ್ಗವ ।
ತತೋಽವಶೇಷಂ ಮಾನುಷ್ಯಂ ಭುಂಕ್ತೇಽಸೌ ಕೃತಲಕ್ಷಣಃ  ॥ ೨೬ ॥

---

ದಿರುವ ಕಾಲದಲ್ಲಿ ಅದರ ಫಲಾನುಭವಕ್ಕಾಗಿ ಪಾಪಿಯಾದ ಮತ್ತೊಂದು ದೇಹವನ್ನು ಹೊಂದುತ್ತಾನೆ. ಆ ದೇಹದಿಂದ ಪಾಪಫಲವನ್ನು ಅನುಭವಿಸಿದ ನಂತರ ಪುಣ್ಯಕ್ಕೆ ತಕ್ಕಂತೆ ಪುನಃ ಸ್ವರ್ಗಸುಖವನ್ನೇ ಅನುಭವಿಸುತ್ತಾನೆ.

೨೪-೨೫. ಸ್ವರ್ಗಸುಖವನ್ನು ಅನುಭವಿಸಿ ಅಲ್ಲಿಂದ ಭ್ರಷ್ಟನಾದ ಅವನು ಭೂಮಿಯಲ್ಲಿಯೂ ಶುಚಿಯಾಗಿಯೂ ಶ್ರೀಮಂತರಾಗಿಯೂ ಇರುವವರ ಉತ್ತಮ ಕುಲದಲ್ಲಿ ಜನಿಸುತ್ತಾನೆ. ಪುಣ್ಯವೇ ಹೆಚ್ಚಾಗಿದ್ದು ಪಾಪವು ಸ್ವಲ್ಪಮಟ್ಟಿಗೆ ಉಳಿದಿರುವ ಸಂಧರ್ಭದಲ್ಲಿ ಆ ಪಾಪಾನುಭವಕ್ಕೆ ತಕ್ಕ ದೇಹ ಸ್ವೀಕಾರದಿಂದ ಅದೂ ಅನುಭವಿಸಲ್ಪಡುತ್ತದೆ. ಆ ಪಾಪದೇಹವು ನಷ್ಟವಾದ ಮೇಲೆ ಪುನಃ ಶುಭಕರವಾದ ದೇಹವನ್ನು ಹೊಂದುತ್ತಾನೆ. ಪಾಪಕರ್ಮವು ಅತ್ಯಲ್ಪವಾಗಿ ಉಳಿದಿದ್ದರೂ ಅವನು ನರಕದಿಂದಲೂ ಬಿಡುಗಡೆ ಹೊಂದುತ್ತಾನೆ.

೨೬-೨೭. ಅಂತಹ ಪಾಪದಿಂದ ಕೂಡಿದವನು ಆ ನರಕವನ್ನು ಬಿಟ್ಟು ತಿರ್ಯಗ್ಜನ್ಮಹೊಂದುತ್ತಾನೆ. ಆ ಜನ್ಮದಲ್ಲಿಯೂ ಸಹ ಎಲ್ಲಾ ಪಾಪಫಲವನ್ನೂ ಅನುಭವಿಸದೆ ಪುನಃ ಮನುಷ್ಯಜನ್ಮವನ್ನು ಹೊಂದಿ ಆ ಪಾಪಾನುಭವಕ್ಕೆ ತಕ್ಕ ಸ್ವರೂಪದಿಂದ ಉಳಿದ ಪಾಪಫಲವನ್ನೂ ಅನುಭವಿಸುತ್ತಾನೆ. ಎಲೈ ಭಾರ್ಗವನೇ ಲೋಕದಲ್ಲಿ ಪ್ರಸಿದ್ಧವಾದ ಹಗ್ಗವು ಅನೇಕ ಸಣ್ಣಸಣ್ಣ ನೂಲುಗಳಿಂದ ಮಾಡಲ್ಪಟ್ಟು ಬಹಳ ಬಲಿಷ್ಟವಾಗಿ ಗುರುತರವಾದ ಅನೇಕ ಪದಾರ್ಥಗಳನ್ನೂ ಸೆಳೆಯಲು

ರಜ್ಜುರ್ಯಥಾ ಸ್ಯಾದ್ದೃಢತಂತುಬದ್ಧಾ
ವಿಕರ್ಷಣೇ ಶಕ್ತಿಮತೀ ಗುರೂಣಾಂ ।
ಸ್ವರ್ಗಾಯ ಪುಣ್ಯಂ ನರಕಾಯ ಪಾಪಂ
ತಥಾ ನೃಣಾಂ ಸ್ಯಾದಿಹ ಭಾರ್ಗವಾಗ್ರ್ಯ　　|| ೨೭ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಭೋಗದೇಹವರ್ಣನಂ ನಾಮ ತ್ರಯೋದಶೋತ್ತರಶತತಮೋಽಧ್ಯಾಯಃ

---

ಹೇಗೆ ಸಾಮರ್ಥ್ಯ ಹೊಂದಿದೆಯೋ ಹಾಗೆಯೇ ಕ್ರಮಕ್ರಮವಾಗಿ ಅಭಿವೃದ್ಧಿಹೊಂದಿ ಬಲಿಷ್ಠವಾದ ಪುಣ್ಯವು ಸ್ವರ್ಗಕ್ಕೂ ಹಾಗೆಯೇ ಬಲಿಷ್ಠವಾದ ಪಾಪವು ನರಕಕ್ಕೂ ಕಾರಣವಾಗಿ ಮನುಷ್ಯರಿಗೆ ಆಕರ್ಷಕವಾಗಿ ಪರಿಣಮಿಸುತ್ತದೆ. ಪುಣ್ಯವು ಸ್ವರ್ಗಕ್ಕೂ ಪಾಪವು ನರಕಕ್ಕೂ ಸೆಳೆಯಲು ಕಾರಣವಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಭೋಗದೇಹವರ್ಣನವೆಂಬ ನೂರ ಹದಿಮೂರನೆಯ ಅಧ್ಯಾಯವು ಮುಗಿದಿದೆ.



## ನೂರ ಹದಿಮೂರನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಮನುಷ್ಯನು ಮರಣಹೊಂದಿ ಸ್ಥೂಲವಾದ ದೇಹವನ್ನು ಬಿಟ್ಟು ಭೋಗದೇಹವನ್ನು ಹೊಂದಿ ಭೋಗಾನುಭವವಾದ ನಂತರ ಗರ್ಭವನ್ನು ಪುನಃ ಹೊಂದುವ ಕ್ರಮವನ್ನು ವಿವರಿಸಿ ಸುಖದುಃಖಾನುಭವಯೋಗ್ಯಗಳಾದ ಭೋಗದೇಹಗಳನ್ನೂ ಆ ದೇಹಗಳಿಂದ ಅನುಭವಿಸಬಹುದಾದ ಸ್ವರ್ಗ ನರಕಗಳ ಅವಧಿಯನ್ನೂ ವಿವರಿಸಿ ಪುಣ್ಯಪಾಪಗಳಿಂದ ಆವರಿಸಲ್ಪಟ್ಟಿರುವ ಮನುಷ್ಯನಿಗೆ ಇಂತಹ ಪರಿವೃತ್ತಿಯು ಅನಿವಾರ್ಯವೆಂದು ನಿರೂಪಿಸಿರುವರು.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಚತುರ್ದಶೋತ್ತರಶತತಮೋಽಧ್ಯಾಯಃ

**॥ ಪುಷ್ಕರ ಉವಾಚ ॥**

**ಜೀವಃ ಪ್ರವಿಷ್ಟೋ ಗರ್ಭೇತು ಕಲಲಂ ಪ್ರತಿ ತಿಷ್ಠತಿ ।**
**ಮಾಸಮಾತ್ರಂ ತು ಕಲಲೇ ತಸ್ಮಿನ್ಮಾಸಮಾತ್ರಂ ಹಿ ತಿಷ್ಠತಿ ॥ ೧ ॥**

**ದ್ವಿತೀಯಂ ತು ತದಾ ಮಾಸಂ ಘನೀಭೂತಃ ಸ ತಿಷ್ಠತಿ ।**
**ತಸ್ಯಾವಯವನಿರ್ಮಾಣಂ ತೃತೀಯೇ ಮಾಸಿ ಜಾಯತೇ ॥ ೨ ॥**

---

### ನೂರ ಹದಿನಾಲ್ಕನೆಯ ಅಧ್ಯಾಯ.

೧-೨. ಪುಷ್ಕರನು ಭೋಗದೇಹಗಳನ್ನೂ ಭೋಗಾನುಭವ ಕ್ರಮವನ್ನೂ ವಿವರಿಸಿ ಆ ಭೋಗದೇಹದಿಂದ ಗರ್ಭವನ್ನು ಪ್ರವೇಶಿಸುವ ರೀತಿಯನ್ನು ವಿವರಿಸುತ್ತಾನೆ. ಗರ್ಭದಲ್ಲಿ ಪ್ರವೇಶಹೊಂದಿದ ಆ ಜೀವನು ಕಲಲರೂಪದಿಂದ ಪಂಚಭೂತದ್ರವ್ಯವನ್ನು ಆಶ್ರಯಿಸಿ ನಿಲ್ಲುತ್ತಾನೆ. (ಕಲಲವೆಂದರೆ ದ್ರವಾವಸ್ಥೆಗಿಂತ ಅನಂತರವೂ ಘನೀಭಾವಾವಸ್ಥೆಗಿಂತ ಪೂರ್ವಕಾಲದಲ್ಲಿಯೂ ಇರುವ ಶುಕ್ಲಶೋಣಿತಗಳ ಪರಿಣಾಮ) ಅವ್ಯಕ್ತಸ್ವರೂಪದಿಂದ ಆ ಕಲಲದಲ್ಲಿಯೇ ಒಂದು ತಿಂಗಳವರಿಗೂ ಇರುತ್ತಾನೆ. ಎರಡನೆಯ ತಿಂಗಳಲ್ಲಿ ಘನೀಭಾವವನ್ನು ಹೊಂದಿ ನಿಲ್ಲುತ್ತಾನೆ. ಅವನಿಗೆ ಅವಯವದ ನಿರ್ಮಾಣವು ಮೂರನೆಯ ತಿಂಗಳಲ್ಲಿ ಆಗುತ್ತದೆ.

ತ್ವಕ್ಚರ್ಮ ಪಂಚಮೇ ಮಾಸಿ ಷಷ್ಠೇ ರೋಮ್ಣಾಂ ಸಮುದ್ಭವಃ ।
ಸಪ್ತಮೇ ಚ ತಥಾ ಮಾಸಿ ಪ್ರಬೋಧಶ್ಚಾಸ್ಯ ಜಾಯತೇ ॥ ೩ ॥

ಸಜೀವೋಽಪಿ ಹಿ ಮಾಂಡೂಕಃ ಶೀತೆ ಶೀತಾದಿತೋಽಭ್ಯಸುಃ ।
ಮೂಢಸ್ತಿಷ್ಠತಿ ಧರ್ಮಜ್ಞ ಷಣ್ಮಾಸಾನ್ ಗರ್ಭಗಸ್ತಥಾ ॥ ೪ ॥

ಮಾತುರಾಹಾರಪೀತಂ ತು ಸಪ್ತಮೇ ಮಾಸ್ಯುಪಾಶ್ನುತೇ ।
ಅಷ್ಟಮೇ ನವಮೇ ಮಾಸಿ ಭೃಶಮುದ್ವಿಜತೇ ತದಾ ॥ ೫ ॥

ಜರಾಯುವೇಷ್ಟಿತೋ ದೇಹೋ ಮೂರ್ಧ್ನಿ ಬದ್ಧಾಂಜಲಿಃ ಸದಾ ।
ಮಧ್ಯೇಕ್ಲೀಬಸ್ತು ವಾಮೇ ಸ್ತ್ರೀ ದಕ್ಷಿಣೇ ಪುರುಷಸ್ತಥಾ ॥ ೬ ॥

ತಿಷ್ಠತ್ಯುತ್ತರಭಾಗೇ ತು ಪೃಷ್ಠಸ್ಯಾಭಿಮುಖಸ್ತಥಾ ।
ಯಸ್ಯಾಂ ತಿಷ್ಠತಿ ಸಾ ಯೋನೌ ತಾಂ ತು ವೇತ್ತಿ ನ ಸಂಶಯಂ ॥ ೭ ॥

---

೩–೪. ಐದನೆಯ ತಿಂಗಳಲ್ಲಿ ಸೂಕ್ಷ್ಮವಾದ ತ್ವಕ್ಕು ಮತ್ತು ಚರ್ಮಗಳು ಉಂಟಾಗುತ್ತವೆ. ಆರನೆಯ ತಿಂಗಳಲ್ಲಿ ರೋಮಗಳುದಯಿಸುತ್ತವೆ. ಏಳನೆಯ ತಿಂಗಳಲ್ಲಿ ಜ್ಞಾನಶಕ್ತಿಯು ಉದಯಿಸುತ್ತದೆ. ಆ ಗರ್ಭವು ಸಜೀವವಾಗಿದ್ದರೂ ಪ್ರಾಣವೃತ್ತಿಯಿಂದ ಕೂಡಿ ಶೀತಾದಿಗಳಿಂದ ಆವೃತವಾದ ಕಪ್ಪೆಯಂತೆ, ಭೋಗ ಶೂನ್ಯವಾಗಿ ಆರುತಿಂಗಳವರಿಗೂ ಗರ್ಭದಲ್ಲಿ ಮೌಢ್ಯದಿಂದ ಕೂಡಿರುತ್ತದೆ.

೫–೬. ತಾಯಿಯು ತೆಗೆದುಕೊಂಡ ಆಹಾರ ಮತ್ತು ಪಾನೀಯಗಳನ್ನು ಆ ಗರ್ಭವು ಏಳನೆಯ ತಿಂಗಳಿನಿಂದ ತಾನು ಹೊಂದುತ್ತದೆ. ಎಂಟು ಮತ್ತು ಒಂಭತ್ತನೆಯ ತಿಂಗಳುಗಳಲ್ಲಿ ಆ ಗರ್ಭವು ಬಹಳ ಕ್ಲೇಶಹೊಂದುತ್ತದೆ. ಗರ್ಭ ಕೋಶದ ಮೇಲಿನ ಪೊರೆಯಿಂದ ಭದ್ರವಾಗಿ ಬಿಗಿಯಲ್ಪಟ್ಟು ಎರಡು ಕೈಗಳನ್ನೂ ತಲೆಯಮೇಲೆ ಅಂಜಲಿಬಂಧ ರೂಪದಿಂದ ಇಟ್ಟುಕೊಂಡು ಕುಳಿತಿರುತ್ತದೆ. ಅದು ಮಧ್ಯಭಾಗದಲ್ಲಿದ್ದರೆ ನಪುಂಸಕನಾಗಿಯೂ, ಎಡಭಾಗದಲ್ಲಿದ್ದರೆ ಸ್ತ್ರೀಯಾಗಿಯೂ, ಬಲಭಾಗದಲ್ಲಿದ್ದರೆ ಪುರುಷನಾಗಿಯೂ ಆಗುತ್ತದೆ.

೭–೮ ಆ ಗರ್ಭವು ಉತ್ತರಭಾಗದಲ್ಲಿ ತಾಯಿಯ ಬೆನ್ನಿಗೆ ಅಭಿಮುಖವಾಗಿ ಕುಳಿತಿರುತ್ತದೆ. ಅದು ಗರ್ಭದಲ್ಲಿರುವಾಗ ತಾನು ಯಾವ ಜನ್ಮವನ್ನು ಹೊಂದಿರುವೆ

ಸರ್ವಂ ಸ್ಮರತಿ ವೃತ್ತಾಂತಂ ತ್ವಾರಭ್ಯಾಜನ್ಮತಸ್ತಥಾ ।
ಅಂಧಕಾರೇ ಚ ಮಹತಿ ಪೀಡಾಂ ವಿಂದತಿ ಭಾರ್ಗವ ॥ ೮ ॥

ಕೀಟಗಂಧೇನ ಮಹತಾ ಕಲ್ಮಷಂ ವಿಂದತೇ ಪರಂ ।
ಮಾತ್ರಾನೀತೇ ಜಲೇ ಪೀತೇ ಪರಂ ಶೀತಮುಪಾಶ್ನುತೇ ॥ ೯ ॥

ಉಷ್ಣೇ ಭುಕ್ತೇ ತಥಾ ದಾಹಂ ಪರಮಾಪ್ನೋತಿ ಭಾರ್ಗವ ।
ವ್ಯಾಧಿಭಿಃ ಪರಮಾಂ ಪೀಡಾಂ ತೀವ್ರಾಂ ಪ್ರಾಪ್ನೋತಿ ದುಃಸಹಾಂ ॥ ೧೦ ॥

ವ್ಯಾಯಾಮೇ ಚ ತಥಾ ಮಾತುಃ ಕ್ಲಮಂ ಮಹದುಪಾಶ್ನುತೆ ।
ವ್ಯಾಧಿತಾಯಾಂ ತಥಾ ತೀವ್ರಾಂ ವೇದನಾಂ ಸಮುಪಾಶ್ನುತೇ ॥ ೧೧ ॥

ಭವಂತಿ ವ್ಯಾಧಯಶ್ಚಾಸ್ಯ ತತ್ರ ಘೋರಾಃ ಪುನಃ ಪುನಃ ।
ನ ಚ ಮಾತಾ ಪಿತಾ ವೇತ್ತಿ ತದಾ ಕಶ್ಚಿಚ್ಚಿಕಿತ್ಸಕಃ ॥ ೧೨ ॥

---

ನೆಂಬುದನ್ನು ಚೆನ್ನಾಗಿ ತಿಳಿದಿರುತ್ತದೆ. ಜನ್ಮ ಮೊದಲು ತನ್ನ ಮೊದಲಿನ ಎಲ್ಲಾ ವೃತ್ತಾಂತವನ್ನೂ ಅದು ಆಗ ಸ್ಮರಿಸುತ್ತದೆ. ಗರ್ಭಕೋಶದ ಅಂಧಕಾರದಿಂದ ಬಹಳ ವ್ಯಥೆಯನ್ನೂ ಹೊಂದುತ್ತದೆ.

೯-೧೦. ಹೆಚ್ಚಾದ ದುರ್ಗಂಧದಿಂದ ಬಹಳ ಅಸಹ್ಯಪಡುತ್ತದೆ. ತಾಯಿಯು ತನಗಾಗಿ ಜಲಪಾನ ಮಾಡಿದಲ್ಲಿ ತಾನೂ ಅದರಿಂದ ಬಹಳ ಶೈತ್ಯವನ್ನು ಹೊಂದುತ್ತದೆ. ತಾಯಿಯು ತನ್ನ ಹಿತಕ್ಕಾಗಿ ಬಿಸಿಬಿಸಿಯಾಗಿ ಊಟಮಾಡಿದಲ್ಲಿ ಆ ಉಷ್ಣದಿಂದ ಆ ಶಿಶುವು ಬಹಳ ದಾಹಹೊಂದುತ್ತದೆ. ತಾಯಿಯು ವ್ಯಾಧಿಗ್ರಸ್ತಳಾದಲ್ಲಿ ತಾನೂ ಸಹ ದುಸ್ಸಹವಾದ ಹಿಂಸೆಯನ್ನು ಹೊಂದುತ್ತದೆ.

೧೧-೧೨. ತಾಯಿಯು ವ್ಯಾಯಾಮಾದಿಗಳಿಂದ ಶ್ರಮಪಟ್ಟಲ್ಲಿ ತಾನೂ ಬಹಳ ಆಯಾಸ ಹೊಂದುತ್ತದೆ. ತಾಯಿಯು ವ್ಯಾಧಿಯಿಂದ ದುಃಖಪಟ್ಟಲ್ಲಿ ತಾನೂ ಬಹಳ ವೇದನೆಯನ್ನು ಹೊಂದುತ್ತದೆ. ಆ ಶಿಶುವಿಗೆ ಗರ್ಭದಲ್ಲಿರುವಾಗ ಪುನಃಪುನಃ ಅನೇಕ ವ್ಯಾಧಿಗಳು ಉಂಟಾಗುತ್ತಲೇ ಇರುತ್ತವೆ. ಅಂತಹ ವ್ಯಾಧಿಗಳು ತಾಯಿಗಾಗಲಿ, ತಂದೆಗಾಗಲಿ, ವೈದ್ಯನಿಗಾಗಲಿ ತಿಳಿಯುವುದಿಲ್ಲ.

ಸೌಕುಮಾರ್ಯಾದ್ರುಜಂ ತೀವ್ರಾಂ ಜನಯಂತಿ ತು ತಸ್ಯ ತಾಃ ।
ಆಧಿಭಿರ್ವ್ಯಾಧಿಭಿಶ್ಚೈವ ಪೀಡ್ಯಮಾನಸ್ಯ ದಾರುಣೈಃ ॥ ೧೩ ॥

ಸ್ವಲ್ಪಮಧ್ಯೇಥ ತತ್ಕಾಲಂ ಯಾತಿ ವರ್ಷಶತೋಪಮಂ ।
ಸಂತಪ್ಯತೇ ತಥಾ ಗರ್ಭೇ ಕರ್ಮಭಿಶ್ಚ ಪುರಾತನೈಃ ॥ ೧೪ ॥

ಮನೋರಥಾನಿ ಕುರುತೇ ಸುಕೃತಾರ್ಥಂ ಪುನಃಪುನಃ ।
ಜನ್ಮ ಚೇದಹಮಾಪ್ಸ್ಯಾಮಿ ಮಾನುಷ್ಯೇ ದೈವಯೋಗತಃ ॥ ೧೫ ॥

ತತಃ ಕರ್ಮ ಕರಿಷ್ಯಾಮಿ ಯೇನ ಮೋಕ್ಷೋ ಭವೇನ್ಮಮ ।
ನಾಸ್ತಿ ಮೋಕ್ಷಂ ವಿನಾ ಸೌಖ್ಯಂ ಗರ್ಭವಾಸೇ ಕಥಂಚನ ॥ ೧೬ ॥

ಗರ್ಭವಾಸಶ್ಚ ಸುಮಹಾನ್ ಲೋಕೇ ದುಃಖೈಕಕಾರಣಂ ।
ಏವಂ ವಿಚಿಂತಯಾನಸ್ಯ ತಸ್ಯ ವರ್ಷಶತೋಪಮಂ ॥ ೧೭ ॥

---

೧೩-೧೪. ಗರ್ಭದಲ್ಲಿರುವ ಆ ಶಿಶುವು ಬಹಳ ಸುಕುಮಾರವಾಗಿರುವುದರಿಂದ ವ್ಯಾಧಿಗಳು ಬಹುಮಟ್ಟಿಗೂ ಅದಕ್ಕೆ ಹಿಂಸೆಯನ್ನುಂಟುಮಾಡುತ್ತವೆ. ಹೀಗೆಯೇ ವ್ಯಾಧಿಗಳಿಂದಲೂ ಮನೋವ್ಯಥೆಗಳಿಂದಲೂ ಬಹಳವಾಗಿ ಸಂತಾಪ ಹೊಂದಿದ ಆ ಶಿಶುವು ಅಲ್ಪಸ್ವಲ್ಪ ಕಾಲವನ್ನೂ ನೂರುವರ್ಷಗಳನ್ನು ಕಳೆಯುವಂತೆ ಬಹುದಃಖದಿಂದ ಕಳೆಯುತ್ತದೆ. ಅದು ಗರ್ಭದಲ್ಲಿರುವಾಗ ತನ್ನ ಪೂರ್ವಜನ್ಮದ ಕರ್ಮಗಳ ಸ್ಮರಣೆಯಿಂದ ಬಹಳವಾಗಿ ವ್ಯಥೆಪಡುತ್ತದೆ.

೧೫-೧೭. ತಾನು ಇನ್ನು ಮುಂದೆ ಪುಣ್ಯವನ್ನೇ ಹೊಂದಬೇಕೆಂದು ತನ್ನ ಮನೋರಥವನ್ನು ಬಹುವಿಧವಾಗಿ ಆಲೋಚಿಸುತ್ತದೆ. ನಾನು ದೈವಯೋಗದಿಂದ ಮನುಷ್ಯ ಜನ್ಮವನ್ನು ಹೊಂದಿದುದೇ ಆದರೆ ಆಗ ಮೋಕ್ಷವನ್ನು ಹೊಂದಲು ಸಾಧಕವಾದ ಸತ್ಕರ್ಮವನ್ನೇ ನಾನು ಮಾಡುತ್ತೇನೆ. ಮೋಕ್ಷಕ್ಕಿಂತಲೂ ಬೇರೆಯಾದ ಸೌಖ್ಯವು ಯಾವುದಿದೆ. ಇಂತಹ ಗರ್ಭವಾಸವನ್ನು ಯಾವಾಗಲೂ ಅನುಭವಿಸಬಾರದು. ಗರ್ಭವಾಸವೆಂಬುದು ಲೋಕದಲ್ಲಿ ದೊಡ್ಡ ದುಃಖಕಾರಣವಾದ ಬಂಧನಸ್ಥಾನ. ಹೀಗೆ ನಾನಾವಿಧವಾಗಿ ಯೋಚಿಸುತ್ತಾ ಬಹುಹಿಂಸೆಯಿಂದ ಅಲ್ಲಿರುವ ಶಿಶುವಿಗೆ ಪ್ರಬೋಧಕ್ಕೆ ಕಾರಣವಾದ ಏಳನೆಯ ತಿಂಗಳಿನಿಂದ ಮೊದಲು ಮೂರು ತಿಂಗಳ ದಿನಗಳು ನೂರಾರು ವರ್ಷಗಳಂತೆ ಬಹು ಕಷ್ಟದಿಂದ ಸಾಗುತ್ತದೆ.

ಮಾಸತ್ರಯಂ ತದ್ಭವತಿ ಗರ್ಭಸ್ಥಸ್ಯ ಪ್ರಪೀಡ್ಯತಃ ।
ತತಸ್ತು ಕಾಲೇ ಸಂಪೂರ್ಣೇ ಪ್ರಬಲೈಃ ಸೂತಿಮಾರುತೈಃ　॥ ೧೮ ॥

ಭವತ್ಯವಾಙ್ಮುಖೋ ಜಂತುಃ ಪೀಡಾಮನುಭವನ್ ಪರಾಂ ।
ಅಧೋಮುಖಃ ಸಂಕಟೇನ ಯೋನಿದ್ವಾರೇಣ ವಾಯುನಾ　॥ ೧೯ ॥

ನಿಃಸಾರ್ಯತೇ ಬಾಣ ಇವ ಯಂತ್ರಚ್ಛಿದ್ರೇಣ ಸಜ್ವರಃ ।
ಯೋನಿನಿಷ್ಕ್ರಮಣಾತ್ಪೀಡಾಂ ಚರ್ಮೋತ್ಕರ್ತನಸನ್ನಿಭಾಂ　॥ ೨೦ ॥

ಪ್ರಾಪ್ನೋತಿ ಚ ತತೋ ಜಾತಃ ತೀವ್ರಂ ಶೀತಮಸಂಶಯಂ ।
ಜನ್ಮಜ್ವರಾಭಿಭೂತಸ್ಯ ವಿಜ್ಞಾನಂ ತಸ್ಯ ನಶ್ಯತಿ　॥ ೨೧ ॥

ಕರಸಂಸ್ಪರ್ಶನಾನ್ಮಾತುಃ ನ ಚ ಜಾನಾತ್ಯಸೌ ತದಾ ।
ಕರಪತ್ರಸ್ಯ ಸಂಸ್ಪರ್ಶಾನ್ಮಾಸಮಾತ್ರಂ ವಿಮೋಹಿತಃ　॥ ೨೨ ॥

---

೧೮-೧೯. ಅನಂತರ ಗರ್ಭವಾಸಕಾಲವು ಸಂಪೂರ್ಣವಾದ ನಂತರ ಪ್ರಬಲವಾದ ಪ್ರಸೂತಿವಾಯುಗಳಿಂದ ಆ ಜೀವಿಯು ಬಹಳ ದುಃಖವನ್ನು ಅನುಭವಿಸುತ್ತಾ ತಲೆಕೆಳಕಾಗಿ ಆಗುತ್ತದೆ. ತಲೆಕೆಳಕಾಗಿಯೇ ಬಹಳ ಸಂಕುಚಿತವಾಗಿರುವ ಯೋನಿಯ ದ್ವಾರದಿಂದ ಆ ಪ್ರಸೂತಿವಾಯುವಿನ ಪ್ರೇರಣೆಯಿಂದ ಯಂತ್ರದ ಸಂದಿನಿಂದ ಹೊರಗೆ ಹೊರಡುವ ಬಾಣದಂತೆ ವ್ಯಥೆಯಿಂದ ಹೊರಗೆ ಹೊರಡಿಸಲ್ಪಡುತ್ತದೆ.

೨೦-೨೧. ಆ ಯೋನಿಯಿಂದ ಹೊರಗೆ ಹೊರಡುವ ಕಾಲದಲ್ಲಿ ದೇಹದ ಚರ್ಮವನ್ನು ಸೀಳಿ ತೆಗೆಯುವುದರಿಂದ ಉಂಟಾಗ ಬಹುದಾದ ಹಿಂಸೆಯನ್ನೇ ಅದು ಅನುಭವಿಸುತ್ತದೆ. ಅನಂತರ ಹುಟ್ಟಿದೊಡನೆಯೇ ಅದು ಹೆಚ್ಚಾದ ಶೀತಬಾಧೆಗೆ ಗುರಿಯಾಗುತ್ತದೆ. ಜನನಕಾಲದಲ್ಲಿ ಉಂಟಾದ ತೀವ್ರವೇದನೆಯಿಂದ ಆ ಶಿಶುವು ತಾನು ಗರ್ಭದಲ್ಲಿರುವಾಗ ಹೊಂದಿದ್ದ ವಿಜ್ಞಾನವನ್ನೆಲ್ಲಾ ಕಳೆದುಕೊಳ್ಳುತ್ತದೆ. ತಾಯಿಯ ಕರಸ್ಪರ್ಶನವಾದೊಡನೆಯೇ ಅದು ತನ್ನ ಹಿಂದಿನ ಜನ್ಮದ ಜ್ಞಾನಸ್ಮರಣೆಯನ್ನೂ ಕಳೆದುಕೊಳ್ಳುತ್ತದೆ. ಆ ಕರಸ್ಪರ್ಶದಿಂದಲೇ ಮೋಹಗೊಂಡ ಆ ಶಿಶುವು ಅಜ್ಞಾನಿಯಾಗಿಯೇ ಒಂದು ತಿಂಗಳು ಪರ್ಯಂತರವಿರುತ್ತದೆ.

೨೨-೨೩. ಎಲೈ ಧರ್ಮಜ್ಞನಾದ ಭಾರ್ಗವನೇ ಪ್ರಾಣಿಯಾದವನು ಗರ್ಭದಲ್ಲಿ ಹೇಗೆ ಉತ್ಪತ್ತಿಯನ್ನು ಹೊಂದುತ್ತಾನೆ. ಎಂಬುದನ್ನು ನಿನಗೆ ಈ ರೀತಿ ಹೇಳಿ

**ಸಂಭವಮೇತದ್ಗರ್ಭೇ ಪ್ರೋಕ್ತಂ ಜಂತೋರ್ಮಯಾ ತುಭ್ಯಂ ।**
**ಕ್ರಮಶೋ ವಚ್ಮಿ ತವಾಹಂ ತತ್ಸತ್ಯಂ ಬ್ರೂಹಿ ಧರ್ಮಜ್ಞ ॥ ೨೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ**
**ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ**
**ಸಂಭವವರ್ಣನಂ ನಾಮ**
**ಚತುರ್ದಶೋತ್ತರಶತತಮೋಽಧ್ಯಾಯಃ**

---

ದ್ದಾಯಿತು. ಮುಂದಿನ ವಿಚಾರವನ್ನು ಸಹ ನಿನಗೆ ಕ್ರಮವಾಗಿ ಹೇಳುತ್ತೇನೆ. ಇದೆಲ್ಲವೂ ಸತ್ಯವೆಂದು ನೀನು ತಿಳಿ. ಮತ್ತೇನನ್ನು ಕೇಳುವೆಯೋ ಕೇಳು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಖ್ಯಾನ
ದಲ್ಲಿ ಸಂಭವವರ್ಣನವೆಂಬ ನೂರ ಹದಿನಾಲ್ಕನೆಯ
ಅಧ್ಯಾಯವು ಮುಗಿದಿದೆ.



## ನೂರ ಹದಿನಾಲ್ಕನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಕ್ರಮ ಪ್ರಾಪ್ತವಾದ ಪ್ರಾಣಿಯ ಉತ್ಪತ್ತಿಕ್ರಮವನ್ನು ವಿವರಿಸಲಾಗಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಪಂಚದಶೋತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

**ಶರೀರಂ ಸಕಲಂ ದೇವ ತನ್ಮಮಾಖ್ಯಾತುಮರ್ಹಸಿ |**
**ಏತದೇವ ಪರಂ ಜ್ಞಾನಂ ತ್ವಂ ಹಿ ವೇತ್ಸಿ ಮಹಾಭುಜಃ || ೧ ||**

|| ಪುಷ್ಕರ ಉವಾಚ ||

**ಭೂಮಿಃ ಪಂಚಗುಣಾ ಜ್ಞೇಯಾ ಜಲಂ ಜ್ಞೇಯಂ ಚತುರ್ಗುಣಂ |**
**ತೇಜಸ್ತು ತ್ರಿಗುಣಂ ರಾಮ ಪವನೋ ದ್ವಿಗುಣೋ ಮತಃ || ೨ ||**

**ತತ್ರೈಕಗುಣಮಾಕಾಶಂ ನಿತ್ಯಂ ಜ್ಞೇಯಂ ಮನೀಷಿಭಿಃ |**
**ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ಪಂಚಮಃ || ೩ ||**

---

### ನೂರ ಹದಿನೈದನೆಯ ಅಧ್ಯಾಯ.

೧. ಪೂಜ್ಯನೇ ಈ ಶರೀರವೆಂಬುದರ ವಿಚಾರವೇನು. ಇದಕ್ಕೆ ಸೇರಿರುವ ಎಲ್ಲಾ ವಿಷಯಗಳನ್ನೂ ದಯವಿಟ್ಟು ಹೇಳಬೇಕು ದೇಹಾತ್ಮವಿವೇಕವನ್ನು ಹೊಂದಲು ಅಶಿಸುವವರಿಗೆ ಈ ಜ್ಞಾನವೇ ಬಹಳ ಉತ್ಕೃಷ್ಟವಾದ ಸಾಧನ. ಮಹಾತ್ಮನಾದ ನೀನು ಇದನ್ನೂ ತಿಳಿದಿದ್ದೀಯೆ ಎಂದು ಭಾರ್ಗವನು ಪ್ರಶ್ನೆಮಾಡಲು ಪುಷ್ಕರನು ಹೇಳುತ್ತಾನೆ.

೨–೩. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ಗುಣಗಳು ಪಂಚಭೂತಗಳನ್ನು ಆಶ್ರಯಿಸಿಕೊಂಡಿವೆ. ಈ ಪಂಚಭೂತಗಳಲ್ಲಿ ಭೂಮಿ ಎಂಬುದು ಶಬ್ದವೇ ಮೊದಲಾದ ಐದು ಗುಣಗಳನ್ನು ಹೊಂದಿದೆ. ಜಲವು (ಗಂಧವನ್ನುಳಿದು) ನಾಲ್ಕು ಗುಣಗಳನ್ನು ಹೊಂದಿದೆ. ತೇಜಸ್ಸು (ಗಂಧರಸಗಳನ್ನುಳಿದು) ಮೂರು

**ಭೂಮೇರ್ಗುಣಾಂ ವಿಜಾನೀಯಾದಾಪಾಂತೇ ಗಂಧವರ್ಜಿತಾಃ ।**
**ರಸಗಂಧವಿಹೀನಾಸ್ತು ತೇಜಸಃ ಪರಿಕೀರ್ತಿತಾಃ ॥ ೪ ॥**

**ಗಂಧೋ ರಸಸ್ತಥಾ ರೂಪಂ ನಾಸ್ತಿ ವಾಯೋರ್ಭೃಗೂತ್ತಮ ।**
**ಗಂಧೋ ರಸಸ್ತಥಾ ರೂಪಂ ಸ್ಪರ್ಶಃ ಖೇ ನ ಚ ವಿದ್ಯತೇ ॥ ೫ ॥**

**ರಸೋ ಗಂಧಸ್ತಥಾ ರೂಪಂ ಸ್ಪರ್ಶನಂ ಶಬ್ದ ಏವ ಚ ।**
**ಭೂಮ್ಯಾದೀನಾಂ ಗುಣಾಃ ಪ್ರೋಕ್ತಾಃ ಪ್ರಧಾನಾ ಭೃಗುನಂದನ ॥ ೬ ॥**

**ಆಕಾಶಜಾನಿ ಸ್ರೋತಾಂಸಿತಥಾ ಶ್ರೋತ್ರಂ ವಿವಿಕ್ತತಾ ।**
**ಶ್ವಾಸೋಚ್ಛ್ವಾಸೌ ಪರಿಸ್ಪಂದೋ ವಾಕ್ಚ ಸಂಸ್ಪರ್ಶನಂ ತಥಾ ॥ ೭ ॥**

**ವಾಯವೀಯಾನಿ ಜಾನೀಯಾತ್ಸರ್ವಾಣ್ಯೇತಾನಿ ಪಂಡಿತಃ ।**
**ರೂಪಂ ಸಂದರ್ಶನಂ ಪಕ್ತಿಂ ಪಿತ್ತಮೂಷ್ಮಾಣಮೇವ ಚ ॥ ೮ ॥**

---

ಗುಣಗಳನ್ನು ಹೊಂದಿದೆ. ವಾಯುವು (ರೂಪರಸಗಂಧಗಳನ್ನುಳಿದು) ಎರಡು ಗುಣಗಳನ್ನು ಹೊಂದಿದೆ. ಆಕಾಶವೆಂಬುದು ಮಾತ್ರ ಯಾವಾಗಲೂ ಶಬ್ದವೆಂಬ ಒಂದೇಗುಣವನ್ನು ಹೊಂದಿರುತ್ತದೆ.

೪–೬. ಮೇಲೆ ಹೇಳಿರುವ ಐದು ಗುಣಗಳು ಭೂಮಿಯ ಗುಣಗಳೆಂದು ತಿಳಿಯಬೇಕು. ಕೊನೆಯಲ್ಲಿರುವ ಗಂಧವನ್ನು ಬಿಟ್ಟು ನಾಲ್ಕು ಗುಣಗಳು ಜಲಕ್ಕೆ ಸೇರಿದವು (ಇದು ಅಧ್ಯಾಹಾರಲಭ್ಯ) ರಸಗಂಧಗಳನ್ನು ಬಿಟ್ಟು ಶಬ್ದ ಸ್ಪರ್ಶರೂಪಗಳು ತೇಜಸ್ಸಿಗೆ ಸೇರಿದವು. ವಾಯುವಿನಲ್ಲಿ ಗಂಧರಸರೂಪಗಳನ್ನು ಬಿಟ್ಟು ಶಬ್ದಸ್ಪರ್ಶ ಗಳೆಂಬ ಎರಡು ಗುಣಗಳಿವೆ. ಆಕಾಶದಲ್ಲಿ ಮಾತ್ರ ಗಂಧ, ರಸ, ರೂಪ, ಸ್ಪರ್ಶ ಇವು ನಾಲ್ಕೂ ಇರುವುದಿಲ್ಲ ಶಬ್ದಮಾತ್ರವೇ ಇರುತ್ತದೆ ಭೂಮ್ಯಾದಿ ಮಹಾ ಭೂತ ಗಳ ಪ್ರಧಾನಗುಣಗಳನ್ನು ಈ ರೀತಿ ನಿನಗೆ ಹೇಳಿದ್ದೇನೆ.

೭–೯. ಶಬ್ದರೂಪವಾದ ಗುಣಸಂಬಂಧದಿಂದ ಆಕಾಶದಲ್ಲಿ (ತನ್ನ ಗುಣವನ್ನು ಮುಂದೆ ಮುಂದೆ ಸಂಕ್ರಮಿಸುವಂತೆ ಮಾಡುವ) ಪ್ರವಾಹಶಕ್ತಿಯುಂಟಾಗುತ್ತದೆ. ಕಿವಿಯೂ ಮತ್ತು ವಿವಿಕ್ತವಾಗಿರುವಿಕೆ (ಬಿಡುವು) ಇವೂ ಈ ಆಕಾಶದ ರೂಪಗಳು, ನಿಶ್ವಾಸೋಚ್ಛ್ವಾಸಗಳೂ, ಚಲನ ಶಕ್ತಿಯೂ, ವಾಕ್ಛಕ್ತಿಯೂ, ಸ್ಪರ್ಶೇಂದ್ರಿಯವೂ

ಮೇಧಾ ವರ್ಣಂ ಬಲಂ ಛಾಯಾ ತೇಜಃ ಶೌರ್ಯಂ ತಥೈವ ಚ ।
ಸರ್ವಾಣ್ಯೇತಾನಿ ಜಾನೀಯಾತ್ತೈಜಸಾನಿ ಶರೀರಿಣಾಂ ॥ ೯ ॥

ಆಂಭಸಾನೀಹ ರಸನಂ ಸ್ವೇದಃ ಕ್ಲೇದೋ ವಸಾ ತಥಾ ।
ರಸಾಸೃಕ್ಛುಕ್ರಮೂತ್ರಾದಿ ದೇಹೇ ದ್ರವಚಯಸ್ತಥಾ ॥ ೧೦ ॥

ಶೈತ್ಯಂ ಸ್ನೇಹಶ್ಚ ಧರ್ಮಜ್ಞ ತಥಾ ಶ್ಲೇಷ್ಮಾಣಮೇವ ಚ ।
ಪಾರ್ಥಿವಾನೀಹ ಜಾನೀಹಿ ಘ್ರಾಣಕೇಶನಖಾದಿ ಚ ॥ ೧೧ ॥

ಅಸ್ಥ್ನಾಂ ಸಮೂಹೋ ಧೈರ್ಯಂ ಚ ಗೌರವಂ ಸ್ಥಿರತಾ ತಥಾ ।
ಮಾತೃಜಾನಿ ಮೃದೂನ್ಯತ್ರ ತ್ವಕ್ಚ ಮಾಂಸಂ ಚ ಭಾರ್ಗವ ॥ ೧೨ ॥

ಹೃದಯಂ ಚ ತಥಾ ನಾಭಿಃ ಸ್ವೇದೋಮಜ್ಜಾ ಯಕೃತ್ತಥಾ ।
ಕ್ಲೋಮಾಂತಂ ಚ ಗುದಂ ರಾಮ ಆಮಸ್ಯಾಶಯಮೇವ ಚ ॥ ೧೩ ॥

---

ಸಹ ತನ್ನ ಗುಣಗಳಿಂದ ಕೂಡಿದ ವಾಯುವಿನ ಕಾರ್ಯಗಳ ರೂಪ, ಆ ರೂಪವನ್ನು ಗ್ರಹಿಸುವ ಚಕ್ಷುರಿಂದ್ರಿಯ ಮತ್ತು ಪಚನಶಕ್ತಿ, ಪಿತ್ತ, ಶಖೆ, ಬುದ್ಧಿವಿಶೇಷ, ವರ್ಣ, ಬಲ, ಕಾಂತಿ, ವರ್ಚಸ್ವಿತೆ, ಶೌರ್ಯ ಈ ಗುಣಗಳೆಲ್ಲವೂ ಪ್ರಾಣಿಗಳಿಗೆ ತನ್ನ ಗುಣಗಳಿಂದ ಕೂಡಿದ ತೇಜಸ್ಸಂಬಂಧದಿಂದ ಉಂಟಾಗುತ್ತವೆ. (ಪ್ರಾಣಿಗಳ ದೇಹವೆಲ್ಲವೂ ಪಂಚಭೂತ ಪರಿಣಾಮಿಗಳಾದುದರಿಂದ ಆ ಪಂಚಭೂತಸಂಬಂಧ ದಿಂದುಂಟಾಗುವ ಕಾರ್ಯವಿಶೇಷಗಳನ್ನು ಆಯಾಯ ಭೂತ ನಿರ್ದೇಶಪೂರ್ವಕ ವಾಗಿ ಇಲ್ಲಿ ಹೇಳುತ್ತಿರುವರು.)

೧೦-೧೧. ರಸನೇಂದ್ರಿಯ (ನಾಲಗೆಯ ಅಗ್ರದಲ್ಲಿರುವ ಇಂದ್ರಿಯ) ಮತ್ತು ಬೆವರು ನೆನೆಯುವಿಕೆ, ವಸಾ ಎಂಬ ದೇಹಧಾತು, ರಸವೆಂಬ ದೇಹಧಾತು, ರಕ್ತ, ಶುಕ್ರ, ಮೂತ್ರ ಮತ್ತು ದೇಹದಲ್ಲಿರುವ ದ್ರವವಸ್ತುಗಳು ಇವೆಲ್ಲವೂ ಗುಣಗಳಿಂದ ಕೂಡಿದ ಜಲದ ಕಾರ್ಯಗಳು ಮತ್ತು ಜಿಡ್ಡು ಶ್ಲೇಷ್ಮವೆಂಬ ದೇಹಧಾತು ಪ್ರಾಣೇಂದ್ರಿಯ (ಮೂಗಿನ ಅಗ್ರಭಾಗದಲ್ಲಿರುವುದು) ಕೂದಲು, ಉಗುರುಗಳು (ಪೃಥಿವೀ ಎಂಬ ಮಹಾಭೂತದ ಕಾರ್ಯವೆಂದರ್ಥ.)

೧೨-೧೪. ದೇಹದಲ್ಲಿರುವ ಮೂಳೆಗಳ ಸಮೂಹ ಮತ್ತು ಧೈರ್ಯ, ಗೌರವ, ಸ್ಥಿರತ್ವ ಈ ಗುಣಗಳೂ ಸಹ ಪೃಥಿವಿಯ ಸಂಬಂಧದಿಂದಲೇ ಉಂಟಾಗುತ್ತವೆ.

ಪಿತೃಜಾನಿ ಸ್ಥಿರಾಣ್ಯಗ್ರ್ಯಭೂಮಿಜಾನೀಹ ಯಾನಿ ತು ।
ಸ್ನಾಯುಶುಕ್ರಶಿರಾಶ್ಚೈವ ಆತ್ಮಜಾನಿ ನಿಬೋಧ ಮೇ ॥ ೧೪ ॥

ಕಾಮಃ ಕ್ರೋಧೋ ಭಯಂ ಹರ್ಷಃ ಧರ್ಮಾಧರ್ಮಾತ್ಮತಾ ತಥಾ ।
ಆಕೃತಿಃ ಸ್ವರವರ್ಣೌ ಚ ಚೇತನಾದ್ಯಂ ತಥಾ ವಯಃ ॥ ೧೫ ॥

ತಾಮಸಾನಿ ತಥಾಜ್ಞಾನಪ್ರಮಾದಾಲಸ್ಯ ತೃಟ್ ಕ್ಷುಧಃ ।
ಮೋಹಮಾತ್ಸರ್ಯವೈಗುಣ್ಯಶೋಕಾಯಾಸಭಯಾನಿ ಚ ॥ ೧೬ ॥

ಕಾಮಕ್ರೋಧೌ ತಥಾ ಶೌರ್ಯಂ ಯಜ್ಞೇಪ್ಸಾ ಬಹುಭಾಷಿತಾ ।
ಅಹಂಕಾರಃ ಪರಾವಜ್ಞಾ ರಾಜಸಾನಿ ಮಹಾಭುಜ ॥ ೧೭ ॥

---

ಈ ದೇಹದಲ್ಲಿ ಮೃದುವಾಗಿರುವ ಚರ್ಮ, ಮಾಂಸ, ಹೃದಯ, ನಾಭಿ, ಬಿವಸು, ಮಜ್ಜಾ ಎಂದು ಪ್ರಸಿದ್ಧವಾಗಿರುವ ಧಾತು, ಕರುಳು, ಮೂತ್ರಕೋಶ, ಗುದ, ಪುರೀಷಕೋಶ ಇವೆಲ್ಲವೂ ಮಾತೃಸಂಬಂಧದಿಂದ ಉಂಟಾಗುತ್ತವೆ. ಸ್ಥಿರವಾದ ಮುಖ್ಯಾವಯುವಗಳೂ ದೃಢವಾದ ಮಾಂಸಖಂಡ, ಶುಕ್ರ, ನರಗಳು ಇವು ತಂದೆಯ ಸಂಬಂಧದಿಂದ ಉಂಟಾಗುತ್ತವೆ ಮಾತಾಪಿತೃ ಸಂಬಂಧವಿಲ್ಲದೆ ಆ ಶರೀರಕ್ಕೆ ಯಜಮಾನನಾದ ಜೀವನ ಕರ್ಮಗತಿಯಿಂದ ಉಂಟಾಗುವ ಗುಣಗಳನ್ನು ಹೇಳು ತ್ತೇನೆ ಕೇಳು.

೧೫–೧೭. ವಿಷಯಾಭಿಲಾಷೆ, ಕ್ರೋಧ, ಭಯ. ಹರ್ಷ, ಧರ್ಮಾಧರ್ಮ ನಿಷ್ಠತೆ, ಆಕಾರ, ಸ್ವರ, ವರ್ಣ, ಚೈತನ್ಯಶಕ್ತಿ ಮತ್ತು ವಯೋವಸ್ಥಾ, ಇವು ಜೀವನ ಕರ್ಮಗತಿಯಿಂದುಂಟಾಗುತ್ತವೆ. ಮತ್ತು ತಮೋಗುಣಕಾರ್ಯವಾದ ಅಜ್ಞಾನ, ಪ್ರಮಾದ (ಮರವು) ಆಲಸ್ಯ, ಬಾಯಾರಿಕೆ, ಹಸಿವು, ಮತ್ಸರ, ನಿರ್ಗುಣಿತ್ವ, ದುಃಖ, ಆಯಾಸ, ಭಯ ಇವುಗಳೂ, ರಜೋಗುಣಕಾರ್ಯವಾದ ಕಾಮಕ್ರೋಧ, ಶೌರ್ಯ, ಯಜ್ಞಾದಿಗಳಲ್ಲಿ ಇಚ್ಛಾ, ಬಹುಭಾಷಿತ್ವ, ಅಹಂಕಾರ ಇತರರಲ್ಲಿ ತಿರಸ್ಕಾರಬುದ್ಧಿ, ಇವೂ ಸಹ ಉಂಟಾಗುತ್ತವೆ.

ಧರ್ಮೇಚ್ಛಾ ಮೋಕ್ಷಕಾಮಿತ್ವಂ ಪರಾ ಭಕ್ತಿಶ್ಚ ಕೇಶವೇ ।
ದಾಕ್ಷಿಣ್ಯಂ ವ್ಯವಸಾಯಶ್ಚ ಸಾತ್ವಿಕಾನಿ ವಿನಿರ್ದಿಶೇತ್ ॥ ೧೮ ॥

ಚತುರಃ ಕ್ರೋಧನೋ ಭೀರುರ್ಬಹುಭಾಷೀ ಕಲಿಪ್ರಿಯಃ ।
ಸ್ವಪ್ನೇ ಗಗನಗಶ್ಚೈವ ಬಹುವಾತೋ ನರೋ ಭವೇತ್ ॥ ೧೯ ॥

ಅಕಾಲಪಲಿತಃ ಕ್ರೋಧೀ ಮಹಾಪ್ರಜ್ಞೋ ರಣಪ್ರಿಯಃ ।
ಸ್ವಪ್ನೇ ಚ ದೀಪ್ತಿಮತ್ಪ್ರೇಕ್ಷೀ ಬಹುಪಿತ್ತೋ ನರೋ ಭವೇತ್ ॥ ೨೦ ॥

ಸ್ಥಿರಚಿತ್ತಃ ಸ್ಥಿರೋತ್ಸಾಹಃ ಸ್ಥಿರಾಂಗರಚನಾನ್ವಿತಃ ।
ಸ್ವಪ್ನೇ ಜಲಸಿತಾಲೋಕೀ ಬಹುಶ್ಲೇಷ್ಮಾ ನರೋ ಭವೇತ್ ॥ ೨೧ ॥

ರಸಸ್ತು ಪ್ರೀಣನೋ ದೇಹೇ ಜೀವನೋ ರುಧಿರಸ್ತಥಾ ।
ಲೇಪನಂ ಚ ತಥಾ ಮಾಂಸೇ ಮೇದಃ ಸ್ನೇಹಕರಂ ಚ ತತ್ ॥ ೨೨ ॥

---

೧೮-೧೯. ಸತ್ವಗುಣಕಾರ್ಯಗಳಾದ ಧರ್ಮಶ್ರದ್ಧೆ, ಮೋಕ್ಷೇಚ್ಛಾ, ಕೇಶವನಲ್ಲಿ ಅಪರಿಮಿತವಾದ ಭಕ್ತಿ, ದಾಕ್ಷಿಣ್ಯ, ಪ್ರಯತ್ನ ಇವುಗಳೂ ಉಂಟಾಗುತ್ತವೆ. ಯಾವ ಮನುಷ್ಯನಿಗೆ ದೇಹದಲ್ಲಿ ವಾತಸಂಬಂಧವು ಹೆಚ್ಚಾಗಿರುತ್ತದೆಯೋ ಅವನು ದಕ್ಷನಾಗಿಯೂ, ಕೋಪಿಯಾಗಿಯೂ, ಭಯಶಾಲಿಯಾಗಿಯೂ ಬಹಳ ಮಾತುಗಾರನಾಗಿಯೂ, ಕಲಹಪ್ರಿಯನಾಗಿಯೂ ಮತ್ತು ಸ್ವಪ್ನದಲ್ಲಿ ಗಗನಸಂಚಾರಿಯೂ ಆಗುತ್ತಾನೆ.

೨೦-೨೧. ದೇಹದಲ್ಲಿ ಹೆಚ್ಚಾದ ಪಿತ್ತಸಂಬಂಧವನ್ನು ಹೊಂದಿರುವವನು ಅಕಾಲದಲ್ಲಿ ನರೆತ ಕೂದಲು ಉಳ್ಳವನಾಗಿಯೂ, ಕೋಪಿಯಾಗಿಯೂ, ಬಹಳ ಬುದ್ಧಿವಂತನಾಗಿಯೂ, ಯುದ್ಧಪ್ರಿಯನಾಗಿಯೂ, ಸ್ವಪ್ನದಲ್ಲಿ ತೇಜಸ್ವಿಗಳಾದ ವಸ್ತುಗಳನ್ನು ನೋಡುವವನಾಗಿಯೂ ಆಗುತ್ತಾನೆ. ಹಾಗೆಯೇ ಹೆಚ್ಚಾದ ಶ್ಲೇಷ್ಮವನ್ನು ಹೊಂದಿರುವವನು ಸ್ಥಿರಚಿತ್ತನಾಗಿಯೂ, ಸ್ಥಿರವಾದಉತ್ಸಾಹವುಳ್ಳವನಾಗಿಯೂ ಸ್ಥಿರವಾದ ಅವಯವ ಬಂಧ ಉಳ್ಳವನಾಗಿಯೂ ಸ್ವಪ್ನದಲ್ಲಿ ನೀರನ್ನೂ ಬಿಳುಪಾದ ವಸ್ತುಗಳನ್ನು ನೋಡುವವನಾಗಿಯೂ ಆಗುತ್ತಾನೆ.

೨೨-೨೩. ದೇಹದಲ್ಲಿರುವ ರಸವೆಂಬ ಧಾತುವು ಪ್ರೀತಿಗೆ ಸಾಧನವಾಗಿಯೂ ರಕ್ತವು ಜೀವನಸಾಧನವಾಗಿಯೂ ಮಾಂಸವು ಎಲ್ಲಾ ಕಡೆಯಲ್ಲೂ ವ್ಯಾಪ್ತಿಗೆ ಸಾಧನ

ಧಾರಣಂ ತ್ವಸ್ಥಿಕಥಿತಂ ಮಜ್ಜಾ ಭವತಿ ಪೂರಿಣೀ ।
ಗರ್ಭೋತ್ಪಾದಕರಂ ಶುಕ್ರಂ ತಥಾ ವೀರ್ಯವಿವರ್ಧನಂ ॥ ೨೩ ॥

ತೇಜಃಪ್ರಾಣಕರಂ ನಿತ್ಯಂ ತತ್ರ ಜೀವೋ ವ್ಯವಸ್ಥಿತಃ ।
ಶುಕ್ರಾದಪಿ ಪರಂ ಸಾರಮಪೀತಂ ಹೃದಯೋಪಮಂ ॥ ೨೪ ॥

ಷಡಾಂಗಾನಿ ಪ್ರಧಾನಾನಿ ಕಥಯಿಷ್ಯಾಮಿ ತೇ ಶೃಣು ।
ದ್ವೌ ಬಾಹೂ ಸಕ್ಥಿನೀ ದ್ವೇ ಚ ಮೂರ್ಧಾ ಜಠರಮೇವ ಚ ॥ ೨೫ ॥

ಷಟ್ ತ್ವಚಶ್ಚ ಶರೀರೇಸ್ಮಿನ್ ಕೀರ್ತ್ಯಮಾನಾ ನಿಬೋಧ ಮೇ ।
ಬಾಹ್ಯತೋಽಹ್ಯಧರಾ ರಾಮ ತ್ವಚಾ ರುಧಿರಧಾರಿಣೀ ॥ ೨೬ ॥

ವಿಲಾಸಕಾರಿಣೀ ಚಾನ್ಯಾ ಚತುರ್ಥೀ ಕುಷ್ಠಕಾರಣೀ ।
ಪಂಚಮೀ ವಿದ್ರಧಿಸ್ಥಾನಂ ಷಷ್ಠೀ ಪ್ರಾಣಧರಾ ಮತಾ ॥ ೨೭ ॥

---

ವಾಗಿಯೂ ಮೇದಸ್ಸೆಂಬ ನಾಲ್ಕನೆಯ ಧಾತುವು ಸ್ನೇಹಕ್ಕೆ (ಜಿಡ್ಡು) ಸಾಧನವಾಗಿಯೂ, ಎಲುಬುಗಳು (ದೇಹದ) ಧಾರಣಕ್ಕೆ ಸಾಧಕವಾಗಿಯೂ, ಮಜ್ಜಾ ಎಂಬುದು ಪೂರಣಸಾಧನವಾಗಿಯೂ, ಶುಕ್ರವೆಂಬ ಏಳನೆಯ ಧಾತುವು ಗರ್ಭೋತ್ಪಾದಕವಾಗಿಯೂ ಶಕ್ತಿವರ್ಧಕವಾಗಿಯೂ ಆಗುತ್ತದೆ. (ಆಹಾರವು ರಸರಕ್ತಾದಿ ರೂಪದಿಂದ ಏಳುವಿಧವಾದ ಧಾತುರೂಪಹೊಂದಿ ಇಂತಹ ಫಲಕ್ಕಾಗಿ ದೇಹಕ್ಕೆ ಉಪಕಾರಿಯಾಗುತ್ತದೆ ಎಂದು ತಾತ್ಪರ್ಯ).

೨೪–೨೫. ಈ ಶುಕ್ರವೇ ತೇಜಸ್ಸಿಗೂ ಬಲಕ್ಕೂ ಸಹ ಯಾವಾಗಲೂ ಸಾಧನವಾಗತಕ್ಕದು! ಇದರಲ್ಲಿಯೇ ಜೀವನಸ್ಥಿತಿಯು ನೆಲೆಗೊಂಡಿದೆ. ಹೃದಯದಂತೆ ಮುಖ್ಯವಾಗಿರುವ ಈ ಶುಕ್ರಕ್ಕಿಂತಲೂ ಸಾರವಾದ ವಸ್ತುವು ಯಾವುದೂ ಇಲ್ಲ. ಈ ಶರೀರದಲ್ಲಿ ಎರಡು ಕೈಗಳು ಎರಡು ತೊಡೆಗಳು, ತಲೆ ಮತ್ತು ಜಠರ ಈ ಆರು ಅಂಗಗಳು ಪ್ರಧಾನವಾದುವೆಂದು ತಿಳಿ.

೨೬–೨೭. ಈ ಶರೀರದಲ್ಲಿರುವ ಆರುವಿಧವಾದ ತ್ವಕ್ಕುಗಳನ್ನೂ ಹೇಳುತ್ತೇನೆ ಕೇಳು. ಹೊರಗಡೆಯಲ್ಲಿ ಅಧರಾ ಎಂಬ ಚರ್ಮವೂ ಅದರ ಒಳಭಾಗದಲ್ಲಿ ರಕ್ತಕ್ಕೆ ಧಾರಕವಾದ ತ್ವಚಾ ಎಂಬ ಚರ್ಮವೂ, ವಿಲಾಸಕಾರಿಣೀ ಎಂಬ ಮತ್ತೊಂದು ಚರ್ಮವೂ, ಕುಷ್ಠಕಾರಿಣೀ ಎಂಬ ನಾಲ್ಕನೆಯ ಚರ್ಮವೂ, ವಿದ್ರಧಿ ಎಂಬ ವ್ಯಾಧಿಗೆ ಸ್ಥಾನವಾದ ಐದನೆಯ ಚರ್ಮವೂ, ಪ್ರಾಣಧರಾ ಎಂಬ ಆರನೆಯ ಚರ್ಮವೂ ಇವೆ.

ಕಲಾಃ ಸಪ್ತ ಸ್ಮೃತಾ ದೇಹೇ ತಾಸಾಂ ವಕ್ಷ್ಯಾಮಿ ಲಕ್ಷಣಂ ।
ಏಕಾ ಮಾಂಸಧರಾ ನಾಮ ಧಮನ್ಯೋ ಯತ್ರ ಸಂಸ್ಥಿತಾಃ　　|| ೨೮ ||

ಅಸೃಗ್ಧರಾ ದ್ವಿತೀಯೇ ತು ಯಕೃತ್ಪ್ಲೀಹಾಶ್ರಯಾ ಮತಾ ।
ಮೇದೋಧರಾ ತೃತೀಯಾ ಸ್ಯಾತ್ಸೂಕ್ಷ್ಮಸ್ಥೂಲಾಶ್ರಯಾ ತು ಯಾ || ೨೯ ||

ಮಜ್ಜಾಶ್ರಯಾ ಚತುರ್ಥೀ ತು ತಥಾ ಶ್ಲೇಷ್ಮಪರಾ ಮತಾ ।
ಪುರೀಷಧಾರಿಣೀ ಚಾನ್ಯಾ ಯಥಾ ಪಕ್ವಾಶಯೇ ಸ್ಥಿತೇಃ　　|| ೩೦ ||

ಷಷ್ಠೀ ಪಿತ್ತಧರಾ ನಾಮ ಜಠರಾಗ್ನೌ ಸಮಾಶ್ರಿತಾ ।
ಶುಕ್ರಾಶಯಾ ಶುಕ್ರಧರಾ ತಥಾ ಜ್ಞೇಯಾ ಚ ಸಪ್ತಮಿ　　|| ೩೧ ||

ಬುದ್ಧೀನ್ದ್ರಿಯಾಣಿ ಪಂಚಾತ್ರ ಶೋತ್ರಂ ಘ್ರಾಣಂ ಚ ಚಕ್ಷುಷೀ ।
ತ್ವಕ್ ತಥಾ ರಸನಾ ಚೈವ ಮಹಾಭೂತಾಶ್ರಯಾಣಿ ತು　　|| ೩೨ ||

---

೨೮-೩೧. ಈ ದೇಹದಲ್ಲಿ ಏಳು ಕಲೆಗಳಿವೆ. ಅವುಗಳ ಸ್ವರೂಪವನ್ನೂ ಹೇಳುತ್ತೇನೆ. ಕೇಳು. ಮಾಂಸಧರಾ ಎಂಬ ಕಲೆಯು ಮೊದಲನೆಯದು ಇದೇ ನರಗಳಿಗೆ ಆಶ್ರಯವಾಗಿದೆ ಅಸೃಗ್ಧರಾ ಎಂಬುದು ಎರಡನೆಯದು ಇದು ಹೊಟ್ಟೆಯ ಎಡಭಾಗ ದಲ್ಲಿರುವ|ಕಪ್ಪಾದ ಮಾಂಸಕ್ಕೂ ಎದೆಯ ಬಲಭಾಗದಲ್ಲಿರುವ ಹಸುರಾದ ಮಾಂಸಕ್ಕೂ ಆಶ್ರಯವಾಗಿದೆ· ಮೂರನೆಯದು ಮೇದೋಧರಾ, ಇದೇ ದೇಹದಲ್ಲಿರುವ ಸೂಕ್ಷ್ಮ ಮತ್ತು ಸ್ಥೂಲವಾದ ವಸ್ತುಗಳಿಗೆ ಆಶ್ರಯವಾಗಿದೆ. ಮಜ್ಜಾಶಯಾ ಎಂಬುದು ನಾಲ್ಕನೆಯದು. ಇದು ಶ್ಲೇಷ್ಮಕ್ಕೆ ಆಶ್ರಯವಾಗಿದೆ. ಪುರೀಷಧಾರಿಣೀ ಎಂಬುದು ಐದನೆಯದು ಇದು ಪಕ್ವವಾದ ಅನ್ನವು ನಿಲ್ಲುವ ಕೋಶಕ್ಕೆ ಆಶ್ರಯವಾಗಿದೆ. ಆರನೆಯದು ಪಿತ್ತಧರಾ. ಇದು ಜಠರಾಗ್ನಿಯನ್ನು ಆಶ್ರಯಿಸಿದೆ. ಶುಕ್ರಾಶಯಾ ಎಂಬುದು ಏಳನೆಯದು ಇದು ಶುಕ್ರಕ್ಕೆ ಆಶ್ರಯವಾಗಿದೆ. ಇವೇ ಏಳುವಿಧವಾದ ಕಲೆಗಳು.

೩೨-೩೪. ಈ ಶರೀರದಲ್ಲಿ ಶ್ರೋತ್ರ (ಕಿವಿ) ಘ್ರಾಣ (ಮೂಗು) ಕಣ್ಣುಗಳು ತ್ವಗೀಂದ್ರಿಯ (ಚರ್ಮ) ರಸನಾ (ನಾಲಿಗೆ) ಎಂಬ ಐದು ಇಂದ್ರಿಯಗಳು. ಇವು ಗಳೆಲ್ಲವೂ ಪಂಚಮಹಾಭೂತಗಳಿಗೆಅನುಬಂದಿಸಿದುವು. ಈ ಇಂದ್ರಿಯಗಳಿಗೆ ವಿಷಯ

ಇಂದ್ರಿಯಾರ್ಥಾಃ ತಥಾ ಪಂಚ ತೇಷಾಂ ನಾಮಾನಿ ಮೇ ಶೃಣು ।
ಶ್ರೋತ್ರಸ್ಯ ಶಬ್ದಃ ಕಥಿತೋ ಗಂಧೋ ಘ್ರಾಣಸ್ಯ ಪಾರ್ಥಿವಃ ॥ ೩೩ ॥

ರೂಪಂ ಚ ಚಕ್ಷುಷೋ ಜ್ಞೇಯಂ ತ್ವಕ್ಷ್ಣ ಸಂಸ್ಪರ್ಶನಂ ತಥಾ ।
ರಸನಸ್ಯ ರಸಶ್ಚೈವ ಮಹಾಭೂತಾಶ್ರಯಾಸ್ತು ತೇ ॥ ೩೪ ॥

ಕರ್ಮೇಂದ್ರಿಯಾಣಿ ಪಂಚಾತ್ರ ತೇಷಾಂ ನಾಮಾನಿ ಮೇ ಶೃಣು ।
ಪಾಯೂಪಸ್ಥಂ ಹಸ್ತಪಾದೌ ಜಿಹ್ವಾ ಚೈವಾತ್ರ ಪಂಚಮೀ ॥ ೩೫ ॥

ತೇಷಾಮರ್ಥಾಃ ತಥಾ ಪಂಚ ತಾನ್ ಪ್ರವಕ್ಷ್ಯಾಮ್ಯತಃ ಪರಂ ।
ಉತ್ಸರ್ಗಂ ಚ ತಥಾನಂದಃ ಆದಾನಗಮನೇ ತಥಾ ॥ ೩೬ ॥

ಇಂದ್ರಿಯಾಣಿ ದಶೈತಾನಿ ತೇಷಾಂ ವೈ ನಾಯಕಂ ಮನಃ ।
ಪಂಚ ಕರ್ಮೇಂದ್ರಿಯಾಣ್ಯತ್ರ ಪಂಚ ಬುದ್ಧೀಂದ್ರಿಯಾಣಿ ಚ ॥ ೩೭ ॥

---

ಗಳಾದ ಪದಾರ್ಥಗಳೂ ಐದು. ಶ್ರೋತ್ರೇನ್ದ್ರಿಯಕ್ಕೆ ಶಬ್ದವೂ, ಘ್ರಾಣೇಂದ್ರಿಯಕ್ಕೆ ಪೃಥಿವೀಸಂಬಂಧಿಯಾದ ಗಂಧವೂ, ಕಣ್ಣುಗಳಿಗೆ ರೂಪವೂ, ತ್ವಗಿಂದ್ರಿಯಕ್ಕೆ ಸ್ಪರ್ಶವೂ, ನಾಲಿಗೆಗೆ ರಸವೂ, ವಿಷಯಗಳಾಗುತ್ತವೆ. ಈ ವಿಷಯಗಳೂ ಆಕಾಶವೇ ಮೊದಲಾದ ಮಹಾಭೂತಗಳಿಗೆ ಸಂಬಂಧಿಸಿದುವು.

೩೫–೩೭. ಈ ದೇಹದಲ್ಲಿ ಕರ್ಮೇಂದ್ರಿಯಗಳು ಐದು, ಪಾಯು, ಉಪಸ್ಥ ಹಸ್ತ, ಪಾದ, ನಾಲಗೆ, ಈ ಐದು. ಕರ್ಮೇಂದ್ರಿಯಗಳಿಗೆ ಕಾರ್ಯಗಳನ್ನೂ ಹೇಳುತ್ತೇನೆ. ಉತ್ಸರ್ಗ (ಮಲಮೂತ್ರ ವಿಸರ್ಜನ) ಆನಂದ (ಉಪಸ್ಥೇಂದ್ರಿಯ ದಿಂದ ಉಂಟಾಗುವ ವಿಷಯಸುಖ) ಸ್ವೀಕಾರ ಮತ್ತು ಗಮನ, ಹೀಗೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಸೇರಿ ಹತ್ತು ಇಂದ್ರಿಯಗಳಿವೆ. ಈ ಇಂದ್ರಿಯಗಳಿಗೆಲ್ಲಾ ಮನಸ್ಸೇ ನಾಯಕನಾಗಿರುವುದು. ಒಟ್ಟಿನಲ್ಲಿ ಐದು ಕರ್ಮೇಂದ್ರಿಯಗಳೂ, ಐದು ಜ್ಞಾನೇಂದ್ರಿಯಗಳೂ, ಐದು ಇಂದ್ರಿಯವಿಷಯಗಳೂ, ಇವಕ್ಕೆ ಆಶ್ರಯವಾದ ಐದು ಮಹಾಭೂತಗಳೂ ಸಹ ಇಲ್ಲಿ ವಿವರಿಸಲ್ಪಟ್ಟುವು.

**ಇಂದ್ರಿಯಾರ್ಥಾಶ್ಚ ಪಂಚಾತ್ರ ಮಹಾಭೂತಾನಿ ಪಂಚ ಚ ।**
**ಇಂದ್ರಿಯೇಭ್ಯಃ ಪರಾಃ ಪ್ರೋಕ್ತಾಶ್ಚತ್ವಾರೋ ಭೃಗುನಂದನ ॥ ೩೮ ॥**

**ಮನೋ ಬುದ್ಧಿಸ್ತಥೈವಾತ್ಮಾ ಅವ್ಯಕ್ತಶ್ಚ ಮಹಾಭುಜ ।**
**ತದಾಶ್ರಯಾಣೀಂದ್ರಿಯಾಣಿ ಇಂದ್ರಿಯೇಭ್ಯಃ ಪರಾಶ್ಚ ತೇ ॥ ೩೯ ॥**

**ತತ್ತ್ವಾನ್ಯೇತಾನಿ ಚಾನೀಹ ಚತುರ್ವಿಂಶತಿಸಂಖ್ಯಯಾ ।**
**ಏಷಾಮೈಕ್ಯಂ ಮಹಾಭಾಗ ಪುರುಷಃ ಪಂಚವಿಂಶಕಃ ॥ ೪೦ ॥**

**ಸಂಯುಕ್ತಸ್ತೈಃ ವಿಯುಕ್ತಶ್ಚ ತಥಾ ಮತ್ಸ್ಯೋದಕೇ ಉಭೇ ।**
**ಮನಃ ಸಂಶಯಕೃನ್ನಿತ್ಯಂ ತಥಾ ಬುದ್ಧಿರ್ವಿವೇಚನೀ ॥ ೪೧ ॥**

---

೩೮–೪೦. ಈ ಇಂದ್ರಿಯಗಳಿಗಿಂತಲೂ, ಮನಸ್ಸು, ಬುದ್ಧಿ, ಜೀವಾತ್ಮ ಅವ್ಯಕ್ತವೆಂಬ ಗುಣತ್ರಯವಸ್ತು ಈ ನಾಲ್ಕೂ ಮೇಲ್ಪಟ್ಟವೆಂದು ಹೇಳಲಾಗಿದೆ. ಇಂದ್ರಿಯಗಳೆಲ್ಲವೂ ಈ ನಾಲ್ಕು ಪದಾರ್ಥಗಳಿಗೆ ಅಧೀನವಾಗಿವೆ. ಇಂದ್ರಿಯಗಳಿಗಿಂತಲೂ ಅವಕ್ಕೆ ನಿಯಾಮಕಗಳಾದ ಈ ನಾಲ್ಕು ವಸ್ತುಗಳೂ ಮೇಲ್ಪಟ್ಟವು. ಹೀಗೆ ತತ್ತ್ವಗಳೆಲ್ಲವೂ ಇಪ್ಪತ್ತನಾಲ್ಕು ಎಂದು ಪರಿಗಣಿಸಲ್ಪಟ್ಟಿವೆ. (ಜ್ಞಾ. ಇಂ. 5. ಕ. ಇಂ. 5. ಮಹಾಭೂತಗಳು 5. ವಿಷಯಗಳು 5. ಮನಸ್ಸು, ಬುದ್ಧಿ, ಆತ್ಮ, ಅವ್ಯಕ್ತ ಎಂದು 24) ಇವೆಲ್ಲವೂ ಸಂಘಾತದಿಂದ ಏಕರೂಪವಾಗಿ ದೇಹವಾಗಿ ಪರಿಣಮಿಸುತ್ತವೆ. ಪುರುಷನೆಂಬುವವನು ಇಪ್ಪತ್ತೈದನೆಯವನಾಗುತ್ತಾನೆ. ಇಂತಹ ಪುರುಷನು,

೪೧–೪೩. ನೀರಿನಲ್ಲಿರುವ ಮೀನಿನಂತೆ ಸಂಘಾತರೂಪವಾಗಿರುವ ಈ ತತ್ತ್ವಗಳೊಡನೆ ಸಂಯೋಗವನ್ನೂ, ವಿಯೋಗವನ್ನೂ ಹೊಂದುತ್ತಿರುವನು. ಮೀನುಗಳಿಗೆ ನೀರೇ ಆಶ್ರಯವಾಗಿರುವಂತೆ ಪುರುಷನಿಗೆ ಈ ಸಂಘಾತವೇ ಆಶ್ರಯವಾಗಿದೆ. (ಮೀನು ಒಂದು ನೀರನ್ನು ಬಿಟ್ಟು ಮತ್ತೊಂದು ನೀರನ್ನು ಸೇರುವಂತೆ ಈ ಪುರುಷನೂ ಸಹ ಅನೇಕ ದೇಹಗಳನ್ನು ಆಶ್ರಯಿಸುತ್ತಾನೆ. ಇದು ಸಂಯೋಗವಿಯೋಗ ಮಾತ್ರದಲ್ಲಿ ದೃಷ್ಟಾಂತವೆಂದು ಭಾವಿಸಬೇಕು. ಪುರುಷನಿಗೂ, ದೇಹಕ್ಕೂ ಇರುವ ಸಂಬಂಧವು ಇದೇ ರೀತಿಯದಲ್ಲ) ಈ ತತ್ತ್ವಗಳಲ್ಲಿ ಸೇರಿರುವ ಮನಸ್ಸು ಯಾವಾಗಲೂ

ಆತ್ಮಾ ಜೀವಃ ಸ್ಮೃತೋ ರಾಮ ಯೋ ಭೋಕ್ತಾ ಸುಖದುಃಖಯೋಃ ।
ಅವ್ಯಕ್ತೋ ಮಿಶ್ರಿತಾನೀಹ ರಜಃಸತ್ವತಮಾಂಸಿ ಚ ॥ ೪೨ ॥

ಪುರುಷಸ್ತ್ವಪರೋ ಜ್ಞೇಯೋ ಯಶ್ಚ ಸರ್ವಗತೋ ಮಹಾನ್ ।
ಚತುರ್ವಿಂಶತಿಕಾತ್ಸಂಖ್ಯಾದ್ಯಃ ಸ ನಿತ್ಯಃ ಪೃಥಕ್ ಸ್ಥಿತಃ ॥ ೪೩ ॥

ಏಕತ್ರಿತಾನಿ ತತ್ತ್ವಾನಿ ಪುರುಷಸ್ಯ ತಥೈಕತಃ ।
ನ ಚೈವ ವ್ಯತಿರಿಕ್ತಾನಿ ತತ್ತ್ವಾನಿ ಪುರುಷಾತ್ಪರಂ ॥ ೪೪ ॥

---

ಸಂಶಯವೆಂಬ ಚಿತ್ತವೃತ್ತಿಗೆ ಕಾರಣವಾಗುತ್ತದೆ. ಬುದ್ಧಿ ಎಂಬುದು ವಿವೇಚನಾ ರೂಪವಾದ ಚಿತ್ತವೃತ್ತಿಗೆ ಕಾರಣವಾಗುತ್ತದೆ. ಆತ್ಮಾ ಎಂಬುವನು ದೇಹಸಂಬಂಧ ದಿಂದುಂಟಾಗುವ ಸುಖದುಃಖಗಳಿಗೆ ಭೋಕ್ತೃವಾಗಿರುವ ಜೀವಾತ್ಮನು. ಅವ್ಯಕ್ತ ವೆಂದರೆ ರಜಸ್ಸತ್ವತಮೋಗುಣಗಳ ಸಂಯೋಗರೂಪವಾದ ಪ್ರಕೃತಿ ಎಂಬ ಅಚೇತನ ವಸ್ತು, ಪುರುಷನೆಂದು ಹೇಳಿರುವ ಇಪ್ಪತ್ತೈದನೆಯವನು. ಸರ್ವವ್ಯಾಪಕನಾಗಿಯೂ, ಉತ್ಕೃಷ್ಟನಾಗಿಯೂ ಇರುವ ಪರಮಾತ್ಮನು. ಇವನು ಎಲ್ಲಕ್ಕೂ ನಿಯಾಮಕ ನಾಗಿರುವುದರಿಂದ ಸಂಘಾತಾತ್ಮಕವಾದ ದೇಹಕ್ಕೂ, ಜೀವಾತ್ಮನಿಗೂ ಸಹ ನಿಯಾಮಕ ನಾಗಿರುತ್ತಾನೆಂದು ತಿಳಿಯಬೇಕು. ಈ ದೃಷ್ಟಿಯಿಂದಲೇ ಹಿಂದೆ ಹೇಳಿರುವ ಮತ್ಸ್ಯೋದಕ ದೃಷ್ಟಾಂತವು ಸಂಬಂಧಮಾತ್ರಕ್ಕೆ ನಿದರ್ಶನವೆಂದು ತಿಳಿಯಬೇಕು. ಸುಖದುಃಖ ಭೋಕ್ತೃತ್ವವನ್ನು ಜೀವನಿಗೆ ಹೇಳಿರುವುದರಿಂದ ಇಲ್ಲಿ ಹೇಳಿರುವ ಸರ್ವವ್ಯಾಪಕನಾದ ಪರಮಾತ್ಮನಿಗೆ ದೇಹದಲ್ಲಿದ್ದರೂ ಆ ದೇಹಾನುಬಂಧಿಗಳಾದ ಸುಖದುಃಖಭೋಗವು ಇಲ್ಲವೆಂದು ಹೇಳಿದಂತಾಯಿತು. ಹಿಂದೆ ಹೇಳಿರುವ ಪ್ರಕೃತಿ, ಪ್ರಾಕೃತ ವಸ್ತುರೂಪಗಳಾದ ಇಪ್ಪತ್ತನಾಲ್ಕು ತತ್ತ್ವಗಳಿಗಿಂತಲೂ ಈ ಪರಮಾತ್ಮನು ನಿರ್ವಿಕಾರನಾಗಿರುವುದರಿಂದಲೂ, ನಿತ್ಯನಾಗಿರುವುದರಿಂದಲೂ ಬೇರೆಯಾಗಿಯೇ ಇರುತ್ತಾನೆ. ಬೇರೆ ಬೇರೆ ನಾಮಗಳಿಂದ ವ್ಯವಹರಿಸಲ್ಪಡುವ ವಿಕಾರಗಳು ಈ ಪರಮಾತ್ಮನಿಗೆ ಇಲ್ಲವೆಂದು ತಾತ್ಪರ್ಯ.

೪೪-೪೫. ಈ ತತ್ತ್ವಗಳೆಲ್ಲವೂ ದೇಹರೂಪದಿಂದ ಏಕರೂಪತೆಯನ್ನು ಹೊಂದಿರುವಾಗ ಪುರುಷನೂ ಅಲ್ಲಿ ಒಂದುಕಡೆ ನಿಯಾಮಕನಾಗಿಯೇ ಇರುತ್ತಾನೆ. ಆದರೆ ಈ ತತ್ತ್ವಗಳೆಲ್ಲವೂ ಆ ಪುರುಷನಿಂದ ಬೇರೆಯಾಗಿ ಯಾವಾಗಲೂ ಇರುವು ದಿಲ್ಲ. (ಅಂದರೆ ಸಂಘಾತಭಾವವನ್ನು ಹೊಂದಿದಾಗಲೂ, ಹೊಂದದಿರುವಾಗಲೂ, ಸಹ ಸರ್ವವ್ಯಾಪಿಯಾದ ಆ ಪುರುಷನ ಸಂಬಂಧವು ತಪ್ಪುವುದೇ ಇಲ್ಲವೆಂದು

**ಪ್ರಕೃತಿಃ ಪುರುಷೋ ರಾಮ ನಿಷ್ಕಲಃ ಪಂಚವಿಂಶಕಃ ।**
**ವಿಕೃತಿಸ್ತಸ್ಯ ವಿಜ್ಞೇಯೋ ಶೇಷಸ್ತತ್ತ್ವಗಣೋ ಬುಧೈಃ (ಬುಧಃ) ॥ ೪೫ ॥**

**ಸರ್ವತಃ ಪಾಣಿಪಾದೋಽಸೌ ಸರ್ವತೋಽಕ್ಷಿ ಶಿರೋಮುಖಃ ।**
**ಪುರುಷಃ ಸ ಪರೋ ಜ್ಞೇಯಃ ಸರ್ವಶಕ್ತಿಸ್ತು ಸರ್ವತಃ ॥ ೪೬ ॥**

**ನಾದಿರ್ನಮಧ್ಯೋ ನೈವಾಂತಃ ವ್ಯಾಪ್ತಿಸಂಭವಯೋರ್ದ್ವಯೋಃ ।**
**ಯಸ್ಯ ಜಾನಂತಿ ಮುನಯೋ ಯಸ್ತಂ ವೇದ ಸ ವೇದವಿತ್ ॥ ೪೭ ॥**

**ಸ ಯಾತಿ ಪರಮಂ ಸ್ಥಾನಂ ಯೋ ವೇತ್ತಿ ಪುರುಷಂ ಪರಂ ।**
**ಏತದೇವ ಚ ವಿಜ್ಞಾನಂ ಪ್ರಸ್ತುತಂ ಶೃಣು ಭಾರ್ಗವ ॥ ೪೮ ॥**

---

ತಾತ್ಪರ್ಯ ) ಸರ್ವವಸ್ತುಗಳಿಗೂ ವಸ್ತುತ್ವ ಸಂಪಾದಕವಾದ ಪರಮಾತ್ಮಸಂಬಂಧವು ನಿತ್ಯವೆಂದೂ ತಾತ್ಪರ್ಯ. ಇಪ್ಪತ್ತೈದನೆಯವನಾದ ಈ ಪುರುಷನು ನಿರ್ವಿಕಾರ ನಾಗಿಯೇ ಇದ್ದು ಎಲ್ಲಾ ವಸ್ತುಗಳಿಗೂ (ಪ್ರಕೃತಿ) ಕಾರಣನಾಗುತ್ತಾನೆ. ಆದುದ ರಿಂದ ಉಳಿದ ತತ್ತ್ವಸಮೂಹವೆಲ್ಲವೂ ಇದರ ವಿಕೃತಿ (ಕಾರ್ಯ) ಗಳೆಂದೇ ಪಂಡಿತರು ತಿಳಿಯಬೇಕು.[1]

೪೬-೪೮ ಇಂತಹ ಪರಮಾತ್ಮನು ಎಲ್ಲಾ ಕಡೆಯಲ್ಲೂ ಹಸ್ತಪಾದಗಳುಳ್ಳವ ನಾಗಿಯೂ, ಎಲ್ಲಾ ಕಡೆಯಲ್ಲಿಯೂ ಕಣ್ಣು, ಮುಖ, ತಲೆ ಇವುಗಳುಳ್ಳವನಾಗಿಯೂ ಇರುತ್ತಾನೆ. ಸರ್ವವ್ಯಾಪಿಯಾಗಿಯೂ, ಸರ್ವಶಕ್ತನಾಗಿಯೂ ಇರುವ ಈ ಮಹಾ ಪುರುಷನೇ ಎಲ್ಲಕ್ಕೂ ಮೇಲ್ಪಟ್ಟ ಉತ್ತಮ ವಸ್ತುವೆಂದು ತಿಳಿಯಬೇಕು ಯಾವ ಇಂತಹ ಪರಮಾತ್ಮನ ಸರ್ವವ್ಯಾಪ್ತಿಗೂ, ಅವತಾರಗಳಿಗೂ, ಸಹ ಆದಿಯೇ ಇಲ್ಲವೋ, ಅಂತ್ಯವೂ ಇಲ್ಲವೋ, ಮಧ್ಯವೂ ಇಲ್ಲವೋ (ಕಾಲಪರಿಚ್ಛೇದಕ್ಕೆ ಗುರಿಯಾಗುವುದಿಲ್ಲವೆಂದು ತಾತ್ಪರ್ಯ.) ಇಂತಹ ಪರಮಾತ್ಮನನ್ನು ಮುನಿಗಳು ತಮ್ಮ ಯೋಗಬಲದಿಂದ ತಿಳಿಯುತ್ತಾರೆ. ಯಾವನು ಇಂತಹ ಪರವಸ್ತುವನ್ನು

---

1 ನಿರ್ವಿಕಾರನಾದ ಪರಮಾತ್ಮನು ಪ್ರಕೃತಿ ಮತ್ತು ಜೀವ ಇವುಗಳನ್ನು ಶರೀರವನ್ನಾಗಿ ಹೊಂದಿ ತಾನೇ ಮುಖ್ಯಕಾರಣನಾಗುತ್ತಾನೆ. ಪ್ರಕೃತಿಯು ಪರಿಣಾಮಿಯಾದುದರಿಂದ ದೇಹೇಂದ್ರಿಯ ರೂಪದಿಂದ ಸಂಘಾತಾತ್ಮಕವಾಗುತ್ತದೆ. ಜೀವನೂ ಸಹ ಜ್ಞಾನಸಂಕೋಚ ವಿಕಾಸಗಳೆಂಬ ಸ್ವಭಾವಪರಿಣಾಮವನ್ನು ಹೊಂದುತ್ತಾನೆ ಇವೆರಡಕ್ಕಿಂತಲೂ ನಿರ್ವಿಕಾರನಾಗಿ ನಿಯಾಮಕನಾಗಿರುವ ಪರಮಾತ್ಮನು ಮೇಲ್ಪಟ್ಟವನೆಂದು ತಾತ್ಪರ್ಯ.

**ಸಪ್ತಾಶಯಾಃ ಸ್ಮೃತಾ ದೇಹೇ ಶೃಣು ತಾನಪಿ ಭಾರ್ಗವ ।**
**ಆಶಯೋ ರುಧಿರಸ್ಯೈಕಃ ಕಫಸ್ಯ ಚ ತಥಾ ಪರಃ ॥ ೪೯ ॥**

**ಆಮಪಿತ್ತಾಶಯೌ ಚಾನ್ಯೌ ಜ್ಞೇಯಃ ಪಕ್ವಾಶಯೋಽಪರಃ ।**
**ವಾಯುಮೂತ್ರಾಶಯೌ ಚಾನ್ಯೌ ಆಶಯಾಃ ಸಪ್ತ ಕೀರ್ತಿತಾಃ ॥ ೫೦ ॥**

**ಸ್ತ್ರೀಣಾಂ ಗರ್ಭಾಶಯೋ ರಾಮ ಪಿತ್ತಪಕ್ವಾಶಯಾಂತರೇ ।**
**ಅಷ್ಟಮಃ ಸ ಭವೇತ್ತಾಸಾಂ ಯತ್ರ ಗರ್ಭಃ ಸ ತಿಷ್ಠತಿ ॥ ೫೧ ॥**

---

ತಿಳಿಯುತ್ತಾನೆಯೋ ಅವನೇ ವೇದಜ್ಞನು ವೇದಗಳ ರಹಸ್ಯವನ್ನು ತಿಳಿದವನು. ದೇಹಿಯಾದವನಿಗೆ ಇಂತಹ ತಿಳಿವಳಿಕೆಯೇ ಮುಖ್ಯವಾದುದು ಇದೇ ವಿಜ್ಞಾನ. (ದೇಹದ ಸ್ವರೂಪವನ್ನು ತಿಳಿಯತಕ್ಕವನು ಪಂಚಭೂತಾತ್ಮಕವಾದ ದೇಹದ ಸ್ವರೂಪವನ್ನು ತಿಳಿದ ಮಾತ್ರದಿಂದ ಕೃತಕೃತ್ಯನಾಗಲಾರನು. ದೇಹಕ್ಕಿಂತ ಬೇರೆಯಾಗಿ ಸುಖದುಃಖಭೋಕ್ತೃವಾದ ಜೀವಾತ್ಮನನ್ನು ತಿಳಿಯುವಂತೆಯೇ ಸರ್ವವ್ಯಾಪಕನಾಗಿ ಅಲ್ಲಿಯೂ ಅಂತರ್ಯಾಮಿ ರೂಪದಿಂದ ನೆಲಸಿರುವ ಪರಮಾತ್ಮನನ್ನೂ ಬೇರೆಯಾಗಿ ಸ್ವರೂಪಸ್ವಭಾವಗಳಿಂದ ತಿಳಿದಲ್ಲಿ ಆಗಲೇ ಅವನು ಕೃತಕೃತ್ಯನಾಗುವನು. ವಿಜ್ಞಾನಿಯಾಗುವನೆಂದು ತಾತ್ಪರ್ಯ. ಸಂಪುಟದಲ್ಲಿರುವ ರತ್ನವನ್ನು ತಿಳಿಯಲು ಸಂಪುಟಜ್ಞಾನವನ್ನು ಅಪೇಕ್ಷಿಸುವಂತೆ ಅಂತರ್ಯಾಮಿಯಾಗಿರುವ ಪರಮಾತ್ಮನ ಜ್ಞಾನಕ್ಕಾಗಿಯೇ ಸಂಪುಟದಂತಿರುವ ಜೀವಾತ್ಮನ ಜ್ಞಾನವು ಅಪೇಕ್ಷಿಸಲ್ಪಡುತ್ತದೆಯಾದುದರಿಂದ ದೇಹಕ್ಕಿಂತ ಬೇರೆಯಾಗಿರುವ ಜೀವಾತ್ಮನನ್ನು ತಿಳಿದ ಮಾತ್ರದಿಂದ ಕೃತಕೃತ್ಯತೆಯುಂಟಾಗಲಾರದೆಂದೂ ತಾತ್ಪರ್ಯ.)

೪೯–೫೧. ಈ ದೇಹದಲ್ಲಿ ಏಳು ಕೋಶಗಳಿವೆ. ಅವುಗಳನ್ನೂ ಹೇಳುತ್ತೇನೆ ಕೇಳು, ರಕ್ತಕೋಶವು ಮೊದಲನೆಯದು. ಕಫದ ಕೋಶವು ಎರಡನೆಯದು. ಆಮಕೋಶ, ಪಿತ್ತಕೋಶಗಳು ಮೂರು ಮತ್ತು ನಾಲ್ಕನೆಯವು. ಪಕ್ವಕೋಶವು ಐದನೆಯದು. ವಾಯುಕೋಶ, ಮೂತ್ರಕೋಶಗಳು ಆರು ಮತ್ತು ಏಳನೆಯವುಗಳು. ಸ್ತ್ರೀಯರಿಗೆ ಪಿತ್ತಕೋಶಕ್ಕೂ, ಪಕ್ವಕೋಶಕ್ಕೂ ಮಧ್ಯದಲ್ಲಿ ಗರ್ಭಕೋಶವಿರುತ್ತದೆ. ಅದೂ ಸೇರಿ ಸ್ತ್ರೀಯರಿಗೆ ದೇಹದಲ್ಲಿ ಎಂಟು ಕೋಶಗಳಿರುತ್ತವೆ. ಆ ಗರ್ಭಕೋಶದಲ್ಲಿಯೇ ಗರ್ಭವು ಉಂಟಾಗುತ್ತವೆ.

ಋತೌ ವಿಕೋಶಾ ಭವತಿ ಯೋನಿಃ ಕಮಲವತ್ಸದಾ ।
ಗರ್ಭಾಶಯೇ ತತಃ ಶುಕ್ರಂ ಧತ್ತೇ ರಕ್ತಸಮನ್ವಿತಃ ॥ ೫೨ ॥

ಅನ್ಯತ್ರ ಕಾಲೇ ಮುಕುಲಾ ಯೋನಿರ್ಭವತಿ ಯೋಷಿತಾಂ ।
ನ್ಯಸ್ತಂ ಶುಕ್ರಮತೋ ಯೋನೌ ನೈತಿ ಗರ್ಭಾಶಯಂ ಮುನೇ ॥ ೫೩ ॥

ಋತಾವಪಿ ಚ ಯೋನಿಶ್ಚೇದ್ವಾತಪಿತ್ತಕಫಾವೃತಾ ।
ಭವೇತ್ತಸ್ಯಾವಿಶೌಚಾರ್ಥಂ ನೈವ ತಸ್ಯಾಃ ಪ್ರಜಾಯತೇ ॥ ೫೪ ॥

ವೃಕ್ಕಾ ತು ಪುಪ್ಪುಸಪ್ಲೀಹಂ ಹೃತ್ಕ್ಲೋಷ್ಮಾಂಗಯಕೃದ್ಘನಾಃ ।
ತಂಡುಲಶ್ಚ ಮಹಾಭಾಗ ನಿಬದ್ಧಾನ್ಯಾಶಯೇ ತು ತೇ ॥ ೫೫ ॥

ರಸಸ್ಯ ಪಚ್ಯಮಾನಸ್ಯ ಸಾರಾದ್ಭವತಿ ದೇಹಿನಾಂ ।
ಪ್ಲೀಹಾ ಯಕೃಚ್ಚ ಧರ್ಮಜ್ಞ ರಕ್ತಫೇನಾಚ್ಚ ಪುಕ್ಕಸಃ ॥ ೫೬ ॥

---

೫೨-೫೩. ಋತುಕಾಲದಲ್ಲಿ (ಅಂದರೆ ಋತುವಾದ ಹದಿನಾರು ದಿನಗಳವರೆಗೆ) ಸ್ತ್ರೀಯರ ಯೋನಿಯು ಕಮಲದಂತೆ ವಿಕಾಸಹೊಂದಿರುತ್ತದೆ. ಆದುದರಿಂದ ಆ ಕಾಲದಲ್ಲಿ ಯೋನಿಯಲ್ಲಿ ಬಿದ್ದ ಪುರುಷರ ವೀರ್ಯವು ರಕ್ತದಿಂದೊಡಗೂಡಿ ಗರ್ಭಾಶಯದಲ್ಲಿ ಗರ್ಭರೂಪವಾಗಿ ನಿಲ್ಲುತ್ತದೆ. ಇತರ ಕಾಲದಲ್ಲಿ ಆ ಯೋನಿಯು ಮೊಗ್ಗಿನಂತೆ ಸಂಕುಚಿತವಾಗಿರುವುದರಿಂದ ಅದರಲ್ಲಿ ಬಿದ್ದ ವೀರ್ಯವು ಗರ್ಭಾಶಯವನ್ನು ಹೊಂದಿ ಗರ್ಭರೂಪವಾಗಿ ಪರಿಣಮಿಸುವುದಿಲ್ಲ.

೫೪-೫೫. ಋತುಕಾಲದಲ್ಲಿಯೂ ಕೂಡ ಯೋನಿಯು ವಾತಪಿತ್ತ ಕಫಗಳಿಂದ ಕೂಡಿದುದಾದರೆ ಆ ಯೋನಿಯಿಂದ ಪ್ರಜೋತ್ಪತ್ತಿಯಾಗುವುದಿಲ್ಲ. ಈ ಆಶಯಗಳಲ್ಲಿ ವೃಕ್ಕಾ ಎಂಬ ಮಾಂಸವಿಶೇಷವೂ, ಪುಪ್ಪ, ಮತ್ತು ಪ್ಲೀಹಾ, ಹೃತ್ಕ್ಲೋಷ್ಮಾಂಗ, ಘನವಾದ ಯಕೃತ್ತು ಮತ್ತು ಅನ್ನವೇ ಮೊದಲಾದ ಆಹಾರಪದಾರ್ಥಗಳೂ, ಆಶ್ರಯ ಹೊಂದುತ್ತವೆ.

೫೬-೫೭. ಆಹಾರದಲ್ಲಿರುವ ರಸವು ಜಠರಾಗ್ನಿಯಿಂದ ಪಾಕಹೊಂದಿ ರಕ್ತ ರೂಪವಾಗುತ್ತದೆ. ರಸದ ಸಾರಭೂತವಾದ ಆ ರಕ್ತದಿಂದ ಪ್ಲೀಹಾ ಎಂಬ ಮಾಂಸವೂ ಯಕೃತ್ತೂ ಉಂಟಾಗುತ್ತವೆ. ಬುದ್ಬುದರೂಪವಾದ ಆ ರಕ್ತದಿಂದ ಪುಕ್ಕಸವೆಂಬ

ರಕ್ತಕಿಟ್ಟಾಚ್ಚ ಭವತಿ ತಥಾ ದಂಡಕಸಂಜ್ಞಕಃ ।
ಮೇದೋ ರಕ್ತಪ್ರಸಾದಾಚ್ಚ ವೃಕ್ಕಯೋಃ ಸಂಭವಃ ಸ್ಮೃತಃ ॥ ೫೭ ॥

ರಕ್ತಮಾಂಸಪ್ರಸಾದಾಚ್ಚ ಭವಂತ್ಯನ್ತ್ರಾಣಿ ದೇಹಿನಾಂ ।
ಸಾರ್ಧತ್ರಿವ್ಯೋಮಸಂಖ್ಯಾನಿ ತಾನಿ ಸ್ತ್ರೀಣಾಂ ವಿನಿರ್ದಿಶೇತ್ ॥ ೫೮ ॥

ತ್ರಿವ್ಯೋಮಾನಿ ತಥಾ ಸ್ತ್ರೀಣಾಂ ಪ್ರಾಹುರ್ವೇದವಿದೋ ಜನಾಃ ।
ರಕ್ತವಾಯುಸಮಾಯೋಗಾತ್ಕಾಲೋ ಯಸ್ಯೋದ್ಭವಃ ಸ್ಮೃತಃ ॥ ೫೯ ॥

ಕಫಪ್ರಸಾದಾದ್ಭವತಿ ಹೃದಯಂ ಪದ್ಮಸನ್ನಿಭಂ ।
ಅಧೋಮುಖಂ ತತ್ಸುಷಿರಂ ಯತ್ರ ಜೀವೋ ವ್ಯವಸ್ಥಿತಃ ॥ ೬೦ ॥

ಚೈತನ್ಯಾನುಗತಾ ಭಾವಾಃ ಸರ್ವೇ ತತ್ರ ವ್ಯವಸ್ಥಿತಾಃ ।
ತಸ್ಯ ವಾಮೇ ತಥಾ ಪ್ಲೀಹಾ ದಕ್ಷಿಣೇ ಚ ತಥಾ ಯಕೃತ್ ॥ ೬೧ ॥

---

ರಕ್ತದ ಘನೀಭಾವ ಉಂಟಾಗುತ್ತದೆ. ಆ ರಕ್ತದ ಘನೀಭಾವದಿಂದ ದಂಡಕವೆಂಬ ಮಾಂಸವಿಶೇಷವುಂಟಾಗುತ್ತದೆ. ಇದೇ ಮೇದಸ್ಸು. ರಕ್ತವು ಕಲಕಲ್ಪಡದೆ ಪ್ರಸನ್ನವಾಗಿದ್ದಲ್ಲಿ ಅದರಿಂದ ವೃಕ್ಕಾ ಎಂಬ ಸ್ವಚ್ಛವಾದ ಮಾಂಸವೂ ಉಂಟಾಗುತ್ತದೆ.

೫೮–೬೦. ಪ್ರಸನ್ನವಾದ ರಕ್ತಮಾಂಸಗಳಿಂದ ಅಂತ್ರ (ಕರುಳು) ವೆಂಬ ಮಾಂಸಗಳು ಉಂಟಾಗುತ್ತವೆ. ಈ ಅಂತ್ರಗಳು ಸ್ತ್ರೀಯರಿಗೆ ಹದಿಮೂರು ಇರುತ್ತವೆಂದು ತಿಳಿಯಬೇಕು. ವೇದಜ್ಞರೂ ಸಹ ಸ್ತ್ರೀಯರಿಗೆ ಇವು ಹದಿಮೂರು ಎಂದು ಹೇಳುತ್ತಾರೆ. ಯಾವ ಸಮಯದಲ್ಲಿ ರಕ್ತ, ವಾಯು ಇವುಗಳ ಪರಸ್ಪರ ಸಂಬಂಧವು ಹೃದಯದಲ್ಲಿ ಉಂಟಾಗುತ್ತದೆಯೋ ಆ ಕಾಲದಲ್ಲಿ ಕಫವು ಪ್ರಸನ್ನವಾಗಿರುವುದರಿಂದ ಪದ್ಮದಂತಿರುವ ಹೃದಯವು ಕೆಳಮೊಖವಾಗುತ್ತದೆ. ಆ ಹೃದಯದ ರಂಧ್ರದಲ್ಲಿ ಜೀವನು ಇರುತ್ತಾನೆ

೬೧–೬೨. ಚೈತನ್ಯಕ್ಕೆ ಅನುಬಂಧಿಸುವ ಎಲ್ಲಾ ಧರ್ಮಗಳೂ ಆ ಜೀವನಲ್ಲಿ ನೆಲಸಿವೆ. ಆ ಹೃದಯದ ಎಡಭಾಗದಲ್ಲಿ ಪ್ಲೀಹಾ ಎಂಬ ಮಾಂಸಗ್ರಂಥಿಯೂ, ಬಲಭಾಗದಲ್ಲಿ ಯಕೃತ್ತು ಎಂಬ ಕರುಳೂ ಇವೆ. ಹಾಗೆಯೇ ಪದ್ಮಾಕಾರವಾದ ಆ ಹೃದಯದ ಬಲಭಾಗದಲ್ಲಿ ಕ್ಲೋಮವೆಂಬ ಮೂತ್ರಕೋಶವೂ ಇದೆ. ದೇಹದಲ್ಲಿ

ದಕ್ಷಿಣೇ ಚ ತಥಾ ಕ್ಲೋಮ ಪದ್ಮಸ್ಯೈವ ಪ್ರಕೀರ್ತಿತಂ ।
ಸ್ರೋತಾಂಸಿ ಯಾನಿ ದೇಹೇಽಸ್ಮಿನ್ಕಫರಕ್ತವಹಾನಿ ತು ॥ ೬೨ ॥

ತೇಷಾಂ ಭೂತಾನುಗಾನಾಂ ತು ಭವತೀಂದ್ರಿಯಸಂಭವಃ ।
ನೇತ್ರಯೋರ್ಮಂಡಲಂ ಶುಕ್ಲಂ ಕಫಾದ್ಭವತಿ ಪೈತ್ರಿಕಂ ॥ ೬೩ ॥

ಕೃಷ್ಣಂ ಚ ಮಂಡಲಂ ವಾತಾತ್ತಥಾ ಭವತಿ ಮಾತೃಕಂ ।
ಸರ್ವದೃಙ್ಮಂಡಲಂ ಜ್ಞೇಯಂ ಮಾತಾಪಿತೃಸಮುದ್ಭವಂ ॥ ೬೪ ॥

ಪಕ್ಷ್ಮಮಂಡಲಮೇಕಂ ತು ದ್ವಿತೀಯಂ ವರ್ತ್ಮಮಂಡಲಂ ।
ಶುಕ್ಲೇ ತೃತೀಯಂ ಕಥಿತಂ ಚತುರ್ಥಂ ಕೃಷ್ಣಮಂಡಲಂ ॥ ೬೫ ॥

ದೃಙ್ಮಂಡಲಂ ಪಂಚಮಂ ತು ನೇತ್ರಂ ಸ್ಯಾತ್ಪಂಚಮಂಡಲಂ ।
ಅನ್ಯೇ ತು ನೇತ್ರಭಾಗೇ ದ್ವೇ ತಥಾಪಾಂಗಕನೀನಿಕೇ ॥ ೬೬ ॥

---

ಕಫ ಮತ್ತು ರಕ್ತ ಇವುಗಳ ಪ್ರವಾಹವು ಯಾವಾಗಲೂ ಇರುತ್ತದೆ. ಈ ಪ್ರವಾಹಗಳಿಂದಲೇ ಇಂದ್ರಿಯಗಳಿಗೆ ಕಾರಣಭೂತಗಳಾದ ಮಹಾಭೂತಗಳ ಸಂಬಂಧದಿಂದ ಇಂದ್ರಿಯಗಳು ಅಭಿವ್ಯಕ್ತವಾಗುತ್ತವೆ.

೬೩-೬೪. ಕಣ್ಣುಗಳಲ್ಲಿ ಮಂಡಲದಲ್ಲಿ ಸೇರಿರುವ ಬಿಳುಪಾದ ಭಾಗವು, ಪಿತ್ತಾಭಿವೃದ್ಧಿಯಿಂದ ಉಂಟಾದ ಕಫದಿಂದ ಆಗುತ್ತದೆ. ಕಪ್ಪಾದ ಮಂಡಲವು ವಾತದಿಂದ ಉಂಟಾಗುತ್ತದೆ. ಇದು ಮಾತೃವಿನ ಸಂಬಂಧದಿಂದ ಉಂಟಾಗತಕ್ಕದ್ದು. ಕಣ್ಣಿನಲ್ಲಿರುವ ಮಂಡಲಗಳೆಲ್ಲವೂ ಮಾತಾಪಿತೃ ಸಂಬಂಧದಿಂದಲೇ ಉಂಟಾಗುತ್ತವೆ. ಎಂದು ತಿಳಿಯಬೇಕು

೬೫-೬೬. ದುಂಡಾಗಿರುವ ರೆಪ್ಪೆಗಳೇ ಮೊದಲನೆಯ ಮಂಡಲ. ಎರಡನೆಯದು ದುಂಡಾದ ರಶ್ಮಿಮಾರ್ಗ. ಮೂರನೆಯದು ಎರಡು ಕಡೆಯಲ್ಲಿಯೂ ಇರುವ ಬಿಳುಪಾದ ಭಾಗ ನಾಲ್ಕನೆಯದು ಮಂಡಲಾಕಾರವಾದ ಕರಿಯಗುಡ್ಡೆಯ ಭಾಗ. ನೇತ್ರಮಂಡಲವೇ ಐದನೆಯದು. ಈ ರೀತಿ ನೇತ್ರವು ಐದು ಮಂಡಲಗಳುಳ್ಳದ್ದಾಗಿರುತ್ತದೆ. ಇನ್ನೂ ಕೆಲವು ಭಾಗಗಳು ಈ ಮಂಡಲದಲ್ಲಿ ಸೇರಿವೆ. ಕಡೆಗಣ್ಣು, ಕರಿಯಗುಡ್ಡೆ ಇವುಗಳಿಂದಲೇ ನೇತ್ರವು ದುಂಡಾಗಿದ್ದರೂ ಮೀನಿನ ಆಕಾರದಂತಹ ಆಕಾರವು ಈ ನೇತ್ರಕ್ಕೆ ಉಂಟಾಗಿರುತ್ತದೆ.

ಯೋಭ್ಯಾಂ ನೇತ್ರಸ್ಯ ಜನಿತಾ ಮತ್ಸ್ಯಸಂಸ್ಥಾನತಾ ದ್ವಿಜ ।
ನಾಸಾಸಮೀಪೇ ಕಥಿತಂ ತದಪಾಂಗೇತಿ ಸಂಜ್ಞಿತಂ ॥ ೬೭ ॥

ಕಪೋಲಯೋಃ ಸಮೀಪೇ ತು ತಥಾ ಪ್ರೋಕ್ತಾ ಕನೀನಿಕಾ ।
ಮಾಂಸಾಸೃಕ್ಕಫಜಾ ಜಿಹ್ವಾ ಮೇದೋಽಸೃಕ್ಕಫಮಾಂಸಜೌ ॥ ೬೮ ॥

ವೃಷಣೌ ಚ ತಥಾ ಜ್ಞೇಯೌ ಸರ್ವೇಷಾಮೇವ ದೇಹಿನಾಂ ।
ಪ್ರಾಣಸ್ಯಾಯತನಾನ್ಯತ್ರ ದಶೈತಾನಿ ನಿಬೋಧ ಮೇ ॥ ೬೯ ॥

ಮೂರ್ಧಾ ಚ ಹೃದಯಂ ನಾಭಿಃ ಕಂಠೋ ಜಿಹ್ವಾನಿಬಂಧನಂ ।
ರಕ್ತಂ ಶುಕ್ರಂ ಗುದೋ ವಸ್ತಿಸ್ತಥಾ ಗುಲ್ಫೌ ಚ ಭಾರ್ಗವ ॥ ೭೦ ॥

ಕಂಡರಾಃ ಷೋಡಶ ಪ್ರೋಕ್ತಾಃ ತಥಾ ದೇಹೇ ಶರೀರಿಣಾಂ ।
ದ್ವೇ ಕರಸ್ಥೇ ತಥಾ ದ್ವೇ ಚ ಚರಣಸ್ಥೇ ಪೃಥಕ್ ಪೃಥಕ್ ॥ ೭೧ ॥

---

೬೭-೬೯. ಮೂಗಿನ ಸಮೀಪದಲ್ಲಿರುವ ಕಣ್ಣಿನ ಕೊನೆಗೆ ಅಪಾಂಗವೆಂದು ಹೆಸರು. ಕಪೋಲದ ಹತ್ತಿರ ಇರುವ ಕಣ್ಣಿನ ಕೊನೆಗೆ ಕನೀನಿಕಾ ಎಂದು ಹೆಸರು, ಮಾಂಸ, ರಕ್ತ, ಕಫ ಇವುಗಳಿಂದ ನಾಲಗೆಯು ಉಂಟಾಗುತ್ತದೆ. ವೃಷಣಗಳು ಮೇದಸ್ಸು, ರಕ್ತ, ಕಫ ಇವುಗಳಿಂದ ಉಂಟಾದುವು. ಎಲ್ಲಾ ಪ್ರಾಣಿಗಳಿಗೂ ಅವಯವಗಳ ಉತ್ಪತ್ತಿಯು ಇದೇ ರೀತಿ ಇರುತ್ತದೆ. ಮುಂದೆ ಹೇಳುವ ಈ ಹತ್ತು ಅವಯವಗಳೂ ಪ್ರಾಣಸ್ಥಾನಗಳೆಂದು ತಿಳಿ.

೭೦-೭೧. ತಲೆ, ಹೃದಯ, ನಾಭಿ, (ಹೊಕ್ಕಳು) ಕಂಠ, ನಾಲಗೆಯ ಮೂಲಭಾಗ, ರಕ್ತ, ಶುಕ್ರ, ಗುದಪ್ರದೇಶ, ಹೊಕ್ಕಳಿನ ಕೆಳಭಾಗ, ಕಾಲಿನ ಗಂಟುಗಳು ಇವೇ ಪ್ರಾಣಸ್ಥಾನಗಳು. ನರಗಳೂ ಸಹ ಪ್ರಾಣಿಗಳ ದೇಹದಲ್ಲಿ ಹದಿನಾರು ಇರುತ್ತದೆ. ಎರಡು ಕೈಗಳಲ್ಲಿಯೂ ಎರಡೆರಡು, ಎರಡು ಕಾಲುಗಳಲ್ಲಿಯೂ ಎರಡೆರಡು ಬೆನ್ನಿನ ಭಾಗದಲ್ಲಿ ನಾಲ್ಕು, ಕತ್ತಿನಲ್ಲಿಯೂ ಹಾಗೆ ನಾಲ್ಕು ಈ ರೀತಿ ಹದಿನಾರು ಇರುತ್ತವೆ.

ಚತಸ್ರಃ ಪೃಷ್ಠಗಾ ಜ್ಞೇಯಾಃ ಗ್ರೀವಾಯಾಂ ತಾವದೇವ ತು ।
ಜಾಲಾನಿ ಷೋಡಶೈವಾತ್ರ ವಿಭಾಗಸ್ತೇಷು ಕಥ್ಯತೇ　　|| ೭೨ ||

ಮಾಂಸಸ್ನಾಯುಶಿರಾಸ್ಥಿಭ್ಯಃ ಚತ್ವಾರಸ್ತು ಪೃಥಕ್ ಪೃಥಕ್ ।
ಮಣಿಬಂಧಾನಿ ಗುಲ್ಫೇಷು ನಿಬದ್ಧಾನಿ ಪರಸ್ಪರಂ　　|| ೭೩ ||

ಶಂಕೂನಿ ಚ ಸ್ಮೃತಾನೀಹ ಹಸ್ತಯೋಃ ಪಾದಯೋಸ್ತಥಾ ।
ಗ್ರೀವಾಯಾಂ ಚ ತಥಾ ಮೇಢ್ರೇ ಕಥಿತಾನಿ ಮನೀಷಿಭಿಃ　　|| ೭೪ ||

ದೇಹೇಸ್ಮಿಂಶ್ಚ ತಥಾ ಜ್ಞೇಯಾಃ ಚತಸ್ರೋ ಮಾಂಸರಜ್ಜವಃ ।
ಪೃಷ್ಠವಂಶೋಭಯಗತೇ ದ್ವೇ ದ್ವೇ ತತ್ರ ಪ್ರಕೀರ್ತಿತೇ　　|| ೭೫ ||

ತಾವಂತ್ಯಶ್ಚ ತಥಾಪ್ಯೇತಾ ಸ್ತಾಸಾಂ ಬಂಧನಕಾರಕಾಃ ।
ಸೀವನ್ಯಶ್ಚ ತಥಾ ಸಪ್ತ ಪಂಚ ಮೂರ್ಧಾನಮಾಶ್ರಿತಾಃ　　|| ೭೬ ||

---

೭೨-೭೩. ಮಾಂಸ, ಮಾಂಸಖಂಡ, ನರ, ಎಲುಬು ಇವುಗಳಲ್ಲಿ ಒಂದೊಂದರಲ್ಲೂ ನಾಲ್ಕು ಬಗೆಯಾದ ಜಲವುಂಟಾಗುತ್ತದೆ. ಒಟ್ಟು ಈ ಜಲವು ಹದಿನಾರಾಗುತ್ತದೆ. ಕೈಗಳ ಮಣಿಬಂಧ ಪ್ರದೇಶಗಳು ಹರಡುಗಳೊಡನೆ ಪರಸ್ಪರವಾಗಿ ಭದ್ರವಾಗಿ ಕಟ್ಟಲ್ಪಟ್ಟಿವೆ. ಹಸ್ತಗಳಲ್ಲಿಯೂ ಪಾದಗಳಲ್ಲಿಯೂ ಈ ಹರಡುಗಳಲ್ಲಿ ಭದ್ರಪಡಿಸಲ್ಪಟ್ಟಿರುವ ಮೊಳೆಗಳು ಶಂಕುಗಳೆಂದು ಹೇಳಲ್ಪಡುತ್ತವೆ. ಕುತ್ತಿಗೆಯಲ್ಲಿಯೂ ಶಿಶ್ನದಲ್ಲಿಯೂ ಇಂತಹ ಶಂಕುಗಳಿವೆ ಎಂದು ಪಂಡಿತರು ಹೇಳಿರುವರು.

೭೪-೭೬. ಈ ದೇಹದಲ್ಲಿ ನಾಲ್ಕು ಮಾಂಸದ ಹಗ್ಗಗಳೂ ಇವೆ ಎಂದು ತಿಳಿಯಬೇಕು. ಇವು ಬೆನ್ನಿನ ಮೂಳೆಯ ಎರಡು ಭಾಗಗಳಲ್ಲಿಯೂ ಎರಡೆರಡು ಇರುತ್ತವೆ. ಅವುಗಳಿಗೆ ಭದ್ರತೆಯನ್ನುಂಟುಮಾಡುವ ಅಂತಹ ಹಗ್ಗಗಳೂ ಅಷ್ಟೇ ಇವೆ. ಈ ಹಗ್ಗಗಳನ್ನು ಹೊಲಿಗೆಯಿಂದ ಭದ್ರಪಡಿಸುವ ಹಗ್ಗಗಳೂ ಏಳು ಇವೆ. ಅವುಗಳಲ್ಲಿ ಐದು ತಲೆಯಲ್ಲಿವೆ.

---

1 ಇಲ್ಲಿ ಜಾಲಾನಿ ಎಂಬ ಪಾಠವು ಸುಶ್ರುತದಲ್ಲಿ ಕಂಡುಬರುತ್ತದೆ.

ಏಕಾ ಮೇಢ್ರಗತಾ ಚೈಕಾ ತಥಾ ಜಿಹ್ವಾಗತಾ ಪರಾ ।
ಅಸ್ಥ್ನಾಮತ್ರ ಶತಾನಿ ಸ್ಯುಸ್ತ್ರೀಣಿ ಷಷ್ಟ್ಯಧಿಕಾನಿ ತು ॥ ೭೭ ॥

ಸೂಕ್ಷ್ಮೈಸ್ಸಹ ಚತುಷ್ಷಷ್ಟಿಃ ದಶನಾಃ ವಿಂಶತಿರ್ನಖಾಃ ।
ಪಾಣಿಪಾದಶಲಾಕಾಶ್ಚ ತಾಸಾಂ ಸ್ಥಾನಚತುಷ್ಟಯಂ ॥ ೭೮ ॥

ಚತ್ವಾರಿಂಶತ್ತಥಾಸ್ಥೀನಿ ಜಂಘಯೋಸ್ತಾವದೇವ ತು ।
ದ್ವೇ ದ್ವೇ ಜಾನುಕಪೋಲೌಷ್ಠಫಲಕಾಂಸಸಮುದ್ಭವೇ ॥ ೭೯ ॥

ಅಕ್ಷಿಸ್ಥಲೇಽಷ್ಟಕಂ ಶ್ರೋಣಿಫಲಕೇ ಚೈವಮಾದಿಶೇತ್ ।
ಭಗಾಸ್ಥ್ಯೇಕಂ ತಥಾ ಪೃಷ್ಠೇ ಚತ್ವಾರಿಂಶಚ್ಚ ಪಂಚ ಚ ॥ ೮೦ ॥

ಗ್ರೀವಾಪಂಚದಶಾಸ್ಥೀನಿ ಜತ್ರ್ವೇಕಂ ಚ ತಥಾ ಹನುಃ ।
ಭ್ರೂಮೂಲಂ ದ್ವೇ ಲಲಾಟಾಕ್ಷಿಗಂಡನಾಸಾ ತಥಾ ಸ್ಥಿಕಾ ॥ ೮೧ ॥

---

೭೭-೭೮. ಮತ್ತೊಂದು ಶಿಶ್ನದಲ್ಲಿಯೂ ಇನ್ನೊಂದು ನಾಲಗೆಯಲ್ಲಿಯೂ ಇದೆ. ಈ ದೇಹದಲ್ಲಿ ಮೂಳೆಗಳು ಮುನ್ನೂರ ಅರವತ್ತು ಇವೆ. ಸಣ್ಣ ಹಲ್ಲುಗಳೊಡನೆ ಹಲ್ಲುಗಳೂ ಅರವತ್ತ ನಾಲ್ಕು ಇವೆ. ಇಪ್ಪತ್ತು ಉಗುರುಗಳಿವೆ. ಹಸ್ತ ಪಾದಗಳಲ್ಲಿ ಸಲಾಕಿಯಂತಿರುವ ಬೆರಳುಗಳೂ ಇಪ್ಪತ್ತು ಇವೆ. ಆ ಬೆರಳು ಗಳ ಸ್ಥಾನವೂ ನಾಲ್ಕು (ಕೈಗಳೆರಡು ಕಾಲುಗಳೆರಡು.)

೭೯-೮೦. ಅವುಗಳಲ್ಲಿ ಎಲುಬುಗಳು ನಲವತ್ತು, ಮೊಣಕಾಲಲ್ಲಿಯೂ ಅಷ್ಟೇ ಇವೆ. ಮಂಡಿ, ಕಪಾಲ, ಮೇಲು ತುಟಿ, ಹಣಗೆನ್ನೆ, ಭುಜದ ಮೇಲುಭಾಗ ಇವುಗಳಲ್ಲಿಯೂ ಪ್ರತ್ಯೇಕ ಎರಡೆರಡಿರುತ್ತವೆ. ಕಣ್ಣಿನ ಸ್ಥಳದಲ್ಲಿ ಎಂಟು, ಕುಂಡೆ ಗಳ ಮೇಲುಭಾಗದಲ್ಲಿಯೂ ಅದೇ ಸಂಖ್ಯೆಯಲ್ಲಿವೆ. ಎಂಬುದನ್ನು ಹೀಗೆಯೇ ತಿಳಿಯಬೇಕು. ಉಪಸ್ಥಪ್ರದೇಶದಲ್ಲಿ ಒಂದು ಹಾಗೆಯೇ ಬೆನ್ನಿನ ಭಾಗದಲ್ಲಿ ನಲವತ್ತೈದೂ ಇವೆ.

೮೧-೮೨. ಕುತ್ತಿಗೆಯಲ್ಲಿ ಹದಿನೈದು, ಹೆಗಲಿನ ಸಂಧಿಗಳಲ್ಲಿ ಒಂದೊಂದು ಕಪೋಲದ ಮೇಲ್ಭಾಗದಲ್ಲಿಯೂ ಹುಬ್ಬುಗಳ ಮಧ್ಯದಲ್ಲಿಯೂ, ಹಣೆ, ಕಣ್ಣು,

ಸರ್ಜಿಕಾಸ್ಥಾಲಕೈಃ ಸಾರ್ಧಮರ್ಬುದೈಶ್ಚ ದ್ವಿಸಪ್ತತಿಃ ।
ದ್ವೌ ಶಂಖಕೌ ಕಪಾಲಾನಿ ಚತ್ವಾರ್ಯೇವ ಶಿರಸ್ತಥಾ ॥ ೮೨ ॥

ಉರಃ ಸಪ್ತದಶಾಸ್ಥೀನಿ ಪುರುಷಸ್ಯಾಸ್ಥಿಸಂಗ್ರಹಃ ।
ತಥಾ ಚೈವಾತ್ರ ಸಂಧೀನಾಂ ದ್ವೇ ಶತೇ ತು ಶತಾಧಿಕೇ ॥ ೮೩ ॥

ಅಷ್ಟಷಷ್ಟಿಶ್ಚ ಶಾಖಾಸು ಷಷ್ಟಿಶ್ಚೈವ ವಿವರ್ಜಿತಾ ।
ಅನ್ತರಾಧೌ ತ್ವಶೀತಿಶ್ಚ ಕಥಿತಾ ಭೃಗುನಂದನ ॥ ೮೪ ॥

[1]ನವಸ್ನಾಯುಶತಾನ್ಯತ್ರ ದ್ವೇ ತು ತ್ರಿಂಶಾಧಿಕೇ ಮತೇ ।
ಅಂತರಾಧೌ ತು ಕಥಿತಾ ಹ್ಯೂರ್ಧ್ವಗಾಶ್ಚೈವ ಸಪ್ತತಿಃ ॥ ೮೫ ॥

ಷಟ್ ಶತಾನಿ ಚ ಶಾಖಾಸು ಕಥಿತಾನಿ ಮನೀಷಿಭಿಃ ।
ಪಂಚ ಪೇಶೀಶತಾನ್ಯತ್ರ ಚತ್ವಾರಿಂಶತ್ತಥೋರ್ಧ್ವಗಾಃ ॥ ೮೬ ॥

---

ಗಂಡಪ್ರದೇಶ ಮೂಗು ಈ ಸ್ಥಾನಗಳಲ್ಲಿಯೂ ಹಾಗೆಯೇ ಸಣ್ಣ ಎಲಬುಗಳಿವೆ. ಹಾಗೆಯೇ ಸರ್ಜಿಕಾ ಸ್ಥಾಲಕ ಅರ್ಬುದಗಳೆಂಬ ಎಲಬುಗಳೊಡನೆ ಎಪ್ಪತ್ತೆರಡು ಆಗುತ್ತವೆ. ಹೀಗೆಯೇ ಹಣೆಯಲ್ಲಿ ಎಲುಬುಗಳೂ ಇವೆ.

೮೩–೮೪. ಎದೆಯು ಹದಿನೇಳು ಅಸ್ಥಿಗಳನ್ನು ಹೊಂದಿದೆ. ಪುರುಷನ ಅಸ್ಥಿಗಳು ಈ ರೀತಿ ಸಂಗ್ರಹಿಸಲ್ಪಟ್ಟಿವೆ. ಈ ದೇಹದಲ್ಲಿ ಮುನ್ನೂರು ಸಂಧಿಬಂಧಗಳಿವೆ. ಒಂದುಕಡೆಯಲ್ಲಿ ಅರವತ್ತೆಂಟು ಮತ್ತೊಂದು ಕಡೆಯಲ್ಲಿ ಐವತ್ತೊಂಭತ್ತೂ ಇರುತ್ತವೆ. ಅಂತರಾಧಿಯಲ್ಲಿ ಎಂಭತ್ತು ಇರುತ್ತವೆ. ಸಂಧಿಬಂಧಗಳ ಸಂಖ್ಯೆಯು ಈ ರೀತಿ ಹೇಳಲಾಗಿದೆ.

೮೫–೮೬. ಈ ದೇಹದಲ್ಲಿ ಮಾಂಸಖಂಡಗಳು ಒಂಭತ್ತುನೂರು, ಇನ್ನೂರ ಮೂವತ್ತು ಅಂತರಾಧಿ ಎಂಬ ಕೋಷ್ಠಭಾಗದಲ್ಲಿ ಎಪ್ಪತ್ತು ಮೇಲ್ಮುಖವಾಗಿವೆ, ಶಾಖಾಭಾಗಗಳಲ್ಲಿ ಆರುನೂರು ಇವೆ ಎಂದು ಪಂಡಿತರು ಹೇಳುತ್ತಾರೆ. ಇಲ್ಲಿ ಸಣ್ಣ ಸಣ್ಣ ಮಾಂಸಕೋಶಗಳು ಐದುನೂರು ಇವೆ. ಇವುಗಳಲ್ಲಿ ನಲವತ್ತು ಮೇಲ್ಮುಖವಾಗಿವೆ.

---

1 ಇಲ್ಲಿ ನವ ಎಂಬ ಸುಶ್ರುತದ ಪಾಠವನ್ನು ಬರೆಯಲಾಗಿದೆ. ನ ಚ ಎಂಬ ಮೂಲ ಪಾಠವು ಅಶುದ್ಧವೆಂದು ತೋರುತ್ತದೆ.

ಚತ್ವಾ[1]ರಿಂಶಚ್ಚತಾನ್ಯತ್ರ ತಥಾ ಶಾಖಾಸು ಪಂಡಿತೈಃ ।
ಅಂತರಾಧೌ ತಥಾ ಷಷ್ಟಿಃ ಪೇಶ್ಯಸ್ತು ಕಥಿತಾ ಬುಧೈಃ ॥ ೮೭ ॥

ಸ್ತ್ರೀಣಾಂ ಚೈವಾಧಿಕಾ ಜ್ಞೇಯಾ ವಿಂಶತಿಶ್ಚತುರುತ್ತರಾ ।
ಸ್ತನಯೋರ್ದಶ ವಿಜ್ಞೇಯಾಃ ಯೋನೌ ರಾಮ ತಥಾ ದಶ ॥ ೮೮ ॥

ಗರ್ಭಾಶಯೇ ತಥಾ ಜ್ಞೇಯಾಶ್ಚತಸ್ರೋ ಗರ್ಭಚಿಂತಕೈಃ ।
ತ್ರಿಂಶಚ್ಛತಸಹಸ್ರಾಣಿ ತಥಾನ್ಯಾನಿ ದಶೈವ ತು ॥ ೮೯ ॥

ಷಟ್‌ಪಂಚಾಶತ್ಸಹಸ್ರಾಣಿ ಸಿರಾಣಾಂ ಕಥಿತಾನಿ ತು ।
ತಾ ವಹಂತಿ ರಸಂ ದೇಹೇ ಕೇದಾರಮಿವಕುಲ್ಯಕಾಃ ॥ ೯೦ ॥

ಅಭ್ಯಂಗಾದಿ ತಥಾ ಸರ್ವಂ ಸ್ವೇದಲೇಪಾದಿಕಂ ಚ ಯತ್ ।
ದ್ವಿಸಪ್ತತಿಸ್ತಥಾ ಕೋಟ್ಯೋ ರೋಮ್ಣಾಂ ವಿದ್ಧಿ ಮಹಾಭುಜ ॥ ೯೧ ॥

---

೮೭–೮೮. ಇಲ್ಲಿ ಪಾರ್ಶ್ವಗಳಲ್ಲಿ ನೂರನಲವತ್ತು ಪೇಶಿಗಳಿವೆ ಎಂದು ಪಂಡಿತರು ಹೇಳಿದ್ದಾರೆ. ಅಂತರಾಧಿ ಎಂಬ ಭಾಗದಲ್ಲಿ ಅರವತ್ತು ಪೇಶಿಗಳಿವೆ. ಸ್ತ್ರೀಯರಿಗೆ ಮಾತ್ರ ಇವು ಇಪ್ಪತ್ತನಾಲ್ಕು ಹೆಚ್ಚಾಗಿವೆ. ಸ್ತನಗಳಲ್ಲಿ ಹತ್ತು ಯೋನಿಯಲ್ಲಿ ಹತ್ತು ಇದೇ ರೀತಿ.

೮೯–೯೦. ಗರ್ಭಕೋಶದಲ್ಲಿಯೂ ನಾಲ್ಕು ಎಂದು ಗರ್ಭವಿಮರ್ಶಕರು ತಿಳಿಯಬೇಕು. ಈ ದೇಹದಲ್ಲಿ ಹತ್ತು, ಮೂವತ್ತು, ನೂರು, ಸಾವಿರ ಈ ಸಂಖ್ಯೆಯ ಗುಂಪುಗಳಿಂದ ಕೂಡಿರುವ ಐವತ್ತಾರು ಸಾವಿರ ನರಗಳಿವೆ. ಅವುಗಳೆಲ್ಲವೂ ಆಹಾರ ದಿಂದ ಉಂಟಾದ ರಸವನ್ನು ಸಣ್ಣಸಣ್ಣ ನೀರಿನ ಕಾಲುವೆಗಳು ಗದ್ದೆಗೆ ನೀರನ್ನು ಒಯ್ಯುವಂತೆ ದೇಹಕ್ಕೆಲ್ಲಾ ಸಾಗಿಸುತ್ತಿರುವುವು.

೯೧–೯೨. ದೇಹಕ್ಕೆ ನಡೆಸುವ ಅಭ್ಯಂಗಾದಿಗಳನ್ನೂ ಬೆವರು, ಲೇಪ ಮುಂತಾದುವನ್ನೂ ಸಹ ಈ ನರಗಳೇ ದೇಹದ ಆಯಾಯ ಭಾಗಕ್ಕೆ ಹೊಂದಿಸುತ್ತವೆ. ದೇಹದಲ್ಲಿ ಎಪ್ಪತ್ತೆರಡುಕೋಟಿ ರೋಮಕೂಪಗಳಿವೆ. ದೇಹದಲ್ಲಿರುವ ಮಜ್ಜಾ

---

1 ಇಲ್ಲಿ ಚತ್ವಾರಿ ಶತಾನಿ ಎಂದು ಸುಶ್ರುತದ ಪಾಠವಿದೆ.

ಮಜ್ಞಾಯಾ ಮೇದಸಶ್ಚೈವ ವಸಾಯಾಶ್ಚ ತಥಾ ದ್ವಿಜ ।
ಮೂತ್ರಸ್ಯ ಚೈವ ಪಿತ್ತಸ್ಯ ಶ್ಲೇಷ್ಮಣಃ ಶಕೃತಸ್ತಥಾ ॥ ೯೨ ॥

ರಕ್ತಸ್ಯ ಚ ರಜಸಶ್ಚಾಥ ಕ್ರಮಶೋಽಂಜಲಯಃ ಸ್ಮೃತಾಃ ।
ಅರ್ಧಾರ್ಧಾಭ್ಯಧಿಕಾಃ ಸರ್ವೇ ಪೂರ್ವಾರ್ಧಾಂಜಲಿತಃ ಸ್ಮೃತಾಃ ॥ ೯೩ ॥

ಅರ್ಧಾಂಜಲಿಶ್ಚ ಶುಕ್ರಸ್ಯ ತಥಾರ್ಧಾ ಚ ತಥೌಜಸಃ ।
ರಜಸಸ್ತು ತಥಾ ಸ್ತ್ರೀಣಾಂ ಚತಸ್ರಃ ಕಥಿತಾ ಬುಧೈಃ ॥ ೯೪ ॥

ಸಮಧಾತೋರಿದಂ ಪ್ರೋಕ್ತಂ ಪ್ರಮಾಣಂ ದೇಹಚಿಂತಕೈಃ ।
ವಿಲಕ್ಷಣಾನಿ ದೇಹಾನಿ ನಿತ್ಯಮೇವ ಶರೀರಿಣಾಂ ।
ತೇಷಾಂ ಭೇದೇನ ಭಿದ್ಯಂತೇ ಮಲದೋಷಾನುರೂಪತಃ ॥ ೯೫ ॥

---

ಎಂಬ ಧಾತುವಿಗೂ, ಮೇದಸ್ಸಿಗೂ ವಸಾ ಎಂಬ ಮಾಂಸವಿಶೇಷಕ್ಕೂ ಮೂತ್ರ, ಪಿತ್ತ, ಶ್ಲೇಷ್ಮ, ಪುರೀಷ ಇವುಗಳಿಗೂ ಮತ್ತು,

೯೩–೯೪. ರಕ್ತ, ರಜಸ್ಸುಗಳಿಗೂ ಈ ರೋಮಕೂಪಗಳೇ ಅಂಜಲಿ (ಬೊಗಸೆ) ಗಳಂತೆ ಇವೆ. ಇವುಗಳಲ್ಲಿ ಮೊದಮೊದಲಿನದಕ್ಕಿಂತಲೂ ಕೊನೆಕೊನೆಯದು ಅರ್ಧಾರ್ಧಭಾಗ ಹೆಚ್ಚಾಗಿರುತ್ತದೆ. ಶುಕ್ರವು ಅರ್ಧಾಂಜಲಿಯಷ್ಟು ಇದ್ದಲ್ಲಿ ರಜಸ್ಸು ಅರ್ಧಭಾಗ ಹೆಚ್ಚಾಗಿರುತ್ತದೆ. ಸ್ತ್ರೀಯರಿಗೆ ರಜಸ್ಸು ಈ ಪರಿಮಾಣಕ್ಕೆ ಸೇರಿದುದು. ಇದು ಸ್ತ್ರೀಯರಿಗೆ ನಾಲ್ಕು ಅಂಜಲಿಯಷ್ಟು ಹೆಚ್ಚಾಗಿರುತ್ತದೆ.

೯೫–೯೬. ಇಲ್ಲಿ ನಾನು ಹೇಳಿರುವ ಪ್ರಮಾಣವು ಸಮಧಾತು ಉಳ್ಳ ದೇಹಕ್ಕೆ ಸೇರಿದುದು. ಜೀವಿಗಳ ಶರೀರಗಳು ಪರಸ್ಪರ ವಿಲಕ್ಷಣವಾಗಿಯೇ ಯಾವಾಗಲೂ ಇರುತ್ತವೆ. ಮಲದೋಷಕ್ಕೆ ತಕ್ಕಂತೆ ಆ ಧಾತುಗಳೂ ಪರಸ್ಪರ ಭಿನ್ನಗಳಾಗುತ್ತವೆ. ಅವನವನ ಕರ್ಮವಶಕ್ಕೆ ತಕ್ಕಂತೆ ಮಲದೋಷಗಳೂ ಭಿನ್ನ ಭಿನ್ನಗಳಾಗುತ್ತವೆ. ಅದರಿಂದ ದೇಹಧಾತುಗಳು ನಾನಾವಿಧವಾಗುತ್ತವೆ ಇಂತಹ ವೈವಿಧ್ಯವುಳ್ಳ ಈ ದೇಹವು ಪರಮಾತ್ಮನ ಆರಾಧನೆಯಿಂದ ಯಾವನಿಗೆ ಮೋಕ್ಷ ಸಾಧಕವಾಗುತ್ತದೆಯೋ ಅವನೇ ಈ ಲೋಕದಲ್ಲಿ ಧನ್ಯನು. ಅಂತಹ ಮೋಕ್ಷಕ್ಕೂ ಪರಮಾತ್ಮನಾದ ಮಹಾವಿಷ್ಣುವೇ ಕಾರಣನಾಗುತ್ತಾನೆ. (ಪರಮಾತ್ಮನೇ ಸಿದ್ಧೋಪಾಯನಾದುದರಿಂದ ಸಾಧ್ಯೋಪಾಯ ರೂಪವಾದ ಭಕ್ತಿಪ್ರಪತ್ತಿಗಳು ಅವನ

ಏತಚ್ಛರೀರಂ ಮಲದೋಷಪಿಂಡಂ
ಧಾತ್ವಾಶ್ರಯಂ ಕರ್ಮವಶಾನುಬದ್ಧಂ ।
ಮೋಕ್ಷಾಯ ಯಸ್ಯೇಹ ಭವೇತ್ಸ ಧನ್ಯೋ
ಮೋಕ್ಷೇ ಚ ಹೇತುಃ ಪರಮೋ ಹಿ ವಿಷ್ಣುಃ ॥ ೯೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಶರೀರವಿಷಯ ವರ್ಣನಂ ನಾಮ ಪಂಚದಶೋತ್ತರಶತತಮೋಽಧ್ಯಾಯಃ

---

ಅನುಗ್ರಹದಿಂದಲೇ ನಿಷ್ಪನ್ನವಾಗುತ್ತವೆ. ಅಂತಹ ಅನುಗ್ರಹಕ್ಕೆ ಶಾಸ್ತ್ರಾನುಸಾರಿಯಾದ ಆರಾಧನೆಯೇ ಕಾರಣ. ಅಂತಹ ಆರಾಧನಕ್ಕೂ ದೇಹವು ಕಾರಣ. ಆದುದರಿಂದ ದೇಹವನ್ನು ಹೊಂದಿರುವವನು ಆ ಪರಮಾತ್ಮನ ಆಜ್ಞಾ ಅನುಜ್ಞಾ ರೂಪಗಳಾದ ಕೈಂಕರ್ಯದಲ್ಲಿ ನಿರತನಾಗಿದ್ದು ಅವನ ಅನುಗ್ರಹದಿಂದ ಸಾಧನ ನಿಷ್ಪತ್ತಿಯನ್ನು ಹೊಂದಿ ಮೋಕ್ಷಸಾಮ್ರಾಜ್ಯಕ್ಕೆ ಭಾಗಿಯಾಗಬೇಕು. ಇಂತವನೇ ಧನ್ಯನೆಂದು ತಾತ್ಪರ್ಯ).

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ಶರೀರವಿಷಯವರ್ಣನೆಂಬ ನೂರ ಹದಿನೈದನೆಯ ಅಧ್ಯಾಯ ಮುಗಿದಿದೆ.



## ನೂರ ಹದಿನೈದನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಜೀವನು ಹೇಗೆ ಶರೀರವನ್ನು ಧರಿಸುತ್ತಾನೆ. ಶರೀರದ ಸ್ವರೂಪವೂ ಎಂತಹುದು ಎಂಬ ಪ್ರಶ್ನೆಗೆ ಉತ್ತರವಾಗಿ ಗರ್ಭೋತ್ಪತ್ತಿಯ ಕ್ರಮವನ್ನೂ ಅಲ್ಲಿ ಜೀವನಪ್ರವೇಶವನ್ನೂ ದೇಹದ ವಿಭಾಗಗಳನ್ನೂ ಜೀವನ ಉತ್ಪತ್ತಿ ಕ್ರಮವನ್ನೂ ವಿವರಿಸಿ ಪಂಚ ಭೂತಗಳ ಸಂಬಂಧದಿಂದ ಉಂಟಾಗುವ ದೇಹೇಂದ್ರಿಯಾದಿಗಳನ್ನೂ ದೇಹದ ಅವಯವಗಳನ್ನೂ ವಿಸ್ತಾರವಾಗಿ ಹೇಳಿ ಬಹುದೋಷಗಳಿಂದ ದುಷ್ಟವಾಗಿದ್ದರೂ ಈ ದೇಹವು ಪರಮಾತ್ಮನ ಆರಾಧನದಲ್ಲಿ ತತ್ಪರತೆಯನ್ನು ಹೊಂದಿ ಮೋಕ್ಷಪ್ರಾಪ್ತಿಗೆ ಕಾರಣವಾದಲ್ಲಿ ಅಂತಹವನೇ ಧನ್ಯನಾಗುತ್ತಾನೆ. ಅವನಿಗೆ ದೇಹಸಂಬಂಧ ಉಂಟಾದುದು ಸಾರ್ಥಕವೆಂದೂ ಹೇಳಲಾಯಿತು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷೋಡಶೋತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

**ಆಯುಷ್ಯೇ ಕರ್ಮಣಿ ಕ್ಷೀಣೇ ಸಂಪ್ರಾಪ್ತೇ ಮರಣೇ ನೃಣಾಂ ।**
**ಊಷ್ಮಾ ಪ್ರಕುಪಿತಃ ಕಾಯೇ ತೀವ್ರವಾಯುಸಮೀರಿತಃ || ೧ ||**

**ಶರೀರಮುಪರುದ್ಧ್ಯಾಥ ಕೃತ್ಸ್ನಾನ್ ದೋಷಾನ್ ರುಣದ್ಧಿ ವೈ ।**
**ಭಿನತ್ತಿ ಪ್ರಾಣಸ್ಥಾನಾನಿ ಪುನರ್ಮರ್ಮಾಣಿ ಚೈವ ಹಿ || ೨ ||**

---

### ನೂರ ಹದಿನಾರನೆಯ ಅಧ್ಯಾಯ.

೧-೨. ಪುಷ್ಕರನು ಹೇಳುತ್ತಾನೆ. ಮನುಷ್ಯರಿಗೆ ಕರ್ಮಗತಿಗೆ ತಕ್ಕಂತೆ ಆಯಸ್ಸು ನಡೆದುಬರುತ್ತದೆ. ಆ ದೇಹದಲ್ಲಿ ಅನುಭವಿಸ ಬಹುದಾದ ಸುಖದುಃಖ ರೂಪಕರ್ಮ ಫಲಗಳು ಉಂಟಾದನಂತರ ಕರ್ಮವು ಭೋಗದಿಂದ ಕ್ಷಯಿಸುತ್ತದೆ. ಹಾಗೆ ಕ್ಷೀಣವಾದೊಡನೆ ಆ ಚೇತನನಿಗೆ ಆ ದೇಹಸಂಬಂಧದಿಂದ ಪ್ರಯೋಜನವಿರುವುದಿಲ್ಲ, ಆಗ ಮರಣವು ಸನ್ನಿಹಿತವಾಗುತ್ತದೆ. ಆ ಮರಣಕಾಲದಲ್ಲಿ ದೇಹದಲ್ಲಿರುವ ಶಾಖವು ಶರೀರವನ್ನು ಎಲ್ಲಕಡೆಯಲ್ಲೂ ತಡೆದು ನಿಂತು ಶಾರೀರವಾದ ದೋಷಗಳೂ ಹೊರಗೆ ಹೋಗದಂತೆ ಅಡ್ಡಿಪಡಿಸಿ ನಿಲ್ಲುತ್ತದೆ. ಪ್ರಾಣಸ್ಥಾನಗಳನ್ನೂ ಮರ್ಮಸ್ಥಾನಗಳನ್ನೂ ಭೇದಿಸುತ್ತದೆ.

ಶೈತ್ಯಾತ್ಪ್ರಕುಪಿತೋ ವಾಯುಃ ಛಿದ್ರಮನ್ವಿಷ್ಯತೇ ತತಃ ।
ದ್ವೇ ನೇತ್ರೇ ಚ ತಥಾ ಕರ್ಣೌ ದ್ವೌ ತು ನಾಸಾಪುಟೌ ತಥಾ ॥ ೩ ॥

ಊರ್ಧ್ವಂ ತು ಸಪ್ತಛಿದ್ರಾಣಿ ಸಪ್ತಕಂ ವದನಂ ತಥಾ ।
ಏತೈಃ ಪ್ರಾಣೋ ವಿನಿರ್ಯಾತಿ ಪ್ರಾಯಶಃ ಶುಭಕರ್ಮಣಾಂ ॥ ೪ ॥

ಅಧಃ ಪಾಯುರುಪಸ್ಥಂ ಚ ಛಿದ್ರದ್ವಯಮುದಾಹೃತಂ ।
ಛಿದ್ರದ್ವಯೇನ ತೇನಾಥ ಮ್ರಿಯಂತೇಽಶುಭಕಾರಿಣಃ ॥ ೫ ॥

ಮೂರ್ಧಾನಂ ಯೋಗಿನಾಂ ಭಿತ್ವಾ ಜೀವೋ ವ್ರಜತಿ ಭಾರ್ಗವ ।
ಅಥವಾ ಸ್ವೇಚ್ಛಯಾ ರಾಮ ಯೇನ ಚೇಚ್ಛಂತಿ ಯೋಗಿನಃ ॥ ೬ ॥

ಅಂತಕಾಲೇ ತು ಸಂಪ್ರಾಪ್ತೇ ಪ್ರಾಣಾಪಾನೇಷ್ವವಸ್ಥಿತಃ ।
ತಮಸಾ ಸಂವೃತೇ ಜ್ಞಾನೇ ಸಂವೃತೇಷು ಚ ಮರ್ಮಸು ॥ ೭ ॥

---

೩–೪. ಶಾಖವು ಕ್ಷೋಭೆಗೊಂಡು ಚಲಿಸಿದನಂತರ ಅಲ್ಲಿ ಆಶ್ರಯಹೊಂದಿದ್ದ ವಾಯುವು ಶೈತ್ಯದಿಂದ ಪ್ರಕೋಪಹೊಂದಿ ಹೊರಗೆ ಬರಲು ರಂಧ್ರವನ್ನು ಹುಡುಕುತ್ತದೆ ಅಂತಹ ರಂಧ್ರಗಳು ಏಳು ಇರುತ್ತವೆ. ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ಮೂಗಿನ ರಂಧ್ರಗಳು, ಮೇಲ್ಭಾಗದಲ್ಲಿ ಒಂದು, ಈ ರೀತಿ ಏಳು ದಾರಿಗಳಿವೆ. ಶಭುಕರ್ಮಗಳುಳ್ಳವರಿಗೆ ಪ್ರಾಯಶಃ ಏಳು ದ್ವಾರಗಳಲ್ಲಿ ಯಾವುದಾದರೊಂದು ರಂಧ್ರದಲ್ಲಿ ಪ್ರಾಣವಾಯುವು ಹೊರಗೆ ಬರುತ್ತದೆ.

೫–೬ ಕೆಳಭಾಗದಲ್ಲಿ ಅಪಾನ ಪ್ರದೇಶ ಮತ್ತು ಉಪಸ್ಥೇಂದ್ರಿಯ ಪ್ರದೇಶ ವೆಂಬ ಎರಡು ದ್ವಾರಗಳಿವೆ. ಅಶುಭಕರ್ಮವುಳ್ಳವರು ಆ ದ್ವಾರದಿಂದಲೇ ಮರಣ ಹೊಂದುತ್ತಾರೆ. ಯೋಗಿಗಳ ಜೀವವು ತಲೆಯ ಮೇಲ್ಭಾಗವನ್ನು ಸೀಳಿಕೊಂಡು ಹೊರಗೆ ಹೊರಟು ಬರುತ್ತದೆ. ಅಥವಾ ಅವರವರ ಇಚ್ಛೆಗೆ ತಕ್ಕಂತೆ ಯಾವುದಾದ ರೊಂದು ದ್ವಾರದಿಂದ ಹೊರಗೆ ಬರುತ್ತದೆ.

೭–೮. ಅಂತ್ಯಕಾಲವು ಸಮೀಪಿಸಿದಾಗ ತಮೋಗುಣದಿಂದ ಜ್ಞಾನವು ಆವರಿಸಲ್ಪಟ್ಟು ಮರ್ಮಸ್ಥಾನಗಳೆಲ್ಲವೂ ಮುಚ್ಚಲ್ಪಟ್ಟ ಮೇಲೆ ಪ್ರಾಣಾಪಾನ

ಸ ಜೀವೋ ನಾಭ್ಯಧಿಷ್ಠಾನಶ್ಚಾಲ್ಯತೇ ಮಾತರಿಶ್ವನಾ ।
ಸ ಜೀವಶ್ಚಾಲ್ಯಮಾನಸ್ತು ಕರ್ಮಭಿಸ್ತೈಃ ಪುರಾತನೈಃ ॥ ೮ ॥

ಅಷ್ಟಾಂಗಾಂ ಪ್ರಾಣವೃತ್ತಿಂ ತಾಂ ಶನೈಶ್ಚ್ಯಾವಯತೇ ದ್ವಿಜ ।
ಶರೀರಂ ಪ್ರಜಹಾತ್ಯಸ್ಮಾನ್ನಿಶ್ವಾಸಸ್ತು ಭವೇತ್ತತಃ ॥ ೯ ॥

ಚ್ಯವಂತಂ ಜಾಯಮಾನಂ ವಾ ಪ್ರವಿಶಂತಂ ಚ ಯೋನಿಷು ।
ಪಶ್ಯಂತ್ಯೇವಂವಿಧಂ ಸಿದ್ಧಾಃ ಜೀವಂ ದಿವ್ಯೇನ ಚಕ್ಷುಷಾ ॥ ೧೦ ॥

ಸ ತು ದೇಹಪರಿತ್ಯಾಗಕಾಲೇ ಪ್ರಾಪ್ತೇ ತದಾನಘ ।
ತತ್ಕ್ಷಣಾದೇವ ಗೃಹ್ಣಾತಿ ಶರೀರಮತಿವಾಹಿಕಂ ॥ ೧೧ ॥

ಊರ್ಧ್ವಂ ಭಜಂತಿ ಭೂತಾನಿ ತ್ರೀಣ್ಯಸ್ಮಾತ್ತಸ್ಯ ವಿಗ್ರಹಾತ್ ।
ಆಕಾಶವಾಯುತೇಜಾಂಸಿ ದ್ವೇ ಚಾಧೋ ಭೃಗುನಂದನ ॥ ೧೨ ॥

---

ಸ್ಥಲಗಳಲ್ಲಿದ್ದ ಆ ಜೀವನು ವಾಯುವಿನ ಆಘಾತದಿಂದ ನಾಭಿಸ್ಥಾನದಿಂದ ಚಲನೆ ಹೊಂದುತ್ತಾನೆ. ತನ್ನ ಪ್ರಾಚೀನಕರ್ಮಗಳಿಂದ ಹಾಗೆ ಚಲಿಸಿದ ಆ ಜೀವನು.

೯-೧೦. ಮೆಲ್ಲಮೆಲ್ಲಗೆ ಎಂಟು ವಿಧವಾದ ಪ್ರಾಣವೃತ್ತಿಯಿಂದಲೂ ಬೇರೆ ಮಾಡಲ್ಪಡುತ್ತಾನೆ. ಕೊನೆಗೆ ಶರೀರವನ್ನೂ ಬಿಡುತ್ತಾನೆ. ಅನಂತರ ನಿಶ್ವಾಸ ಉಂಟಾಗುತ್ತದೆ. ಹೀಗೆ ತನ್ನ ಕರ್ಮದಿಂದ ಶರೀರವನ್ನು ಬಿಡುತ್ತಿರುವ ಅಥವಾ (ಉತ್ಪತ್ತಿಗಾಗಿ) ಆಶ್ರಯಿಸುತ್ತಿರುವ ಅಥವಾ ಆಯಾಯ ಯೋನಿಗಳನ್ನು ಪ್ರವೇಶಿಸುವ ಜೀವನನ್ನು ಸಿದ್ಧರು ಮಾತ್ರ ದಿವ್ಯದೃಷ್ಟಿಯಿಂದ ನೋಡುತ್ತಾರೆ. ಇತರರ ಕಣ್ಣಿಗೆ ಇದು ಗೋಚರವಾಗುವುದಿಲ್ಲ.

೧೧-೧೨. ಇಂತಹ ಜೀವನು ದೇಹವನ್ನು ಬಿಡುವ ಕಾಲ ಬಂದಾಗ ಆ ಕ್ಷಣದಲ್ಲಿಯೇ ಗಮನಕ್ಕೆ ಅರ್ಹವಾದ ಸೂಕ್ಷ್ಮವಾದ ಬೇರೆ ದೇಹವನ್ನು ಹೊಂದುತ್ತಾನೆ. ಇವನ ಶರೀರದಲ್ಲಿದ್ದ ಪಂಚಭೂತಗಳಲ್ಲಿ ಆಕಾಶ, ವಾಯು, ತೇಜಸ್ಸು ಈ ಮೂರು ಭೂತಗಳು ಮೇಲಕ್ಕೆ ಹೋಗುತ್ತವೆ. ಉಳಿದ ಎರಡು ಭೂತಗಳು ಕೆಳಕ್ಕೆ ಹೋಗುತ್ತವೆ.

**ಸಲಿಲಂ ಚ ಮಹಾಭಾಗ ತಥೈವ ಚ ವಸುಂಧರಾ ।**
**ಏವಂ ಪಂಚತ್ವಮಾಪನ್ನಃ ಪುರುಷಸ್ತ್ವಭಿಧೀಯತೇ ॥ ೧೩ ॥**

**ಏವಂ ಪಂಚತ್ವಮಾಪನ್ನೇ ತದ್ದೇಹಮತಿವಾಹಿಕಂ ।**
**ಭಯಾನಕೈರ್ಮಹಾಘೋರೈರ್ನಾನಾವೇಷಧರೈಸ್ತಥಾ ॥ ೧೪ ॥**

**ಉಚ್ಚೈಸ್ತಸ್ಯ ತದಾ ಬದ್ಧಂ ಕಾಲಪಾಶೇನ ಸತ್ವರಂ ।**
**ನೀಯತೇ ಕಾಲಪುರುಷೈರ್ಯಾಮ್ಯಂ ಮಾರ್ಗಂ ಸದುಸ್ತರಂ ॥ ೧೫ ॥**

**ತಪ್ತಾಂಬರೀಷಸಂಕಾಶಂ ತ್ವಯೋಗುಣನಿಭಂ ಮಹತ್ ।**
**ಸಂತಪ್ತಸಿಕತಂ ಘೋರಂ ತಾಮ್ರಪರ್ಣನಿಭಂ ತಥಾ ॥ ೧೬ ॥**

**ಷಡಶೀತಿಸಹಸ್ರಾಣಿ ಯೋಜನಾನಾಂ ಮಹೀತಲಂ ।**
**ಯಮಸ್ಯ ತು ಪುರೀ ರಾಮ ಘೋರಾ ಸಂಯಮಿನೀ ಸ್ಮೃತಾ ॥ ೧೭ ॥**

---

೧೩-೧೫. ಕೆಳಗೆ ಹೋಗತಕ್ಕವೇ ಜಲ ಮತ್ತು ಪೃಥಿವೀ ಇವುಗಳು. ಹೀಗೆ ಐದು ಭೂತಗಳೂ ವಿಯೋಗ ಹೊಂದಿದಲ್ಲಿ ಪುರುಷನು ಪಂಚತ್ವವನ್ನು ಹೊಂದಿದನೆಂದು ಹೇಳಲಾಗುತ್ತದೆ. ಹೀಗೆ ಪಂಚತ್ವವನ್ನು ಹೊಂದಿದ ಮೇಲೆ ಸಂಚಾರಾರ್ಹವಾದ ಅವನ ಸೂಕ್ಷ್ಮದೇಹವು ಭಯಂಕರರಾಗಿಯೂ, ಘೋರರೂಪಿಗಳಾಗಿಯೂ, ನಾನಾ ವೇಷಧಾರಿಗಳಾಗಿಯೂ ಇರುವ ಕಾಲಪುರುಷರಿಂದ ಕಾಲಿಪಾಶದಿಂದ ಕಟ್ಟಲ್ಪಟ್ಟು ಯಮನಗರಕ್ಕೆ ಒಯ್ಯಲ್ಪಡುತ್ತದೆ.

೧೬-೧೭. ಆ ಯಮನಗರದ ಮಾರ್ಗದಲ್ಲಿ ಕಾಯಿಸಿದ ಕಾವಲಿಯಂತೆ ದುಸ್ಸಹವಾಗಿಯೂ, ಕಬ್ಬಿಣದ ಹಗ್ಗಗಳಿಂದ ಕೂಡಿಯೂ, ಚೆನ್ನಾಗಿ ಕಾದಿರುವ ತಾಮ್ರದ ತಗಡಿನಿಂದ ಕೂಡಿಯೂ ಎಂಭತ್ತಾರು ಸಾವಿರ ಯೋಜನವುಳ್ಳ ದೊಡ್ಡ ಭೂಮಿ ಇರುತ್ತದೆ. ಇಂತಹ ಭೂಮಿಯನ್ನು ಹೊಂದಿರುವ ಸಂಯಮನೀ ಎಂಬ ಘೋರವಾದ ಯಮನಗರವು ಪ್ರಸಿದ್ಧಿ ಹೊಂದಿದೆ.

ನೀಯತೇ ತೇನ ಮಾರ್ಗೇಣ ತಾದೃಶೇನ ತು ತಾಂ ಪುರೀಂ ।
ಆಕೃಷ್ಯಮಾಣಃ ಪುರುಷೈಃ ಯಾಮ್ಯೈರ್ಘೋರೈರ್ಮಹೀತಲೇ ॥ ೧೮ ॥

ಪೀಡಾಮನುಭವಂಸ್ತತ್ರ ಮ್ರಿಯತೇ ನ ಚ ಮಾನದ ।
ಅತ್ಯರ್ಥವಿಷಮಃ ಪ್ರೋಕ್ತಃ ಸ ಮಾರ್ಗೋ ಘೋರದರ್ಶನಃ ॥ ೧೯ ॥

ವಿಶ್ವರೂಪಧರೋ ರಾಮ ಭುವಿ ಶೀತಾವೃತೋ ಮಹಾನ್ ।
ಹಿಮಪ್ರಪಾತಬಹುಳಶ್ಚಾತಿಶೀತಃ ಸುದುಸ್ತರಃ ॥ ೨೦ ॥

ಅಂಧಕಾರವೃತೇ ದುರ್ಗೇ ಗರ್ಭವಾಸೋಪಮಸ್ತಥಾ ।
ಅಗ್ನಿಸಂಸ್ಪರ್ಶವದನೈಃ ಕಾಕಕಾಕೋಲಜಂಬುಕೈಃ ॥ ೨೧ ॥

ಮಕ್ಷಿಕಾದಂಶಮಶಕೈರಾವೃತಃ ಸರ್ಪವೃಶ್ಚಿಕೈಃ ।
ಭಕ್ಷ್ಯಮಾಣೋಽಪಿ ತೈರ್ಜಂತುರ್ಭಕ್ಷ್ಯತೇ ಚಾಪಿ ರಾಕ್ಷಸೈಃ ॥ ೨೨ ॥

---

೧೮-೧೯. ಈ ರೀತಿಯಾದ ವಿಷಮಮಾರ್ಗದಿಂದ ಯಮಭಟರು ಭೂಮಿಯ ಮೇಲೆ ಎಳೆದುಕೊಂಡೇ ಘೋರವಾದ ಆ ಯಮನಗರಕ್ಕೆ ಒಯ್ಯುತ್ತಾರೆ. ಆ ಮಾರ್ಗದಲ್ಲಿ ಹಾಗೆ ಸೆಳೆಯಲ್ಪಡುವವನು ಬಹಳ ಹಿಂಸೆಯನ್ನು ಅನುಭವಿಸುತ್ತಾನೆಯೇ ಹೊರತು ಸಾಯುವುದಿಲ್ಲ. ಘೋರವಾದ ಆ ಮಾರ್ಗವು ಪ್ರಾಣಿ ಸಾಮಾನ್ಯಕ್ಕೂ ಬಹಳ ವಿಷಮವೆಂದೇ ಹೇಳಲ್ಪಟ್ಟಿದೆ.

೨೦-೨೨. ಆ ಮಾರ್ಗವು ನಾನಾರೂಪಗಳುಳ್ಳದ್ದಾಗಿಯೂ, ಮಂಜಿನ ಗಡ್ಡೆಗಳಿಂದ ಕೂಡಿ ಬಹಳ ಶೀತವಾಗಿಯೂ, ದಾಟಲಶಕ್ಯವಾಗಿಯೂ ಇರುತ್ತದೆ. ಕತ್ತಲೆಯಿಂದ ಕೂಡಿದ ದುರ್ಗಗಳಲ್ಲಿ ಗರ್ಭಗೃಹಗಳಂತಿರುವ ಕತ್ತಲೆಯ ಮನೆಗಳೂ ತುಂಬಿವೆ. ಅಲ್ಲಿ ಅಗ್ನಿಯಂತೆ ತೀಕ್ಷ್ಣವಾದ ಮುಖಗಳುಳ್ಳ ಕಾಗೆ, ನೀರು ಕಾಗೆ, ನರಿ ಇವುಗಳಿಂದಲೂ, ನೊಣ, ಕಾಡು ನೊಣ, ಸೊಳ್ಳೆ ಮೊದಲಾದುವುಗಳಿಂದಲೂ ಹಾವು ಚೇಳುಗಳಿಂದಲೂ. ಆವರಿಸಲ್ಪಟ್ಟ ಈ ಚೇತನನು ರಾಕ್ಷಸರುಗಳಿಂದ ಭಕ್ಷಿಸಲ್ಪಟ್ಟರೂ ಸಹ ಕಿತ್ತು ಕಿತ್ತು ತಿನ್ನಲ್ಪಟ್ಟರೂ ಸಹ ಹಿಂಸಿಸಲ್ಪಡುತ್ತಾನೆಯೇ ಹೊರತು ಪ್ರಾಣ ವಿಯೋಗವನ್ನು ಹೊಂದುವುದಿಲ್ಲ.

ಉತ್ಕೃತ್ಯೋತ್ಕೃತ್ಯ ಸಹಸಾ ನ ಚ ಪ್ರಾಣೈರ್ವಿಯುಜ್ಯತೇ ।
ಮುದ್ಗರೈಶ್ಚೂರ್ಣ್ಯತೇ ಘೋರೈಸ್ತುದ್ಯತೇ ಲೋಹಕಂಟಕೈಃ ॥ ೨೩ ॥

ಕ್ಷುಧಯಾ ತೃಷಯಾ ಚೈವ ಘೋರಯಾ ಚಾಪಿ ಪೀಡ್ಯತೇ ।
ದಹ್ಯಮಾನೋಽತಿಘೋರೇಣ ಸೈಕತೇನ ಚ ನೀಯತೇ ॥ ೨೪ ॥

ಏವಂ ಸಂಯಾಪ್ಯಮಾನಸ್ತು ಪ್ರಾಪ್ಯತೇ ಯಮಮಂದಿರಂ ।
ದಶಭಿಸ್ಸಮುಹೂರ್ತೈಸ್ತು ಪಂಥಾನಮತಿದುಸ್ತರಂ ॥ ೨೫ ॥

ಪ್ರಾಪ್ನೋತಿ ಭೀಮನಿರ್ಘೋಷಂ ದುರ್ಗಂಧಿ ಭಯದರ್ಶನಂ ।
ತತ್ಕಾಲಂ ಸುಮಹದ್ವೇತ್ತಿ ಪುರುಷೋ ದೇವಮಾಯಯಾ ॥ ೨೬ ॥

ಪಾಪಾನುರೂಪಂ ತತ್ಕಾಲಂ ತಸ್ಯ ತತ್ರಾಭಿಜಾಯತೇ ।
ಕಸ್ಯಚಿದ್ದ್ವಿಶತಂ ಕಾಲಂ ಕಸ್ಯಚಿಚ್ಛತಸಂಭವಂ ॥ ೨೭ ॥

---

೨೩-೨೪ ಅಲ್ಲಿ ಭಯಂಕರವಾದ ಮುದ್ಗರ (ಒನಕೆ) ಗಳಿಂದ ಪುಡಿಪುಡಿ ಮಾಡಲ್ಪಡುತ್ತಾನೆ. ಲೋಹದ ಮುಳ್ಳುಗಳಿಂದ ಚುಚ್ಚಲ್ಪಡುತ್ತಾನೆ. ಹಸಿವಿನಿಂದಲೂ, ಬಾಯಾರಿಕೆಯಿಂದಲೂ ಬಹಳವಾಗಿ ಪೀಡಿಸಲ್ಪಡುತ್ತಾನೆ. ಘೋರವಾದ ಕಾದಿರುವ ಮರಳಿನ ಮೇಲೆಯೇ ಸುಡುತ್ತಲೇ ಒಯ್ಯಲ್ಪಡುತ್ತಾನೆ. ಹೀಗೆಯೇ ಹಿಂಸಿಸಲ್ಪಡುತ್ತಾ ಯಮನ ಮನೆಗೆ ಒಯ್ಯಲ್ಪಡುತ್ತಾನೆ.

೨೫-೨೭. ಹೀಗೆ ಒಯ್ಯಲ್ಪಡುವವನು ಬಹಳ ದುಸ್ತರವಾಗಿಯೂ, ದುರ್ಗಂಧವುಳ್ಳದ್ದಾಗಿಯೂ, ಭಯಂಕರವಾಗಿಯೂ, ಭಯಂಕರಧ್ವನಿಯುಳ್ಳದ್ದಾಗಿಯೂ ಇರುವ ಆ ಮಾರ್ಗವನ್ನು ಹತ್ತು ಮುಹೂರ್ತಗಳಲ್ಲಿ ಆಕ್ರಮಿಸಿ ಆ ಯಮನಗರವನ್ನು ಹೊಂದುತ್ತಾನೆ. ಅಲ್ಲಿ ನಡೆಯುವ ಮನುಷ್ಯನು ಆ ಕಾಲವು ಅಲ್ಪವಾಗಿದ್ದರೂ ದೇವ ಮಾಯೆಯಿಂದ ಮಹಾಕಾಲವನ್ನಾಗಿ ಅನುಭವಿಸುತ್ತಾನೆ. ಏತಕ್ಕೆಂದರೆ ಆ ಕಾಲವೆಲ್ಲವೂ ಅವನವನ ಪಾಪಕ್ಕೆ ತಕ್ಕಂತೆ ಅಲ್ಲಿ ಫಲಪ್ರದವಾಗಿ ಪರಿಣಮಿಸುತ್ತದೆ. ಒಬ್ಬನಿಗೆ ಅದೇ ಇನ್ನೂರು ಮುಹೂರ್ತದಂತೆಯೂ ಮತ್ತೊಬ್ಬನಿಗೆ ನೂರು ಮುಹೂರ್ತದಂತೆಯೂ ತೋರುತ್ತದೆ.

ಕ್ಷುತ್ತೃಷ್ಣಾಸಂಭವಾಶ್ಚೈವ ಭವಂತ್ಯಥ ಮಹಾಭಯಾಃ ।
ದತ್ತಪಿಂಡಸ್ಯ ಧರ್ಮಜ್ಞ ಪ್ರೇತತ್ವಮುಪಜಾಯತೇ ॥ ೨೮ ॥

ಪ್ರೇತಲೋಕೇ ಸ ವಸತಿ ತತಃ ಸಂವತ್ಸರಂ ನರಃ ।
ಸೋದಕುಂಭಮತೋನ್ನಾದ್ಯಂ ಬಾಂಧವೈಸ್ತಸ್ಯ ದೀಯತೇ ॥ ೨೯ ॥

ದಿನೇ ದಿನೇ ಯದ್ಧರ್ಮಜ್ಞ ತದ್ಭುಙ್ಕ್ತೇ ನಾತ್ರ ಸಂಶಯಃ ।
ನ ದೀಯತೇ ತು ಯಸ್ಯೈತತ್ಸತು ತತ್ರ ಯಥಾ ಸ್ವಯಂ ॥ ೩೦ ॥

ಪೂರ್ವದತ್ತಮಥಾನ್ನಾದ್ಯಂ ಪ್ರಾಪ್ನೋತಿ ಸ್ವಯಮೇವ ತು ।
ಸ್ವಯಮೇವ ನ ದತ್ತಂ ತು ತಥಾ ದಾತಾ ನ ವಿದ್ಯತೇ ॥ ೩೧ ॥

ನ ಚಾಸ್ತ್ಯುದಕದಾತಾ ಚ ಸ ತು ತತ್ಪರಿತಪ್ಯತೇ ।
ಬಾಂಧವೈಸ್ತೂದಕಂ ದತ್ತಂ ತತ್ರ ತತ್ರಾಸ್ಯ ಜಾಯತೇ ॥ ೩೨ ॥

---

೨೮–೨೯. ಹಸಿವು ಬಾಯಾರಿಕೆಗಳಿಂದ ಉಂಟಾಗುವ ಭಯಗಳೂ ಸಹ ಅವನಿಗೆ ಹೆಚ್ಚುತ್ತವೆ. ಇಲ್ಲಿ ಮಾಡಿದ ಪಿಂಡಪ್ರದಾನದಿಂದ ಅವನಿಗೆ ಅಲ್ಲಿ ಅನಂತರ ಪ್ರೇತಭಾವವುಂಟಾಗುತ್ತದೆ. ಅನಂತರ ಆ ಮನುಷ್ಯನು ಪ್ರೇತಲೋಕದಲ್ಲಿ ಒಂದು ವರ್ಷದವರಿಗೂ ವಾಸಮಾಡುತ್ತಾನೆ. ಅವನ ಬಂಧುಗಳು ಅವನನ್ನುದ್ದೇಶಿಸಿ ಸೋದಕುಂಭ, ಅನ್ನಾದಿಗಳನ್ನೂ ಕೊಡುತ್ತಾರೆ.

೩೦–೩೧. ಪ್ರತಿದಿನದಲ್ಲಿಯೂ ಇಲ್ಲಿ ಕೊಡುವ ಸೋದ ಕುಂಭಾದಿಗಳಿಂದಲೇ ಅವನು ಅಲ್ಲಿ ಭುಂಜಿಸಿ ತೃಪ್ತಿಹೊಂದುತ್ತಾನೆ. ಇದರಲ್ಲಿ ಸಂದೇಹವಿಲ್ಲ. ಯಾವನಿಗೆ ಇಲ್ಲಿ ಯಾರೂ ಏನನ್ನೂ ಕೊಡುವುದಿಲ್ಲವೋ ಅಂತಹವನು ಅಲ್ಲಿರುವಾಗ ತಾನು ಇಲ್ಲಿ ಮೊದಲು ಮಾಡಿದ್ದ ಅನ್ನದಾನಾದಿಗಳನ್ನು ತಾನೇ ಹೊಂದಿ ಬದುಕುತ್ತಾನೆ. ಯಾವನು ಇಲ್ಲಿ ಮೊದಲೂ ದಾನಾದಿಗಳನ್ನು ಮಾಡಿರುವುದಿಲ್ಲವೋ ಅವನ ಬಂಧುಗಳಿಂದಲೂ ಅವನಿಗೆ ಏನೂ ಲಭಿಸದಿದ್ದಲ್ಲಿ ಅಂತಹವನಿಗೆ ದಾನಮಾಡುವವರು ಅಲ್ಲಿ ಯಾರೂ ಇಲ್ಲ.

೩೨–೩೩. ಇಂತಹವನಿಗೆ ಉದಕದಾನವನ್ನು ಮಾಡುವವನೂ ಇಲ್ಲದಿದ್ದಲ್ಲಿ ಅವನು ಆ ಪ್ರೇತಲೋಕದಲ್ಲಿ ಬಹಳ ಪರಿತಾಪವನ್ನು ಹೊಂದುತ್ತಾನೆ. ಬಾಂಧವರಿಂದ

ನದೀ ಶೀತಜಲಾ ನಾಮ ಬಹುಪಾನೀಯಸಂಯುತಾ ।
ಮಾಸಿ ಮಾಸಿ ಚ ಯಚ್ಛ್ರಾದ್ಧಂ ತಸ್ಯ ತತ್ರ ಪ್ರದೀಯತೇ ॥ ೩೩ ॥

ತೇನ ತೃಪ್ತಿಮವಾಪ್ನೋತಿ ಪರಮಾಂ ನಾತ್ರ ಸಂಶಯಃ ।
ಮಾನುಷ್ಯೇಣ ತು ಮಾಸೇನ ಪಿತೃಲೋಕೇ ದಿನಂ ಸ್ಮೃತಂ ॥ ೩೪ ॥

ಪ್ರೇತಲೋಕೇ ತು ದಿವಸೋ ಮಾನುಷ್ಯೇಣ ವಿಧೀಯತೇ ।
ತಸ್ಮಾದ್ದಿನೇ ದಿನೇ ದೇಯಂ ಪ್ರೇತಾಯಾನ್ನಂ ತು ವತ್ಸರಂ ॥ ೩೫ ॥

ಏವಂ ಸಂಯಾಪ್ಯಮಾನಸ್ತು ಪ್ರಾಪ್ನೋತಿ ಯಮಮಂದಿರಂ ।
ತತಃ ಪಶ್ಯತ್ಯಸೌ ದೇವಂ ಪಾಪಾತ್ಮಾ ಘೋರದರ್ಶನಂ ॥ ೩೬ ॥

ಚಿತ್ರಗುಪ್ತಸ್ತತಸ್ತಸ್ಯ ಜ್ಞಾತ್ವಾ ಕರ್ಮ ಯಥಾವಿಧಂ ।
ಆಜ್ಞಾಪಯತಿ ಧರ್ಮಜ್ಞ ಶುಭಂ ವಾ ಯದಿ ವಾ ಶುಭಂ ॥ ೩೭ ॥

---

ಕೊಡಲ್ಪಟ್ಟ ಉದಕವೂ ಅಲ್ಲಿ ಅವನ ತೃಪ್ತಿಗಾಗಿ ಹೆಚ್ಚಾದ ನೀರಿನಿಂದ ಕೂಡಿದ ಶೀತಜಲವುಳ್ಳ ನದಿಯಾಗಿಯೇ ಆಗುತ್ತದೆ. ಪ್ರತಿಮಾಸದಲ್ಲಿಯೂ ಕೊಡಲ್ಪಡುವ ಶ್ರಾದ್ಧವೂ ಅಲ್ಲಿ ಅವನಿಗೆ ಕೊಡಲ್ಪಡುತ್ತದೆ.

೩೪-೩೫. ಇದರಿಂದ ಅವನು ಅಲ್ಲಿ ಹೆಚ್ಚಾದ ತೃಪ್ತಿಯನ್ನು ಹೊಂದುತ್ತಾನೆ. ಇದರಲ್ಲಿ ಸಂದೇಹವಿಲ್ಲ ಮನುಷ್ಯಲೋಕದ ಗಣನೆಯಿಂದ ಉಂಟಾಗುವ ಒಂದು ತಿಂಗಳು ಪಿತೃಲೋಕದಲ್ಲಿ ದಿನವೆಂದು ಕರೆಯಲ್ಪಡುತ್ತದೆ. ಪ್ರೇತಲೋಕದಲ್ಲಿ ಮಾತ್ರ ಅದು ದಿನವೆಂದೇ ಭಾವಿಸಲಾಗುತ್ತದೆ. ಆದುದರಿಂದ ಪ್ರೇತಲೋಕವಾಸಿಯಾಗಿರುವವನ ತೃಪ್ತಿಗಾಗಿ ವರ್ಷದವರಿಗೂ ಪ್ರತಿದಿನವೂ ಅನ್ನವನ್ನು ದಾನ ಮಾಡುತ್ತಲೇ ಇರಬೇಕು.

೩೬-೩೭. ಹೀಗೆ ಪೀಡಿಸಲ್ಪಡುವ ಆ ಚೇತನನು ಯಮಗೃಹವನ್ನು ಸೇರುತ್ತಾನೆ. ತನ್ನ ಪಾಪಕರ್ಮಕ್ಕೆ ತಕ್ಕಂತೆ ಘೋರಾಕಾರನಾಗಿ ತೋರಿ ಬರುವ ಯಮನನ್ನು ಅಲ್ಲಿ ನೋಡುತ್ತಾನೆ. ಅಲ್ಲಿರುವ ಚಿತ್ರಗುಪ್ತನು ಶುಭವಾಗಿಯೋ ಅಶುಭವಾಗಿಯೋ ಇರುವ ಇವನ ಕರ್ಮವನ್ನು ತಿಳಿದು ಅದಕ್ಕೆ ತಕ್ಕಂತೆ ಶಿಕ್ಷೆಯನ್ನು ಆಜ್ಞಾಪಿಸುತ್ತಾನೆ.

ತತಃ ಶ್ಮಶಾನಿಕಾ ನಾಮ ದೇವಾ ಯಾಮ್ಯಾ ಭಯಾವಹಾಃ ।
ಶೀತವಾತಾತಪೋಪೇತಂ ತದಾ ರಕ್ಷಂತಿ ಮಾನವಂ ॥ ೩೮ ॥

ಯಥೇಹ ಬಂಧನೇ ಕಶ್ಚಿದ್ರಕ್ಷ್ಯತೇ ವಿಷಮೈರ್ನರೈಃ ।
ಪ್ರೇತಪಿಂಡೈಸ್ತತೋ ದತ್ತೈಃ ದೇಹಮಾಪ್ನೋತಿ ಭಾರ್ಗವ ॥ ೩೯ ॥

ಭೋಗದೇಹಮಿತಿ ಪ್ರೋಕ್ತಂ ಕ್ರಮಾದೇವ ನ ಸಂಶಯಃ ।
ಪ್ರೇತಪಿಂಡಾ ನ ದೀಯಂತೇ ಯಸ್ಯ ತಸ್ಯ ವಿಮೋಕ್ಷಣಂ ॥ ೪೦ ॥

ಶ್ಮಶಾನಿಕೇಭ್ಯೋ ದೇವೇಭ್ಯಃ ಆಕಲ್ಪಂ ನೈವ ವಿದ್ಯತೇ ।
ತತ್ರಾಸ್ಯ ಯಾತನಾ ಘೋರಾಃ ಶೀತವಾತಾತಪೋದ್ಭವಾಃ ॥ ೪೧ ॥

---

೩೮-೩೯. ಅನಂತರ ಆಜ್ಞಾನುಯಾಯಿಗಳಾದ ಭಯಂಕರರಾದ ಶ್ಮಶಾನಿಕರೆಂಬ ದೇವಪ್ರಕೃತಿಗಳಾದ ಯಮಭಟರು ಶೀತ, ವಾತ, ಬಿಸಿಲು ಇವುಗಳಿಂದ ದುಃಖಪಟ್ಟಿರುವ ಈ ಚೇತನನನ್ನು ಅಲ್ಲಿ ರಕ್ಷಿಸುತ್ತಾರೆ. ಈ ಲೋಕದಲ್ಲಿ ಅಪರಾಧಿಯಾಗಿ ಕ್ರೂರಿಗಳಾದ ರಾಜಭಟರುಗಳಿಂದ ಸುತ್ತುವರಿಯಲ್ಪಟ್ಟವನನ್ನು ಸಮರ್ಥನಾದ ಒಬ್ಬಾನೊಬ್ಬ ಮಹಾಪುರುಷನು ರಕ್ಷಿಸುವಂತೆ ಅಲ್ಲಿಯೂ ಪ್ರೇತಪಿಂಡಗಳು ಇವನನ್ನು ರಕ್ಷಿಸಲು ಸಹಕಾರಿಯಾಗುತ್ತವೆ. ಪ್ರೇತಪಿಂಡಗಳಿಂದ ಈ ರೀತಿ ತೃಪ್ತಿಹೊಂದಿದ ಆ ಚೇತನನು ಆ ದೇಹವನ್ನು ಬಿಟ್ಟು ಭೋಗಾರ್ಹವಾದ ಬೇರೆ ದೇಹವನ್ನೂ ಹೊಂದುತ್ತಾನೆ.

೪೦-೪೧. ಕ್ರಮಕ್ರಮವಾಗಿ ಇಂತಹ ದೇಹವನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ಇದೇ ಭೋಗದೇಹವೆಂದು ಹೇಳಲ್ಪಡುತ್ತದೆ. ಯಾವ ಮೃತನನ್ನು ದ್ವೇಶಿಸಿ ಪ್ರೇತಪಿಂಡಗಳು ಕೊಡಲ್ಪಡುವುದಿಲ್ಲವೋ ಅವನಿಗೆ ಪ್ರಳಯಪರ್ಯಂತವೂ ಆ ಶ್ಮಶಾನಿಕರಿಂದ ಬಿಡುಗಡೆಯೇ ಉಂಟಾಗುವುದಿಲ್ಲ. ಅಲ್ಲಿ ಅವನಿಗೆ ಶೀತ, ವಾತ ಬಿಸಿಲು ಇವುಗಳಿಂದುಂಟಾಗಬಹುದಾದ ಘೋರವಾದ ಯಾತನೆಗಳು ತಪ್ಪುವಂತಿಲ್ಲ.

**ತತಃ ಸಪಿಂಡೀಕರಣೇ ಬಾಂಧವೈಶ್ಚ ಕೃತೇ ನರಃ ।**
**ಪೂರ್ಣೇ ಸಂವತ್ಸರೇ ದೇಹಮತೋಽನ್ಯಂ ಪ್ರತಿಪದ್ಯತೇ ॥ ೪೨ ॥**

**ತತಃ ಸ ನರಕಂಯಾತಿ ಸ್ವರ್ಗಂ ವಾ ಸ್ವೇನ ಕರ್ಮಣಾ ।**
**ತತಃ ಸ ಕಾಲಂ ವಸತಿ ಕರ್ಮಣಾಮನುರೂಪತಃ ॥ ೪೩ ॥**

**ಅರ್ವಾಕ್ಸಪಿಂಡೀಕರಣಂ ಯಸ್ಯ ಸಂವತ್ಸರಾತ್ಕೃತಂ ।**
**ಪ್ರೇತತ್ವಮಪಿ ತಸ್ಯಾಪಿ ಪ್ರೋಕ್ತಂ ಸಂವತ್ಸರಂ ಧ್ರುವಂ ॥ ೪೪ ॥**

---

೪೨–೪೪. ಅನಂತರ ಬಾಂಧವರು ಸಪಿಂಡೀಕರಣ ಶ್ರಾದ್ಧವನ್ನು ಮಾಡಿದ ನಂತರ ಸಂವತ್ಸರವು ಪೂರ್ತಿಯಾದ ಮೇಲೆ ಆ ಭೋಗದೇಹವನ್ನೂ ಬಿಟ್ಟು ಆ ಚೇತನನು ಮತ್ತೊಂದು ದೇಹವನ್ನು ಹೊಂದುತ್ತಾನೆ. ಅನಂತರ ಅವನು ತನ್ನ ಕರ್ಮಾನುಗುಣವಾದ ಸ್ವರ್ಗವನ್ನೋ ನರಕವನ್ನೋ ಹೊಂದಿ ಆ ದೇಹದಿಂದಲೇ ಕರ್ಮಕ್ಷಯಪರ್ಯಂತವಾಗಿ ಅಲ್ಲಿ ವಾಸಿಸುತ್ತಾನೆ. ಯಾವ ಮೃತಚೇತನನಿಗೆ ಸಂವತ್ಸರಕ್ಕೆ ಮೊದಲೇ ಸಪಿಂಡೀಕರಣ ಶ್ರಾದ್ಧವನ್ನು ಮಾಡುವರೋ ಆ ಚೇತನ ನಿಗೂ ಸಹ ಸಂವತ್ಸರಪರ್ಯಂತ ಪ್ರೇತಭಾವವು ತಪ್ಪುವುದೇ ಇಲ್ಲ. (ಧರ್ಮಶಾಸ್ತ್ರ ಕಾರರು ವತ್ಸರಾಂತದಲ್ಲಿಯೂ ಹನ್ನೆರಡನೇ ದಿನ ಮೊದಲು ಇಪ್ಪತ್ತಮೂರನೇ ದಿನ ಗಳಲ್ಲಿ ವಿಹಿತ ದಿನಗಳಲ್ಲಿಯೂ, ಎರಡು ಕಾಲಗಳಲ್ಲಿ ಯಾವುದಾದರೊಂದು ಕಾಲ ವನ್ನು ಸಪಿಂಡೀಕರಣ ಶ್ರಾದ್ಧಕ್ಕೆ ಅರ್ಹವಾದುದೆಂದು ಪರಿಗಣಿಸಿ ವತ್ಸರಾಂತ ಸಾಪಿಂಡ್ಯವೇ ಮುಖ್ಯಪಕ್ಷವೆಂದೂ, ದೇಹವು ಅನಿತ್ಯವಾದುದರಿಂದ ಹನ್ನೆರಡನೇ ದಿನ ಮಾಡುವ ಶ್ರಾದ್ಧವು ಗೌಣಕಲ್ಪವೆಂದೂ ನಿರ್ಣಯಿಸಿರುತ್ತಾರೆ. ವತ್ಸರಾಂತ ಸಾಪಿಂಡ್ಯವು ಮುಖ್ಯಪಕ್ಷವಾದರೂ ಕರ್ತೃವಿನ ದೇಹದ ಅಸ್ಥಿರತ್ವಾದಿ ಕಾರಣದಿಂದ ಕರ್ಮಕ್ಕೆ ಭಂಗ ಉಂಟಾಗಕೂಡದೆಂದು ಹನ್ನೆರಡನೆಯ ದಿನವೇ ಮೊದಲಾದ ಕಾಲವು ಸಂವತ್ಸರ ಪೂರ್ತಿಗೆ ಮೊದಲೇ ವಿಹಿತವಾಗಿದೆ. ಈ ನಿರ್ಣಯಕ್ಕೆ ಇಲ್ಲಿರುವ ಅರ್ವಾಕ್ಸಪಿಂಡೀಕರಣಾತ್ ಎಂಬ ವಚನವೇ ಧರ್ಮಶಾಸ್ತ್ರಕಾರರಿಗೆ

---

1 ಇಲ್ಲಿ ಬಾಂಧವರೆಂದರೆ ಆ ಚೇತನನ ಉತ್ತರ ಕ್ರಿಯೆಯಲ್ಲಿ ಕರ್ತೃವಾದವನೆಂದೇ ಗ್ರಹಿಸ ಬೇಕು. ಕರ್ತೃಗಳನ್ನು ಪರಿಗಣಿಸುವ ಕ್ರಮದಲ್ಲಿ ಕೊನೆಕೊನೆಯಲ್ಲಿ ಬಂಧುಗಳನ್ನೂ ಸೇರಿಸಿರು ವುದರಿಂದ ಇಲ್ಲಿ ಬಾಂಧವರೆಂದು ಸಾಮಾನ್ಯವಾಗಿ ನಿರ್ದೇಶಮಾಡಿರುತ್ತಾರೆ. ಬಂಧುವರ್ಗಕ್ಕೆ ಸೇರಿದವರೆಲ್ಲರೂ ಕರ್ತೃಗಳಾಗುವುದಿಲ್ಲ. ಪುತ್ರಾದಿಗಳೂ ಸಾಮಾನ್ಯದೃಷ್ಟಿಯಿಂದ ಬಂಧುಗ ಳಾಗಬಹುದು.

ಯೈರಿಷ್ಟಂ ವಿವಿಧೈರ್ಯಜ್ಞೈಃ ಪೂಜಿತೋ ಯೈಶ್ಚ ಕೇಶವಃ ।
ಪ್ರೇತಲೋಕಂ ನ ತೇ ಯಾಂತಿ ತಥಾ ಯೇ ಸಮರೇ ಹತಾಃ ॥ ೪೫ ॥

ಶ್ಮಶಾನಿಕಾನಾಂ ದೇವಾನಾಂ ಭವಂತಿ ವಶಗಾ ನ ತೇ ।
ಪ್ರೇತಲೋಕಂ ಪ್ರಪದ್ಯಂತೇ ತಥಾ ಘೋರಂ ಭಯಾವಹಂ ॥ ೪೬ ॥

ಏವಂ ಯಾಮ್ಯೇನ ಮಾರ್ಗೇಣ ಯಾಂತಿ ಪಾಪಾ ನರಾಧಮಾಃ ।
ಆರಾಮಸದನಂ ಯಾಂತಿ ತಥೈವ ದ್ರುಮರೋಪಕಾಃ ॥ ೪೭ ॥

ಶೀತಲೇನ ತು ಮಾರ್ಗೇಣ ಫಲಪುಷ್ಪವತಾ ಸುಖಂ ।
ಛತ್ರದಾಶ್ಚ ಸುಖಂ ಯಾಂತಿ ಮಾರ್ಗೇಣ ಸಸುಖೇನ ತೇ ॥ ೪೮ ॥

---

ಪ್ರಮಾಣವಚನವೆಂದು ತಿಳಿಯಬೇಕು. ಹೀಗೆ ಸಪಿಂಡೀಕರಣವು ಮೊದಲೇ ನಡೆದಿದ್ದರೂ ಪ್ರೇತಭಾವವು ತಪ್ಪುವುದಿಲ್ಲವೆಂಬ ಮುಂದಿನ ವಚನವೂ ಸಹ ಪ್ರತಿ ಮಾಸದಲ್ಲಿಯೂ ಮಾಡಬೇಕಾದ ಸೋದಕುಂಭ ಶ್ರಾದ್ಧದ ಸಂಕಲ್ಪಕ್ಕೆ ಅನುಗುಣ ವಾಗಿದೆ ಎಂದು ಶಾಸ್ತ್ರಜ್ಞರು ಭಾವಿಸಬೇಕು.)

೪೫-೪೬. ಯಾರು ನಾನಾವಿಧವಾದ ಯಜ್ಞಯಾಗಾದಿಗಳನ್ನು ಮಾಡಿರುವರೋ, ಕೇಶವನನ್ನೂ ಸಹ ಪೂಜಿಸಿರುವರೋ ಯಾರು ಯುದ್ಧದಲ್ಲಿ ಮಡಿಯುವರೋ ಅಂತಹವರು ಪ್ರೇತಲೋಕಕ್ಕೆ ಹೋಗುವುದೇ ಇಲ್ಲ. ಶ್ಮಶಾನಿಕರೆಂಬ ಯಮಭಟರಿಗೆ ಅಧೀನರಾಗಿ ಆಗುವುದೂ ಇಲ್ಲ. ಪಾಪಿಗಳಾದ ನರಾಧಮರು ಮಾತ್ರ ಈ ರೀತಿ ಭಯಂಕರವಾದ ಆ ಪ್ರೇತಲೋಕವನ್ನು ದಕ್ಷಿಣಮಾರ್ಗದಿಂದ ಹೊಂದುತ್ತಾರೆ.

೪೭-೪೮. ಧರ್ಮಾರ್ಥವಾಗಿ ಮರಗಳನ್ನು ನೆಟ್ಟವರು ಉದ್ಯಾನಗಳಿಂದ ಕೂಡಿದ ಮನೆಯನ್ನು ಹೊಂದುತ್ತಾರೆ. ಫಲಪುಷ್ಪಗಳಿಂದ ಕೂಡಿದ ತಂಪಾದ ಮಾರ್ಗದಿಂದ ಸುಖವಾಗಿ ಹೋಗುತ್ತಾರೆ. ಛತ್ರಿಯನ್ನು ದಾನಮಾಡಿದವರೂ ಸಹ ಸುಖಕರವಾದ ಮಾರ್ಗದಿಂದ ಹೋಗುತ್ತಾರೆ. ಪಾದರಕ್ಷೆಗಳನ್ನು ದಾನಮಾಡಿದವರು ಹೇಸರಕತ್ತೆಗಳಿಂದ ಕೂಡಿದ ಯಾನದಲ್ಲಿ ಕುಳಿತು ಹೋಗುತ್ತಾರೆ.

ಯಾನಮುಕ್ತತರೀಯುಕ್ತಮಾಸ್ಥಾಯೋಪಾನಹಪ್ರದಾಃ ।
ವಿಮಾನೈರ್ಯಾನದಾ ಯಾಂತಿ ತಥಾ ಶಯ್ಯಾಸನಪ್ರದಾಃ ।೪೯॥

ಗೃಹದಾಃ ಸವಿಹಾರಂ ತು ಯಾಂತಿ ತೃಪ್ತಾ ಜಲಪ್ರದಾಃ ।
ಭಕ್ಷ್ಯೈಃ ಭೋಜ್ಯೈಸ್ತಥಾ ತೃಪ್ತಾಃ ಯಾಂತಿ ಭೋಜನದಾಯಿನಃ ॥೫೦॥

ದೀಪಪ್ರದಾಃ ಪ್ರಕಾಶೇನ ಯಾಂತಿ ಮಾರ್ಗೇಣ ತೇ ಸುಖಂ ।
ಪೂಜ್ಯಮಾನಾ ಯಮಭಟೈರ್ಯಾಂತಿ ಭಕ್ತಾ ಜನಾರ್ದನಂ ॥೫೧॥

ನಾಸ್ತಿ ತೇಷಾಂ ಭಯಂ ಕಿಂಚಿದಿಹ ಲೋಕೇ ಪರತ್ರ ಚ ।
ತೇ ತೃಪ್ತಾಃ ಸರ್ವಕಾಮೈಶ್ಚ ತರಸಾ ಯಾಂತಿ ಮಾನವಾಃ ॥೫೨॥

---

೪೯-೫೧. ಯಾನಗಳನ್ನು ದಾನಮಾಡಿದವರೂ, ಆಸನಗಳು, ಮತ್ತು ಹಾಸಿಗೆ ಇವನ್ನು ದಾನಮಾಡಿದವರೂ ಸಹ, ವಿಮಾನದಿಂದ ಹೋಗುತ್ತಾರೆ. ಗೃಹ ದಾನವನ್ನು ಮಾಡಿದವರು ವಿಹರಿಸುತ್ತಾ ಹೋಗುತ್ತಾರೆ. ಜಲದಾನಮಾಡಿದವರು ತೃಪ್ತರಾಗಿ ಹೋಗುತ್ತಾರೆ. ಭೋಜನ ದಾನಮಾಡಿದವರು ಭಕ್ಷ್ಯಭೋಜ್ಯಗಳಿಂದ ತೃಪ್ತರಾಗಿ ನಡೆಯುತ್ತಾರೆ. ದೀಪ ದಾನಮಾಡಿದವರು ಬೆಳಕಿನಿಂದ ಕೂಡಿದ ಪ್ರಕಾಶಕರವಾದ ಮಾರ್ಗದಲ್ಲಿ ಸುಖದಿಂದ ಹೋಗುತ್ತಾರೆ. ಜನಾರ್ದನನಲ್ಲಿ ಭಕ್ತಿಯುಳ್ಳವರನ್ನು ಯಮಭಟರು ಮಾರ್ಗದಲ್ಲಿ ಸತ್ಕಾರಗಳಿಂದ ಪೂಜಿಸುತ್ತಾ ಕರೆದುಕೊಂಡು ಹೋಗುತ್ತಾರೆ.

೫೨-೫೩. ಅಂತಹವರಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಹ ಯಾವ ವಿಧವಾದ ಭಯವೂ ಇರುವುದಿಲ್ಲ. ಅವರು ಸಕಲ ವಿಧವಾದ ಮನೋರಥಗಳಿಂದಲೂ ಪೂರ್ಣರಾಗಿ ತೃಪ್ತಿಯಿಂದ ಜಾಗ್ರತೆಯಾಗಿಯೇ ತಮ್ಮ ನಿರ್ದಿಷ್ಟ ಸ್ಥಾನವನ್ನು ಹೊಂದುತ್ತಾರೆ. ಯಾರು ಸಾತ್ವಿಕ ಬುದ್ಧಿಯನ್ನು ಹೊಂದಿ ಸುರಾಧಿಪ

ಬುದ್ಧಿಂ ಸಮಾಸ್ಥಾಯ ತು ಸಾತ್ವಿಕೀಂ ಯೇ
ಭಕ್ತಾಃ ಸುರೇಶಸ್ಯ ಜನಾರ್ದನಸ್ಯ ।
ತೇಷಾಂ ಗತಿಸ್ತತ್ರ ತು ಯತ್ರ ರಾಮ
ಶ್ವೇತಾಃ ಪುಮಾಂಸೋ ಗತಸರ್ವಪಾಪಾಃ ॥ ೫೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಯಮಮಾರ್ಗವರ್ಣನಂ ನಾಮ
ಷೋಡಶೋತ್ತರಶತತಮೋಽಧ್ಯಾಯಃ

---

ನಾದ ಜನಾರ್ದನನಲ್ಲಿ ದೃಢವಾದ ಭಕ್ತಿಯನ್ನು ಹೊಂದುವರೋ ಅವರು ನಿಷ್ಪಾಪ ರಾದ ಸಾತ್ವಿಕರಿರುವ ಶ್ವೇತದ್ವೀಪವನ್ನು ಹೊಂದುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯಸಂವಾದ
ದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಯಮಮಾರ್ಗ ವರ್ಣನವೆಂಬ ನೂರ ಹದಿನಾರನೆಯ
ಅಧ್ಯಾಯ ಮುಗಿದಿದೆ.



## ನೂರ ಹದಿನಾರನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ದೇಹಿಯಾದ ಚೇತನನಿಗೆ ಆಯಸ್ಸು ಕಳೆದನಂತರ ದೇಹ ವಿಯೋಗ ಉಂಟಾದಮೇಲೆ ಅವನಿಗೆ ಉಂಟಾಗುವ ಭೋಗದೇಹಗಳನ್ನೂ ಪ್ರೇತ ಲೋಕವಾಸವನ್ನೂ ನಿರೂಪಿಸಿ ಪ್ರೇತಲೋಕವಾಸಿಗಳ ತೃಪ್ತಿಗಾಗಿ ಮುಖ್ಯವಾಗಿ ಮಾಡಬೇಕಾದ ಪಿಂಡಪ್ರದಾನವನ್ನೂ ಪ್ರೇತಪಿಂಡವಿಲ್ಲದಿರುವವರಿಗೆ ಉಂಟಾಗುವ ದುಃಖವನ್ನೂ ವಿವರಿಸಿ, ದಾನಮಾಡಿದವರಿಗೆ ಉಂಟಾಗಬಹುದಾದ ಸುಖವನ್ನೂ ಯಮಭಟರಿಂದ ಉಂಟಾಗುವ ಸನ್ಮಾನವನ್ನೂ ವಿವರಿಸಿ, ಕೇಶವನನ್ನು ಪೂಜಿಸಿ ಸಾತ್ವಿಕ ಭಕ್ತಿಯಿಂದ ಅವನನ್ನೇ ಆಶ್ರಯಿಸಿರುವವರಿಗೆ ಇಂತಹ ಪ್ರೇತಲೋಕ ವಾಸವೂ ಯಮಭಟರ ಅಧೀನತೆಯೂ ಇರುವುದಿಲ್ಲವೆಂದೂ ಅವರೇ ವಿಷ್ಣುಲೋಕ ಪ್ರಾಪ್ತಿಗೆ ಅರ್ಹರೆಂದೂ ಪ್ರಶಂಸಿಸಲಾಗಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಸಪ್ತದಶೋತ್ತರಶತತಮೋಽಧ್ಯಾಯಃ

**|| ರಾಮ ಉವಾಚ ||**

**ಭಗವನ್ ಶ್ರೋತುಮಿಚ್ಛಾಮಿ ಯೇ ನರಾಃ ಸ್ವರ್ಗಗಾಮಿನಃ |**
**ಕೇನ ಧರ್ಮಭೃತಾಂ ಶ್ರೇಷ್ಠ ತಥಾ ನಿರಯಗಾಮಿನಃ || ೧ ||**

**|| ಪುಷ್ಕರ ಉವಾಚ ||**

**ಆಶ್ರಮೇಷು ಯಥೋಕ್ತೇಷು ವರ್ತಂತೇ ಯೇ ದ್ವಿಜೋತ್ತಮಾಃ |**
**ಸ್ವಧರ್ಮಸಕ್ತಾಃ ಸತತಂ ತೇ ನರಾಃ ಸ್ವರ್ಗಗಾಮಿನಃ || ೨ ||**

**ವರ್ತಂತೇ ಯೇ ಮಹೀಪಾಲ ರಾಜಧರ್ಮಾನುಸಾರತಃ |**
**ಪುರೋಹಿತಮತೇ ಯುಕ್ತಾಃ ರಾಜಾನಃ ಸ್ವರ್ಗಗಾಮಿನಃ || ೩ ||**

---

### ನೂರ ಹದಿನೇಳನೆಯ ಅಧ್ಯಾಯ.

೧. ಭಾರ್ಗವನು ಪುನಃ ಪ್ರಶ್ನೆಮಾಡುತ್ತಾನೆ. ಪೂಜ್ಯನೇ ಸ್ವರ್ಗಕ್ಕೆ ಹೋಗಲು ಅರ್ಹರಾದವರಾರು. ಎಂತಹವರು ನರಕಕ್ಕೆ ಹೋಗುತ್ತಾರೆ. ಇದನ್ನು ನಿನ್ನಿಂದ ತಿಳಿಯಲು ಆಶಿಸುತ್ತೇನೆ. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಯಾವ ದ್ವಿಜರು ಶಾಸ್ತ್ರವಿಹಿತವಾದ ತಮ್ಮ ವರ್ಣಾಶ್ರಮದಲ್ಲಿ ನಿಂತು ಯಾವಾಗಲೂ ವರ್ಣಾಶ್ರಮೋಚಿತವಾದ ಧರ್ಮಗಳಲ್ಲೇ ಆಸಕ್ತಿಹೊಂದಿ ಶಾಂತರಾಗಿರುತ್ತಾರೆಯೋ ಅವರು ಸ್ವರ್ಗಗಾಮಿಗಳಾಗುತ್ತಾರೆ. ಯಾವ ರಾಜರು ರಾಜಧರ್ಮಕ್ಕೆ ತಕ್ಕಂತೆ ಪ್ರಜಾಪಾಲನ ಕರ್ಮದಲ್ಲಿ ನಿರತರಾಗಿರುವರೋ ಪುರೋಹಿತನ ಅಭಿಪ್ರಾಯಕ್ಕೆ ಅನುಸಾರಿಗಳಾಗಿರುವರೋ ಅಂತಹ ರಾಜರೂ ಸ್ವರ್ಗಗಾಮಿಗಳಾಗುತ್ತಾರೆ.

**ಪ್ರಜಾಸುಖೇ ಸುಖಂ ಯೇಷಾಂ ತದ್ದುಃಖೇ ಯೇ ಚ ದುಃಖಿತಾಃ ।**
**ದುಷ್ಟನಿಗ್ರಹಕರ್ತಾರಃ ಜ್ಞೇಯಾಸ್ತೇ ಸ್ವರ್ಗಗಾಮಿನಃ ॥ ೪ ॥**

**ಸ್ವಾಮ್ಯರ್ಥೇ ಬ್ರಾಹ್ಮಣಾರ್ಥೇ ವಾ ಮಿತ್ರಕಾರ್ಯೇ ಚ ಯೇ ಹತಾಃ ।**
**ಗೋಗ್ರಹೇ ನಿಹತಾ ಯೇ ಚ ತೇ ನರಾಃ ಸ್ವರ್ಗಗಾಮಿನಃ ॥ ೫ ॥**

**ದೇಹಧಾತೂನ್ ಪರಿತ್ಯಜ್ಯ ಸಲಿಲಾರಣ್ಯವಹ್ನಿಷು ।**
**ಅನಾಶನೇ ವಾ ಧರ್ಮಜ್ಞ ಮೃತಾ ಸ್ಯುಃ ಸ್ವರ್ಗಗಾಮಿನಃ ॥ ೬ ॥**

**ತೀರ್ಥಯಾತ್ರಾಪ್ರಸಕ್ತಾಶ್ಚ ನಿತ್ಯಮಧ್ವನಿ ಕರ್ಶಿತಾಃ ।**
**ತಪಸಾ ಕರ್ಶಿತಾ ಯೇ ಚ ತೇ ಜ್ಞೇಯಾ ಸ್ವರ್ಗಗಾಮಿನಃ ॥ ೭ ॥**

**ಮಧುಮಾಂಸನಿವೃತ್ತಾಶ್ಚ ನಿವೃತ್ತಾಮದ್ಯಪಾನತಃ ।**
**ಕಾಮಮೈಥುನತಶ್ಚಾಪಿ ವಿಜ್ಞೇಯಾಃ ಸ್ವರ್ಗಗಾಮಿನಃ ॥ ೮ ॥**

---

೪-೫. ಯಾವ ರಾಜರು ಪ್ರಜೆಗಳು ಸುಖವಾಗಿದ್ದಲ್ಲಿ ತಾವೂ ಸುಖಿಗಳಾಗಿರುವರೋ ಅವರು ದುಃಖಪಟ್ಟಲ್ಲಿ ದುಃಖಿಗಳೂ ಆಗುತ್ತಾರೆಯೋ ದುಷ್ಟನಿಗ್ರಹವನ್ನು ಮಾಡುವ ಅಂತಹ ರಾಜರೂ ಸ್ವರ್ಗಗಾಮಿಗಳಾಗುತ್ತಾರೆ. ಮತ್ತು ತನ್ನ ಸ್ವಾಮಿಯ ಕಾರ್ಯಕ್ಕಾಗಿಯಾಗಲಿ, ಬ್ರಾಹ್ಮಣನ ಉಪಕಾರಕ್ಕಾಗಲಿ, ಮಿತ್ರಕಾರ್ಯಕ್ಕಾಗಲಿ ಸಾಹಸದಲ್ಲಿ ಪ್ರಯತ್ನಿಸಿ ಯಾರು ಹತರಾಗುತ್ತಾರೆಯೋ, ಹಸುವನ್ನು ಹಿಡಿಯಲು ಹೋಗಿ ಯಾರು ಕೊಲ್ಲಲ್ಪಡುತ್ತಾರೆಯೋ ಅಂತಹವರೂ ಸಹ ಸ್ವರ್ಗಗಾಮಿಗಳಾಗುತ್ತಾರೆ.

೬-೭ ಯಾರು ವಿರಕ್ತಿಯಿಂದ ರಸರಕ್ತವೇ ಮೊದಲಾದ ದೇಹಧಾತುಗಳನ್ನು ನೀರಿನಲ್ಲಿಯಾಗಲಿ, ಅರಣ್ಯದಲ್ಲಿಯಾಗಲಿ, ಅಗ್ನಿಯಲ್ಲಿಯಾಗಲಿ ಪರಿತ್ಯಾಗ ಮಾಡಲು ಅನಶನವ್ರತದಿಂದಿದ್ದು ಮೃತರಾಗುವರೋ ಅವರೂ ಸ್ವರ್ಗಗಾಮಿಗಳಾಗುತ್ತಾರೆ. ತೀರ್ಥಯಾತ್ರಾಭಿಲಾಷೆಯಿಂದ ಹೊರಟು ನಿತ್ಯವೂ ದಾರಿಯಲ್ಲಿ ಸಂಚರಿಸಿ ಕೃಶರಾಗಿ ತಪಸ್ಸಿನಿಂದಲೂ ಕೃಶರಾಗಿ ದೇಹವಿಯೋಗಹೊಂದುತ್ತಾರೆಯೋ ಅವರೂ ಸಹ ಸ್ವರ್ಗಗಾಮಿಗಳಾಗುತ್ತಾರೆಂದು ತಿಳಿಯಬೇಕು.

೮-೯. ಯಾರು ಮಧುಮಾಂಸಾದಿ ಭಕ್ಷಣದಿಂದಲೂ ಮದ್ಯಪಾನದಿಂದಲೂ ನಿವೃತ್ತಿಹೊಂದಿರುವರೋ ಯಥೇಚ್ಛವಾದ ಮೈಥುನದಿಂದಲೂ ನಿವೃತ್ತಿ ಹೊಂದಿರು

ಮಾತಾಪಿತೃಪರಾ ದಾಂತಾಃ ಗುರುಭಕ್ತಾಃ ಪ್ರಿಯಂವದಾಃ ।
ಸತ್ಯಾರ್ಜವರತಾ ಯೇ ಚ ತೇ ನರಾಃ ಸ್ವರ್ಗಗಾಮಿನಃ ॥ ೯ ॥

ವೈವಾಹಿಕಾನಾಂ ವಸ್ತ್ರಾಣಾಂ ಪ್ರಸಾಣಾಂ ಯೇ ಪ್ರದಾಯಿನಃ ।
ಉದ್ಯಾನಾರಾಮಕರ್ತಾರಸ್ತೇ ನರಾಃ ಸ್ವರ್ಗಗಾಮಿನಃ ॥ ೧೦ ॥

ತಡಾಗಕೂಪಕರ್ತಾರಸ್ತಥಾ ಕನ್ಯಾಪ್ರದಾಯಕಾಃ ।
ಛತ್ರೋಪಾನಹದಾತಾರಸ್ತೇ ನರಾಃ ಸ್ವರ್ಗಗಾಮಿನಃ ॥ ೧೧ ॥

ಇಂಧನಾನಾಂ ಪ್ರದಾತಾರಃ ತಥಾ ಗೋಗ್ರಾಮದಾಯಿನಃ ।
ಗವಾಂ ಶುಶ್ರೂಷಕಾ ಯೇ ಚ ತೇ ನರಾಃ ಸ್ವರ್ಗಗಾಮಿನಃ ॥ ೧೨ ॥

ಪರೋಪಕಾರಸಕ್ತಾಶ್ಚ ಪರಬಂಧವಿವರ್ಜಕಾಃ ।
ಪೂಜ್ಯಪೂಜಯಿತಾರಶ್ಚ ತೇ ನರಾಃ ಸ್ವರ್ಗಗಾಮಿನಃ ॥ ೧೩ ॥

---

ವರೋ ಅವರೂ ಸ್ವರ್ಗಗಾಮಿಗಳಾಗುತ್ತಾರೆಂದು ತಿಳಿಯಬೇಕು. ಯಾರು ಇಂದ್ರಿಯ ನಿಗ್ರಹದಿಂದ ಶಾಂತಚಿತ್ತರಾಗಿ ಮಾತಾಪಿತೃಸೇವೆಯಲ್ಲಿ ನಿರತರಾಗಿರುವರೋ, ಗುರುವಿನಲ್ಲಿ ಭಕ್ತಿಯಿಂದ ವರ್ತಿಸುತ್ತಾ ಪ್ರಿಯವಾದ ಮಾತುಗಳನ್ನಾಡುತ್ತಾ ಸತ್ಯದಲ್ಲಿಯೂ ಋಜು ಮಾರ್ಗದಲ್ಲಿಯೂ ನಿರತರಾಗಿರುವರೋ ಅವರೂ ಸ್ವರ್ಗಗಾಮಿಗಳಾಗುತ್ತಾರೆ.

೧೦–೧೧. ಯಾರು ವಿವಾಹಕ್ಕೆ ಅರ್ಹವಾದ ವಸ್ತ್ರಗಳನ್ನೂ ಅರವಟ್ಟಿಗೆಗಳನ್ನೂ ದಾನಮಾಡಿರುತ್ತಾರೆಯೋ ಉದ್ಯಾನ ಮತ್ತು ತೋಪುಗಳನ್ನು ಹಾಕಿರುತ್ತಾರೆಯೋ ಅವರೂ ಸಹ ಸ್ವರ್ಗಗಾಮಿಗಳಾಗುತ್ತಾರೆ. ಯಾರು ಕೆರೆ, ಭಾವಿ ಮೊದಲಾದವುಗಳನ್ನು ಮಾಡಿಸಿರುವರೋ ಕನ್ಯಾಪ್ರದಾನಕ್ಕೆ ಉಪಕರಿಸಿರುವರೋ ಛತ್ರಿ, ಪಾದರಕ್ಷೆ ಮೊದಲಾದುವನ್ನು ದಾನಮಾಡಿರುವರೋ ಅವರೂ ಸಹ ಸ್ವರ್ಗಗಾಮಿಗಳಾಗುತ್ತಾರೆ.

೧೨–೧೩. ಯಾರು ಇತರರ ಅನುಕೂಲಕ್ಕಾಗಿ ಸೌದೆಯನ್ನು ದಾನಮಾಡುತ್ತಾರೆಯೋ, ಮತ್ತು ಗೋವುಗಳನ್ನೂ ಗ್ರಾಮಗಳನ್ನೂ ದಾನಮಾಡುತ್ತಾರೆಯೋ ಗೋವುಗಳ ಸೇವೆಯಲ್ಲಿ ನಿರತರಾಗಿರುತ್ತಾರೆಯೋ ಅವರೂ ಸ್ವರ್ಗಗಾಮಿಗಳಾಗುತ್ತಾರೆ ಯಾರು ಯಾವಾಗಲೂ ಪರೋಪಕಾರದಲ್ಲಿಯೇ ಆಸಕ್ತಿ ಹೊಂದಿರುವರೋ ಪರರ ಬಂಧವನ್ನು ಹೋಗಲಾಡಿಸುತ್ತಾರೆಯೋ ಅವರೂ ಸ್ವರ್ಗಗಾಮಿಗಳಾಗುತ್ತಾರೆ.

ಸ್ವಾಧ್ಯಾಯಸಕ್ತಾ ಧೀಮಂತೋ ಗುರುಶುಶ್ರೂಷಣೇ ರತಾಃ ।
ಉಪಾಸಕಾಶ್ಚ ವೃದ್ಧಾನಾಂ ತೇ ಜ್ಞೇಯಾ ಸ್ವರ್ಗಗಾಮಿನಃ ॥ ೧೪ ॥

ಪ್ರತಿಶಯಪ್ರದಾತಾರಃ ತಥಾ ಯೇ ಸತ್ರದಾಯಕಾಃ ।
ಭಕ್ತಾ ಗೋದೇವವಿಪ್ರಾಣಾಂ ತೇ ನರಾಃ ಸ್ವರ್ಗಗಾಮಿನಃ ॥ ೧೫ ॥

ಶ್ರೋತಾರೋ ಯೇ ಚ ಧರ್ಮಾಣಾಂ ಯೇ ತಥಾ ಯಜ್ಞಯಾಜಿನಃ ।
ಉಪವಾಸರತಾ ಯೇ ಚ ತೇ ಜ್ಞೇಯಾ ಸ್ವರ್ಗಗಾಮಿನಃ ॥ ೧೬ ॥

ಕ್ಲೇಶಾನನುಭವಂತೀಹ ಶಾಸ್ತ್ರಾಧ್ಯಯನತತ್ಪರಾಃ ।
ಶಾಸ್ತ್ರಾಣಾಂ ಚ ಹಿತೇ ಯುಕ್ತಾಸ್ತೇ ಜ್ಞೇಯಾಃ ಸ್ವರ್ಗಗಾಮಿನಃ ॥ ೧೭ ॥

ಆರ್ತಪ್ರಾಣಪ್ರದಾ ಯೇ ಚ ಯೇ ಚ ಹಿಂಸಾವಿವರ್ಜಿತಾಃ ।
ಅಪೀಡಕಾಶ್ಚ ಭೂತಾನಾಂ ತೇ ನರಾಃ ಸ್ವರ್ಗಗಾಮಿನಃ ॥ ೧೮ ॥

---

೧೪-೧೫. ಯಾರು ವೇದಾಧ್ಯಯದಲ್ಲಿ ನಿರತರಾಗಿ ಜ್ಞಾನಿಗಳಾಗಿ ಗುರು ಶುಶ್ರೂಷೆಯಲ್ಲಿ ನಿರತರಾಗಿರುವರೋ ವೃದ್ಧಸೇವಿಗಳಾಗಿರುವರೋ ಅವರೂ ಸ್ವರ್ಗ ಗಾಮಿಗಳಾಗಿರುತ್ತಾರೆ. ಯಾರು ಮನೆಯೇ ಮೊದಲಾದ ಆಶ್ರಯವನ್ನು ಕೊಡು ತ್ತಾರೆಯೋ, ಸತ್ರವನ್ನು ದಾನಮಾಡುತ್ತಾರೆಯೋ ಗೋವುಗಳು ಮತ್ತು ದೇವತೆ ಗಳು, ಬ್ರಾಹ್ಮಣರು ಇವರಲ್ಲಿ ಭಕ್ತಿಯಿಂದ ವರ್ತಿಸುತ್ತಾರೆಯೋ ಅವರೂ ಸ್ವರ್ಗ ಗಾಮಿಗಳಾಗುತ್ತಾರೆ.

೧೬-೧೭. ಯಾರು ಶ್ರದ್ಧೆಯಿಂದ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಧರ್ಮಗಳನ್ನು ಶ್ರವಣಮಾಡುತ್ತಾರೆಯೋ ಅದಕ್ಕೆ ತಕ್ಕಂತೆ ಯಜ್ಞಯಾಗಾದಿ ಧರ್ಮಗಳನ್ನು ಆಚರಿಸುತ್ತಾರೆಯೋ ಮತ್ತು ಶಾಸ್ತ್ರೀಯವಾದ ಉಪವಾಸದಲ್ಲಿ ನಿರತರಾಗಿರುವರೋ ಅವರೂ ಸಹ ಸ್ವರ್ಗಗಾಮಿಗಳೆಂದು ತಿಳಿಯಬೇಕು. ಯಾರು ಕ್ಲಿಷ್ಟವಾದ ಶಾಸ್ತ್ರಾ ಧ್ಯಯನದಲ್ಲಿ ತತ್ಪರರಾಗಿ ಕ್ಲೇಶವನ್ನು ಅನುಭವಿಸುತ್ತಾರೆಯೋ ಮತ್ತು ಯಾವಾಗಲೂ ಶಾಸ್ತ್ರಕ್ಕೆ ತಕ್ಕಂತೆ ವರ್ತಿಸುತ್ತಾರೆಯೋ ಅವರೂ ಸಹ ಸ್ವರ್ಗಗಾಮಿಗಳಾಗುತ್ತಾರೆಂದು ತಿಳಿಯಬೇಕು.

೧೮-೧೯. ಪ್ರಾಣಾಪಾಯಶಂಕೆಯಿಂದ ಆರ್ತನಾಗಿರುವವನಿಗೆ ಯಾರು ಪ್ರಾಣದಾನವನ್ನೂ ಮಾಡಿ ಕಾಪಾಡುವರೋ ಮತ್ತು ಯಾರು ಹಿಂಸಾಕರ್ಮದಿಂದ ಪರಾಙ್ಮುಖರಾಗಿರುವರೋ, ಯಾರು ಪ್ರಾಣಿಸಾಮಾನ್ಯಕ್ಕೂ ಹಿಂಸಕರಾಗದೆ ದಯೆ

ದರಿದ್ರಾಯ ಚ ದಾತಾರಃ ಪ್ರಭವಶ್ಚ ಕ್ಷಮಾನ್ವಿತಾಃ ।
ಯೌವನಸ್ಥಾಶ್ಚ ಯೇ ಶಾಂತಾಃ ತೇ ನರಾಃ ಸ್ವರ್ಗಗಾಮಿನಃ ॥ ೧೯ ॥

ಪೌತ್ರದೌಹಿತ್ರಸಂಯುಕ್ತಾ ಯೇ ತಥಾ ಚಿರಜೀವಿನಃ ।
ಪ್ರಿಯಂಕರಾಶ್ಚ ಬಾಲಾನಾಂ ತೇ ನರಾಃ ಸ್ವರ್ಗಗಾಮಿನಃ ॥ ೨೦ ॥

ಪೋಷಕಾಣಾಮನಾಥಾನಾಂ ಯೇ ಚೈವೋದ್ವಾಹಕಾರಿಣಃ ।
ದ್ವಿರಾಗಮನದಾ ಯೇ ಚ ತೇ ನರಾಃ ಸ್ವರ್ಗಗಾಮಿನಃ ॥ ೨೧ ॥

ಗ್ರಹಾಣಾಂ ಪೂಜಕಾ ಯೇ ಚ ಯೇ ತಥಾ ಶ್ರಾದ್ಧಕಾರಿಣಃ ।
ಸಂವಿಭಾಗಕರಾ ಯೇ ಚ ತೇ ನರಾಃ ಸ್ವರ್ಗಗಾಮಿನಃ ॥ ೨೨ ॥

ಸರ್ವಾಸಾಂ ದೇವತಾನಾಂ ಚ ಯೇ ಚ ಪೂಜಾರತಾಃ ಸದಾ ।
ಸರ್ವದಾನರತಾ ಯೇ ಚ ತೇ ನರಾಃ ಸ್ವರ್ಗಗಾಮಿನಃ ॥ ೨೩ ॥

---

ಯಿಂದಿರುವರೋ ಅಂತಹವರೂ ಸ್ವರ್ಗಗಾಮಿಗಳಾಗುತ್ತಾರೆ. ಯಾರು ದಾನಕ್ಕೆ ಅರ್ಹನಾದ ದರಿದ್ರನಿಗೇ ದಾನಮಾಡಿ ಉಪಕರಿಸುತ್ತಾರೆಯೋ ಯಾರು ಪ್ರಭುತ್ವವನ್ನು ಹೊಂದಿಯೂ ಕೂಡ ಪ್ರಜೆಗಳ ವಿಷಯದಲ್ಲಿ ಕ್ಷಮೆಯಿಂದ ಕೂಡಿರುವರೋ, ಯಾರು ನಾನಾ ವಿಧವಾದ ವಿಕಾರಗಳಿಗೆ ಸ್ಥಾನವಾದ ಯೌವನವನ್ನು ಹೊಂದಿದ್ದರೂ ವಿವೇಕದಿಂದ ನಿರ್ವಿಕಾರಚಿತ್ತರಾಗಿ ಶಾಂತಿಯಿಂದಿರುವರೋ, ಅವರೂ ಸಹ ಸ್ವರ್ಗಗಾಮಿಗಳಾಗುತ್ತಾರೆ.

೨೦–೨೧. ಯಾರು ಮೊಮ್ಮಕ್ಕಳು, ಮಗಳ ಮಕ್ಕಳು ಮೊದಲಾದ ಸಂತತಿಯೊಡನೆ ಬಹುದಿವಸ ಬದುಕಿರುವರೋ, ಮಕ್ಕಳ ವಿಷಯದಲ್ಲಿ ಬಹಳ ಪ್ರೀತಿಯಿಂದಿರುತ್ತಾರೆಯೋ ಅಂತಹವರೂ ಸ್ವರ್ಗಗಾಮಿಗಳಾಗುತ್ತಾರೆ. ಯಾರು ತಮಗೆ ಮೊದಲು ಪೋಷಕರಾಗಿದ್ದವರಿಗೂ, ಅನಾಥರಿಗೂ ಸಹ ಸ್ವಪ್ರಯತ್ನದಿಂದ ವಿವಾಹ ಮಾಡಿಸುತ್ತಾರೆಯೋ, ಯಾಚಕರು ಎರಡನೆಯ ಆವರ್ತಿ ಪುನಃ ಬರದಂತೆ ಮೊದಲೇ ದಾನಮಾಡುತ್ತಾರೆಯೋ ಅಥವಾ ಒಂದುಸಲ ಬಂದವನು ಮತ್ತೊಂದು ಸಲವೂ ತನ್ನಲ್ಲಿ ಬರುವಷ್ಟು ಸುಮುಖರಾಗಿರುತ್ತಾರೆಯೋ ಅವರೂ ಸಹ ಸ್ವರ್ಗಗಾಮಿಗಳಾಗುತ್ತಾರೆ.

೨೨–೨೩. ಯಾರು ಗ್ರಹಗಳ ಪೂಜೆಯಲ್ಲಿ ಆಸಕ್ತರಾಗಿರುವರೋ ಹಾಗೆಯೇ ಶ್ರಾದ್ಧಕರ್ಮದಲ್ಲಿಯೂ, ತತ್ಪರರಾಗಿರುವರೋ, ತಾನು ಹೊಂದಿದುದನ್ನು ಇತರರಿಗೂ ವಿಭಾಗಿಸಿಕೊಟ್ಟು:ತೃಪ್ತಿಪಡಿಸುವ ಸ್ವಭಾವ ಉಳ್ಳವರೋ ಅವರೂ ಸಹ ಸ್ವರ್ಗಗಾಮಿ

**ಅಹತಾಶ್ಚ ತಥಾ ತತ್ರ ಕೃತ್ವಾ ಕರ್ಮಾತಿದುಷ್ಕರಂ ।**
**ಕಾಲೇನಾಪಿ ಮೃತಾ ರಾಮ ತೇ ನರಾಃ ಸ್ವರ್ಗಗಾಮಿನಃ || ೨೪ ||**

**ಯೇ ಭಕ್ತಿಮಂತೋ ಮಧುಸೂದನಸ್ಯ**
**ದೇವೇಶ್ವರಸ್ಯಾಪ್ರತಿಮಸ್ಯ ನಿತ್ಯಂ ।**
**ಸತ್ತ್ವೇನ ಹೀನಾ ರಜಸಾಪಿಯುಕ್ತಾ**
**ಸ್ತೆಯಾಂತಿ ನಾಕಂ ಸುರಸಂಘಪೂಜ್ಯಾಃ || ೨೫ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಸ್ವರ್ಗಭಾಗ್ವರ್ಣನಂ ನಾಮ ಸಪ್ತದಶೋತ್ತರಶತತಮೋಽಧ್ಯಾಯಃ**

---

ಯಾಗುತ್ತಾರೆ. ಯಾರು ಯಾವಾಗಲೂ ಎಲ್ಲಾ ದೇವತೆಗಳನ್ನೂ ಪೂಜಿಸುವ ಸ್ವಭಾವ ಹೊಂದಿರುವರೋ ಎಲ್ಲಾ ದಾನಗಳಲ್ಲೂ ಆಸಕ್ತರಾಗಿರುವರೋ ಅವರೂ ಸ್ವರ್ಗಗಾಮಿಗಳಾಗುತ್ತಾರೆ.

೨೪-೨೫. ಯಾರು ಸಾಹಸಿಯಾಗಿದ್ದು ಇತರರಿಂದ ಅಶಕ್ಯವಾದ ಕಾರ್ಯವನ್ನೂ ಮಾಡಿ ಅಂತಹ ಪರಿಸ್ಥಿತಿಯಲ್ಲೂ ಮೃತಿಹೊಂದದೆ ಕೆಲವು ಕಾಲದ ಮೇಲೆ ಮೃತಿಹೊಂದುತ್ತಾರೆಯೋ ಅವರೂ ಸಹ ಸ್ವರ್ಗಗಾಮಿಗಳಾಗುತ್ತಾರೆ. ಯಾರು ದೇವಾಧಿಪನಾಗಿಯೂ, ಅಸದೃಶ ಮಹಿಮೆಯುಳ್ಳವನಾಗಿಯೂ ಇರುವ ಮಧುಸೂದನನಲ್ಲಿ ಭಕ್ತಿಯಿಂದ ಇದ್ದು ಮಿಶ್ರಸತ್ತ್ವದಿಂದಲೂ, ರಜೋಗುಣದಿಂದಲೂ ದೂರರಾಗಿರುವರೋ ಅವರೂ ಸಹ ದೇವವಂದ್ಯರಾಗಿ ಸ್ವರ್ಗವನ್ನು ಹೊಂದುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಸ್ವರ್ಗಭಾಗಿಯವರ್ಣನವೆಂಬ ನೂರ ಹದಿನೇಳನೆಯ ಅಧ್ಯಾಯವು ಮುಗಿದಿದೆ.



## ನೂರ ಹದಿನೇಳನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಯಾರು ಸ್ವರ್ಗಭಾಗಿಗಳಾಗುತ್ತಾರೆಂಬ ಪ್ರಶ್ನೆಗೆ ಉತ್ತರವಾಗಿ ಸ್ವರ್ಗಪ್ರಾಪ್ತಿಗೆ ತಕ್ಕ ಆಶ್ರಮ ಧರ್ಮವೇ ಮೊದಲಾದ ಪುಣ್ಯಕರ್ಮಗಳನ್ನೂ ಎಲ್ಲಕ್ಕೂ ಮೇಲಾದ ಮಧುಸೂದನನ ಭಕ್ತಿಯನ್ನೂ ಸಹ ಸ್ವರ್ಗಪ್ರಾಪ್ತಿಗೆ ಸಾಧನವನ್ನಾಗಿ ನಿರೂಪಿಸಿರುವರು.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

# ದ್ವಿತೀಯಖಂಡೇ

---

## ಅಷ್ಟಾದಶೋತ್ತರಶತತಮೋಽಧ್ಯಾಯಃ

॥ ಪುಷ್ಕರ ಉವಾಚ ॥

**ಮಹಾಪಾತಕಿನೋ ಯೇ ಚ ಯೇ ಚ ಪಾತಕಿನೋ ಜನಾಃ ।**
**ಮಾಂಸಾಶಿನೋ ನರಾ ಯೇ ಚ ತಥಾ ಯೇಽಗಮ್ಯಾಗಾಮಿನಃ ।**
**ಪರದಾರರತಾ ಯೇ ಚ ತೇ ವೈ ನಿರಯಗಾಮಿನಃ ॥ ೧ ॥**

**ಅತಿಕ್ರಾಮಂತಿ ಯೇ ಭಾರ್ಯಾಂ ಪೀಡಯಂತಿ ಚ ಯೇ ನರಾನ್ ।**
**ಯೇ ಸಭಾಸ್ಸ್ವವಮನ್ಯಂತೇ ತೇ ವೈ ನಿರಯಗಾಮಿನಃ ॥ ೨ ॥**

---

## ನೂರ ಹದಿನೆಂಟನೆಯ ಅಧ್ಯಾಯ.

೧-೨. ಪುಷ್ಕರನು ನರಕ ಭಾಗಿಳನ್ನು ಹೇಳುತ್ತಾನೆ. ಯಾರು ಮಹಾ ಪಾತಕಗಳಿಂದ ದೂಷಿತರಾಗಿರುವರೋ ಯಾರು ಕೇವಲ ಪಾತಕಗಳಿಂದ ದೂಷಿತರಾಗಿ ರುವರೋ ಯಾರು ಮಾಂಸಾಹಾರಿಗಳೋ ಹಾಗೆಯೇ ಅಗಮ್ಯಳಾದ ಸ್ತ್ರೀಯಗಮನ ದಿಂದ ದೂಷಿತರಾಗಿರುವರೋ ಯಾರು ಪರಸ್ತ್ರೀಯಲ್ಲಿ ಆಸಕ್ತರಾಗಿರುವರೋ ಇವ ರೆಲ್ಲರೂ ನರಕಭಾಗಿಗಳಾಗುತ್ತಾರೆ. ಯಾರು ತನ್ನ ಪತ್ನಿಯ ನ್ಯಾಯವಾದ ಮನೋ ರಥವನ್ನೂ ಅತಿಕ್ರಮಿಸಿ ನಡೆಯುತ್ತಾರೆಯೋ ಜನರನ್ನೂ ಸಹ ಪೀಡಿಸುತ್ತಾರೆಯೋ ಯಾರು ಸಭೆಯಲ್ಲಿ ಇತರರನ್ನು ಅವಮಾನಪಡಿಸುತ್ತಾರೆಯೋ ಇವರೂ ಸಹ ನರಕ ಭಾಗಿಗಳಾಗುತ್ತಾರೆ.

ಬಹುಭಾರ್ಯಶ್ಚ ಭಾರ್ಯಾಸು ವರ್ತಂತೇ ನ ಸಮಂ ಚ ಯೇ ।
ಋತುಕಾಲಹರಾ ಯೇ ಚ ತೇ ವೈ ನಿರಯಗಾಮಿನಃ ॥ ೩ ॥

ಸಮ್ಯಕ್ ಭರ್ತೃಷು ಯಾ ನಾರ್ಯೋ ವರ್ತಂತೇ ನಾವಲೇಪತಃ ।
ಅಪ್ರಿಯೇ ಚ ತಥಾ ಸಕ್ತಾಃ ಜ್ಞೇಯಾಸ್ತಾ ನಿರಯಂಗಮಾಃ ॥ ೪ ॥

ಭರ್ತಾರಮವಮನ್ಯಂತೇ ಭಾಷಂತೇ ವಿಪ್ರಿಯಾಣಿ ಚ ।
ಸ್ವಾತಂತ್ರ್ಯೇಣ ಚ ವರ್ತಂತೇ ಜ್ಞಾತವ್ಯಾ ನಿರಯಂಗಮಾಃ ॥ ೫ ॥

ರಾಜಶಾಸ್ತ್ರೋಪದೇಶಂ ಯೇ ಸಂತ್ಯಜ್ಯ ವಸುಧಾಧಿಪಾಃ ।
ವರ್ತಂತೇ ಸರ್ವಕಾರ್ಯೇಷು ತೇ ವೈ ನಿರಯಗಾಮಿನಃ ॥ ೬ ॥

ವರ್ಣಾಶ್ರಮೋಕ್ತಂ ವರ್ತಂತೇ ಧರ್ಮಂ ತ್ಯಕ್ತ್ವಾ ತು ಯೇ ನರಾಃ ।
ಬಹಿಃಶಾಸ್ತ್ರಾನ್ಮಹಾಭಾಗ ತೇ ವೈ ನಿರಯಗಾಮಿನಃ ॥ ೭ ॥

---

೩–೪. ಅನೇಕ ಭಾರ್ಯೆಯರನ್ನು ಹೊಂದಿರುವ ಯಾವ ಪುರುಷರು ಎಲ್ಲಾ ಭಾರ್ಯೆಯರಲ್ಲಿಯೂ ಸಮದೃಷ್ಟಿಯಿಂದ ವರ್ತಿಸುವುದಿಲ್ಲವೋ ಯಾರು ಋತುಕಾಲದಲ್ಲಿಯೂ ಭಾರ್ಯೆಯರನ್ನು ಅತಿಕ್ರಮಿಸಿ ಅವರ ಮನೋರಥಕ್ಕೆ ಭಂಗತರುತ್ತಾರೆಯೋ ಇವರೂ ಸಹ ನರಕ ಭಾಗಿಗಳಾಗುತ್ತಾರೆ. ಯಾವ ಸ್ತ್ರೀಯರು ಅಹಂಕಾರದಿಂದ ಕೂಡಿ ತಮ್ಮ ತಮ್ಮ ಪತಿಗಳಲ್ಲಿ ಸರಿಯಾದ ವರ್ತನೆಯನ್ನು ಹೊಂದಿರುವುದಿಲ್ಲವೋ ಪತಿಗೆ ಅಪ್ರಿಯವಾದ ಕಾರ್ಯದಲ್ಲಿ ಆಸಕ್ತಿ ಹೊಂದುತ್ತಾರೆಯೋ ಅಂತಹ ಸ್ತ್ರೀಯರೂ ನರಕ ಭಾಗಿನಿಗಳಾಗುತ್ತಾರೆಂದು ತಿಳಿಯಬೇಕು.

೫–೬. ಯಾವ ಸ್ತ್ರೀಯರು ಪತಿಗೂ ಅವಮಾನ ಉಂಟಾಗುವಂತೆ ವರ್ತಿಸುತ್ತಾರೆಯೋ ಅಪ್ರಿಯವಾದ ಮಾತನ್ನೇ ಯಾವಾಗಲೂ ಆಡುತ್ತಿರುವರೋ ಪತಿಗೆ ತಾನು ಪರತಂತ್ರಳೆಂಬ ಭಾವನೆ ಇಲ್ಲದೆ ಸ್ವಾತಂತ್ರ್ಯದಿಂದ ವರ್ತಿಸುತ್ತಾರೆಯೋ ಅಂತಹ ನೀಚ ಸ್ತ್ರೀಯರೂ ನರಕವನ್ನು ಹೊಂದುತ್ತಾರೆ. ಯಾವ ದೊರೆಗಳು ರಾಜಶಾಸ್ತ್ರದ ಉಪದೇಶವನ್ನೂ ಬಿಟ್ಟು ಎಲ್ಲಾ ಕೆಲಸದಲ್ಲಿಯೂ ಸ್ವಾತಂತ್ರ್ಯದಿಂದ ವರ್ತಿಸುತ್ತಾರೆಯೋ ಅಂತಹ ನೀತಿಭ್ರಷ್ಟರಾದದೊರೆಗಳೂ ಸಹ ನರಕಭಾಗಿಗಳಾಗುತ್ತಾರೆ.

೭ ೮. ಯಾರು ತಮ್ಮ ವರ್ಣಾಶ್ರಮಗಳಿಗೆ ವಿಹಿತವಾಗಿರುವ ಧರ್ಮಗಳನ್ನೂ ಬಿಟ್ಟು ಶಾಸ್ತ್ರ ಬಾಹ್ಯರಾಗಿ ಸ್ವೇಚ್ಛಾಚಾರಿಗಳಾಗಿರುವರೋ ಅಂತಹ ಕರ್ಮಭ್ರಷ್ಟ

ಅಯೊಾಜ್ಯಯೊಾಜಿನೋ ಯೇ ಚ ಕೂಟಸಾಕ್ಷ್ಯಪ್ರದಾಶ್ಚ ಯೇ ।
ತಥಾನೃತರತಾ ಯೇ ಚ ತೇ ವೈ ನಿರಯಗಾಮಿನಃ ॥ ೮ ॥

ವ್ಯವಹಾರೇಷು ಯೇ ಸಕ್ತಾಃ ಪಕ್ಷಪಾತಾಭಿಧಾಯಿನಃ ।
ಅಸಮ್ಯಗ್ದರ್ಶಿನೋ ಯೇ ಚ ತೇ ವೈನಿರಯಗಾಮಿನಃ ॥ ೯ ॥

ಪ್ರೇಕ್ಷ್ಯಮಾಣೇ ಪರಿಜನೇ ಮಿಷ್ಟಮಶ್ನಂತಿ ಯೇ ನರಾಃ ।
ಅಸಂವಿಭಾಜ್ಯ ಧರ್ಮಜ್ಞ ತೇ ವೈ ನಿರಯಗಾಮಿನಃ ॥ ೧೦ ॥

ಭೃತಕಾಸ್ತು ಮಹಾಭಾಗ ಕುರ್ವತೇ ನೈವ ಯೇ ಭೃತಂ ।
ಅನಿರ್ದಿಷ್ಟಭುಜಶ್ಚೈವ ತೇ ವೈ ನಿರಯಗಾಮಿನಃ ॥ ೧೧ ॥

---

ರೂ ನರಕಭಾಗಿಗಳಾಗುತ್ತಾರೆ. ಯಾರು ಶಾಸ್ತ್ರೀಯವಾದ ಯಜ್ಞಯಾಗಾದಿಗಳಲ್ಲಿ ಅಧಿಕಾರವಿಲ್ಲದವನಿಂದಲೂ ಯಜ್ಞಮಾಡಿಸುತ್ತಾರೆಯೋ ಯಾರು ಸುಳ್ಳುಸಾಕ್ಷ್ಯವನ್ನು ನ್ಯಾಯಸ್ಥಾನದಲ್ಲಿ ಕೊಡುತ್ತಾರೆಯೋ ಯಾರುಯಾವಾಗಲೂ ಅನೃತಭಾಷಿಗಳೇ ಆಗಿರುವರೋ ಇವರೆಲ್ಲರೂ ನರಕಭಾಗಿಗಳಾಗಿಯೇ ಆಗುತ್ತಾರೆ.

೯-೧೦. ಯಾರು ವಾದಿಪ್ರತಿವಾದಿಗಳ ವಿವಾದರೂಪವಾದ ಕಲಹದಲ್ಲಿ ನ್ಯಾಯಾಧಿಪತಿಯ ಸ್ಥಾನವನ್ನು ಹೊಂದಿ ನ್ಯಾಯವನ್ನು ಬಿಟ್ಟು ಪಕ್ಷಪಾತದಿಂದ ವ್ಯವಹರಿಸುವರೋ ಮತ್ತು ವ್ಯವಹಾರದ ವಿಚಾರವನ್ನು ಅನಾದರದಿಂದ ಸರಿಯಾಗಿ ನೋಡುವುದೇ ಇಲ್ಲವೋ ಅವರೂ ನರಕಗಾಮಿಗಳಾಗುತ್ತಾರೆ. ಯಾವನೊಬ್ಬನು ತನ್ನ ಪರಿಜನರು ಆಶೆಯಿಂದ ನೋಡುತ್ತಿರುವಾಗಲೇ ಅವರಿಗೆ ಸ್ವಲ್ಪವನ್ನೂ ವಿಭಾಗಿಸಿ ಕೊಡದೆ ತಾನೊಬ್ಬನೇ ಮೃಷ್ಟಾನ್ನವನ್ನು ಭುಂಜಿಸುತ್ತಾನೆಯೋ ಅವನೂ ನರಕಭಾಗಿಯಾಗುತ್ತಾನೆ.

೧೧-೧೨. ಕೂಲಿಯಿಂದ ಕೆಲಸಮಾಡುವ ಭೃತ್ಯರು ತಮ್ಮ ಕೂಲಿಗೆ ತಕ್ಕಂತೆ ಕೆಲಸಮಾಡದೆ ತನ್ನ ಕೆಲಸಕ್ಕಾಗಿ ಸಲ್ಲತಕ್ಕ ದ್ರವ್ಯಕ್ಕಿಂತಲೂ ಹೆಚ್ಚಾದ ಹಣವನ್ನು ಯಾರು ಹೊಂದಿ ಅನುಭವಿಸುತ್ತಾರೆಯೋ ಅಂತಹ ಕೂಲಿಗಾರರೂ ನರಕವನ್ನು ಹೊಂದುತ್ತಾರೆ. ಸ್ವಾಮಿಯಾದ ಯಾವ ಯಜಮಾನನು ಕೆಲಸಗಾರರನ್ನೂ ವಂಚಿಸು

ವಂಚಕಾ ಭೃತಕಾನಾಂ ಚ ತಥೈವಾಶ್ರಿತವಂಚಕಾಃ ।
ವಂಚಕಾಶ್ಚ ತಥಾನ್ಯೇಷಾಂ ಜ್ಞೇಯಾ ನಿರಯಗಾಮಿನಃ ॥ ೧೨ ॥

ಕೃತಘ್ನಾ ನಿರ್ಘೃಣಾ ಯೇ ಚ ಪರಸ್ವಾದಾಯಿನಶ್ಚ ಯೇ ।
ತಥಾಚಾರಾಶ್ಚ ಮಿತ್ರಾಣಾಂ ತೇ ವೈ ನಿರಯಗಾಮಿನಃ ॥ ೧೩ ॥

ಗವಾಂ ಪಾನಪ್ರವೃತ್ತಾನಾಂ ಯೇ ತಥಾ ವಿಘ್ನಕಾರಿಣಃ ।
ತಥಾನ್ಯೇಷಾಂ ಚ ಭೂತಾನಾಂ ತೇ ವೈ ನಿರಯಗಾಮಿನಃ ॥ ೧೪ ॥

ಧರ್ಮಕಾರ್ಯಪ್ರವೃತ್ತಸ್ಯ ಯೇ ನರಾ ವಿಘ್ನಕಾರಿಣಃ ।
ಪಾಪಪ್ರೋತ್ಸಾಹಕಾಶ್ಚೈವ ತೇ ವೈ ನಿರಯಗಾಮಿನಃ ॥ ೧೫ ॥

ತ್ಯಾಗಿನಸ್ತ್ವಾಶ್ರಿತಾನಾಂ ಯೇ ಋತ್ವಿಜಾಂ ತ್ಯಾಗಿನಶ್ಚ ಯೇ ।
ಯಾಜ್ಯಾನಾಂ ಚ ಗುರೂಣಾಂ ಚ ತೇ ವೈ ನಿರಯಗಾಮಿನಃ ॥ ೧೬ ॥

---

ವನೋ ಹಾಗೆಯೇ ಆಶ್ರಿತರಲ್ಲಿಯೂ ಮೋಸದಿಂದಿರುವನೋ ಇತರರಿಗೂ ವಂಚಕನಾಗಿಯೋ ಇರುತ್ತಾನೆಯೋ ಅಂತಹ ಮೋಸಗಾರನೂ ಸಹ ನರಕಗಾಮಿಯಾಗುತ್ತಾನೆ.

೧೩-೧೪ ಯಾರು ಕೃತಘ್ನರಾಗಿಯೂ ನಿರ್ದಯರಾಗಿಯೂ ಇರುವರೋ, ಯಾರು ಪರದ್ರವ್ಯಾಪಹಾರದಲ್ಲಿಯೇ ನಿರತರಾಗಿರುವರೋ, ಯಾರು ಮಿತ್ರರ ವಿಷಯದಲ್ಲಿಯೂ ಡಂಭಾಚಾರಿಗಳಾಗಿರುವರೋ ಇವರೆಲ್ಲರೂ ನರಕಭಾಗಿಗಳಾಗುತ್ತಾರೆ ಮತ್ತು ಹಸುಗಳು ನೀರು ಕುಡಿಯಲು ಪ್ರಯತ್ನಿಸಿದಾಗ ಅವುಗಳಿಗೆ ಯಾರು ವಿಘ್ನಕಾರಿಗಳಾಗುತ್ತಾರೆಯೋ ಹಾಗೆಯೇ ಇತರ ಪ್ರಾಣಿಗಳ ಭಕ್ಷಣಕಾಲದಲ್ಲಿ ವಿಘ್ನಕಾರಿಗಳಾಗುತ್ತಾರೆಯೋ ಅವರೂ ನರಕಭಾಗಿಗಳಾಗುತ್ತಾರೆ.

೧೫-೧೬. ಧರ್ಮಕಾರ್ಯವನ್ನು ಮಾಡಲು ಪ್ರಯತ್ನಿಸಿದವನಿಗೆ ಯಾರು ವಿಘ್ನವನ್ನು ತಂದೊಡ್ಡಿ ಆ ಕಾರ್ಯಕ್ಕೆ ವಿಘಾತಮಾಡುತ್ತಾರೆಯೋ, ಪಾಪಕಾರ್ಯದಲ್ಲಿ ಪ್ರೋತ್ಸಾಹಿಸುವರೋ ಅಂತಹವರೂ ನರಕಗಾಮಿಗಳಾಗುತ್ತಾರೆ. ಯಾರು ನಿಷ್ಕಾರಣವಾಗಿ ಆಶ್ರಿತರನ್ನು ತ್ಯಜಿಸುತ್ತಾರೆಯೋ ಹಾಗೆಯೇ ಋತ್ವಿಕ್ಕುಗಳನ್ನೂ ಯಾಗಮಾಡುವವರನ್ನೂ ಗುರುಗಳನ್ನೂ ಸಹ ತ್ಯಾಗಮಾಡುತ್ತಾರೆಯೋ ಅವರೂ ಸಹ ನರಕಗಾಮಿಗಳಾಗುತ್ತಾರೆ.

ತ್ಯಾಗಿನೋ ದೇವತಾನಾಂ ಚ ವಹ್ನೀನಾಂ ತ್ಯಾಗಿನಶ್ಚ ಯೇ ।
ಶಾಸ್ತ್ರಾಣಾಂ ತ್ಯಾಗಿನೋ ಯೇ ಚ ತೇ ವೈ ನಿರಯಗಾಮಿನಃ ॥ ೧೭ ॥

ಬಾಲಕಾತಿಥಿವಿಪ್ರಾಣಾಂ ಸುರಾಣಾಂ ಚೈವ ಮಾನದ ।
ಯೇ ಚ ಪೂರ್ವಭುಜೋ ನಿತ್ಯಂ ತೇ ವೈ ನಿರಯಗಾಮಿನಃ ॥ ೧೮ ॥

ರಜಸ್ವಲಾಂ ಚ ಯೇ ಯಾಂತಿ ಯೇ ಚ ಪ್ರೇಷ್ಯಕರಾಂ ಸ್ತ್ರಿಯಂ ।
ವಿಯೋನಿಂ ಯೇ ಚ ಗಚ್ಛಂತಿ ತೇ ವೈ ನಿರಯಗಾಮಿನಃ ॥ ೧೯ ॥

ಶುಕ್ರಂ ತ್ಯಜಂತ್ಯಯೋನೌ ಯೇ ತಥಾಕಾಶೇ ಚ ನಿರ್ಘೃಣಾಃ ।
ಪರ್ವಸ್ವಪಿ ಚ ಧರ್ಮಜ್ಞ ತೇ ವೈ ನಿರಯಗಾಮಿನಃ ॥ ೨೦ ॥

---

೧೭-೧೮. ಯಾರು ದೇವತೆಗಳನ್ನು ಸತ್ಕರಿಸದೆ ತ್ಯಾಗಮಾಡುತ್ತಾರೆಯೋ, ಕಾರಣವಿಲ್ಲದೆ ಅಗ್ನಿಯನ್ನೂ ತ್ಯಾಗಮಾಡುತ್ತಾರೆಯೋ ಮತ್ತು ಸಚ್ಛಾಸ್ತ್ರಗಳನ್ನೂ ತ್ಯಾಗಮಾಡುತ್ತಾರೆಯೋ ಇಂತಹವರೂ ಸಹ ನರಕಭಾಗಿಗಳಾಗುತ್ತಾರೆ. ಸಣ್ಣ ಹುಡುಗರು ಮತ್ತು ಅತಿಥಿಗಳು ಮತ್ತು ಬ್ರಾಹ್ಮಣರು ದೇವತೆಗಳು ಇವರಿಗಿಂತ ಮುಂಚೆ ಯಾರು ಊಟಮಾಡುತ್ತಾರೆಯೋ (ಬಾಲಕ, ಅತಿಥಿ ಮೊದಲಾದವರಿಗೆ ಮೊದಲು ಭೋಜನಮಾಡಿಸಿ ನಂತರ ಗೃಹಸ್ಥನು ತಾನು ಭೋಜನಮಾಡಬೇಕೆಂದು ಈ ಗ್ರಂಥಕಾರರೇ ಹಿಂದೆ ಹೇಳಿರುತ್ತಾರೆ) ಅವರೂ ಸಹ ನರಕಗಾಮಿಗಳಾಗುತ್ತಾರೆ.

೧೯-೨೦. ಯಾರು ರಜಸ್ವಲೆಯಾದ ಸ್ತ್ರೀಯನ್ನು ನಿಷಿದ್ಧವಾದ ಆ ಕಾಲದಲ್ಲಿ ಸಂಗಮಿಸುತ್ತಾರೆಯೋ ಮತ್ತು ಯಾರು ಮನೆಯ ಕೆಲಸಕ್ಕಾಗಿ ಇರುವ ಭೃತ್ಯಳಾದ ಸ್ತ್ರೀಯಲ್ಲಿ ಪ್ರವೇಶಿಸುತ್ತಾರೆಯೋ, ಮತ್ತು ತನ್ನ ವರ್ಣಾಶ್ರಮಗಳಿಗೆ ವಿರುದ್ಧವಾದ ಸ್ತ್ರೀಯಲ್ಲಿ ಯಾರು ವರ್ತಿಸುತ್ತಾರೆಯೋ (ಅಥವಾ ಅಮಾನುಷವಾದ ಯೋನಿಯಲ್ಲಿಯಾರು ವರ್ತಿಸುತ್ತಾರೆಯೋ) ಇಂತಹವರೂ ಸಹ ನರಕ ಭಾಗಿಗಳಾಗುತ್ತಾರೆ. ಯಾರು ವಿಹಿತವಾದ ಯೋನಿಯನ್ನು ಬಿಟ್ಟು ಇತರ ಕಡೆಗಳಲ್ಲಾಗಲಿ ಅನಾವೃತವಾದ ಆಕಾಶಸ್ಥಾನದಲ್ಲಾಗಲಿ ವೀರ್ಯಮೋಕ್ಷವನ್ನು ಹೊಂದುತ್ತಾರೆಯೋ ಮತ್ತು ಪರ್ವಕಾಲದಲ್ಲಿ ಸ್ವಯೋನಿಯಲ್ಲಿ ವೀರ್ಯತ್ಯಾಗಮಾಡುವರೋ ಅಂತಹವರೂ ಸಹ ನರಕಭಾಗಿಗಳಾಗುತ್ತಾರೆ.

ಅನಧ್ಯಾಯೇಷು ಯೇ ರಾಮ ಸ್ವಾಧ್ಯಾಯಮಿಹ ಕುರ್ವತೇ ।
ನಿಂದಂತಿ ಚ ಗುರೂನ್ ಯೇ ವೈ ತೇ ವೈ ನಿರಯಗಾಮಿನಃ ॥ ೨೧ ॥

ದೇವತಾನಾಂ ಚ ದೇವಾನಾಂ ಬ್ರಾಹ್ಮಣಾನಾಂ ಚ ನಿಂದಕಾಃ ।
ಪುರಾಣಚರಿತಾನಾಂ ಚ ತೇವೈ ನಿರಯಗಾಮಿನಃ ॥ ೨೨ ॥

ಯೇ ನಾಸ್ತಿಕಾ ನರಾ ರಾಮ ಯೇ ಚ ಶ್ರದ್ಧಾವಿವರ್ಜಿತಾಃ ।
ಅಹಂಕಾರಗೃಹೀತಾಶ್ಚ ತೇ ವೈ ನಿರಯಗಾಮಿನಃ ॥ ೨೩ ॥

ಕುಕರ್ಮಸಕ್ತಾ ಮನುಜಾಃ ಸುಕರ್ಮಪರಿವರ್ಜಕಾಃ ।
ಸ್ವಾಮಿಮಿತ್ರದ್ರುಹೋ ಯೇ ಚ ತೇ ವೈ ನಿರಯಗಾಮಿನಃ ॥ ೨೪ ॥

ಯೇ ಚ ದ್ರೋಹರತಾ ರಾಜ್ಞಾಂ ಬ್ರಾಹ್ಮಣಾನಾಂ ಗವಾಮಪಿ ।
ಸುಹೃದಾಮಪಿ ಧರ್ಮಜ್ಞ ತೇ ವೈ ನಿರಯಗಾಮಿನಃ ॥ ೨೫ ॥

---

೨೧–೨೨. ಯಾರು ಅನಧ್ಯಯನ ದಿನಗಳಲ್ಲಿಯೂ, ಅಧ್ಯಯನವನ್ನು ಮಾಡುತ್ತಾರೆಯೋ, ಗುರುಗಳನ್ನೂ ನಿಂದಿಸುತ್ತಾರೆಯೋ ಅವರೂ ನರಕಗಾಮಿಗಳಾಗುತ್ತಾರೆ. ಯಾರು ದೇವತೆಗಳನ್ನೂ, ಇಂದ್ರಾದಿದೇವಗಣಗಳನ್ನೂ, ಬ್ರಾಹ್ಮಣರನ್ನೂ, ಪುರಾಣಗಳ ಚರಿತ್ರೆಗಳನ್ನೂ ನಿಂದಿಸುತ್ತಾರೆಯೋ, ಅವರೂ ನರಕಭಾಗಿಗಳಾಗುತ್ತಾರೆ.

೨೩–೨೪. ಯಾರು ನಾಸ್ತಿಕರಾಗಿಯೇ ಇರುವರೋ ಶ್ರದ್ಧೆ ಇಲ್ಲದವರಾಗಿ ಕೇವಲ ಅಹಂಕಾರದಿಂದ ಆಕ್ರಾಂತರಾಗಿರುವರೋ ಅವರೂ ಸಹ ನರಕಭಾಗಿಗಳಾಗುತ್ತಾರೆ ಯಾರು ವಿಹಿತವಾದ ಸತ್ಕರ್ಮವನ್ನು ಬಿಟ್ಟು ಕುತ್ಸಿತವಾದ ಕರ್ಮದಲ್ಲಿ ಆಸಕ್ತರಾಗಿರುವರೋ ಯಾರು ಸ್ವಾಮಿ ಮತ್ತು ಮಿತ್ರರನ್ನೂ ಮೋಸಪಡಿಸುತ್ತಾರೆಯೋ ಅವರೂ ಸಹ ನರಕಭಾಗಿಗಳಾಗುತ್ತಾರೆ.

೨೫–೨೬. ಯಾರು ರಾಜರ ವಿಷಯದಲ್ಲಿಯೂ ಬ್ರಾಹ್ಮಣರಲ್ಲಿಯೂ ಗೋವುಗಳಲ್ಲಿಯೂ ದ್ರೋಹಬುದ್ಧಿಯುಳ್ಳವರಾಗಿಯೇ ಇರುತ್ತಾರೆಯೋ, ಸ್ನೇಹಿತರಲ್ಲಿಯೂ

ಯೇ ತು ಪೈಶುನ್ಯಸಂಯುಕ್ತಾಃ ಪರಮರ್ಮಸ್ಪೃಶೋಽಪಿ ಚ ।
ಅಶುಚಶ್ಚ ತಥಾ ಮರ್ತ್ಯಾಸ್ತೇವೈ ನಿರಯಗಾಮಿನಃ ॥ ೨೬ ॥

ಸೋಮವಿಕ್ರಯಣೋ ಯೇಽಚ ಬೀಜವಿಕ್ರಯಿಣಸ್ತಥಾ ।
ಆತ್ಮವಿಕ್ರಯಣೋ ಯೇ ಚ ಜ್ಞೇಯಾ ನಿರಯಗಾಮಿನಃ ॥ ೨೭ ॥

ರಜಃ ಪಶ್ಯಂತಿ ಧರ್ಮಜ್ಞ ಯೇಷಾಂ ವೇಶ್ಮನಿ ಕನ್ಯಕಾಃ ।
ಶುಲ್ಕೇ ಚ ದತ್ತಾ ಸಾ ಯೈಶ್ಚ ತೇ ವೈ ನಿರಯಗಾಮಿನಃ ॥ ೨೮ ॥

ಬ್ರಹ್ಮೇಶಕೇಶವಾನಾಂ ಚ ಯೇ ನರಾ ಭೇದವಾದಿನಃ ।
ತಮೋಽಭಿಭೂತಾಃ ಪಠಿತಃ ತೇ ವೈ ನಿರಯಗಾಮಿನಃ ॥ ೨೯ ॥

ಕುಲಜಾನಾಂ ಸಪಿಂಡಾನಾಂ ಯೇ ಚ ಪಿಂಡವಿಲೋಪಕಾಃ ।
ಅಶ್ರಾದ್ಧದಾಶ್ಚ ಪೂರ್ವೇಷಾಂ ತೇ ವೈ ನಿರಯಗಾಮಿನಃ ॥ ೩೦ ॥

---

ದ್ರೋಹಿಗಳೇ ಆಗುವರೋ ಅವರೂ ನರಕ ಭಾಗಿಗಳಾಗುತ್ತಾರೆ. ಯಾರು ಪಶು ಸ್ವಭಾವದಿಂದ ಮತ್ತೊಬ್ಬರ ಮರ್ಮಸ್ಪರ್ಶಿಗಳಾಗಿರುವರೋ ಅಶುಚಿಗಳಾಗಿರುವರೋ ಅಂತಹ ಮನುಷ್ಯರೂ ಸಹ ನರಕಭಾಗಿಗಳಾಗುತ್ತಾರೆ.

೨೭-೨೮. ಸೋಮಲತೆಯನ್ನು ವಿಕ್ರಯ ಮಾಡಿದವರೂ ಬೀಜಗಳನ್ನು ವಿಕ್ರಯಿಸಿದವರೂ ದ್ರವ್ಯಕ್ಕಾಗಿ ಆತ್ಮ ವಿಕ್ರಯ ಮಾಡಿದವರೂ ಸಹ ನರಕ ಗಾಮಿಗಳಾಗುತ್ತಾರೆ. ಯಾವ ಗೃಹಸ್ಥರು ಮನೆಯಲ್ಲಿ ಅವಿವಾಹಿತೆಯಾದ ಕನ್ಯೆಯು ರಜಸ್ವಲೆಯಾದುವನ್ನು ನೋಡುತ್ತಾರೆಯೋ ಮತ್ತು ಕನ್ಯೆಯನ್ನು ಶುಲ್ಕಸ್ವೀಕಾರದಿಂದ ಯಾರು ದಾನಮಾಡುವರೋ ಅಂತಹವರೂ ಸಹ ನರಕಭಾಗಿಗಳಾಗುತ್ತಾರೆ.

೨೯-೩೦. ಬ್ರಹ್ಮ ರುದ್ರ ವಿಷ್ಣುಗಳಿಗೆ ಯಾರು ಅತ್ಯಂತ ಭೇದವನ್ನು ಎಣಿಸುತ್ತಾರೆಯೋ, ಅಂತಹ ಅಜ್ಞಾನಕ್ಕೆ ಕಾರಣವಾದ ತಮೋಗುಣದಿಂದ ಕೂಡಿರುವರೋ ಅವರೂ ಸಹ ನರಕಭಾಗಿಗಳಾಗುತ್ತಾರೆ. (ಇಲ್ಲಿ ಪರಮಾತ್ಮನಾದ ವಿಷ್ಣುವಿನ ಸಂಕಲ್ಪದಿಂದ ಬ್ರಹ್ಮನು ಉತ್ಪನ್ನನಾದನೆಂದೂ ಆ ಬ್ರಹ್ಮನಿಂದ ರುದ್ರನು ಉತ್ಪನ್ನನಾದವನೆಂದೂ ಪ್ರಮಾಣಗಳಿಂದ ನಿಶ್ಚಿತವಾಗಿರುವುದರಿಂದ ಕಾರ್ಯಕಾರಣ ಭಾವದಿಂದ ಕೂಡಿರುವ ಈ ಮೂವರೂ ಪಿತಾಪುತ್ರರಂತೆ ಒಂದೇ ತತ್ವವಾಗಿ

**ಕಾಮಾತ್ಮಾನೋ ನರಾ ಯೇ ಚ ಯೇ ತಥಾರ್ಥಪರಾಯಣಾಃ ।**
**ಯೇ ಚ ಧರ್ಮದ್ವಿಷೋ ಲೋಕೇ ತೇ ವೈ ನಿರಯಗಾಮಿನಃ ॥ ೩೧ ॥**

**ನಾಭಿಪಶ್ಯಂತಿ ಯೇ ಶಕ್ತ್ಯಾ ದೀನಮಾತುರಮಾಶ್ರಿತಂ ।**
**ಆರ್ತಂ ಚ ನಾಭಿಧಾವಂತಿ ತೇ ವೈ ನರಕಗಾಮಿನಃ ॥ ೩೨ ॥**

**ಯೇಚಾವಹಾಸಂ ಕುರ್ವಂತಿ ದೀನಾನಾಂ ಮಾನಗರ್ವಿತಾಃ ॥**
**ಅನಾಗಸಂ ಪರಿಭವಂತ್ಯೇತೆ ನಿರಯಗಾಮಿನಃ ॥ ೩೩ ॥**

---

ಪರಿಗಣಿಸಲ್ಪಡತಕ್ಕವರು ಆಕಾರಭೇದವು ಆಯಾಯ ಕಾರ್ಯನಿಮಿತ್ತವಾದುದು ಆದುದರಿಂದ ಮಹಾವಿಷ್ಣುವಿನ ಶರೀರಭೂತರಾದ ಬ್ರಹ್ಮರುದ್ರರಲ್ಲಿ ವಿಶಿಷ್ಟೈಕ್ಯ ಬುದ್ಧಿಯಿಂದ ವರ್ತಿಸಬೇಕೇ ಹೊರತು, ಇವರು ಅತ್ಯಂತ ಭಿನ್ನರೆಂದೂ ವಿಷ್ಣುವಿನ ಸಂಬಂಧವಿಲ್ಲದ ಸ್ವತಂತ್ರ ವ್ಯಕ್ತಿಗಳೆಂದೂ ಭಾವಿಸಕೂಡದು, ಹಾಗೆ ಭಾವಿಸಿದಲ್ಲಿ ಅವನು ನರಕಭಾಗಿಯಾಗುತ್ತಾನೆಂದು ತಾತ್ಪರ್ಯ. ಇಲ್ಲಿ ವ್ಯಕ್ತಿಭೇದವನ್ನು ಬಹುವಚನ ಪ್ರಯೋಗದಿಂದ ಗ್ರಂಥಕಾರರೇ ಒಪ್ಪಿರುವುದರಿಂದ ವಿಶುದ್ಧವಾದ ವ್ಯಕ್ತ್ಯೈಕ್ಯವು ವಿವಕ್ಷಿತವಲ್ಲ। ತಮ್ಮ ಕುಲದಲ್ಲಿ ಹುಟ್ಟಿದ ಸಪಿಂಡರೆಂಬ ಸನ್ನಿಹಿತ ಜ್ಞಾತಿಗಳಿಗೆ ಯಾರು ಪಿಂಡಪ್ರದಾನ ಮಾಡದೆ ಅದಕ್ಕೆ ಲೋಪವನ್ನುಂಟು ಮಾಡುತ್ತಾರೆಯೋ ಪೂರ್ವಿಕರಾದ ವಂಶಜರ ತೃಪ್ತಿಗಾಗಿ ಮಾಡಬೇಕಾದ ಶ್ರಾದ್ಧವನ್ನೇ ಮಾಡದಿರುವರೋ ಅವರೂ ಸಹ ನರಕಗಾಮಿಗಳಾಗುತ್ತಾರೆ.

೩೧-೩೨. ಯಾರು ಶಾಸ್ತ್ರೀಯವಾದ ಧರ್ಮಾಧರ್ಮಗಳನ್ನು ಅಲಕ್ಷಿಸಿ ಕೇವಲ ಕಾಮಪರವಶರಾಗುತ್ತಾರೆಯೋ (ಕಾಮಾತ್ಮತಾ ನ ಪ್ರಶಸ್ತಾ ಎಂದು ಮನುಸ್ಮೃತಿಯೂ ಇದೆ) ಮತ್ತು ಧರ್ಮಕಾಮಗಳನ್ನು ಬಿಟ್ಟು ಕೇವಲ ಅರ್ಥಪರರಾಗಿ ಯಾರು ನಿಲ್ಲುವರೋ ಅರ್ಥಕಾಮಗಳಲ್ಲಿ ಆಸಕ್ತರಾಗಿ ಧರ್ಮ ದ್ವೇಷದಿಂದಲೇ ಯಾರು ವರ್ತಿಸುವರೋ ಇವರೆಲ್ಲರೂ ನರಕಭಾಗಿಗಳಾಗುತ್ತಾರೆ. ಯಾರು ತಾನು ಸರಿಯಾಗಿರುವಾಗ ದೀನನೂ ವ್ಯಾಧಿಗ್ರಸ್ಥನೂ ಆಗಿರುವ ಆಶ್ರಿತನನ್ನು ಸಹಾನುಭೂತಿಯಿಂದ ನೋಡುವುದಿಲ್ಲವೋ, ನೋಡಿದರೂ ಯಥಾಶಕ್ತಿ ಅವನನ್ನು ಸತ್ಕರಿಸುವುದಿಲ್ಲವೋ ಮತ್ತು ಬಹಳ ಆರ್ತನಾಗಿರುವವನಲ್ಲಿ ಉಪಕಾರಬುದ್ಧಿಯಿಂದ ಅಭಿಮುಖವಾಗಿ ಹೋಗಿ ಸಹಕರಿಸುವುದಿಲ್ಲವೋ ಅವರೂ ನರಕಗಾಮಿಗಳಾಗುತ್ತಾರೆ.

೩೩-೩೪. ಯಾರು ಅಹಂಕಾರದಿಂದ ಕೊಬ್ಬಿದವರಾಗಿ ಅನಾಥರಾದ ದೀನರ ವಿಷಯದಲ್ಲಿ ಅಪಹಾಸ ಮಾಡುತ್ತಾರೆಯೋ ನಿರಪರಾಧಿಯನ್ನೂ ಸಹ ತಿರಸ್ಕರಿಸಿ

ಪೀಡಾಮುಖೋತ್ಪಾದ್ಯ ನರಸ್ಯ ರಾಮ
　　ಯಥಾ ಕಥಂ ಚಿನ್ನರಕಂ ಪ್ರಯಾತಿ ।
ತಸ್ಮಾತ್ಪ್ರಯತ್ನೇನ ವಿವರ್ಜನೀಯಾ
　　ಪರಸ್ಯಪೀಡಾ ಮನುಜೇನ ರಾಮ　　॥ ೩೪ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ನಿರಯಗಾಮಿ ವರ್ಣನಂ ನಾಮಾಷ್ಟಾದಶೋತ್ತರಶತತಮೋಽಧ್ಯಾಯಃ**

---

ನಡೆಯುತ್ತಾರೆಯೋ ಅವರೂ ಸಹ ನರಕಭಾಗಿಗಳಾಗುತ್ತಾರೆ. ಎಲೈ ಭಾರ್ಗವನೇ ಯಾವುದಾದರೊಂದು ಸಾಮಾನ್ಯ ಕಾರಣದಿಂದಲಾದರೂ ಮತ್ತೊಬ್ಬರಿಗೆ ಪೀಡೆಯನ್ನು ಉಂಟುಮಾಡಿದುದೇ ಆದರೆ ಅವನೂ ಸಹ ನರಕಭಾಗಿಯಾಗುತ್ತಾನೆ. ಆದುದರಿಂದ ಮನುಷ್ಯನಾದವನು ಸರ್ವಪ್ರಯತ್ನದಿಂದಲೂ ಮತ್ತೊಬ್ಬನಿಗೆ ಪೀಡೆಯನ್ನು ಉಂಟುಮಾಡುವುದನ್ನು ಬಿಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ನರಕಗಾಮಿವರ್ಣನವೆಂಬ ನೂರ ಹದಿನೆಂಟನೆಯ ಅಧ್ಯಾಯವು ಮುಗಿದಿದೆ.



## ನೂರ ಹದಿನೆಂಟನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಹಿಂದಿನ ಪ್ರಶ್ನೆಗೆ ತಕ್ಕಂತೆ ಸ್ವರ್ಗಭಾಗಿಗಳ ನಿರೂಪಣವಾದ ನಂತರ ನರಕಭಾಗಿಗಳನ್ನೂ ಆಯಾಯ ಪಾಪಭೇದದಿಂದ ನಿರೂಪಿಸಿರುವರು.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕೋನವಿಂಶತ್ಯುತ್ತರ ಶತತಮೋಽಧ್ಯಾಯಃ

**॥ ರಾಮ ಉವಾಚ ॥**

**ನಾಮಾನಿ ನರಕಾಣಾಂ ಚ ಯಾತನಾ ವಿವಿಧಾಸ್ತಥಾ ।**
**ಭಗವನ್ ಶ್ರೋತುಮಿಚ್ಛಾಮಿ ಪುಂಸಾಂ ನರಕಗಾಮಿನಾಂ ॥ ೧ ॥**

**ತಾಮಿಸ್ರಮಂಧತಾಮಿಸ್ರಂ ಮಹಾರೌರವರೌರವಾ ।**
**ನರಕಂ ಕಾಲಸೂತ್ರಂ ಚ ಮಹಾನರಕಮೇವ ಚ ॥ ೨ ॥**

**ಸಂಜೀವನಂ ಮಹಾವೀಚಿಂ ತಪನಂ ಸಂಪ್ರತಾಪನಂ ।**
**ಸಂಘಾತಂ ಚ ಸಕಾಕೋಲಂ ಕಶ್ಮಲಂ ಪೂತಿಮೃತ್ತಿಕಂ ॥ ೩ ॥**

---

### ನೂರ ಹತ್ತೊಂಭತ್ತನೆಯ ಅಧ್ಯಾಯ.

೧. ಭಾರ್ಗವನು ಪ್ರಶ್ನೆಮಾಡುತ್ತಾನೆ :—ನರಕಕ್ಕೆ ಹೋಗುವ ಮನುಷ್ಯರಿಗೆ ಉಂಟಾಗುವ ಆಯಾಯ ನರಕಗಳ ಹೆಸರನ್ನೂ ಅಲ್ಲಿ ಅನುಭವಿಸುವ ನಾನಾ ವಿಧವಾದ ಯಾತನೆಗಳನ್ನೂ ಸಹ ಕೇಳಲು ಇಚ್ಛೆಯುಂಟಾಗುತ್ತಿದೆ. ಪೂಜ್ಯನೇ ದಯವಿಟ್ಟು ಹೇಳಬೇಕು. ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೪. ತಾಮಿಸ್ರ, ಅಂಧತಾಮಿಸ್ರ, ಮಹಾರೌರವ, ರೌರವ, ನರಕ, ಕಾಲಸೂತ್ರ ಇವುಗಳೂ ಮತ್ತು ಮಹಾ ನರಕರೂಪವಾದ ಸಂಜೀವನ, ಮಹಾವೀಚಿ ತಪನ, ಸಂಪ್ರತಾಪನ, ಸಂಘಾತ, ಸಕಾಕೋಲ, ಕಶ್ಮಲ, ಪೂತಿಮೃತ್ತಿಕ,

ಲೋಹಶಂಕುಂ ನೃಭೀಮಂ ಚ ಮಂಥಾನಂ ಶಾಲ್ಮಲಿಂ ನದೀಂ ।
ಅಸಿಪತ್ರವನಂ ಚೈವ ಲೋಹಕಾರಂ ತಥೈವ ಚ ॥ ೪ ॥

ಪಾತಾಲೇಷು ಮಹಾಬಾಹೋ ತ್ರೀಂಸ್ತ್ರೀನ್ ವೃದ್ಧಿಕ್ರಮೇಣ ತು ।
ಏಕೈಕಸ್ಯ ತಥೈವಾಷ್ಟೌ ದಿಕ್ಷು ಚಾಪಿ ವಿದಿಕ್ಷ್ವಪಿ ॥ ೫ ॥

ಸ್ಥಿತಾಸ್ತಥಾ ಯೇ ವಿಜ್ಞೇಯಾ ನರಕಾ ಘೋರದರ್ಶನಾಃ ।
ಯಾಂತ್ಯೇತೇ ಪಾಪಕರ್ಮಾಣೋ ನರಾ ಯೇಷು ಭೃಗೂತ್ತಮ ॥ ೬ ॥

ಏಕಸ್ಮಿನ್ನರಕೇ ಕೇಚಿತ್ಕ್ರಮಾದನ್ಯೇ ಬಹುಷ್ವಪಿ ।
ಯಾಂತ್ಯೇತೇ ಮಾನವಾ ರಾಮ ಪೀಡ್ಯಮಾನಾಃ ಪುನಃ ಪುನಃ ॥ ೭ ॥

ನರಕಾಣಾಂ ನರಣಾಂ ತು ಯಾತನಾಕಾರಿಣಶ್ಚ ಯೆ ।
ಘೋರರೂಪಾಸ್ತು ತೇ ಪ್ರೋಕ್ತಾ ದೃಷ್ಟಮಾತ್ರಭಯಾವಹಾಃ ॥ ೮ ॥

---

ಲೋಹಶಂಕು, ನೃಭೀಮ, ಮಂಥಾನ, ಶಾಲ್ಮಲಿ, ನದೀ, ಅಸಿಪತ್ರವನ, ಲೋಹಕಾರ ಎಂಬ ಸಂಜ್ಞೆಗಳುಳ್ಳ ನರಕಗಳು.

೫-೬. ಪಾತಾಲ ಲೋಕಗಳಲ್ಲಿ ಒಂದೊಂದೂ ಮೂರರಷ್ಟು ವೃದ್ಧಿಹೊಂದಿರುತ್ತವೆ. ಮತ್ತು ಎಂಟು ದಿಕ್ಕುಗಳಲ್ಲಿಯೂ ಮತ್ತು ವಿದಿಕ್ಕುಗಳಲ್ಲಿಯೂ ಇವು ಎಂಟಾಗಿ ವ್ಯಾಪಿಸಿರುತ್ತವೆ. ಹೀಗಿರುವ ಈ ನರಕಗಳೆಲ್ಲವೂ ಭಯಂಕರವಾಗಿರುತ್ತವೆ ಎಂದು ತಿಳಿಯಬೇಕು. ಪಾಪಕರ್ಮವನ್ನು ಮಾಡಿರುವ ಪುರುಷರು ಅಂತಹ ಪಾಪದ ಫಲಾನುಭವಕ್ಕಾಗಿ ಈ ನರಕಗಳನ್ನು ಹೊಂದುತ್ತಾರೆ.

೭-೮ ಈ ನರಕಗಳಲ್ಲಿ ಅವರವರ ಪಾಪಕರ್ಮಕ್ಕೆ ತಕ್ಕಂತೆ ಕೆಲವರು ಒಂದೊಂದೇ ನರಕದಲ್ಲಿಯೂ ಕೆಲವರು ಒಂದರ ಮೇಲೆ ಮತ್ತೊಂದರಂತೆ ಅನೇಕ ನರಕಗಳಲ್ಲಿಯೂ ಪೀಡಿಸಲ್ಪಡುತ್ತಾ ಪುನಃಪುನಃ ಸುತ್ತುತ್ತಲೂ ಇರುತ್ತಾರೆ. ಈ ನರಕಗಳಲ್ಲಿ ಪಾಪಿಗಳಾದ ಮನುಷ್ಯರನ್ನು ಯಾತನೆಗೊಳಪಡಿಸುವ ಭಟರೂ ಸಹ ದರ್ಶನ ಮಾತ್ರದಿಂದಲೇ ಭಯಂಕರರಾಗಿಯೂ ಘೋರಾಕಾರರಾಗಿಯೂ ಇರುತ್ತಾರೆ.

ಮಾರ್ಜಾರೋಲೂಕಗೋಮಾಯುಗೃಧ್ರಶ್ಯೇನಖರಾನನಾಃ ।
ಗಜಾಶ್ವೋಷ್ಟ್ರವರಾಹಾಣಾಂ ಸಿಂಹಾನಾಂ ಚ ತಥಾಪರೇ ॥ ೯ ॥

ಗೋಧಾಮಹಿಷಕಾಕಾನಾಂ ಮದ್ಗುಸಾರಸಯೋಸ್ತಥಾ ।
ಉರಭ್ರಾಜಪತಂಗಾನಾಂ ಸರ್ಪಮೂಷಕಯೋಸ್ತಥಾ ॥ ೧೦ ॥

ಅನ್ಯೇಷಾಂ ಚೈವ ಸತ್ತ್ವಾನಾಂ ತಥಾನ್ಯೇ ಜಠರಾ ನರಾಃ ।
ಸ್ಕಂದಾನನಾಸ್ತಥೈವಾನ್ಯೇ ಕಬಂಧಾಕಾರದರ್ಶನಾಃ ॥ ೧೧ ॥

ಭೀಮಾನನಾ ಭಯಕರಾಃ ನಾನಾಯುಧಧರಾಸ್ತಥಾ ।
ಉಗ್ರವಾಚೋ ದುರಾಧರ್ಷಾಃ ಸರ್ಪವೃಶ್ಚಿಕಚೇಷ್ಟಿತಾಃ ॥ ೧೨ ॥

ತೈಲದ್ರೋಣ್ಯಾಂ ನರಾನ್ ಕ್ಷಿಪ್ತ್ವಾ ಜ್ವಾಲಯಿತ್ವಾ ಹುತಾಶನಂ ।
ಸುಸಮಿದ್ಧಂ ನರಾನ್ ಕಾಂಶ್ಚಿತ್ಕ್ವಥಯಂತಿ ಪುನಃ ಪುನಃ ॥ ೧೩ ॥

---

೯–೧೨. ಆ ಭಟರಲ್ಲಿ ಕೆಲವರು ಬೆಕ್ಕು, ಗೂಬೆ, ನರಿ, ಹದ್ದು, ಗಿಡಗ, ಕತ್ತೆ ಇವುಗಳ ಮುಖದಂತೆ ಮುಖವುಳ್ಳವರಾಗಿಯೂ, ಮತ್ತೆ ಕೆಲವರು ಆನೆ, ಕುದುರೆ, ಒಂಟೆ, ಹಂದಿ, ಸಿಂಹ ಇವುಗಳ ಮುಖದಂತೆ ಮುಖವುಳ್ಳವರಾಗಿಯೂ, ಇನ್ನೂ ಕೆಲವರು ಉಡು, ಎಮ್ಮೆ, ಕಾಗೆ, ನೀರುಕಾಗೆ, ಕೊಕ್ಕರೆ ಇವುಗಳ ಮುಖದಂತೆ ಮುಖವುಳ್ಳವರಾಗಿಯೂ, ಕುರಿ, ಆಡು, ಪಕ್ಷಿ, ಸರ್ಪ, ಇಲಿ ಇವುಗಳ ಮುಖವುಳ್ಳವರಾಗಿಯೂ, ಇತರ ಪ್ರಾಣಿಗಳ ಮುಖವನ್ನು ಹೊಂದಿಯೂ, ಕೆಲವರು ಜಠರ ಮಾತ್ರದಿಂದ ಕೂಡಿಯೂ, ಕೆಲವರು ಭುಜದಮೇಲೆಯೇ ತಲೆಯುಳ್ಳವರಾಗಿಯೂ, ಕೆಲವರು ತಲೆಯಿಲ್ಲದ ಮುಂಡಗಳಂತೆಯೂ ಭಯಂಕರರಾಗಿ ನಾನಾವಿಧವಾದ ಮುಖಗಳನ್ನು ಧರಿಸಿ, ನಾನಾವಿಧವಾದ ಆಯುಧಗಳಿಂದಲೂ ಕೂಡಿ, ಹಾವುಗಳಂತೆಯೂ, ಚೇಳುಗಳಂತೆಯೂ ಹಿಂಸಿಸುತ್ತಾ ನಿಷ್ಠುರವಚನಗಳಿಂದ ಕೂಡಿ ಅಪ್ರತಿಮಬಲದಿಂದ ನಿಂತಿರುತ್ತಾರೆ.

೧೩–೧೪. ಇಂತಹ ಭಟರು ಪಾಪಿಗಳಾದ ಮನುಷ್ಯರುಗಳನ್ನು ಎಣ್ಣೆಯ ಕೊಪ್ಪರಿಕೆಯಲ್ಲಿ ಹಾಕಿ ಅಗ್ನಿಯನ್ನು ಚನ್ನಾಗಿ ಉರಿಸಿಯೂ, ಕೆಲವರನ್ನು ಅದರಲ್ಲಿ

**ಅಂಬರೀಷೇಷು ಚೈವಾನ್ಯಾಂಸ್ತಾಮ್ರಪಾತ್ರೇಷು ಚಾಪರಾನ್ ।**
**ಅಯಃಪಾತ್ರೇಷು ಚೈವಾನ್ಯಾನ್ ದ್ರವದ್ವಹ್ನಿಕಣೇಷ್ವಪಿ　　॥ ೧೪ ॥**

**ಶೂಲೇಷು ರೋಪಿತಾನನ್ಯಾನ್ ಶುಷ್ಕಾಗ್ನಾವಪರಾಂಸ್ತಥಾ ।**
**ಉತ್ಕೃತ್ಯ ವಿಪಚಂತ್ಯೇತಾನನ್ಯಾಂಶ್ಛಿತ್ವಾ ತಥಾಪರಾನ್　　॥ ೧೫ ॥**

**ಕಶಾಭಿಸ್ತಾಡಯಂತ್ಯನ್ಯಾನ್ ತಥಾನ್ಯಾನಪಿ ಮಾನವಾನ್ ।**
**ಭೋಜಯಂತಿ ಮಹಾಭಾಗ ವಹ್ನಿತಪ್ತಾನಯೋಗುಡಾನ್　　॥ ೧೬ ॥**

**ಪಾಂಸೂನಪಿ ತಥೈವಾನ್ಯಾನ್ವಾಂತಮನ್ಯತ್ರ ಚಾಪರಂ ।**
**ವಿಷ್ಠಾಮನ್ಯತ್ರ ಚ ಕಫಂ ತಥಾನ್ಯತ್ರ ಚ ಕಂಟಕಾನ್　　॥ ೧೭ ॥**

**ಅನ್ಯತ್ರ ವಹ್ನಿಸಂಕಾಶಾಸ್ತಥಾ ಭಾರ್ಗವ ವಾಲುಕಾಃ ।**
**ಪಾಯಯಂತಿ ತಥಾನ್ಯತ್ರ ವಹ್ನಿವರ್ಣಾಂ ಚ ವಾರುಣೀಂ　　॥ ೧೮ ॥**

---

ಹಾಕಿ ಬಾರಿಬಾರಿಗೂ ಚನ್ನಾಗಿ ಕುದಿಸುತ್ತಲೂ, ಮತ್ತೆ ಕೆಲವರನ್ನು ಹುರಿಯುವ ಓಡಿನಲ್ಲಿಯೂ, ತಾಮ್ರಪಾತ್ರೆಗಳಲ್ಲಿಯೂ, ಕಬ್ಬಿಣದ ಪಾತ್ರೆಗಳಲ್ಲಿಯೂ ಹಾಕಿ ಹುರಿಯುತ್ತಾ ಬೆಂಕಿಯ ಕಣಗಳಲ್ಲಿಯೂ ಇಟ್ಟು ಹಿಂಸಿಸುವರು.

೧೫-೧೬. ಮತ್ತೆ ಕೆಲವರನ್ನು ಶೂಲದಲ್ಲಿ ಚುಚ್ಚಿ ಮೇಲಕ್ಕೆ ಹಿಡಿದೂ, ಇನ್ನೂ ಕೆಲವರನ್ನು ಅಗ್ನಿಯಲ್ಲಿ ಶೋಷಿಸಿಯೂ, ಕೆಲವರನ್ನು ಕಿತ್ತುಕಿತ್ತು ತುಂಡಾಗಿ ಮಾಡಿಯೂ. ಮತ್ತೆ ಕೆಲವರನ್ನು ಚೂರುಚೂರಾಗಿ ಕತ್ತರಿಸಿಯೂ ಬೇಯಿಸುತ್ತಾರೆ. ಮತ್ತೆ ಕೆಲವರನ್ನು ಚಾವಟಿಯಿಂದ ಹೊಡೆಯುತ್ತಾರೆ. ಇನ್ನೂ ಕೆಲವರಿಗೆ ಕಾದಿರುವ ಕಬ್ಬಿಣದ ಗುಂಡುಗಳನ್ನೇ ತಿನ್ನಿಸುತ್ತಾರೆ.

೧೭-೧೮. ಕೆಲವರಿಗೆ ಧೂಳುಗಳನ್ನೂ, ಮತ್ತೆ ಕೆಲವರಿಗೆ ವಾಂತವನ್ನೂ, ಇನ್ನೂ ಕೆಲವರಿಗೆ ಅಮೇಧ್ಯ, ಶ್ಲೇಷ್ಮ ಮೊದಲಾದ ಅಸಹ್ಯವಸ್ತುಗಳನ್ನೂ, ಮುಳ್ಳುಗಳನ್ನೂ ಸಹ ತಿನ್ನಿಸುತ್ತಾರೆ. ಮತ್ತೆ ಕೆಲವು ಕಡೆಗಳಲ್ಲಿ ಬೆಂಕಿಯಂತೆ ಕೆಂಪಾಗಿ ಕಾದಿರುವ ಮರಳನ್ನೂ, ಹಾಗೆಯೇ ಕೆಂಪಾಗಿ ಕಾದಿರುವ ಮದ್ಯವನ್ನೂ ಸಹ ಪಾನ ಮಾಡಿಸುತ್ತಾರೆ.

ಅನ್ಯತ್ರ ನರಕಾಣಾಂ ತೇ ಛಿಂದಂತ್ಯಂಗಾನಿ ಭಾಗಶಃ ।
ಪಾಟಯಂತಿ ತಥಾನ್ಯತ್ರ ಕರಪತ್ರೈಃ ಪುನಃ ಪುನಃ ॥ ೧೯ ॥

ಪೀಡಯಂತಿ ತಥಾನ್ಯತ್ರ ಕೃತ್ವಾ ಯಂತ್ರೇಷು ನಾರಕಾನ್ ।
ಉಲೂಖಲಕೃತಾನನ್ಯಾನ್ಮುಸಲೈಸ್ತಾಡಯಂತಿ ಚ ॥ ೨೦ ॥

ಕುಂಭೀಗತಾಂಸ್ತಥಾನ್ಯತ್ರ ಕುಂಭೀತಃ ಕಿಂಚಿದುದ್ಗತಾನ್ ।
ಘ್ನಂತಿ ಮುದ್ಗರಕೋಟೇನ ಮಹತೀಂ ವೇದನಾಂ ಗತಾನ್ ॥ ೨೧ ॥

ತ್ವಚಮುತ್ಕೃತ್ಯ ಚಾನ್ಯತ್ರ ಶುನಾಂ ನರಕವಾಸಿನಃ ।
ತ್ಯಜಂತಿ ತೇ ಚ ಭಕ್ಷ್ಯಂತೇ ತೀಕ್ಷ್ಣದಂತೈರ್ಮುಹುರ್ಮುಹುಃ ॥ ೨೨ ॥

ಅಂಧಕಾರೇ ತಥಾನ್ಯತ್ರ ಭೀಮಗಂಧೇ ಭಯಾವಹೇ ।
ಅತ್ಯುಷ್ಣೇಚೈವ ಪಾತ್ಯಂತೇ ಗರ್ಭವಾಸಸಮೇ ಜನಾಃ ॥ ೨೩ ॥

---

೧೯-೨೦. ಅಲ್ಲಿಯೇ ಕೆಲವು ನರಕಗಳಲ್ಲಿ ಪಾಪಿಗಳ ಅವಯುವಗಳನ್ನು ಛಿನ್ನಾಭಿನ್ನವಾಗಿ ಕತ್ತರಿಸುತ್ತಾರೆ. ಮತ್ತೊಂದು ಕಡೆಯಲ್ಲಿ ಗರಗಸದಿಂದ ಬಾರಿ ಬಾರಿಗೂ ಸೀಳುತ್ತಾರೆ. ಇನ್ನೂ ಕೆಲವು ಕಡೆಗಳಲ್ಲಿ ಪಾಪಿಗಳನ್ನು ಯಂತ್ರದಲ್ಲಿ ಏರಿಸಿ ಪೀಡಿಸುತ್ತಾರೆ. ಒರಳಿನಲ್ಲಿ ಇಟ್ಟು ಒನಕೆಯಿಂದಲೂ ಘಟ್ಟಿಸುತ್ತಾರೆ.

೨೧-೨೨. ಮತ್ತೆ ಕೆಲವುಕಡೆಗಳಲ್ಲಿ ಕುಂಭಗಳಲ್ಲಿ ಕೂರಿಸಿಯೂ, ಕುಂಭಗಳಿಂದ ಸ್ವಲ್ಪ ಮೇಲಕ್ಕೆ ಎದ್ದವರನ್ನೂ ಸಹ ದಪ್ಪವಾದ ಒನಕೆಯ ತುಂಡಿನಿಂದ ಬಹಳ ವೇದನೆಯುಂಟಾಗುವಂತೆ ಹೊಡೆಯುತ್ತಾರೆ. ಇನ್ನೂ ಕೆಲವೆಡೆಗಳಲ್ಲಿ ಆ ಭಟರು ಪಾಪಿಗಳ ಚರ್ಮವನ್ನು ಸುಲಿದು ಉಳಿದ ಭಾಗವನ್ನು ಅಲ್ಲಿರುವ ನಾಯಿಗಳಿಗೆ ಹಾಕುತ್ತಾರೆ. ಅವುಗಳೂ ಸಹ ಹರಿತವಾದ ಹಲ್ಲುಗಳಿಂದ ಅವರನ್ನು ಬಾರಿ ಬಾರಿಗೂ ಅಗಿದು ತಿನ್ನುತ್ತವೆ.

೨೩-೨೪. ಅಲ್ಲಿಯೇ ಕೆಲವು ಕಡೆಗಳಲ್ಲಿ ಕತ್ತಲೆಯಿಂದ ಕೂಡಿಯೂ, ದುರ್ಗಂಧವಾಗಿಯೂ, ಬಹಳ ಬಿಸಿಯಾಗಿಯೂ ಇರುವ ಗರ್ಭವಾಸದಂತೆ ಭಯಂಕರವಾಗಿರುವ ಸ್ಥಳಗಳಲ್ಲಿ ಈ ಪಾಪಿಗಳನ್ನು ಹಾಕುತ್ತಾರೆ. ಮತ್ತೆ ಕೆಲವು

**ಕಾಕೈಃ ಗೋಮಾಯುಭಿಃ ಸರ್ಪೈರ್ವೃಶ್ಚಿಕೈರ್ಮೂಷಕೈರಪಿ ।**
**ಮಕ್ಷಿಕಾಭಿಶ್ಚ ಭಕ್ಷ್ಯಂತೇ ತೇಷಾಮನ್ಯತ್ರ ಶಾಸನಾತ್　　॥ ೨೪ ॥**

**ಅನ್ಯತ್ರ ಶಾಲ್ಮಲೀಂ ಘೋರಾಂ ಸಂತಪ್ತಾಂ ತೀಕ್ಷ್ಣಕಂಟಕಾಂ ।**
**ಸರ್ಪಕೀಟಾದಿಬಹುಲಮಾರೋಪ್ಯಂತೇ ನರಾಧಮಾಃ　　॥ ೨೫ ॥**

**ಅನ್ಯತ್ರ ಚ ತಥಾ ಘೋರಾಂ ಸಂತಪ್ತಾಮಯಸಃ ಶಿಲಾಂ ।**
**ಆಲಿಂಗಂತೇ ಸುದುಃಸ್ಪರ್ಶಾಂ ತೇಷಾಮೇವ ತು ಶಾಸನಾತ್　　॥ ೨೬ ॥**

**ಅನ್ಯತ್ರಾಸೇವ್ಯವಸತೌ ವಸಂತಿ ಭಯಪೀಡಿತಾಃ ।**
**ತತ್ರ ತೇಷಾಂ ತು ನಾಸಾಕ್ಷಿಕರ್ಣವಕ್ತ್ರೇಷು ಮಾನದ　　॥ ೨೭ ॥**

**ಪ್ರವಿಶಂತಿ ಮಹಾಭೋಗಾಃ ಕೃಮಯೋ ಮಾಂಸಭೋಜಿನಃ ।**
**ಕ್ಷಾರನದ್ಯಾಂ ತಥೈವಾನ್ಯೇ ಪಾತ್ಯಂತೇ ನರಕಾನ್ಮೃಹುಃ　　॥ ೨೮ ॥**

---

ಕಡೆಗಳಲ್ಲಿ ಅವರ ಅಪ್ಪಣೆಯಿಂದ ಪಾಪಿಗಳ ಶರೀರವನ್ನು ಕಾಗೆ, ನರಿ, ಹಾವು, ಚೇಳು, ಇಲಿ, ನೊಣಗಳು ಇವುಗಳಿಗೆ ತಿನ್ನುವುದಕ್ಕಾಗಿಯೂ ಹಾಕುತ್ತಾರೆ. ಅವೂ ಸಹ ಯಥೇಚ್ಛವಾಗಿ ತಿನ್ನುತ್ತವೆ.

೨೫-೨೬. ಅಲ್ಲಿಯೇ ಮತ್ತೊಂದುಕಡೆಯಲ್ಲಿ ಚೂಪಾದ ಮುಳ್ಳುಗಳಿಂದ ಕೂಡಿ ಕಾದಿರುವ ಘೋರವಾದ ಮತ್ತು ಹಾವು ಕೀಟಾದಿಗಳಿಂದ ಕೂಡಿರುವ ಬೂರಗದ ಮರಕ್ಕೆ ಈ ಪಾಪಿಗಳನ್ನು ಹತ್ತಿಸುತ್ತಾರೆ. ಮತ್ತೊಂದುಕಡೆ ಬೆಂಕಿಯಿಂದ ಕಾದಿರುವ ಭಯಂಕರವಾದ ಕಬ್ಬಿಣದ ಹಲಗೆಯನ್ನೂ ಈ ಪಾಪಿಗಳು ಆಲಿಂಗಿಸುವಂತೆ ಅಪ್ಪಣೆಮಾಡುತ್ತಾರೆ.

೨೭-೨೮. ಮತ್ತೊಂದು ಕಡೆಯಲ್ಲಿ ಸೇವಿಸಲು ಅನರ್ಹವಾದ ಸ್ಥಳದಲ್ಲಿಯೂ ಈ ಪಾಪಿಗಳು ಭಯಗ್ರಸ್ತರಾಗಿಯೇ ವಾಸಿಸುತ್ತಾರೆ. ಅಲ್ಲಿದ್ದರೂ ಅವರ ಮೂಗು, ಕಣ್ಣು, ಕಿವಿ, ಮುಖ ಮೊದಲಾದ ದ್ವಾರಗಳಲ್ಲಿ ಮಹಾಕಾಯಗಳಾಗಿಯೂ, ಮಾಂಸಾಹಾರಿಗಳಾಗಿಯೂ ಇರುವ ಕ್ರಿಮಿಗಳು ಪ್ರವೇಶಿಸುತ್ತವೆ. ಅಂತಹ ನರಕದಿಂದಲೂ ಕೆಲವರನ್ನು ಉಪ್ಪಿನ ನೀರಿನ ನದಿಯಲ್ಲಿ ಹಾಕುತ್ತಾರೆ.

ಬಹುಶೀತಾಂಧಕಾರೇ ಚ ಪಾತ್ಯಂತೇ ನರಕೇ ಪರೇ ।
ರಕ್ತತೋಯಮಹಾಮನ್ಯೇ ಪ್ರಪದ್ಯಂತೇ ಮಹಾನದೀಂ ॥ ೨೯ ॥

ಅಸಿಪತ್ರವನೇ ಚಾನ್ಯೇ ಕೃಷ್ಯಂತೇ ಭೀಮದರ್ಶನಾಃ ।
ತೃಷ್ಣಯಾ ಕ್ಷುಧಯಾ ಚಾನ್ಯೇ ಬಾಧ್ಯಂತೇ ತತ್ರ ಮಾನವಾಃ ॥ ೩೦ ॥

ಪರಾನ್ನಪಾನಂ ಲಿಪ್ಸಂತಃ ತಾಡ್ಯಂತೇ ಕೂಟಮುದ್ಗರೈಃ ।
ಪಾಯಯಂತಿ ತಥಾನ್ಯತ್ರ ಪರಾನ್ಯಮಭಟಾಸ್ತಥಾ ॥ ೩೧ ॥

ತೀವ್ರಧೂಮಮಧೋವಕ್ತ್ರಾನ್ ಬಧ್ವಾ ವೃಕ್ಷೇಷು ಮಾನದ ।
ತ್ವಚೋತ್ಕರ್ತನಮನ್ಯತ್ರ ತಿಲಶಃ ಕ್ರಿಯತೇ ಭಟೈಃ ॥ ೩೨ ॥

ಕಾಷ್ಠಾನ್ಯನ್ಯತ್ರ ಬಧ್ಯಂತೇ ನಾರಕಾಣಾಂ ತಥಾಸ್ಥಿಷು ।
ಕೂಟಾಗಾರಪ್ರಮಾಣೈಶ್ಚ ತಥಾ ದೇಹೈರ್ಭಯಾರ್ದಿತಾಃ ॥ ೩೩ ॥

---

೨೯-೩೦. ಹೆಚ್ಚಾದ ಶೀತದಿಂದಲೂ, ಕತ್ತಲೆಯಿಂದಲೂ ಕೂಡಿರುವ ನರಕದಲ್ಲಿಯೂ ಕೆಲವರನ್ನು ಹಾಕುತ್ತಾರೆ. ಕೆಲವರು ರಕ್ತದ ನೀರಿನಿಂದ ಕೂಡಿರುವ ಭಯಂಕರವಾದ ಮಹಾನದಿಯನ್ನೂ ಹೊಂದುತ್ತಾರೆ. (ಗರಗಸ ದಿಂದ ಕೂಡಿರುವ) ಅಸಿಪತ್ರವನವೆಂಬ ನರಕವಲ್ಲಿಯೂ ಭಯಂಕರವಾದ ಭಟರು ಪಾಪಿಗಳನ್ನು ಎಳೆಯುತ್ತಾರೆ. ಅಲ್ಲಿ ಹಸಿವಿನಿಂದಲೂ, ಬಾಯಾರಿಕೆಯಿಂದಲೂ ಪಾಪಿಗಳಾದ ಜನಗಳು ಬಹಳಮಟ್ಟಿಗೂ ಬಾಧೆಹೊಂದುತ್ತಾರೆ.

೩೧-೩೨. ಪರರ ಅನ್ನಪಾನಗಳನ್ನೇ ಅಪೇಕ್ಷಿಸುವವರನ್ನು ದೃಢವಾದ ಒನಕೆಗಳಿಂದ ಪ್ರಹರಿಸುತ್ತಾರೆ. ಮತ್ತೊಂದುಕಡೆ ಆ ಯಮಭಟರೇ ಪಾಪಿಗಳನ್ನು ತಲೆಕೆಳಗಾಗಿ ಮರಗಳಲ್ಲಿ ಕಟ್ಟಿ ದುಸ್ಸಹವಾದ ಹೊಗೆಯನ್ನೂ ಪಾನಮಾಡಿಸುತ್ತಾರೆ. ಮತ್ತೊಂದು ಕಡೆ ಆ ಭಟರೇ ಪಾಪಿಗಳ ಚರ್ಮಗಳನ್ನೂ ಎಳ್ಳುಕಾಳಿನ ಪ್ರಮಾಣದಂತೆ ಚೂರುಚೂರಾಗಿ ಸುಲಿಯುತ್ತಾರೆ.

೩೩-೩೪. ಮತ್ತೊಂದು ಕಡೆಯಲ್ಲಿ ಪಾಪಿಗಳ ಅಸ್ಥಿಪಂಜರಗಳಲ್ಲಿ ಪರ್ವತ ಶಿಖರದಂತೆ ದಪ್ಪವಾಗಿರುವ ಮರಗಳನ್ನು ಕಟ್ಟುತ್ತಾರೆ. ಅಂತಹ ಭಾರದಿಂದ ಅವರು ಭಯಪಟ್ಟು ದುಃಖಿಸುತ್ತಾರೆ. ಮತ್ತೊಂದು ಕಡೆ ಹಸಿವಿನಿಂದ ಕೂಡಿರುವ ಆ ಪಾಪಿಗಳ

**ಸೂಚೀವಕ್ತ್ರಾಂಸ್ತಥಾನ್ಯತ್ರ ಯೋಷ್ಯಂತೇ ಕ್ಷುಧಯಾ ಭೃಶಂ ।**
**ಸಿಚ್ಯಂತೇ ಚ ತಥಾನ್ಯತ್ರ ತೈಲೇನ ಚ ಗುಡೇನ ಚ ॥ ೩೪ ॥**

**ಸಂತಪ್ತೇನ ಮಹಾಭಾಗ ಭೃಶಂ ದುಃಖಪ್ರದಾಯಿನಾಂ ।**
**ಅನ್ಯತ್ರ ಜಾತಪಿಟಕಾಃ ಸ್ರಸ್ತಜಿಹ್ವಾಃ ಸುವಿಹ್ವಲಾಃ ॥ ೩೫ ॥**

**ಘೋರಾತಪವಿನಿಕ್ಷಿಪ್ತಾಃ ಭಕ್ಷ್ಯಂತೇ ಚ ಪಿಪೀಲಿಕೈಃ ।**
**ಸೂತ್ರೇಣಾನ್ಯತ್ರ ಛಿದ್ಯಂತೇ ಪಾದತಃ ಪ್ರಭೃತಿಕ್ರಮಾತ್ ॥ ೩೬ ॥**

**ತಿಲಶೋ ಭೃಗುಶಾರ್ದೂಲ ನಾರಕಾಃ ಪರ್ವತೋಪಮಾಃ ।**
**ಯಾವಚ್ಚ ತೇಷಾಂ ಮೂರ್ಧಾನಂ ತಾವದೇವ ಪುನಃಪುನಃ ॥ ೩೭ ॥**

**ಕೃತ್ವಾ ಚ ಪಿಷ್ಟಂ ಪಚನೇ ಪಚ್ಯಂತೇಽನ್ಯೇ ತಥಾ ಭೃಶಂ ।**
**ಅಯಃಪಾತ್ರೇಷು ಚಾನ್ಯತ್ರ ತೀಕ್ಷ್ಣಶಂಕುಭಿರಾಯಸೈಃ ॥ ೩೮ ॥**

---

ಬಾಯಿಗೆ ಸೂಜಿಯನ್ನು ಚುಚ್ಚಿ ಹಿಂಸಿಸುತ್ತಾರೆ. ಅವರ ದೇಹವನ್ನು ಚನ್ನಾಗಿ ಕಾದಿರುವ ಎಣ್ಣೆಯಿಂದಲೂ, ಬೆಲ್ಲದ ನೀರಿನಿಂದಲೂ ಚಿಮುಕಿಸುತ್ತಾರೆ.

೩೫-೩೬. ಮತ್ತೊಂದು ಕಡೆಯಲ್ಲಿ ಬೆಂಕಿಯ ಶಾಖದಿಂದ ಮೈಯ್ಯಿನಲ್ಲೆಲ್ಲಾ ಬೊಕ್ಕೆಗಳೆದ್ದು ಅದರ ವೇದನೆಯಿಂದ ದುಃಖಪಡುತ್ತಾ ಜೋಲುಬಿದ್ದ ನಾಲಗೆಯಿಂದ ಮತ್ತೂ ದುಃಖಿತರಾದ ಆ ಪಾಪಿಗಳನ್ನು ಘೋರವಾದ ಬಿಸಿಲಿನಲ್ಲೂ ಇಟ್ಟು ಇರುವೆಗಳಿಂದ ಅವರು ಭಕ್ಷಿಸಲ್ಪಡುವಂತೆ ಮಾಡುತ್ತಾರೆ. ಮತ್ತೊಂದು ಕಡೆಯಲ್ಲಿ ಆ ಪಾಪಿಗಳನ್ನು ಕಾಲಿನಿಂದ ಮೊದಲು ಕತ್ತಿನವರಿಗೂ ನೂಲಿನ ಹಗ್ಗದಿಂದ ಬಿಗಿದು ಚೂರು ಚೂರಾಗುವಂತೆಯೂ ಮಾಡುತ್ತಾರೆ.

೩೭-೩೮. ಎಳ್ಳಿನ ಕಾಳಿನಂತೆ ಚೂರು ಚೂರಾಗಿ ಮಾಡಲ್ಪಟ್ಟ ಪಾಪಿಗಳ ದೇಹವು ಪರ್ವತಾಕಾರದಲ್ಲಿ ರಾಶಿರಾಶಿಯಾಗಿ ಬೀಳುತ್ತದೆ. ತಲೆಯವರಿಗೂ ಹೀಗೆ ಚೂರು ಮಾಡಲ್ಪಟ್ಟ ಆ ದೇಹಗಳನ್ನು ಹಿಟ್ಟಿನಂತೆ ಮರ್ದಿಸಿ ಪುನಃ ಬಾಂಡ್ಲಿಯಲ್ಲಿ ಹಾಗೆ ಬಹಳವಾಗಿ ಬೇಯಿಸುತ್ತಾರೆ ಮತ್ತೆ ಕೆಲವು ಭಟರು ಕಾದಿರುವ ಕಬ್ಬಿಣದ ಪಾತ್ರೆಗಳಲ್ಲಿ ಪಾಪಿಗಳನ್ನು ಹಾಕಿ ಚೂಪಾದ ಮೊಳೆಗಳಿಂದ ಬಡಿದು ಅಲ್ಲಿಯೇ ಅಂಟಿಕೊಳ್ಳುವಂತೆ ಮಾಡುತ್ತಾರೆ

ಕ್ರಿಯಂತೇ ಸಂಯುತಾ ಘೋರೈಃ ಸಂತಪ್ತೇಷು ಮಹಾಭುಜ ।
ಅಪ್ಯೋಥ್ಯಂತೇ ತಥಾನ್ಯತ್ರ ವಿನಿಗೃಹ್ಯ ಶಿಲಾಸು ತೇ ॥ ೩೯ ॥

ಗರ್ತೇಷು ತೇ ಮೃದಂ ದತ್ವಾ ಪೂರ್ಯಂತೇ ಮುಸಲೈರ್ಭೃಶಂ ।
ಬದ್ಧ್ವಾ ಸ್ತಂಬೇ ತಥಾನ್ಯತ್ರ ಕ್ಷಿಪ್ಯಂತೇ ಸಾಯಕೈರ್ನರಾಃ ॥ ೪೦ ॥

ಶೃಂಖಲಾಭಿಶ್ಚ ಬಧ್ಯಂತೇ ಲೋಟ್ಯಂತೇ ಕಂಟಕೇಷು ಚ ।
ಗಂಧೇನಾನ್ಯತ್ರ ಬೋಧ್ಯಂತೇ ವಿಷಮೇಣ ಪುನಃಪುನಃ ॥ ೪೧ ॥

ನಾರಕೈಶ್ಚ ತಥಾ ಸತ್ವೈರ್ನಾನಾವೇಷೈರ್ಭಯಾನಕೈಃ ।
ಯಾತನಾಭಿಶ್ಚ ಬಹ್ವೀಭಿರ್ವ್ಯಾಪಂತೇ ನರಕೇ ಭೃಶಂ ॥ ೪೨ ॥

ಅನ್ಯೋನ್ಯಸ್ಯ ಚ ಮಾಂಸಾನಿ ಭಕ್ಷಯಂತ್ಯಪರೇ ತಥಾ ।
ಹಾ ತಾತ ಮಾತೇತಿ ತಥಾ ಕ್ರಂದಮಾನಾಃ ಪುನಃಪುನಃ ॥ ೪೩ ॥

---

೩೯-೪೦. ಮತ್ತೊಂದು ಕಡೆಗಳಲ್ಲಿ ಅವರ ದೇಹಗಳನ್ನು ಹಿಡಿದುಕೊಂಡು ಕಲ್ಲು ಚಪ್ಪಡಿಗಳ ಮೇಲೆ ಅಪ್ಪಳಿಸುತ್ತಾರೆ ಕೆಲವು ದೇಹಗಳನ್ನು ಹಳ್ಳಗಳಲ್ಲಿ ಹಾಕಿ ಮಣ್ಣನ್ನು ಭರ್ತಿಮಾಡಿ ಒನಕೆಗಳಿಂದ ಬಹಳವಾಗಿ ಮಿದಿಯುತ್ತಾರೆ. ಮತ್ತೆ ಕೆಲವು ಕಡೆಗಳಲ್ಲಿ ಆ ಪಾಪಿಗಳನ್ನು ಕಂಬಗಳಲ್ಲಿ ಕಟ್ಟಿ ಬಾಣಗಳಿಂದ ಹೊಡೆಯುತ್ತಾರೆ. ಸರಪಣಿಗಳಿಂದ ಬಂಧಿಸುತ್ತಾರೆ. ಮುಳ್ಳುಗಳಿರುವ ಸ್ಥಳಗಳಲ್ಲಿ ಅವರ ದೇಹವನ್ನು ಎಳೆಯುತ್ತಾರೆ. ಸ್ಮೃಮರೆತಂತೆ ಮೂರ್ಛಿತರಾಗಿ ಬಿದ್ದಿರುವ ಅವರನ್ನು ಉಗ್ರವಾದ ಅಸಹ್ಯಗಂಧಗಳಿಂದ ಎಚ್ಚರಗೊಳ್ಳುವಂತೆ ಮಾಡುತ್ತಾರೆ.

೪೨-೪೪. ಹೀಗೆ ಆ ನರಕದಲ್ಲಿ ನಾನಾವೇಷಧಾರಿಗಳಾಗಿಯೂ ಭಯಂಕರರಾಗಿಯೂ ಇರುವ ಭಟರಿಂದ ನಾನಾವಿಧವಾದ ಯಾತನೆಗಳಿಂದ ಬಹಳವಾಗಿ ಪೀಡಿಸಲ್ಪಡುತ್ತಾರೆ. ಮತ್ತೆ ಕೆಲವರು ಪಾಪಿಗಳ ಮಾಂಸವನ್ನೇ ಪರಸ್ಪರವಾಗಿ ತಿನ್ನುವಂತೆ ಮಾಡುತ್ತಾರೆ. ಆ ವೇದನೆಯಿಂದ ಬಹಳ ದುಃಖಗೊಂಡು ಅಯ್ಯೋ ಅಪ್ಪಾ ಎಂದು ಕಿರುಚುತ್ತಿರುವ ಅವರು ತಾವು ಹಿಂದೆ ಮಾಡಿದ ಕರ್ಮಗಳನ್ನು

**ನಿಂದಂತಃ ಸ್ವಾನಿ ಕರ್ಮಾಣಿ ತಾಡ್ಯಮಾನಾಶ್ಚ ತೈರ್ಭಟೈಃ ।**
**ಯಾತನಾಭಿಶ್ಚ ಬಹ್ವೀಭಿರ್ವ್ಯಾಪ್ಯಂತೇ ಭೃಗುನಂದನ ॥ ೪೪ ॥**

**ವಿಮುಕ್ತನರಕಾಹ್ಯನ್ಯೇ ವಹ್ನಿಮನ್ಯೇ ಸುಶೀತಲಂ ।**
**ವಿಜಾನಂತಿ ಮಹಾಭಾಗ ಸುಖಸ್ಪರ್ಶತಮಂ ತಥಾ ॥ ೪೫ ॥**

**ವಿಮುಕ್ತೋ ನರಕಾಚ್ಛೀತಾತ್ಸುಖೋಷ್ಣಂ ಹಿಮಸಂಚಯಂ ।**
**ಮನ್ಯತೇ ಸರ್ವಮೇವಾನ್ಯತ್ಸುಖಸ್ಪರ್ಶತಮಂ ತಥಾ ॥ ೪೬ ॥**

**ನರಕೇಭ್ಯಶ್ಚ ಶಸ್ತ್ರೇಭ್ಯೋ ವಿಮುಕ್ತೋ ಯೋ ನರಾಧಮಃ ।**
**ಶಸ್ತ್ರಾಣ್ಯನ್ಯಾನಿ ಜಾತಾನಿ ಸುಖಸ್ಪರ್ಶತಮಾನಿ ಚ ॥ ೪೭ ॥**

**ಸುಖದುಃಖೇ ತು ಮಾನುಷ್ಯೇ ತ್ರಿದಿವೇ ಕೇವಲಂ ಸುಖಂ ।**
**ನರಕೇ ದುಃಖಮೇವೋಗ್ರಂ ಸತತಂ ಭೃಗುನಂದನ ॥ ೪೮ ॥**

---

ನಿಂದಿಸುತ್ತಾ ಪುನಃ ಪುನಃ ಆ ಭಟರಿಂದ ಪ್ರಹರಿಸಲ್ಪಡುತ್ತಾ ಬಹು ವಿಧವಾದ ಯಾತನೆಗೆ ಈಡಾಗಿ ವ್ಯಥೆಪಡುತ್ತಾರೆ.

೪೫–೪೬. ನರಕ ಯಾತನೆಯಿಂದ ಮುಕ್ತರಾದ ಕೆಲವರು ಅಗ್ನಿಯನ್ನೂ ಸಹ ಶೀತಲವಾಗಿಯೂ ಸುಖಸ್ಪರ್ಶ ಉಳ್ಳದ್ದನ್ನಾಗಿಯೂ ತಿಳಿಯತ್ತಾರೆ. (ಅಗ್ನಿಗಿಂತಲೂ ಹೆಚ್ಚಾದ ದಾಹವನ್ನು ಅನುಭವಿಸುತ್ತಿದ್ದ ಅವರಿಗೆ ಅಗ್ನಿಯೂ ಶೀತಲವಾಗಿ ತೋರುತ್ತಿತ್ತು ಎಂದು ತಾತ್ಪರ್ಯ) ಹಾಗೆಯೇ ಬಹಳ ಶೀತಲವಾದ ನರಕದಿಂದ ಮುಕ್ತನಾದವನು ಹಿಮದ ಸಮೂಹವನ್ನೂ ಸಹ ಸುಖೋಷ್ಣವುಳ್ಳದ್ದನ್ನಾಗಿ ಭಾವಿಸುತ್ತಾನೆ. ಉಳಿದ ಎಲ್ಲಾ ಶೀತಲವಸ್ತುಗಳನ್ನೂ ಸಹ ಬಹಳ ಸುಖಸ್ಪರ್ಶ ಉಳ್ಳದ್ದನ್ನಾಗಿಯೂ ಭಾವಿಸುತ್ತಾನೆ.

೪೭–೪೮. ಹಾಗೆಯೇ ನರಕಗಳಿಂದಲೂ ಅಲ್ಲಿರುವ ಕ್ರೂರವಾದ ಶಸ್ತ್ರಗಳಿಂದಲೂ ಬಿಡುಗಡೆ ಹೊಂದಿದ ಪಾಪಿಯಾದ ನರಾಧಮನನ್ನು ಇತರ ಎಲ್ಲಾ ಶಸ್ತ್ರಗಳನ್ನೂ ಬಹಳ ಸುಖ ಸ್ಪರ್ಶ ಉಳ್ಳವುಗಳನ್ನಾಗಿ ಭಾವಿಸುತ್ತಾನೆ. ಮನುಷ್ಯಲೋಕದಲ್ಲಿ ಸುಖದುಃಖಗಳೆರಡೂ ಮಿಶ್ರವಾಗಿವೆ. ಸ್ವರ್ಗಲೋಕದಲ್ಲಿ ದುಃಖ ಸಂಬಂಧವಿಲ್ಲದ ಸುಖಮಾತ್ರವೇ ಇದೆ. ನರಕದಲ್ಲಿ ಮಾತ್ರ ಸುಖಲೇಶವೂ ಇಲ್ಲದ ದುಃಖಮಾತ್ರವೇ ನೆಲೆಸಿದೆ.

ತೃಷ್ಣಾ ತತ್ರ ಕ್ಷುಧಾ ತತ್ರ ಗಂಧಸ್ತೀವ್ರೋ ಭಯಂಕರಃ ।
ಯಾತನಾ ವಿವಿಧಾಃ ಪ್ರೋಕ್ತಾ ಭಯಂ ತತ್ರಾತಿದಾರುಣಂ ॥ ೪೯ ॥

ದುರ್ಗಂಧೀ ಕಂಟಕಾಕೀರ್ಣಂ ತಥಾ ಕುಣಪಸಂಕುಲಂ ।
ಕೇಶಾಸ್ಥಿ ಬಹುಲಂ ಭೀಮಂ ನರಕಂ ದುಃಖಮೇವ ತು ॥ ೫೦ ॥

ಆರ್ತನಾದಮಹಾನಾದ ಕಾಕಕ್ರವ್ಯಾದ ಸಂಕುಲಂ ।
ಕ್ರಿಮಿಕೀಟ ಪತಂಗಾಢ್ಯಂ ಪೂಯಾಸೃಗ್ಬಹುಲಂ ತಥಾ ॥ ೫೧ ॥

ಅನ್ಯೋನ್ಯಕ್ಲೇಶಸಂಯುಕ್ತಮನ್ಯೋನ್ಯಾಕರ್ಷಕಾರಕಂ ।
ಅನ್ಯೋನ್ಯತಾಡಕಂ ಘೋರಂ ತಥಾನ್ಯೋನ್ಯಭಯಂಕರಂ ॥ ೫೨ ॥

ಏವಮೇತೇಷು ತೇ ಪಾಪಾ ನರಕೇಷು ಸಮಾಗತಾಃ ।
ಬಹವಃ ಖಲು ಯಾಪ್ಯಂತೇ ಮಾನವಾಃ ಪಾಪಕಾರಿಣಃ ॥ ೫೩ ॥

---

೪೯-೫೦. ಅಂತಹ ಆ ನರಕದಲ್ಲಿ ಹಸಿವು, ಬಾಯಾರಿಕೆ, ಭಯಂಕರವಾಗಿಯೂ ದುಃಸ್ಸಹವಾಗಿಯೂ ಇರುವ ದುರ್ಗಂಧ, ನಾನಾವಿಧವಾದ ಯಾತನೆಗಳು ಇವು ಇದ್ದೇ ಇರುತ್ತವೆ. ಹೆಚ್ಚಾದ ಭಯ ಮತ್ತು ದುರ್ಗಂಧದಿಂದಲೂ, ಮುಳ್ಳುಗಳಿಂದಲೂ, ಶವಗಳಿಂದಲೂ ಸಿಬಿಡವಾದ ಮತ್ತು ಕೂದಲುಗಳಿಂದಲೂ ಮೂಳೆಗಳಿಂದಲೂ ಕೂಡಿರುವ ಭಯಂಕರವಾದ ಆ ನರಕವು ಬಹಳ ಮಟ್ಟಿಗೂ ದುಃಖಕರವಾಗಿಯೇ ಇರುತ್ತದೆ.

೫೧-೫೧. ಅಂತಹ ಆ ನರಕವು ಪಾಪಿಗಳ ಆರ್ತಧ್ವನಿ ಮಹಾಧ್ವನಿಗಳಿಂದಲೂ ಕಾಗೆ ಮತ್ತು ಮಾಂಸಾಹಾರಿಗಳಾದ ಇತರ ಹಿಂಸಕ ಜಂತುಗಳಿಂದಲೂ ಕ್ರಿಮಿಗಳು ಕೀಟಗಳು ಪಕ್ಷಿಗಳು ಇವುಗಳಿಂದಲೂ ಕೂಡಿ ಕೀವು ರಕ್ತ ಮೊದಲಾದ ಅಸಹ್ಯ ವಸ್ತುಗಳಿಂದ ತುಂಬಿದೆ. ಅಲ್ಲಿ ಎಲ್ಲಿ ನೋಡಿದರೂ ಪರಸ್ಪರ ಕ್ಲೇಶವೂ, ಸೆಳೆತವೂ, ಪ್ರಹಾರಗಳೂ ಸಹ ಭಯಂಕರವಾಗಿಯೂ ಬಹಳ ಘೋರವಾಗಿಯೂ ಇವೆ.

೫೩-೫೫. ಈ ಪ್ರಕಾರ ಇಂತಹ ನರಕಗಳಲ್ಲಿ ಪಾಪಿಗಳಾದ ಬಹುಜನರು ತಮ್ಮ ಪಾಪಕರ್ಮದ ಫಲಾನುಭವಕ್ಕಾಗಿ ಹಾಕಲ್ಪಡುತ್ತಾರೆ. ಹಿಂಸಿಸಲ್ಪಡುತ್ತಾರೆ ಅವರ ಪಾಪಗಳು ಅನುಭವದಿಂದ ಕ್ಷಯ ಹೊಂದುವವರೆಗೂ ಅಲ್ಲಿದ್ದು ಅಂತಹ

ಯಾವತ್ತೇಷಾಂ ನ ಪಾಪಾನಿ ಕ್ಷಯಂ ಯಾಂತಿ ಭೃಗೂತ್ತಮ ।
ತಾವತ್ತೇ ನ ವಿಮುಚ್ಯಂತೇ ನರಕಾದ್ಘೋರದರ್ಶನಾತ್ ॥ ೫೪ ॥

ಅತ್ಯಂತಭೀಮಾಃ ನರಕಾಸ್ಸುಘೋರಾಃ
ಭಯಾವಹವ್ಯಾಲಗಣಾವಕೀರ್ಣಾಃ ।
ಭಕ್ತಿಂ ವಹಂತಃ ಪುರುಷೋತ್ತಮಸ್ಯ
ನ ಯಾಂತಿ ತೇ ಭಾರ್ಗವವಂಶಮುಖ್ಯ ॥ ೫೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ನರಕಯಾತನಾವರ್ಣನಂ ನಾಮೈಕೋನವಿಂಶತ್ಯುತ್ತರಶತತಮೋಽಧ್ಯಾಯಃ

---

ಪಾಪಗಳು ಕ್ಷಯ ಹೊಂದಿದನಂತರ ಘೋರವಾದ ಇಂತಹ ನರಕದಿಂದ ವಿಮೋಚನೆ ಹೊಂದುತ್ತಾರೆ. ಈ ನರಕಗಳು ಬಹಳ ಭಯಂಕರವಾಯೂ ಘೋರವಾಗಿಯೂ ಭಯಂಕರವಾದ ಹಿಂಸಕ ಪ್ರಾಣಿಗಳಿಂದ ಪೂರ್ಣವಾಗಿಯೂ ಇವೆ. ಯಾರು ಪಾಪಕರ್ಮದಿಂದ ನಿವೃತ್ತರಾಗಿ ಪುರುಷೋತ್ತಮನಾದ ಮಧುಸೂದನನಲ್ಲಿ ಭಕ್ತಿಯಿಂದ ವರ್ತಿಸುವರೋ ಅಂತಹ ಪುಣ್ಯಶಾಲಿಗಳು ಇಂತಹ ನರಕವನ್ನು ಹೊಂದುವುದೇ ಇಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಖ್ಯಾನ ದಲ್ಲಿ ನರಕಯಾತನಾವರ್ಣನವೆಂಬ ನೂರ ಹತ್ತೊಂಭತ್ತನೆಯ ಅಧ್ಯಾಯವು ಮುಗಿದಿದೆ.

## ನೂರ ಹತ್ತೊಂಭತ್ತನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ನರಕಗಳ ಹೆಸರುಗಳನ್ನೂ ಅವುಗಳಲ್ಲಿ ಪಾಪಿಗಳಿಗೆ ಉಂಟಾಗುವ ವಿಚಿತ್ರವಾದ ಹಿಂಸೆಗಳನ್ನೂ ಪಾಪಕ್ಷಯವಾದ ನಂತರ ಅಂತಹ ನರಕಗಳಿಂದ ನಿವೃತ್ತಿಯನ್ನೂ ಉಪಪಾದಿಸಿ ಭಗವದ್ಭಕ್ತರಿಗೆ ಇಂತಹ ನರಕ ಸಂಬಂಧವು ಯಾವಾಗಲೂ ಉಂಟಾಗುವುದಿಲ್ಲವೆಂದು ಉಪಸಂಹರಿಸಲಾಗಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ವಿಂಶತ್ಯುತ್ತರಶತತಮೋಽಧ್ಯಾಯಃ

**|| ರಾಮ ಉವಾಚ ||**

**ಕರ್ಮಣಾ ಕೇನ ಧರ್ಮಜ್ಞ ನರಾ ನರಕವಾಸಿನಃ ।**
**ಕಾಂ ಕಾಂ ಯೋನಿಂ ಪ್ರಪದ್ಯಂತೇ ತಿರಶ್ಚೋ ಬ್ರೂಹಿ ತನ್ಮಮ || ೧ ||**

**|| ಪುಷ್ಕರ ಉವಾಚ ||**

**ಅಮೇಧ್ಯಮಧ್ಯೇ ಕೃಮಯೋ ಮಹಾಪಾತಕಿನೋ ಜನಾಃ ।**
**ಭವಂತಿ ಬಹುಧಾ ಭೂಮ್ಯಾಂ ತತಶ್ಚೈವ ಶಿಲಾಸು ತೇ || ೨ ||**

---

### ನೂರ ಇಪ್ಪತ್ತನೆಯ ಅಧ್ಯಾಯ

೧. ಪರಶುರಾಮನು ಪುನಃ ಪ್ರಶ್ನೆಮಾಡುತ್ತಾನೆ. ಮನುಷ್ಯರು ಯಾವ ಯಾವ ದುಷ್ಕರ್ಮದಿಂದ ನರಕವಾಸಿಗಳಾಗುತ್ತಾರೆ. ಅನಂತರವೂ ಯಾವ ಯಾವ ತಿರ್ಯಗ್ಜಂತುಗಳಾಗಿ ಪುನಃ ಹುಟ್ಟುತ್ತಾರೆ ಇವನ್ನು ದಯವಿಟ್ಟು ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಮಹಾಪಾತಕಿಗಳಾದ ಜನರು ಅಮೇಧ್ಯಮಧ್ಯದಲ್ಲಿರುವ ಕ್ರಿಮಿಯಾಗಿ ಮೊದಲು ಹುಟ್ಟುತ್ತಾರೆ. ಅನಂತರ ಕಲ್ಲುಗಳ ಸಂಧಿನಲ್ಲಿರುವ ಕ್ರಿಮಿಯಾಗಿ ನಾನಾ ರೂಪದಿಂದಿರುತ್ತಾರೆ. ಅನಂತರ ಹುಲ್ಲು, ಹುಲ್ಲಿನ ಪೊದರು, ಲತೆಗಳು, ಲತೆಗಳ

ತೃಣಗುಚ್ಛಲತಾಗುಲ್ಮದ್ರುಮತ್ವಂ ಪ್ರಾಪ್ಯತೇ ಕ್ರಮಾತ್ ।
ಭವಂತಿ ಚ ಮೃಗಾಃ ಪಶ್ಚಾನ್ನಿತ್ಯಂ ವ್ಯಾಧಭಯಾರ್ದಿತಾಃ ॥ ೩ ॥

ಬ್ರಹ್ಮಸ್ವಹಾರಿಣೋ ಹಿಂಸ್ರಾ ರೌದ್ರಾಶ್ಚಾರಾಸ್ಸದೈವ ತು ।
ಅಟವ್ಯಾಂ ಘೋರರೂಪಾಯಾಂ ಜಾಯಂತೇ ಬ್ರಹ್ಮರಾಕ್ಷಸಾಃ ॥ ೪ ॥

ಪರದಾರರತಾ ಮೂಢಾಃ ಸಂತಪ್ತಾಯಾಂ ತಥಾ ಭುವಿ ।
ಕೃಕಲಾಸಾ ಹಿ ಜಾಯಂತೇ ಪಿಶಾಚಾಶ್ಚಾಪ್ಯನಂತರಂ ॥ ೫ ॥

ಅಟವ್ಯಾಂ ಘೋರರೂಪಾಯಾಂ ಸಂಶುಷ್ಕದ್ರುಮಕೋಟರೇ ।
ಕೃಷ್ಣಾಹಯೋ ಹಿ ಜಾಯಂತೇ ತತಃ ಪಶ್ಚಾನ್ನ ಸಂಶಯಃ ॥ ೬ ॥

ಕೂಟಸಾಕ್ಷಿಪ್ರದಾಃ ಪಾಪಾಸ್ತ್ವಮೇಧ್ಯೇ ಕೃಮಯಶ್ಚಿರಂ ।
ಕೃತ್ವಾ ಭವಂತಿ ಸರ್ಪಾಸ್ತೇ ಪಿಶಾಚಾಸ್ತದನಂತರಂ ॥ ೭ ॥

---

ಗುಂಪುಗಳು ಮರ ಮುಂತಾದ ರೂಪಾಂತರಗಳನ್ನು ಕ್ರಮವಾಗಿ ಹೊಂದುತ್ತಾರೆ. ಅನಂತರ ಮೃಗಗಳಾಗಿ ಹುಟ್ಟಿ ಬೇಡರ ಭಯದಿಂದ ದುಃಖಪಡುತ್ತಾರೆ.

೪-೫. ಬ್ರಾಹ್ಮಣದ್ರವ್ಯವನ್ನು ಅಪಹರಿಸಿದವರು ಘೋರವಾದ ಕಾಡಿನಲ್ಲಿ ಭಯಂಕರಗಳಾದ ಹಿಂಸಕಮೃಗಗಳಾಗಿ ಆಗುತ್ತಾರೆ. ಕ್ರಮವಾಗಿ ಬ್ರಹ್ಮರಾಕ್ಷಸರಾಗಿಯೂ ಆಗುತ್ತಾರೆ. ಪರಸ್ತ್ರೀಯಲ್ಲಿ ನಿರತರಾದ ಮೂಢರು ಬಿಸಿಲಿನಿಂದ ಕಾದಿರುವ ಭೂಭಾಗದಲ್ಲಿ ಹೆಂಟೇಗೊದ್ದ (ಓತಿ) ನಾಗಿ ಹುಟ್ಟುತ್ತಾರೆ. ಅನಂತರ ಅವರು ಪಿಶಾಚ ಜನ್ಮವನ್ನೂ ಹೊಂದುತ್ತಾರೆ.

೬-೭. ಅನಂತರ ಘೋರವಾದ ಕಾಡಿನಲ್ಲಿ ಒಣಗಿರುವ ಮರದ ಪೊಟ್ಟರೆಯಲ್ಲಿ ಕೃಷ್ಣಸರ್ಪವಾಗಿ ಹುಟ್ಟುತ್ತಾರೆ. ಇದರಲ್ಲಿ ಸಂಶಯವಿಲ್ಲ. ಸುಳ್ಳುಸಾಕ್ಷ್ಯವನ್ನು ಹೇಳಿದ ಪಾಪಿಗಳು ಅಮೇಧ್ಯವಲ್ಲಿ ಬಹಳಕಾಲ ಕ್ರಿಮಿಯಾಗಿದ್ದು ಅನಂತರ ಸರ್ಪಗಳಾಗಿಯೂ ಅನಂತರ ಪಿಶಾಚಿಗಳಾಗಿಯೂ ಆಗುತ್ತಾರೆ.

ಗುರುಮಿತ್ರದ್ರುಹಃ ಪಾಪಾ ಯೇ ಚ ಸ್ವಾಮಿದ್ರುಹೋ ಜನಾಃ ।
ದ್ವಿಜಶಿಷ್ಯದ್ರುಹಶ್ಚೈವ ಕೃತಘ್ನಾನಾಸ್ತಿಕಾಸ್ತಥಾ ॥ ೮ ॥

ತ್ಯಾಗಿನೋ ಬಾಂಧವಾನಾಂ ಚ ತ್ಯಾಗಿನಃ ಶರಣಾರ್ಥಿನಾಂ ।
ನಿಕ್ಷೇಪಹಾರಿಣೋ ಯೇ ಚ ಕನ್ಯಕಾಕ್ರಯಿಣಶ್ಚ ಯೇ ॥ ೯ ॥

ಅಮೇಧ್ಯೇಕೃಮಯಃ ಸರ್ಪಾಃ ಮೃಗಾ ವ್ಯಾಲಮೃಗಾಸ್ತಥಾ ।
ತತೋ ಘೋರಗಣೋಪೇತಾ ಜಾಯಂತೇ ಜಂಬುಕಾಃ ಖಲಾಃ ॥ ೧೦ ॥

ಪರಸ್ವಹಾರಿಣಃ ಪಾಪಾಃ ಕುಂಜರಾಸ್ತುರಗಾಃ ಖರಾಃ ।
ಬಲೀವರ್ದಾಸ್ತಥೈವೋಷ್ಟ್ರಾಃ ಜಾಯಂತೇ ನಾತ್ರ ಸಂಶಯಃ ॥ ೧೧ ॥

ಹೃತಂ ಯಸ್ಯ ತು ತೈರ್ದ್ರವ್ಯಂ ತಸ್ಯ ಭಾಗ್ಯಾನುರೂಪತಃ ।
ಆತ್ಮದೋಷಾನುಸಾರೇಣ ಜಾಯಂತೇ ಧನಿನಸ್ತು ತೇ ॥ ೧೨ ॥

---

೮–೯. ಗುರುದ್ರೋಹ ಮತ್ತು ಮಿತ್ರದ್ರೋಹ ಸ್ವಾಮಿ ದ್ರೋಹವನ್ನು ಮಾಡಿದ ಪಾಪಿಗಳು ಹಾಗೆಯೇ ಬ್ರಾಹ್ಮಣದ್ರೋಹ ಶಿಷ್ಯದ್ರೋಹ ಮಾಡಿದವರೂ ಕೃತಘ್ನರೂ, ನಾಸ್ತಿಕರೂ, ಬಂಧುಗಳನ್ನು ತ್ಯಾಗಮಾಡಿದವರೂ, ಶರಣಾಗತರನ್ನು ತ್ಯಾಗಮಾಡಿದವರೂ, ಮತ್ತು ನಿಕ್ಷೇಪರೂಪವಾದ ಧನಾದಿಗಳನ್ನು ಅಪಹರಿಸಿದವರೂ ಕನ್ಯಾವಿಕ್ರಯ ಮಾಡಿದವರೂ ಸಹ ಅಮೇಧ್ಯದ ಕ್ರಿಮಿಯಾಗಿ ಹುಟ್ಟಿ ಕ್ರಮವಾಗಿ ಸರ್ಪಗಳಾಗಿಯೂ, ಮೃಗಗಳಾಗಿಯೂ, ಹಿಂಸಕ ಮೃಗಗಳಾಗಿಯೂ, ಆಗುತ್ತಾರೆ. ಅನಂತರ ಘೋರವಾದ ಪರಿವಾರವುಳ್ಳ ನರಿಗಳಾಗಿಯೂ ದುರ್ಜನರಾಗಿಯೂ ಹುಟ್ಟುತ್ತಾರೆ.

೧೦–೧೨. ಪರದ್ರವ್ಯವನ್ನು ಅಪಹರಿಸಿದ ಪಾಪಿಗಳು ಆನೆಗಳಾಗಿಯೂ, ಕುದುರೆಗಳಾಗಿಯೂ, ಕತ್ತೆಗಳಾಗಿಯೂ ಹಾಗೆಯೇ ಎತ್ತು, ಒಂಟೆ ಇವುಗಳ ರೂಪ ದಿಂದಲೂ ಹುಟ್ಟುತ್ತಾರೆ, ಇದರಲ್ಲಿ ಸಂದೇಹವಿಲ್ಲ. ಯಾರ ದ್ರವ್ಯವನ್ನು ಇತರರು ಅಪಹರಿಸುತ್ತಾರೆಯೋ ಅಂತಹ ದ್ರವ್ಯಹಾನಿ ಹೊಂದಿದವನು ತನ್ನ ಅಜಾಗರೂಕತೆಯ ತಾರತಮ್ಯಕ್ಕೆ ತಕ್ಕಂತೆ ಭಾಗ್ಯದ ಫಲಕ್ಕೆ ಅನುಗುಣವಾದ ಧನಾಢ್ಯತೆಯನ್ನು ಹೊಂದುತ್ತಾನೆ.

ಚಂದ್ರಾರ್ಕಗ್ರಹಣೇ ಭುಕ್ತ್ವಾ ಜಾಯಂತೇ ಕುಂಜರಾ ನರಾಃ ।
ಅಮಶ್ರಾದ್ಧಂ ತಥಾ ಭುಕ್ತ್ವಾ ಜಾಯಂತೇ ಗೃಧ್ರಯೋನಿಷು ॥ ೧೩ ॥

ಅಸತ್ಪ್ರತಿಗ್ರಹಂ ರಾಮ ಗೃಹೀತ್ವಾ ವಾನರಾಸ್ತಥಾ ।
ಆಶಾಭಂಗಂ ತಥಾ ಕೃತ್ವಾ ಶೃಗಾಲಾಶ್ಚ ತಥಾಧಮಾಃ ॥ ೧೪ ॥

ಸೂಚಕಸ್ತು ದುರಾಚಾರೋ ವಾಗುರಿರ್ನಾಮ ಜಾಯತೇ ।
ಬಹುಕಾಲಂ ಮಹಾಭಾಗ ಭೂಯೋ ಭೂಯ ಇತಿ ಶ್ರುತಿಃ ॥ ೧೫ ॥

ಮಾಂಸಭುಗ್ಯಾವತಾಂ ರಾಮ ಮಾಂಸಮಶ್ನಾತಿ ದೇಹಿನಾಂ ।
ತಾವತಾಂ ಯೋನಿಮಾಪ್ನೋತಿ ಭೂಯೋ ಭೂಯೋ ನ ಸಂಶಯಃ ॥ ೧೬ ॥

ಭೋಕ್ತವ್ಯಾನಿ ಚ ತೈಸ್ತಸ್ಯ ರಾಮ ಮಾಂಸಾನ್ಯಸಂಶಯಂ ।
ಯಾವಂತಃ ಪ್ರಾಣಿನೋ ಯೇನ ಬಹಿರ್ವೇದ್ಯಾಂ ನಿಪಾತಿತಾಃ ॥ ೧೭ ॥

---

೧೩, ೧೪. ಚಂದ್ರಸೂರ್ಯರ ಗ್ರಹಣಕಾಲದಲ್ಲಿ ಭೋಜನಮಾಡಿದವರು ಆನೆಗಳಾಗಿ ಹುಟ್ಟುತ್ತಾರೆ. ಅಮಶ್ರಾದ್ಧವನ್ನು ಭುಂಜಿಸಿದವರು ಹದ್ದಿನ ಜನ್ಮವನ್ನು ಹೊಂದುತ್ತಾರೆ. ಅಪಾತ್ರದಿಂದ ಪ್ರತಿಗ್ರಹಹೊಂದಿದವರು ಕಪಿಯಾಗಿ ಹುಟ್ಟುತ್ತಾರೆ. ಒಬ್ಬನಿಗೆ ಮೊದಲು ಆಶೆಯನ್ನುಂಟುಮಾಡಿ ಅನಂತರ ಅವನ ಆಶೆಗೆ ಭಂಗತರುವ ಅಧಮನು ನರಿಯಾಗಿ ಹುಟ್ಟುತ್ತಾನೆ.

೧೫-೧೬. ಚಾಡಿಕೋರನಾದ ಪಿಶುನನು ಮೃಗಬಂಧಕನಾಗಿ ಹುಟ್ಟುತ್ತಾನೆ. ಹೀಗೆಯೇ ಅವನು ಅದೇ ಜನ್ಮದಲ್ಲಿ ಬಾರಿಬಾರಿಗೂ ಹುಟ್ಟುತ್ತಲೇ ಇರುತ್ತಾನೆ. ಎಂದು (ನಾವು ಕೇಳಿರುವೆವು.) ವೇದವಾಣಿಯೂ ಇದೆ ಮಾಂಸಹಾರಿಯಾದವನು ಎಷ್ಟು ಪ್ರಾಣಿಗಳ ಮಾಂಸವನ್ನು ಅವನು ತಿಂದಿರುವನೋ ಅಷ್ಟು ಪ್ರಾಣಿಗಳ ಜನ್ಮವನ್ನು ಬಾರಿಬಾರಿಗೂ ಹೊಂದುತ್ತಲೇ ಇರುತ್ತಾನೆ ಇದರಲ್ಲಿ ಸಂಶಯವಿಲ್ಲ.

೧೭-೧೮ ಇವನು ಆಯಾಯ ಜನ್ಮವನ್ನು ಹೊಂದಿದಾಗಲೆಲ್ಲಾ ಇವನಿಗೆ ಮಾಂಸವನ್ನು ಕೊಟ್ಟು ಮೃತಿಯಿಂದ ಜನ್ಮಾಂತರವನ್ನು ಹೊಂದಿರುವ ಆ ಪ್ರಾಣಿಗಳೆಲ್ಲವೂ ಅವನ ಮಾಂಸವನ್ನೇ ತಿನ್ನಬೇಕು. ಯಜ್ಞವೇದಿಕೆಯನ್ನು ಬಿಟ್ಟು

ತಾವತ್ಯೋ ಯೋನಯಸ್ತೇನ ಗಂತವ್ಯಾ ಭೃಗುಸತ್ತಮ ।
ಯೋನೌ ಯೋನೌ ಚ ಹಂತವ್ಯಸ್ತೇನಾಸೌ ನಾತ್ರ ಸಂಶಯಃ ॥ ೧೮ ॥

ವಾಂತಾಶೀ ಗುಣಪಾಶೀ ಚ ಪೂಯಭುಗ್ರುಧಿರಾಶಿನಃ ।
ಸ್ವಕರ್ಮವಿಚ್ಯುತಾ ವರ್ಣಾ ಜಾಯಂತೇ ಪ್ರೇತಯೋನಿಷು ॥ ೧೯ ॥

ಧಾನ್ಯಂ ಹೃತ್ವಾ ಭವತ್ಯಾಖುಃ ಕಾಂಸ್ಯಂ ಹಂಸೋ ಜಲಂ ಪ್ಲವಃ ।
ಮಧು ದಂಶಃ ಪಯಃ ಕಾಕೋ ರಸಂ ಶ್ವಾ ನಕುಲೋ ಘೃತಂ ॥ ೨೦ ॥

ಮಾಂಸಂ ಗೃಧ್ರೋ ವಸಾಂ ಮದ್ಗುಸ್ತೈಲಂ ತೈಲಾಪಗಃ ಖಗಃ ।
ಚೀರೀವಾಕಸ್ತು ಲವಣಂ ಬಲಾಕಾ ಶಕುನಿರ್ದಧಿ ॥ ೨೧ ॥

---

ಇವನು ತನ್ನ ಆಹಾರಕ್ಕಾಗಿ ಎಷ್ಟು ಪ್ರಾಣಿಗಳನ್ನು ಕೊಂದಿರುವನೋ ಅಷ್ಟು ಪ್ರಾಣಿಗಳ ಜನ್ಮವನ್ನೂ ಇವನು ಹೊಂದಿಯೇ ತೀರಬೇಕು. ತಾನು ಹೊಂದಿದ ಪ್ರತಿಯೊಂದು ಜನ್ಮದಲ್ಲಿಯೂ ತನಗೆ ಹಿಂದೆ ಮಾಂಸಪ್ರದಾನ ಮಾಡಿದ ಪ್ರಾಣಿಗಳ ಆಹಾರಕ್ಕಾಗಿ ಇವನೇ ಬಾರಿಬಾರಿಗೂ ಕೊಲ್ಲಲ್ಪಡುತ್ತಾನೆ. ಇದರಲ್ಲಿ ಸಂಶಯವಿಲ್ಲ. ಮಾಂಸಾಹಾರಮಾಡುವವನ ಮುಂದಿನ ಗತಿಯು ಈ ರೀತಿ ಹೇಳಲ್ಪಟ್ಟಿದೆ.

೧೯-೨೦. ವಾಂತಾಶನಮಾಡಿದವನೂ, ಹಗ್ಗಗಳಿಂದ ಪಾಶವನ್ನು ಮಾಡಿಕೊಂಡು ಪ್ರಾಣಿಗಳನ್ನು ಹಿಂಸಿಸಿದವನೂ ಸಹ ಕೀವು ಮತ್ತು ರಕ್ತಗಳನ್ನು ಭುಂಜಿಸುವ ಪ್ರಾಣಿಯಾಗಿ ಹುಟ್ಟುತ್ತಾನೆ. ತನ್ನ ವರ್ಣಾಶ್ರಮಕ್ರಮಗಳನ್ನು ಬಿಟ್ಟವರು ಪಿಶಾಚಜನ್ಮದಲ್ಲಿ ಜನಿಸುತ್ತಾರೆ. ಮತ್ತೊಬ್ಬನ ಧಾನ್ಯವನ್ನ ಅಪಹರಿಸಿದವನು ಇಲಿಯಾಗಿ ಹುಟ್ಟುತ್ತಾನೆ. ಕಂಚನ್ನು ಅಪಹರಿಸಿದವನು ಹಂಸವಾಗಿಯೂ, ಜಲವನ್ನು ಕದ್ದವನು ಜಲಚರಪಕ್ಷಿಯಾಗಿಯೂ, ಜೇನನ್ನು ಅಪಹರಿಸಿದವನು ಸೊಳ್ಳೆಯಾಗಿಯೂ, ಹಾಲನ್ನು ಅಪಹರಿಸಿದವನು ಕಾಗೆಯಾಗಿಯೂ, ರಸದ್ರವ್ಯಗಳನ್ನು ಅಪಹರಿಸಿದವನು ನಾಯಿಯಾಗಿಯೂ ತುಪ್ಪವನ್ನು ಅಪಹರಿಸಿದವನು ಮುಂಗಸಿಯಾಗಿಯೂ ಹುಟ್ಟುತ್ತಾನೆ.

೨೧-೨೨. ಹಾಗೆಯೇ ಮಾಂಸವನ್ನು ಅಪಹರಿಸಿದವನು ಹದ್ದಾಗಿಯೂ, ವಸೆಯೆಂಬ ಮಾಂಸವಿಶೇಷವನ್ನು ಅಪಹರಿಸಿದವನು ನೀರುಕಾಗೆಯಾಗಿಯೂ, ಎಣ್ಣೆಯನ್ನು ಅಪಹರಿಸಿದವನು ತೈಲಾಪಗವೆಂಬ ಪಕ್ಷಿಯಾಗಿಯೂ, ಉಪ್ಪನ್ನು ಅಪಹರಿಸಿ

**ಕೌಶೇಯಂ ತಿತ್ತಿರಿರ್ಹೃತ್ವಾ ಕ್ಷೌಮಂ ಹೃತ್ವಾ ಚ ದರ್ದುರಃ ।**
**ಕಾರ್ಪಾಸಂ ಕಾಂತವಃ ಕ್ರೌಂಚಂ ಗಾಂ ಗೋಧಾ ವಾಗುರೋ ಗುಡಂ ॥ ೨೨ ॥**

**ಚುಂಚುಂದರಿಃ ಶುಭಾನ್ ಗಂಧಾನ್ ಪತ್ರಶಾಕಂ ಶಿಖೀ ತಥಾ ।**
**ಮಕ್ಷಿಕಾಸ್ತು ತಥೈವಾನ್ನಮಕೃತಾನ್ನಂ ತು ಶಲ್ಯಕಃ ॥ ೨೩ ॥**

**ಭೇಕೋ ಭವತಿ ಹೃತ್ವಾಗ್ನಿಂ ಗೃಹಹಾರೀ ಚ ತಸ್ಕರಃ ।**
**ರಕ್ತಾನಿ ಹೃತ್ವಾ ವಾಸಾಂಸಿ ಜಾಯತೇ ಜೀವಜೀವಕಃ ॥ ೨೪ ॥**

**ವೃಕೋ ವೃಗೇಭಂ ವ್ಯಾಘ್ರಾಶ್ವಂ ಫಲಪುಷ್ಪಂ ಚ ಮರ್ಕಟಃ ।**
**ಸ್ತ್ರಿಯಂ ಹೃತ್ವಾ ಭವೇದ್ಯಕ್ಷೋ ಯಾನಮುಷ್ಟ್ರಃ ಪಶೂನಜಃ ॥ ೨೫ ॥**

**ಯದ್ವಾ ತದ್ವಾ ಪರದ್ರವ್ಯಮುಪಹೃತ್ಯ ಬಲಾನ್ನರಃ ।**
**ಅವಶ್ಯಂ ಯಾತಿ ತಿರ್ಯಕ್ತ್ವಂ ಜಗ್ಧ್ವಾ ಚೈವಾಹುತಂ ಹವಿಃ ॥ ೨೬ ॥**

---

ದವನು ಚೀರೀವಾಹಕವೆಂಬ ಕ್ಷುದ್ರಜಂತುವಾಗಿಯೂ, ಮೊಸರನ್ನು ಅಪಹರಿಸಿದವನು ಕೊಕ್ಕರೆ ಎಂಬ ಪಕ್ಷಿಯಾಗಿಯೂ, ರೇಷ್ಮೆ ವಸ್ತ್ರವನ್ನು ಅಪಹರಿಸಿದವನು ತಿತ್ತಿರಿ (ಸೊರೆಹಕ್ಕಿ) ಎಂಬ ಪಕ್ಷಿಯಾಗಿಯೂ, ಪಟ್ಟೆ ವಸ್ತ್ರಗಳನ್ನು ಅಪಹರಿಸಿದವನು ಕಪ್ಪೆಯಾಗಿಯೂ, ನೂಲಿನ ಬಟ್ಟೆಯನ್ನು ಕದ್ದವನು ಮುಗ್ಗದವನಾಗಿಯೂ, ಕ್ರೌಂಚ ಮತ್ತು ಗೋವನ್ನು ಅಪಹರಿಸಿದವನು ಉಡುವಾಗಿಯೂ, ಬೆಲ್ಲವನ್ನು ಅಪಹರಿಸಿ ದವನು ಜಾಲಾಜೀವಿಯಾದ ಬೇಡನಾಗಿಯೂ ಹುಟ್ಟುತ್ತಾನೆ.

೨೩-೨೪. ಒಳ್ಳೆಯ ಸುಗಂಧಿದ್ರವ್ಯಗಳನ್ನು ಅಪಹರಿಸಿದವನು ಮೂಗಿಲಿ ಯಾಗಿಯೂ, ಕಾಯಿಪಲ್ಯಗಳನ್ನು ಅಪಹರಿಸಿದವನು ನವಿಲಾಗಿಯೂ, ಅನ್ನವನ್ನು ಅಪಹರಿಸಿದವನು ನೊಣಗಳಾಗಿಯೂ, ಅನ್ನವಾಗದಿರುವ ಅಪಕ್ವವಾದ ವಸ್ತು ಗಳನ್ನು ಅಪಹರಿಸಿದವನು ಮುಳ್ಳುಹಂದಿಯಾಗಿಯೂ, ಅಗ್ನಿಯನ್ನು ಅಪಹರಿಸಿ ದವನು ಕಪ್ಪೆಯಾಗಿಯೂ, ಮನೆಯನ್ನು ಅಪಹರಿಸಿದವನು ಕಳ್ಳನಾಗಿಯೂ, ಕೆಂಪಾದ ವಸ್ತ್ರಗಳನ್ನು ಅಪಹರಿಸಿದವನು ಚಕೋರವಾಗಿಯೂ, ಹುಟ್ಟುತ್ತಾನೆ.

೨೫-೨೬. ಜಿಂಕೆ, ಆನೆ, ಹುಲಿ, ಕುದುರೆ ಮುಂತಾದುವುಗಳನ್ನು ಅಪಹರಿಸಿ ದವನು ತೋಳನಾಗಿಯೂ, ಫಲಪುಷ್ಪಗಳನ್ನು ಅಪಹರಿಸಿದವನು ಕಪಿಯಾಗಿಯೂ ಸ್ತ್ರೀಯನ್ನು ಅಪಹರಿಸಿದವನು ಯಕ್ಷನಾಗಿಯೂ, ಯಾನವನ್ನು ಅಪಹರಿಸಿದವನು

ತಿರ್ಯಕ್ಷು ದುಃಖಂ ಪರಮಂ ವಿದಿತ್ವಾ
ಪಾಪಾನಿ ವರ್ಜ್ಯಾನಿ ನರೇಣ ನಿತ್ಯಂ ।
ಭಕ್ತಿಶ್ಚ ಕಾರ್ಯಾ ಮಧುಸೂದನಸ್ಯ
ತಯಾ ಸ ದುಃಖಂ ಸಕಲಂ ಜಹಾತಿ　　　॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ತಿರ್ಯಗ್ಯೋನಿವರ್ಣನಂ ನಾಮ
ವಿಂಶತ್ಯುತ್ತರಶತತಮೋಽಧ್ಯಾಯಃ

---

ಒಂಟೆಯಾಗಿಯೂ, ಪಶುಗಳನ್ನು ಅಪಹರಿಸಿದವನು ಆಡಾಗಿಯೂ, ಇದೇ ರೀತಿಯಾಗಿ ಯಾವುದಾದರೊಂದು ಪರದ್ರವ್ಯವನ್ನು ಅಪಹರಿಸಿದವನು ತಿರ್ಯಕ್ಕಾಗಿಯೇ ಹುಟ್ಟುತ್ತಾನೆ. ಹುತ ಶಿಷ್ಟವಾಗದಿರುವ ಅನ್ನಾದಿ ದ್ರವ್ಯಗಳನ್ನು ಭುಂಜಿಸಿದವನೂ ಸಹ ತಿರ್ಯಗ್ಜನ್ಮವನ್ನು ಹೊಂದುತ್ತಾನೆ. ಮನುಷ್ಯನಾದವನಿಗೆ ಈ ವಿಧವಾದ ತಿರ್ಯಗ್ಜನ್ಮವು ಬಹಳ ದುಃಖಕರವೆಂಬುದನ್ನು ತಿಳಿದು ಅಂತಹ ಜನ್ಮಕ್ಕೆ ಕಾರಣಗಳಾದ ಪಾಪಗಳನ್ನು ಸರ್ವದಾ ದೂರಮಾಡಬೇಕು. ಮಧುಸೂದನನಲ್ಲಿ ಭಕ್ತಿಯನ್ನು ಹೊಂದಬೇಕು. ಆ ಭಕ್ತಿಯ ಬಲದಿಂದಲೇ ಅವನು ಸರ್ವವಿಧವಾದ ದುಃಖದಿಂದಲೂ ಬಿಡುಗಡೆ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ
ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ತಿರ್ಯಗ್ಯೋನಿವರ್ಣನವೆಂಬ ನೂರ ಇಪ್ಪತ್ತನೆಯ
ಅಧ್ಯಾಯವು ಮುಗಿದಿದೆ.



## ನೂರ ಇಪ್ಪತ್ತನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ನರಕವಾಸವನ್ನು ಹೊಂದಿದ ನಂತರವೂ ಉಳಿದಿರುವ ಪಾಪಕ್ಕೆ ಫಲವಾಗಿ ಮನುಷ್ಯನು ಹೊಂದಬಹುದಾದ ತಿರ್ಯಗ್ಜನ್ಮಗಳನ್ನೂ ಅದಕ್ಕೆ ಕಾರಣಗಳಾದ ನಾನಾವಿಧ ಪಾಪಗಳನ್ನೂ ವಿವರಿಸಿ ಇಂತಹ ಪಾಪಗಳನ್ನೆಲ್ಲಾ ದೂರಮಾಡಿ ಮಧುಸೂದನನಲ್ಲಿ ಭಕ್ತಿಹೊಂದಿದಲ್ಲಿ ಎಲ್ಲಾ ದುಃಖಗಳಿಂದಲೂ ಬಿಡುಗಡೆ ಹೊಂದುತ್ತಾನೆಂದು ನಿರೂಪಿಸಲಾಗಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕವಿಂಶತ್ಯುತ್ತರಶತತಮೋಽಧ್ಯಾಯಃ

**|| ರಾಮ ಉವಾಚ ||**

**ನರಕಾದ್ಯಾಂತಿ ತಿರ್ಯಕ್ತ್ವಂ ತತೋ ಮಾನುಷ್ಯಮೇವ ಚ |**
**ತೇಷಾಂ ಚಿಹ್ನಾನಿ ಮೇ ಬ್ರೂಹಿ ಮಾನುಷ್ಯೇ ವರುಣಾತ್ಮಜ || ೧ ||**

**|| ಪುಷ್ಕರ ಉವಾಚ ||**

**ಮಣಿಮುಕ್ತಾಪ್ರವಾಲಾನಿ ರತ್ನಾನಿ ವಿವಿಧಾನಿ ಚ |**
**ಅಪಹೃತ್ಯ ನರೋ ರಾಮ ಜಾಯತೇ ಹೇಮಕರ್ತೃಷು || ೨ ||**

---

### ನೂರ ಇಪ್ಪತ್ತೊಂದನೆಯ ಅಧ್ಯಾಯ.

೧. ಪರಶುರಾಮನು ಪುನಃ ಪ್ರಶ್ನೆಮಾಡುತ್ತಾನೆ :—ನರಕವಾಸವನ್ನು ಅನುಭವಿಸಿ ತಿರ್ಯಗ್ಜನ್ಮವನ್ನು ಹೊಂದಿದ ಮೇಲೆ ಪುನಃ ಮನುಷ್ಯರಾಗಿ ಹುಟ್ಟುತ್ತಾರೆಂದು ಹೇಳಿದ್ದೀರಿ. ಹಾಗೆ ಮನುಷ್ಯರಾಗಿ ಹುಟ್ಟುವವರು ಹಾಗೆ ಹುಟ್ಟಲು ಯಾವ ಯಾವ ಚಿಹ್ನೆಗಳು ಕಾರಣವಾಗುತ್ತವೆ ಎಂಬುದನ್ನು ಹೇಳಬೇಕು ಎಂದು ಪ್ರಶ್ನೆಮಾಡಲು ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಮಣಿಗಳು, ಮುತ್ತುಗಳು, ಹವಳ, ಎಲ್ಲಾ ವಿಧವಾದ ರತ್ನಗಳು ಇವುಗಳನ್ನು ಅಪಹರಿಸಿದ್ದವನು ಸ್ವರ್ಣಕಾರರ ಜಾತಿಯಲ್ಲಿ ಹುಟ್ಟುತ್ತಾನೆ. ಯಾವುದಾದರೊಂದು ಪರದ್ರವ್ಯವನ್ನು ಬಲಾತ್ಕಾರದಿಂದ ಅಪಹರಿಸಿದ್ದವನು ಮನುಷ್ಯ

ಯದ್ವಾ ತದ್ವಾ ಪರದ್ರವ್ಯಮುಪಹೃತ್ಯ ನರೋ ಬಲಾತ್ ।
ಪ್ರಾಪ್ನೋತಿ ಭೃಗುಶಾರ್ದೂಲ ಮಾನುಷ್ಯೇ ಭಾರವಾಹಿತಾಂ ॥ ೩ ॥

ಯಂ ಕಂ ಚಿದ್ಘಾತಯಿತ್ವಾಪಿ ಪ್ರಾಣಿನಂ ಭೃಗುನಂದನ ।
ಮಾಂಸಂ ಭುಕ್ತ್ವಾ ತು ಧರ್ಮಜ್ಞ ಭವತೀಹ ಗದಾತುರಃ ॥ ೪ ॥

ಸುವರ್ಣಚೋರಃ ಕುನಖೀ ಸುರಾಪಃ ಶ್ಯಾವದಂತಕಃ ।
ಬ್ರಹ್ಮಹಾ ಕ್ಷಯರೋಗೀ ಸ್ಯಾದ್ದುಶ್ಚರ್ಮಾ ಗುರುತಲ್ಪಗಃ ॥ ೫ ॥

ಪಿಶುನಃ ಪೂತಿನಾಸಸ್ಯಾತ್ಸೂಚಕಃ ಪೂತಿವಕ್ತ್ರಕಃ ।
ಧಾನ್ಯಚೋರೋಽಙ್ಗಹೀನಸ್ಯಾದವ್ಯಜ್ಞೋ ಮಿಶ್ರಹೃದ್ಭವೇತ್ ॥ ೬ ॥

ವ್ಯಾಧಿತಶ್ಚಾನ್ನಹರ್ತಾ ಸ್ಯಾನ್ಮೂಕೋ ವಾಗಪಹಾರಕಃ ।
ವಸ್ತ್ರಾಪಹಾರಕಃ ಶ್ವಿತ್ರೀ ಪಙ್ಗುಶ್ಚಾಶ್ವಾಪಹಾರಕಃ ॥ ೭ ॥

---

ರಲ್ಲಿಯೂ ಭಾರಹೊರುವವರ ಜಾತಿಯಲ್ಲಿ ಹುಟ್ಟುತ್ತಾನೆ. ಆಯಾಯ ಗುಂಪಿನಲ್ಲಿ ಹುಟ್ಟಲು ಅದಕ್ಕೆ ತಕ್ಕ ಪಾಪಗಳೇ ನಿಯಾಮಕವಾಗಿಯೂ ಚಿಹ್ನೆಯಾಗಿಯೂ ಆಗುತ್ತವೆ ಎಂದು ತಾತ್ಪರ್ಯ.

೪-೫. ಯಾವುದಾದರೊಂದು ಪ್ರಾಣಿಯನ್ನು ನಿಷ್ಕಾರಣವಾಗಿ ಕೊಂದವನೂ, ಮಾಂಸಭೋಜನ ಮಾಡಿದವನೂ ಸಹ ವ್ಯಾಧಿಗ್ರಸ್ತನಾಗಿ ಹುಟ್ಟುತ್ತಾನೆ. ಚಿನ್ನವನ್ನು ಅಪಹರಿಸಿದವನು ಕಪ್ಪಾದ ಅಥವಾ ವಕ್ರವಾದ ಉಗುರುಗಳಿಂದ ಕೂಡಿ ನಖರೋಗಿಯಾಗಿ ಹುಟ್ಟುತ್ತಾನೆ. ಸುರಾಪಾನಮಾಡಿದವನು ದಂತರೋಗದಿಂದ ಕಪ್ಪಾದ ಹಲ್ಲುಗಳುಳ್ಳವನಾಗುತ್ತಾನೆ. ಬ್ರಹ್ಮಹತ್ಯೆಮಾಡಿದವನು ಕ್ಷಯರೋಗಿಯಾಗುತ್ತಾನೆ. ಗುರುತಲ್ಪಗಮನಮಾಡಿದವನು ಚರ್ಮರೋಗದಿಂದ ದುಃಖಪಡುತ್ತಾನೆ

೬-೮. ಚಾಡಿಕೋರನಾಗಿದ್ದವನು ಮೂಗಿನಲ್ಲಿ ದುರ್ಗಂಧ ಉಳ್ಳವನಾಗಿಯೂ, ದುರುಪದೇಶ ಮಾಡುವವನು ದುರ್ಗಂಧ ಉಳ್ಳ ಬಾಯಿ ಉಳ್ಳವನಾಗಿಯೂ ಧಾನ್ಯವನ್ನು ಅಪಹರಿಸಿದವನು ಕುರಿಯಂತೆ ವಿಕಾರ ಉಳ್ಳ ದೇಹದಿಂದ ಕೂಡಿಯೂ ಹುಟ್ಟುತ್ತಾನೆ. ಅನ್ನವನ್ನು ಅಪಹರಿಸಿದವನು ವ್ಯಾಧಿಗ್ರಸ್ತನಾಗುತ್ತಾನೆ. ಮತ್ತೊಬ್ಬನ

ಖಲ್ವಾಟೋ ಮತ್ಸರೀ ರಾಮ ನಾಸ್ತಿಕೋ ವೇದನಿಂದಕಃ ।
ಭೂಯ ಏವ ಸಮಾಪ್ನೋತಿ ತಥಾ ನಾಸ್ತಿಕತಾಂ ದ್ವಿಜ ॥ ೮ ॥

ಅಂಧೋ ದೀಪಾಪಹಾರೀ ಸ್ಯಾತ್ಕಾಣೋ ನಿರ್ವಾಪಕಸ್ತಥಾ ।
ಅಂಧೋ ಭವತಿ ಗೋಘ್ನಸ್ತು ಘಾಂಟಿಕಸ್ತೈಲಿಕಸ್ತಥಾ ॥ ೯ ॥

ದರಿದ್ರಃ ಪರವಿತ್ತಘ್ನೋ ಉನ್ಮತ್ತಶ್ಚ ತಥಾಗ್ನಿದಃ ।
ಪ್ರತಿಕೂಲೋ ಗುರೋರ್ಯಸ್ತು ಸೋಽಪಸ್ಮಾರೀ ಪ್ರಜಾಯತೇ ॥ ೧೦ ॥

ಮಿಷ್ಟಾಶ್ಯೇಕೋ ಮಹಾಭಾಗ ವಾತಗುಲ್ಮೀ ಭವೇನ್ನರಃ ।
ಖಗಭಕ್ಷ್ಯಸ್ತು ಕುಂಡಾಶೀ ದೀರ್ಘರೋಗೀ ಚ ಪೀಡಕಃ ॥ ೧೧ ॥

---

ವಾಗ್ಫಲವನ್ನು ಮಾಟಕೂಟಾದಿಗಳಿಂದ ಅಪಹರಿಸಿದವನು ಮೂಗನಾಗಿ ಹುಟ್ಟು ತ್ತಾನೆ. ಬಟ್ಟೆಗಳನ್ನು ಅಪಹರಿಸಿದವನು ತೊನ್ನು ಹಿಡಿದವನಾಗುತ್ತಾನೆ. ಕುದುರೆಯನ್ನು ಅಪಹರಿಸಿದವನು ಕುಂಟನಾಗಿ ಹುಟ್ಟುತ್ತಾನೆ. ಮಾತ್ಸರ್ಯದಿಂದ (ಅನ್ಯರ ಶುಭದಲ್ಲಿ ದ್ವೇಷ) ಕೂಡಿದವನು ಪಟ್ಟೆತಲೆ ಉಳ್ಳವನಾಗುತ್ತಾನೆ. ವೇದಗಳನ್ನು ನಿಂದಿಸಿದವನು ನಾಸ್ತಿಕನಾಗಿ ಹುಟ್ಟುತ್ತಾನೆ. ಮತ್ತೊಂದು ಜನ್ಮದಲ್ಲಿಯೂ ನಾಸ್ತಿಕನಾಗಿಯೇ ಬಾರಿಬಾರಿಗೂ ಹುಟ್ಟುತ್ತಾನೆ.

೯-೧೦. ದೀಪವನ್ನು ಅಪಹರಿಸಿದವನು ಕುರುಡನಾಗಿಯೂ, ದೀಪವನ್ನು ಆರಿಸಿದವನು ಕಣ್ಣಿಲ್ಲದವನಾಗಿಯೂ, ಗೋವನ್ನು ಕೊಂದವನು ಕುರುಡನಾಗಿಯೂ ಘಂಟೆಯಿಂದ ಜೀವಿಸುವ ಭಿಕ್ಷುವಾಗಿಯೂ, ಗಾಣಿಗನಾಗಿಯೂ ಹುಟ್ಟುತ್ತಾನೆ. ಮತ್ತೊಬ್ಬನ ಹಣವನ್ನು ಅಪಹರಿಸಿದವನು ದರಿದ್ರನಾಗಿಯೂ, ಮತ್ತೊಬ್ಬನ ಬಟ್ಟೆಗಳಿಗೆ ಬೆಂಕಿಯನ್ನಿಟ್ಟವನು ಉನ್ಮತ್ತ (ಹುಚ್ಚುಹಿಡಿದವನು) ನಾಗಿಯೂ, ಗುರುವಿಗೆ ಅನುಕೂಲನಾಗಿರದೆ ವಿರೋಧದಿಂದ ವರ್ತಿಸಿದವನು ಅಪಸ್ಮಾರರೋಗ ಉಳ್ಳವನಾಗಿಯೂ ಹುಟ್ಟುತ್ತಾನೆ.

೧೧-೧೩. ತಾನೊಬ್ಬನೇ ಮೃಷ್ಟಾನ್ನವನ್ನು ಭೋಜನಮಾಡಿದವನು ವಾತಗುಲ್ಮರೋಗಿಯಾಗಿ ಹುಟ್ಟುತ್ತಾನೆ. ಪಕ್ಷಿ ಭಕ್ಷಕನು ಮಣ್ಣಿನ ಪಾತ್ರೆಯಲ್ಲಿ ಊಟಮಾಡುವ ಹೀನಜಾತಿಯಲ್ಲಿ ಹುಟ್ಟುತ್ತಾನೆ. ಪರಹಿಂಸೆಮಾಡತಕ್ಕವನು

ಭವತೀಹ ಮೃಗವ್ಯಾಧಸ್ತ್ವವಿಕ್ರೇಯಸ್ಯ ವಿಕ್ರಯಾತ್ ।
ಶ್ಲೀಪದೀಚಾವಕೀರ್ಣೀಸ್ಯಾನ್ಮೂರ್ಖಶ್ಚಾಕ್ರೋಶಕೋ ಭವೇತ್ ॥ ೧೨ ॥

ಉಕ್ತಾಸ್ತು ಮುಖ್ಯಾ ಹಿ ಮಯಾ ತಿರಶ್ಚಾಂ
ಯಾ ಯೋನಯೋ ಯಾನಿ ಚ ಲಕ್ಷಣಾನಿ ।
ಶಕ್ಯಂನ ಕಾರ್ತ್ಸ್ನ್ಯೇನ ಮಯಾ ಪ್ರವಕ್ತುಂ
ಯಾ ಯಾತನಾಶ್ಚೈವ ನರಾಧಮಾನಾಂ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ನಾರಕಿಚಿಹ್ನ
ವರ್ಣನಂ ನಾಮೈಕವಿಂಶತ್ಯುತ್ತರಶತತಮೋಽಧ್ಯಾಯಃ

---

ದೀರ್ಘರೋಗಿಯಾಗುತ್ತಾನೆ. ವಿಕ್ರಯಕ್ಕೆ ಅನರ್ಹವಾದ ವಸ್ತುಗಳನ್ನು ವಿಕ್ರಯಿಸಿದವನು ಮೃಗಗಳನ್ನು ಬೇಟೆಯಾಡುವ ಬೇಡನಾಗಿ ಹುಟ್ಟುತ್ತಾನೆ. ವ್ರತಲೋಪ ಹೊಂದಿದವನು ಗಂತಿಕಾಲು ಎಂಬ ಕಾಲಿನ ವ್ಯಾಧಿಯುಳ್ಳವನಾಗುತ್ತಾನೆ. ಇತರರನ್ನು ಹೆಚ್ಚಾಗಿ ಕೂಗಿ ಬಯ್ಯುವವನು ಮೂರ್ಖನಾಗಿ ಹುಟ್ಟುತ್ತಾನೆ. ಪಾಪದ ಫಲವಾಗಿ ಉಂಟಾಗಬಹುದಾದ ತಿರ್ಯಗ್ಜನ್ಮಗಳನ್ನೂ ಅವುಗಳಿಗೆ ಸಂಬಂಧ ಪಟ್ಟ ಚಿಹ್ನೆಗಳನ್ನೂ ಸಹ ಮುಖ್ಯವಾದ ಕೆಲವನ್ನು ಇಲ್ಲಿ ನಾನು ಹೇಳಿರುತ್ತೇನೆ. ಇಂತಹ ಜನ್ಮಗಳನ್ನು ಹೊಂದಿದ ನರಾಧಮರಿಗೆ ಉಂಟಾಗಬಹುದಾದ ಯಾತನೆಗಳೆಲ್ಲವನ್ನೂ ಸಹ ಸಮಗ್ರವಾಗಿಯೇ ಹೇಳಲು ನನ್ನಿಂದ ಸಾಧ್ಯವೇ ಇಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ನಾರಕಿಗಳ ಚಿಹ್ನವರ್ಣನವೆಂಬ ನೂರ ಇಪ್ಪತ್ತೊಂದನೆಯ
ಅಧ್ಯಾಯ ಮುಗಿದಿದೆ.



## ನೂರ ಇಪ್ಪತ್ತೊಂದನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ನರಕವನ್ನು ಹೊಂದಿದ ಪಾಪಿಯು ಆ ಪಾಪದ ಫಲವಾಗಿ ಅನಂತರ ಹೊಂದುವ ತಿರ್ಯಗ್ಜನ್ಮಗಳಿಗೆ ನಿಮಿತ್ತಗಳನ್ನು ನಿರೂಪಿಸಲಾಗಿದೆ.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ದ್ವಾವಿಂಶತ್ಯುತ್ತರಶತತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಏತಚ್ಛ್ರುತ್ವಾ ಯದುಶ್ರೇಷ್ಠ ರಾಮೋ ರತಿಕರಃ ಪಿತುಃ ।
ಪಪಾತ ಭುವಿ ನಿಶ್ಚೇಷ್ಟಃ ಛಿನ್ನಮೂಲ ಇವ ದ್ರುಮಃ ॥ ೧ ॥

ತಂ ವಿಸಂಜ್ಞಂ ಮಹಾಭಾಗ ಪೀನೋನ್ನತಪಯೋಧರಾಃ ।
ಸಚಂದನೈಃ ಶೀತಜಲೈಃ ಸಿಷಿಚುರ್ದೇವಯೋಷಿತಃ ॥ ೨ ॥

ವಾರುಣೇರಾಜ್ಞಯಾ ಚಾನ್ಯಾಸ್ತಾಲವೃಂತೈರ್ಮನೋರಮೈಃ ।
ವೀಜಯಂತಿ ಮಹಾಭಾಗ ರಾಮಂ ಧರ್ಮಭೃತಾಂ ವರಂ ॥ ೩ ॥

---

### ನೂರ ಇಪ್ಪತ್ತೆರಡನೆಯ ಅಧ್ಯಾಯ.

೧–೨. ಮಾರ್ಕಂಡೇಯನು ಮುಂದಿನ ವೃತ್ತಾಂತವನ್ನು ಹೇಳುತ್ತಾನೆ. ಎಲೈ ಯದುಕುಲೋತ್ತಮನೇ ಪುಷ್ಕರನು ಹೇಳಿದ ಈ ಮಾತನ್ನು ಕೇಳಿ ಪಿತೃಪ್ರಿಯನಾದ ರಾಮನು ತನ್ನ ತಂದೆಗೆ ಉಂಟಾದ ವಿಪತ್ತಿನ ಸ್ಮರಣೆಯಿಂದಲೂ, ಸಂಸಾರಿಗಳಿಗೆ ಉಂಟಾಗುವ ದುಃಖಪರಂಪರೆಯನ್ನು ಭಾವನಾಬಲದಿಂದ ಅನುಭವಿಸಿ ನಿಶ್ಚೇತನನಾಗಿ ಬುಡವನ್ನು ಕಡಿದಮರದಂತೆ ಕೆಳಗೆ ಬಿದ್ದನು. ಹಾಗೆ ಜ್ಞಾನ ತಪ್ಪಿ ಬಿದ್ದ ಆ ಪರಶುರಾಮನನ್ನು ಸುಂದರಿಯರಾದ ದೇವಸ್ತ್ರೀಯರು ಚಂದನದಿಂದ ಕೂಡಿದ ಶೀತೋದಕದಿಂದ ಚಿಮುಕಿಸಿ ಅವನನ್ನು ಉಪಚರಿಸಿದರು.

೩–೪. ವರುಣಪುತ್ರನಾದ ಪುಷ್ಕರನ ಆಜ್ಞೆಯಂತೆ ಇತರ ಸ್ತ್ರೀಯರೂ ಸಹ ಧಾರ್ಮಿಕಾಗ್ರೇಸರನಾದ ಆ ಪರಶುರಾಮನನ್ನು ರಮ್ಯವಾದ ಬೀಸಣಿಗೆಗಳಿಂದಲೂ ಬೀಸಿ ಉಪಚರಿಸಿದರು. ಅನಂತರ ಸ್ವಲ್ಪಕಾಲದಲ್ಲಿಯೇ ಪ್ರಜ್ಞೆಯನ್ನು ಹೊಂದಿ

ಲಬ್ಧಸಂಜ್ಞಂ ಮುಹೂರ್ತೇನ ಭಾರ್ಗವಂ ಚಿತ್ತವಿಹ್ವಲಂ ।
ಆಶ್ವಾಸಯಾಮಾಸ ತಥಾ ವಾರುಣಿಃ ಪರವೀರಹಾ ॥ ೪ ॥

ಸಮಾಶ್ವಸ್ತಸ್ತತೋ ರಾಮಃ ಪಪ್ರಚ್ಛ ವರುಣಾತ್ಮಜಂ ।
ದುರ್ಗಾತಿತರಣಂ ವೀರೋ ರಾಮೋ ಧರ್ಮಭೃತಾಂ ವರಃ ॥ ೫ ॥

॥ ರಾಮಉವಾಚ ॥

ಕ್ಲಿಶ್ಯಮಾನೇಷು ಭೂತೇಷು ತೈಸ್ತೈರ್ಭಾವೈಸ್ತತಸ್ತತಃ ।
ದುರ್ಗಾಣ್ಯತಿತರೇದ್ಯೇನ ಬ್ರೂಹಿ ಮೇ ವರುಣಾತ್ಮಜ ॥ ೬ ॥

॥ ಪುಷ್ಕರ ಉವಾಚ ॥

ಆಶ್ರಮೇಷು ಯಥೋಕ್ತೇಷು ಯಥೋಕ್ತಂ ಯೇ ದ್ವಿಜಾತಯಃ ।
ವರ್ತಂತೇ ಸಂಯತಾತ್ಮಾನೋ ದುರ್ಗಾಣ್ಯತಿತರಂತಿ ತೇ ॥ ೭ ॥

---

ಎಚ್ಚರಗೊಂಡ ರಾಮನು ಬಹು ಮಟ್ಟಿಗೂ ಮನೋವ್ಯಥೆಯಿಂದ ಕೂಡಿರಲು ವೀರನಾದ ಪುಷ್ಕರನು ಅವನನ್ನು ಬಹುಮುಖವಾದ ಹಿತೋಕ್ತಿಗಳಿಂದ ಸಮಾಧಾನ ಪಡಿಸಿದನು.

೫. ಅನಂತರ ಹಾಗೆ ಸಮಾಧಾನಪಡಿಸಲ್ಪಟ್ಟ ಪರಶುರಾಮನು ಪುಷ್ಕರನನ್ನು ಕುರಿತು ಸಂಸಾರವೆಂಬ ದುರ್ಗವನ್ನು ದಾಟುವ ಬಗೆ ಹೇಗೆಂದು ಧಾರ್ಮಿಕ ದೃಷ್ಟಿಯಿಂದ ಪ್ರಶ್ನೆಮಾಡುತ್ತಾನೆ.

೬. ಪೂಜ್ಯನಾದ ವರುಣ ಪುತ್ರನೇ, ಪ್ರಾಣಿಗಳೆಲ್ಲವೂ ತಮ್ಮ ತಮ್ಮ ಕರ್ಮ ಗತಿಗೆ ತಕ್ಕಂತೆ ನಾನಾಜನ್ಮವನ್ನು ಹೊಂದಿ ಆಯಾಯ ಜನ್ಮಕ್ಕೆ ಅನುಗುಣವಾದ ವಾಸನೆಯಿಂದ ಮುಂದೆ ಮುಂದೆ ಕರ್ಮಪ್ರವಾಹವೇ ಉಂಟಾಗುವಂತೆ ವರ್ತಿಸಿ ದುಃಖಪಡುವುದಾದರೆ ಇಂತಹ ದುಃಖಪರಂಪರೆಗೆ ಕಾರಣವಾದ ಸಂಸಾರದುರ್ಗವನ್ನು ಚೇತನನಾದವನು ಯಾವ ಉಪಾಯದಿಂದ ದಾಟಬೇಕೆಂಬುದನ್ನು ನನಗೆ ದಯವಿಟ್ಟು ಹೇಳು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ:—

೭-೮. ಯಾವ ದ್ವಿಜರು ತಮಗೆ ವಿಹಿತಗಳಾಗಿರುವ ಆಯಾಯ ಆಶ್ರಮಗಳಲ್ಲಿ ಶಾಸ್ತ್ರೋಕ್ತರೀತಿಯಿಂದ ವರ್ತಿಸುತ್ತಾರೆಯೋ ಜಿತೇಂದ್ರಿಯರಾಗಿಯೂ ಇರುತ್ತಾರೆಯೋ ಅವರು ದುರ್ಗಗಳಂತಿರುವ ಸಾಂಸಾರಿಕ ದುಃಖಗಳನ್ನು ದಾಟು

ಯೇ ದಂಭಾನ್ನಜಹಾತೀಹ ಯೇಷಾಂ ವೃತ್ತಿಶ್ಚ ಸಂವೃತಾ ।
ವಿಷಯಾಂಶ್ಚ ನಗೃಹ್ಣಂತಿ ದುರ್ಗಾಣ್ಯತಿತರಂತಿ ತೇ ॥ ೮ ॥

ವಾಸಯಂತ್ಯತಿಥೀನ್ನಿತ್ಯಂ ನಿತ್ಯಂ ಯೇ ಚಾನಸೂಯಕಾಃ ।
ನಿತ್ಯಂ ಸ್ವಾಧ್ಯಾಯಶೀಲಾಶ್ಚ ದುರ್ಗಾಣ್ಯತಿತರಂತಿ ತೇ ॥ ೯ ॥

ಮಾತಾಪಿತ್ರೋಶ್ಚ ಯೇ ವೃತ್ತಿಂ ವರ್ತಂತೇ ಧರ್ಮಕೋವಿದಾಃ ।
ವರ್ಜಯಂತಿ ದಿವಾಸ್ವಾಪಂ ದುರ್ಗಾಣ್ಯತಿತರಂತಿ ತೇ ॥ ೧೦ ॥

ಸ್ವೇಷು ದಾರೇಷು ವರ್ತಂತೇ ನ್ಯಾಯವೃತ್ತಿಮೃತಾವೃತೌ ।
ಅಗ್ನಿಹೋತ್ರಪರಾಃ ಸಂತೋ ದುರ್ಗಾಣ್ಯತಿತರಂತಿ ತೇ ॥ ೧೧ ॥

ಆಹವೇಷು ಚ ಯೇ ಶೂರಾಃ ತ್ಯಕ್ತ್ವಾ ಮರಣಜಂ ಭಯಂ ।
ಧರ್ಮೇಣ ಜಯಮಿಚ್ಛಂತಿ ದುರ್ಗಾಣ್ಯತಿತರಂತಿ ತೇ ॥ ೧೨ ॥

---

ತ್ತಾರೆ. ಯಾರು ಡಂಭಾದಿಗಳಿಲ್ಲದೆ ಸ್ವಕರ್ಮವನ್ನು ಬಿಡದೆ ಇರುತ್ತಾರೆಯೋ ನಿಗೂಢವಾದ ವರ್ತನೆಯುಳ್ಳವರಾಗಿರುವರೋ ಸ್ವಚ್ಛಂದವಾದ ವಿಷಯಸುಖಗಳನ್ನೂ ಬಿಟ್ಟಿರುತ್ತಾರೆಯೋ ಅವರೂ ಸಹ ಇಂತಹ ದುಃಖಗಳನ್ನು ದಾಟುತ್ತಾರೆ.

೯–೧೦. ಯಾರು ಯಾವಾಗಲೂ ಅತಿಥಿಗಳನ್ನು ಸತ್ಕರಿಸಿ ಮನೆಯಲ್ಲಿ ಇಟ್ಟುಕೊಳ್ಳುತ್ತಾರೆಯೋ ಅಸೂಯೆ ಇಲ್ಲದೆ ಇರುವರೋ ನಿತ್ಯವೂ ಅಧ್ಯಯನ ಸಂಪನ್ನರಾಗಿರುವರೋ ಅವರೂ ಇಂತಹ ದುಃಖಗಳನ್ನು ದಾಟುತ್ತಾರೆ. ಯಾರು ಧರ್ಮವೃಷ್ಟಿಯಲ್ಲಿ ನಿರತರಾಗಿ ತಮ್ಮ ತಂದೆತಾಯಿಗಳ ನಡತೆಯನ್ನೇ ಅನುಸರಿಸುತ್ತಿರುವರೋ, ಹಗಲಿನಲ್ಲಿ ಮಲಗದೆ ಇರುತ್ತಾರೆಯೋ ಅವರೂ ಸಹ ಈ ದುಃಖಗಳನ್ನು ದಾಟುತ್ತಾರೆ.

೧೧–೧೨. ಯಾರು ತಮ್ಮ ತಮ್ಮ ಧರ್ಮಪತ್ನಿಗಳಲ್ಲಿ ಆಯಾಯ ಋತುಕಾಲಕ್ಕೆ ತಕ್ಕ ವರ್ತನೆಯಿಂದ ಶಾಸ್ತ್ರವನ್ನು ಅನುಸರಿಸುತ್ತಾರೆಯೋ ಅಗ್ನಿಹೋತ್ರಾದಿ ಕರ್ಮಗಳಲ್ಲಿ ನಿರತರಾಗಿರುತ್ತಾರೆಯೋ ಅವರೂ ಇಂತಹ ದುಃಖಗಳನ್ನು ದಾಟುತ್ತಾರೆ. ಯಾರು ಶೂರರಾಗಿ ಯುದ್ಧದಲ್ಲಿ ಮರಣಭಯವನ್ನು ಬಿಟ್ಟು ಧರ್ಮಮಾರ್ಗದಲ್ಲಿ ವಿಜಯವನ್ನು ಗಳಿಸಲು ಆಶಿಸುತ್ತಾರೆಯೋ ಅವರೂ ದುಃಖಗಳನ್ನು ದಾಟುತ್ತಾರೆ.

ಯೇ ಪಾಪಾನಿ ನ ಕುರ್ವಂತಿ ಕರ್ಮಣಾ ಮನಸಾ ಗಿರಾ ।
ನಿಕ್ಷಿಪ್ತದಂಡಾ ಭೂತಾನಾಂ ದುರ್ಗಾಣ್ಯತಿ ತರಂತಿತೇ ॥ ೧೩ ॥

ಕರ್ಮಾಣ್ಯಕುಹಕಾರ್ಥಾನಿ ಯೇಷಾಂ ವಾಚಶ್ಚ ಸೂನೃತಾಃ ।
ಯೇಷಾಮರ್ಥಶ್ಚ ಸಾಧ್ವರ್ಥೋ ದುರ್ಗಾಣ್ಯತಿ ತರಂತಿತೇ ॥ ೧೪ ॥

ಯೇ ತಪಶ್ಚ ತಪಸ್ಯಂತಿ ಕೌಮಾರ ಬ್ರಹ್ಮಚಾರಿಣಃ ।
ವಿದ್ಯಾವೇದವ್ರತಸ್ನಾತಾಃ ದುರ್ಗಾಣ್ಯತಿ ತರಂತಿ ತೇ ॥ ೧೫ ॥

ಯೇಷಾಂ ನ ಕಶ್ಚಿತ್ತ್ರಸತಿ ತ್ರಸ್ಯಂತಿ ನ ಚ ಕಸ್ಯಚಿತ್ ।
ಯೇಷಾಮಾತ್ಮಸಮೋ ಲೋಕೋ ದುರ್ಗಾಣ್ಯತಿ ತರಂತಿ ತೇ ॥ ೧೬ ॥

ಪರಶ್ರಿಯಾ ನ ತಪ್ಯಂತೇ ಸಂತಃ ಪುರುಷಸತ್ತಮಾಃ ।
ಗ್ರಾಮ್ಯಾಸ್ವಾದನಿವೃತ್ತಾಶ್ಚ ದುರ್ಗಾಣ್ಯತಿ ತರಂತಿ ತೇ ॥ ೧೭ ॥

---

೧೩-೧೪. ಯಾರು ಮನೋವಾಕ್ಕರ್ಮಗಳಿಂದಲೂ, ಪಾಪಗಳಿಂದ ದೂರರಾಗಿರುವರೋ ಪ್ರಾಣಿಗಳ ವಿಷಯದಲ್ಲಿ ದಂಡಧಾರಿಗಳಾಗಿರುವುದಿಲ್ಲವೋ, ಅವರೂ ಸಹ ಇಂತಹ ದುಃಖಗಳನ್ನು ದಾಟುತ್ತಾರೆ. ಯಾರು ವಂಚನೆ ಇಲ್ಲದ ಕಾರ್ಯದಲ್ಲಿ ನಿರತರಾಗಿರುವರೋ, ಸತ್ಯವಾಗಿಯೂ, ಪ್ರಿಯವಾಗಿಯೂ ಇರುವ ಮಾತನ್ನೇ ಆಡುತ್ತಾರೆಯೋ ಯಾರ ಅರ್ಥವೆಲ್ಲಾ ಸರಿಯಾದ ಅರ್ಥವೇ ಆಗಿರುವುದೋ ಅವರೂ ಸಹ ಈ ದುಃಖಗಳನ್ನು ದಾಟುತ್ತಾರೆ.

೧೫-೧೬. ಯಾರು ಕುಮಾರ ಬ್ರಹ್ಮಚರ್ಯ ಹೊಂದಿ ತಪಸ್ಸಿನಲ್ಲಿಯೇ ನಿರತರಾಗಿರುವರೋ ವಿದ್ಯಾವೇದವ್ರತಗಳನ್ನಾಚರಿಸಿ ಸ್ನಾತರಾಗಿರುವರೋ ಅವರೂ ಸಹ ಈ ದುಃಖಗಳನ್ನು ದಾಟುತ್ತಾರೆ. ಯಾರಿಂದ ಮತ್ತೊಬ್ಬನು ಭಯಪಡುವುದಿಲ್ಲವೋ ಮತ್ತು ಮತ್ತೊಬ್ಬನಿಂದ ತಾವೂ ಭಯಪಡುವುದಿಲ್ಲವೋ ಜನಗಳೆಲ್ಲರಲ್ಲಿಯೂ ಆತ್ಮಸಾಮ್ಯವನ್ನೇ ಯಾರು ಹೊಂದಿರುವರೋ ಅವರೂ ಸಹ ಈ ದುಃಖಗಳನ್ನು ದಾಟುತ್ತಾರೆ.

೧೭-೧೮. ಯಾವ ಪುರುಷಶ್ರೇಷ್ಠರು ಪರರ ಸಂಪತ್ತನ್ನು ನೋಡಿ ಸಂತಾಪಗೊಳ್ಳುವುದಿಲ್ಲವೋ ಕ್ಷುದ್ರವಾದ ಸುಖಗಳಿಂದ ನಿವೃತ್ತರಾಗಿರುವರೋ ಅವರೂ ಈ ದುಃಖಗಳನ್ನು ದಾಟುತ್ತಾರೆ. ಯಾರು ದೈವಭಕ್ತಿಯಿಂದ ಕೂಡಿ ಸಕಲ

ಸರ್ವಾನ್ ದೇವಾನ್ನಮಸ್ಯಂತಿ ಸರ್ವಾನ್ಧರ್ಮಾಂಶ್ಚ ಶೃಣ್ವತೇ ।
ಯೇ ಶ್ರದ್ಧಧಾನಾಃ ಪುರುಷಾಃ ದುರ್ಗಾಣ್ಯತಿತರಂತಿ ತೇ ॥ ೧೮ ॥

ಯೇ ನ ಲೋಭಾನ್ನಯಂತ್ಯರ್ಥಾನ್ರಾಜಾನೋ ರಜಸಾವೃತಾಃ ।
ವಿಷಯಾನ್ಪರಿರಕ್ಷಂತೋ ದುರ್ಗಾಣ್ಯತಿತರಂತಿ ತೇ ॥ ೧೯ ॥

ಯೇ ನ ಮಾನಿತುಮಿಚ್ಛಂತಿ ಮಾನಯಂತಿ ಚ ಯೇ ನರಾನ್ ।
ಮಾನ್ಯಮಾನಾನ್ನಮಸ್ಯಂತಿ ದುರ್ಗಾಣ್ಯತಿತರಂತಿ ತೇ ॥ ೨೦ ॥

ಯೇ ಚ ಶ್ರಾದ್ಧಾನಿ ಕುರ್ವಂತಿ ತಿಥ್ಯಾಂ ತಿಥ್ಯಾಂ ಪ್ರಜಾರ್ಥಿನಃ ।
ಸುವಿಶುದ್ಧೇನ ಮನಸಾ ದುರ್ಗಾಣ್ಯತಿತರಂತಿ ತೇ ॥ ೨೧ ॥

ಯೇ ಕ್ರೋಧಂ ನೈವ ಕುರ್ವಂತಿ ಕ್ರೋಧಾರ್ತಂ ಶಮಯಂತಿ ಚ ।
ನ ಚ ಕುಪ್ಯಂತಿ ಭೃತ್ಯಾನಾಂ ದುರ್ಗಾಣ್ಯತಿತರಂತಿ ತೇ ॥ ೨೨ ॥

---

ದೇವತೆಗಳನ್ನೂ ನಮಸ್ಕಾರ ಮಾಡುತ್ತಾರೆಯೋ ಸಕಲ ಧರ್ಮಗಳನ್ನೂ ಶ್ರವಣ ಮಾಡುತ್ತಾರೆಯೋ ಅಂತಹ ಪುರುಷರೂ ಸಹ ಈ ದುಃಖಗಳನ್ನು ದಾಟುತ್ತಾರೆ.

೧೯-೨೦. ದೇಶಗಳನ್ನು ರಕ್ಷಿಸುವ ರಾಜರುಗಳು ನ್ಯಾಯಾರ್ಜಿತವಾದ ದ್ರವ್ಯಗಳಿಂದಲೇ ರಾಜ್ಯವನ್ನು ರಕ್ಷಿಸುತ್ತಾ ಕೇವಲ ರಜೋಗುಣದಿಂದ ಕೂಡಿ ಲೋಭದಿಂದ ಅರ್ಥವನ್ನು ಗಳಿಸದೆ ಇರುವರೋ ಅಂತಹ ರಾಜರೂ ಸಹ ಇಂತಹ ದುಃಖಗಳನ್ನು ದಾಟುತ್ತಾರೆ. ಯಾರು ತನ್ನನ್ನು ಮತ್ತೊಬ್ಬರು ಸತ್ಕರಿಸಬೇಕೆಂದು ಆಶಿಸುವುದಿಲ್ಲವೋ ಇತರರನ್ನು ತಾವೇ ಸತ್ಕರಿಸುತ್ತಾರೆಯೋ, ಇತರರಿಂದ ಸತ್ಕರಿಸಲ್ಪಟ್ಟವರನ್ನೂ ಸಹ ಅಸೂಯೆ ಇಲ್ಲದೆ ನಮಸ್ಕರಿಸುತ್ತಾರೆಯೋ ಅಂತಹ ಸಾತ್ವಿಕರೂ ಸಹ ಈ ದುಃಖಗಳನ್ನು ಅತಿಕ್ರಮಿಸುತ್ತಾರೆ.

೨೧-೨೨. ಯಾರು ಪ್ರಜಾರ್ಥಿಗಳಾಗಿ ಶುದ್ಧವಾದ ಮನಸ್ಸಿನಿಂದ ಆಯಾಯ ಪ್ರತಿ ತಿಥಿಗಳಲ್ಲೂ ತಪ್ಪದೆ ಶ್ರಾದ್ಧಗಳನ್ನು ಯಥಾವಿಧಿಯಾಗಿ ಆಚರಿಸುತ್ತಾರೆಯೋ ಅವರೂ ಸಹ ಇಂತಹ ದುಃದಿಂದ ಪಾರಾಗುತ್ತಾರೆ. ಯಾರು ಯಾವಾಗಲೂ ಕ್ರೋಧವನ್ನು ಹೊಂದುವುದೇ ಇಲ್ಲವೋ ಕ್ರೋಧದಿಂದ ಪೀಡಿತರಾಗಿರುವವರನ್ನು ಸಮಾಧಾನಗೊಳಿಸುತ್ತಾರೆಯೋ ಭೃತ್ಯರ ವಿಷಯದಲ್ಲಿಯೂ ಸಹ ಕೋಪವಿಲ್ಲದೆಯೇ ಇರುತ್ತಾರೆಯೋ ಅವರೂ ಸಹ ಇಂತಹ ದುಃಖಗಳಿಂದ ಪಾರಾಗುತ್ತಾರೆ.

ಮಧುಮಾಂಸಂ ಚ ಯೇ ನಿತ್ಯಂ ವರ್ಜಯಂತೀಹ ಮಾನವಾಃ ।
ಜನ್ಮಪ್ರಭೃತಿ ಮದ್ಯಂ ಚ ದುರ್ಗಾಣ್ಯತಿತರಂತಿ ತೇ ॥ ೨೩ ॥

ಯಾತ್ರಾರ್ಥಂ ಭೋಜನಂ ಯೇಷಾಂ ಸಂತಾನಾರ್ಥಂ ಚ ಮೈಥುನಂ ।
ವಾಕ್ ಸತ್ಯವಚನಾರ್ಥಾಯ ದುರ್ಗಾಣ್ಯತಿ ತರಂತಿ ತೇ ॥ ೨೪ ॥

ತಡಾಗಾರಾಮಕರ್ತಾರಸ್ತಥಾನ್ಯೇ ವೃಕ್ಷರೋಪಕಾಃ ।
ಕೂಪಾನಾಂ ಯೇ ಚ ಕರ್ತಾರೋ ದುರ್ಗಾಣ್ಯತಿತರಂತಿ ತೇ ॥ ೨೫ ॥

ಗವಾಂ ಗ್ರಾಸಪ್ರದಾತಾರೋ ಗವಾಂ ಕಂಡೂಯಕಾಶ್ಚ ಯೇ ।
ಭಕ್ತಿಮಂತೋ ಗವಾಂ ಯೇ ಚ ದುರ್ಗಾಣ್ಯತಿತರಂತಿ ತೇ ॥ ೨೬ ॥

ಪೂಜಯಂತಿ ಸದಾ ವಿಪ್ರಾಸ್ಸಾಧೂನಪಿ ಗುರೂಂಸ್ತಥಾ ।
ತಪಸ್ವಿನಶ್ಚ ಧರ್ಮಜ್ಞಾ ದುರ್ಗಾಣ್ಯತಿತರಂತಿ ತೇ ॥ ೨೭ ॥

---

೨೩-೨೪. ಯಾರು ಹುಟ್ಟಿದ ಮೊದಲಿನಿಂದಲೂ ಮಧು, ಮಾಂಸ, ಮದ್ಯ ಇವುಗಳನ್ನು ವರ್ಜಿಸಿ ಸಾತ್ವಿಕವೃತ್ತಿಯಲ್ಲಿರುತ್ತಾರೆಯೋ ಅವರೂ ಸಹ ಈ ದುಃಖಗಳಿಂದ ಪಾರಾಗುತ್ತಾರೆ. ಯಾರು ಭೋಜನವೇ ಮೊದಲಾದ ದೇಹಧಾರಕಗಳಾದ ಭೋಗಗಳನ್ನು ಯಾತ್ರಾಪ್ರಯೋಜನಕ್ಕಾಗಿಯೇ ಮಾಡುತ್ತಾರೆಯೋ ಸಂತಾನಕ್ಕಾಗಿಯೇ ಸ್ತ್ರೀಯರ ಸಮಾಗಮವನ್ನು ಹೊಂದುತ್ತಾರೆಯೋ ವಾಗಿಂದ್ರಿಯದ ವಾಕ್ಕನ್ನು ಸತ್ಯವಚನಕ್ಕಾಗಿಯೇ ಉಪಯೋಗಿಸುವರೋ ಅವರೂ ಸಹ ಈ ದುಃಖಗಳಿಂದ ಬಿಡುಗಡೆ ಹೊಂದುತ್ತಾರೆ.

೨೫-೨೬. ಕೆರೆ ತೋಪು ಮುಂತಾದ ಸರ್ವಜನೋಪಕಾರಕಗಳಾದ ಧರ್ಮವನ್ನಾಚರಿಸಿದವರೂ, ಮರಗಳನ್ನು ಬೆಳೆಯಿಸುವವರೂ, ಧರ್ಮಾರ್ಥವಾಗಿ ಭಾವಿಗಳನ್ನು ತೋಡಿಸುವವರೂ ಇಂತಹ ದುಃಖದಿಂದ ಪಾರಾಗುತ್ತಾರೆ. ಯಾರು ಗೋವುಗಳಿಗೆ ಗ್ರಾಸವನ್ನು ಕೊಡುತ್ತಾರೆಯೋ ಯಾರು ಆ ಗೋವುಗಳನ್ನು ಕೆರೆಯುತ್ತಾರೆಯೋ ಆ ಗೋವುಗಳಲ್ಲಿ ಭಕ್ತಿಯಿಂದಲೂ ಇರುತ್ತಾರೆಯೋ ಅವರೂ ಈ ದುಃಖಗಳಿಂದ ಪಾರಾಗುತ್ತಾರೆ.

೨೭-೨೮. ಯಾರು ಯಾವಾಗಲೂ ಬ್ರಾಹ್ಮಣರ ಮತ್ತು ಸಾತ್ವಿಕರ ಹಾಗೂ ಗುರುಗಳ ಪೂಜೆಯಲ್ಲಿ ನಿರತರಾಗಿರುವರೋ ತಪಸ್ವಿಗಳಾಗಿಯೂ ಇರುವರೋ ಅವರೂ ಈ ದುಃಖಗಳಿಂದ ಪಾರಾಗುತ್ತಾರೆ. ಯಾರು ಗಾಯತ್ರೀ ಎಂಬ ಮಹಾ

**ಗಾಯತ್ರೀ ಜಾಪನಿರತಾಸ್ತೀರ್ಥಯಾತ್ರಾರತಾಶ್ಚ ಯೇ ।**
**ಯೇ ಚೈಕಮಾಶ್ರಿತಾಸ್ತೀರ್ಥಂ ದುರ್ಗಾಣ್ಯತಿತರಂತಿ ತೇ ॥ ೨೮ ॥**

**ಯೇ ಚೈಕಮಾಶ್ರಿತಾ ದೇವಂ ಸರ್ವಭಾವೇನ ಭಾರ್ಗವ ।**
**ಧರ್ಮಜ್ಞಾಶ್ಚ ವಿನೀತಾಶ್ಚ ದುರ್ಗಾಣ್ಯತಿ ತರಂತಿ ತೇ ॥ ೨೯ ॥**

**ಸಾಯಂ ಪ್ರಾತಶ್ಚ ಭುಂಜಾನಾಃ ಪಿಬಂತ್ಯಾಪಸ್ತು ಯೇ ನರಾಃ ।**
**ಸದೋಪವಾಸಿನೋ ರಾಮ ದುರ್ಗಾಣ್ಯತಿತರಂತಿ ತೇ ॥ ೩೦ ॥**

**ಉಪವಾಸರತಾ ನಿತ್ಯಂ ನಿತ್ಯಂ ವ್ರತಪರಾಯಣಾಃ ।**
**ನಿತ್ಯಂ ಸಂಯತಚಿತ್ತಾಶ್ಚ ದುರ್ಗಾಣ್ಯತಿ ತರಂತಿ ತೇ ॥ ೩೧ ॥**

---

ಮಂತ್ರದ ಜಪದಲ್ಲಿಯೇ ನಿರತರಾಗಿರುತ್ತಾರೆಯೋ ತೀರ್ಥಯಾತ್ರೆಯಲ್ಲಿಯೇ ಆಶೆಯುಳ್ಳವರಾಗಿರುವರೋ ಒಬ್ಬ ಗುರುವನ್ನೇ ಆಶ್ರಯಿಸಿ ದೃಢವಾದ ಭಕ್ತಿಯಿಂದಿರುವರೋ ಅವರೂ ಈ ದುಃಖವನ್ನು ದಾಟುತ್ತಾರೆ.

೨೯-೩೦ ಯಾರು ಮನೋವಾಕ್ಕಾಯ ಕರ್ಮಗಳಿಂದ ಒಂದೇ ದೇವತೆಯನ್ನು ಆಶ್ರಯಿಸಿರುತ್ತಾರೆಯೋ ಧರ್ಮದ ತತ್ವವನ್ನು ತಿಳಿದು ವಿನೀತರಾಗಿಯೂ ಇರುತ್ತಾರೆಯೋ ಅವರು ಈ ದುರ್ಗಗಳನ್ನು ದಾಟುತ್ತಾರೆ. ಯಾರು ಗೃಹಸ್ಥ ಧರ್ಮಕ್ಕೆ ತಕ್ಕಂತೆ ಎರಡೇ ಹೊತ್ತು ಊಟಮಾಡುತ್ತಾ ಮಧ್ಯಕಾಲದಲ್ಲಿ ಏನನ್ನೂ ಸೇವಿಸದೆ ನಿಯಮದಿಂದಿರುತ್ತಾರೆಯೋ ಯಾರು ತಾಪಸವೃತ್ತಿಯಿಂದ ಕೂಡಿ ಜಲಪಾನಮಾತ್ರದಲ್ಲಿಯೇ ನಿಯತರಾಗಿರುವರೋ ಯಾರು ತೀವ್ರವ್ರತದಿಂದ ಉಪವಾಸದಲ್ಲಿಯೇ ಯಾವಾಗಲೂ ನಿರತರಾಗಿರುವರೋ ಅವರೂ ಸಹ ಈ ದುಃಖಗಳನ್ನು ದಾಟುತ್ತಾರೆ.

೩೧-೩೨. ಯಾರು ಕಾಯಕ್ಲೇಶರೂಪವಾದ ವ್ರತದಲ್ಲಿ ನಿರತರಾಗಿ ಉಪವಾಸ ಮಾಡುತ್ತಾರೆಯೋ, ಯಾವಾಗಲೂ ವ್ರತನಿಯಮದಲ್ಲೇ ಇರುವರೋ, ಯಾವಾಗಲೂ

**ದುರ್ಗಾತಿತರಣಂ ಯೇ ಚ ಪಠಂತಿ ಶ್ರಾವಯಂತಿ ಚ ।**
**ಕಥಯಂತಿ ಚ ವಿಪ್ರೇಭ್ಯೋ ದುರ್ಗಾಣ್ಯತಿತರಂತಿ ತೇ ॥ ೩೨ ॥**

**ಈಶ್ವರಃ ಸರ್ವಭೂತಾನಾಂ ಜಗತಾಂ ಪ್ರಭವೋಽವ್ಯಯಃ ।**
**ಭಕ್ತ್ಯಾ ನಾರಾಯಣೋ ಚೈವ ದುರ್ಗಾಣ್ಯತಿತರಂತಿ ತೇ ॥ ೩೩ ॥**

**ಭಕ್ತಾನಾಂ ಕೇಶವೇ ರಾಮ ನ ಭಯಂ ವಿದ್ಯತೇ ಕ್ವಚಿತ್ ।**
**ತಥಾ ಗೀತಶ್ಚ ಶ್ಲೋಕೋಯಂ ಯಮೇನ ಶೃಣು ಭಾರ್ಗವ ॥ ೩೪ ॥**

---

ಮನಸ್ಸಿನ ವಶೀಕರಣದಿಂದ ಕೂಡಿರುವರೋ ಅವರೂ ಈ ದುಃಖಗಳನ್ನು ದಾಟುತ್ತಾರೆ. ಈ ದುರ್ಗಾತಿತರಣದ ಇತಿಹಾಸವನ್ನು ಯಾರು ಪಠಿಸುತ್ತಾರೆಯೋ ಯಾರು ಇತರರಿಗೆ ಹೇಳುತ್ತಾರೆಯೋ ಬ್ರಾಹ್ಮಣರಿಗೂ ಬೋಧಿಸುತ್ತಾರೆಯೋ ಅವರೂ ಸಹ ಈ ದುಃಖಗಳಿಂದ ಪಾರಾಗುತ್ತಾರೆ.

೩೩–೩೪. ಸರ್ವ ಪ್ರಾಣಿಗಳಿಗೂ ರಕ್ಷಕನಾಗಿರುವ ನಾರಾಯಣನೇ ಪ್ರಪಂಚದ ಉತ್ಪತ್ತಿಗೂ ಲಯಕ್ಕೂ ಕಾರಣನಾಗಿರುವನು. ಅಂತಹ ಜಗತ್ಪತಿಯಾದ ನಾರಾಯಣನಲ್ಲಿ ಯಾರು ಭಕ್ತಿಯಿಂದಿರುವರೋ ಅವರೂ ಸಹ ಇಂತಹ ದುಃಖಗಳಿಂದ ಪಾರಾಗುತ್ತಾರೆ. ಅಂತಹ ಆ ಕೇಶವನಲ್ಲಿ ಭಕ್ತಿಯಿಂದಿರುವವರಿಗೆ ಯಾವ ಭಯವೂ ಇರುವುದಿಲ್ಲ. ಈ ವಿಷಯವನ್ನೇ ಯಮನು ಒಂದು ಶ್ಲೋಕದಿಂದ ಹೇಳಿರುವನು ಎಲೈ ಭಾರ್ಗವನೆ ಆ ಶ್ಲೋಕವನ್ನೂ ಹೇಳುತ್ತೇನೆ ಕೇಳು.

೩೫. ಮಾನವಕೋಟಿಯಲ್ಲಿ ಯಾವ ಮನುಷ್ಯರು ತಮ್ಮ ಸುಕೃತ ವಿಶೇಷದಿಂದ ಮಧುವೈರಿಯಾದ ಕೇಶವನಲ್ಲಿ ದೃಢವಾದ ಭಕ್ತಿಯನ್ನು ಹೊಂದುತ್ತಾರೆಯೋ ಅಂತಹ ಸುಕೃತಶಾಲಿಗಳಿಗೆ ಧೊರೆಯಿಂದಲೂ, ಕಳ್ಳರಿಂದಲೂ, ಹಾವುಗಳಿಂದಲೂ, ಅಗ್ನಿಯಿಂದಲೂ, ದುಃಸ್ವಪ್ನಗಳಿಂದಲೂ, ದುಷ್ಟನಿಂದಲೂ, ವ್ಯತ್ಯಾಸಿನಿಂದಲೂ, (ಅಥವಾ

ಪೃಥ್ವೀಶತಸ್ಕರಭುಜಂಗಹುತಾಶ ವಿಪ್ರ
ದುಃಸ್ವಪ್ನ ದುಷ್ಟಗತಮೃತ್ಯುಸಪತ್ನಜಾತಂ ।
ಸಂವಿದ್ಯತೇ ನ ಹಿ ಭಯಂ ಭುವನೈಕಭರ್ತುರ್ ಭರ್ಕತ್ಯಾಶ್ಚ
ಯೋ ಮಧುರಿಪೋರ್ಮನುಜೇಷು ತೇಷು ॥ ೩೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ದುರ್ಗಾತಿತರಣ ವರ್ಣನಂ ನಾಮ ದ್ವಾವಿಂಶತ್ಯುತ್ತರಶತತಮೋಽಧ್ಯಾಯಃ

---

ಮೃತ್ಯುವನ್ನು ಹೊಂದಿದ ಪಿಶಾಚಾದಿಗಳಿಂದಲೂ) ಶತ್ರುವಿನಿಂದಲೂ ಉಂಟಾಗ ಬಹುದಾದ ಯಾವ ವಿಧವಾದ ಭಯವೂ ಆಗುವುದಿಲ್ಲ (ಸಂಭವಿಸುವುದಿಲ್ಲ).

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ದುರ್ಗಾತಿತರಣವರ್ಣನವೆಂಬ ನೂರ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದಿದೆ.

## ನೂರ ಇಪ್ಪತ್ತೆರಡನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಸಾಂಸಾರಿಕವಾದ ದುಃಖಗಳನ್ನು ದಾಟಲು ಯಾರು ಯಾರು ಅರ್ಹರೆಂಬುದನ್ನೂ ಆ ಅರ್ಹತೆಗಳ ವೈವಿಧ್ಯವನ್ನೂ ವರ್ಣಿಸಿರುತ್ತಾರೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ತ್ರಯೋವಿಂಶತ್ಯುತ್ತರಶತತಮೋಽಧ್ಯಾಯಃ

**|| ರಾಮ ಉವಾಚ ||**

**ಭೂಯ ಏವ ಸಮಾಚಕ್ಷ್ವ ಕರ್ಮಣಾ ಯೇನ ಮಾನವಾಃ ।**
**ದುರ್ಗಾಣ್ಯತಿತರಂತ್ಯಾಶು ಸರ್ವಧರ್ಮಭೃತಾಂ ವರ ||೧||**

**|| ಪುಷ್ಕರ ಉವಾಚ ||**

**ದುರ್ಗಾಣ್ಯತಿತರಂತ್ಯಾಶು ಯೇ ನರಾಃ ಕೃಚ್ಛ್ರಕಾರಿಣಃ ।**
**ಪ್ರಾಪ್ನುವಂತಿ ತಥಾ ಕಾಮಾನ್ಸರ್ವಾನ್ ವೈ ಮನಸೇಪ್ಸಿತಾನ್ || ೨ ||**

### ನೂರ ಇಪ್ಪತ್ತಮೂರನೆಯ ಅಧ್ಯಾಯ.

೧–೨. ಪರಶುರಾಮನು ಪುನಃ ಪ್ರಶ್ನೆಮಾಡುತ್ತಾನೆ :—ಎಲೈ ಧಾರ್ಮಿಕಾಗ್ರೇಸರನೇ, ಮತ್ತಾವ ಕಾರ್ಯಗಳಿಂದ ಮನುಷ್ಯರು ದುಃಖವೆಂಬ ಈ ದುರ್ಗಗಳನ್ನು ದಾಟುತ್ತಾರೆ ಎಂಬುದನ್ನು ಪುನಃ ವಿಸ್ತಾರವಾಗಿ ಹೇಳು. ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ. ಯಾರು ಸರ್ವಪಾಪನಾಶಕವಾದ ಕೃಚ್ಛ್ರವನ್ನಾಚರಿಸುತ್ತಾರೆಯೋ ಅವರೂ ಈ ದುಃಖಗಳನ್ನು ದಾಟುತ್ತಾರೆ. ತಮ್ಮ ಮನಸ್ಸಿಗೆ ಇಷ್ಟವಾದ ಎಲ್ಲಾ ಮನೋರಥಗಳನ್ನೂ ಹೊಂದುತ್ತಾರೆ.

|| ರಾಮ ಉವಾಚ ||

ಕೃಚ್ಛ್ರಾಣಾಂ ಶ್ರೋತುಮಿಚ್ಛಾಮಿ ನಾಮಾನಿ ಚ ವಿಧೀಂಸ್ತಥಾ ।
ಏವಂ ಮೇ ಬ್ರೂಹಿ ಧರ್ಮಜ್ಞ ತ್ವಂ ಹಿ ವೇತ್ಸಿ ಯಥಾತಥಂ || ೩ ||

|| ಪುಷ್ಕರ ಉವಾಚ ||

ಕೃಚ್ಛ್ರಾಣ್ಯೇತಾನಿ ಕಾರ್ಯಾಣಿ ರಾಮ ವರ್ಣತ್ರಯೇಣ ಚ ।
ಕೃಚ್ಛ್ರೇಷ್ವೇತೇಷು ಶೂದ್ರಸ್ಯ ನಾಧಿಕಾರೋ ವಿಧೀಯತೇ || ೪ ||

ಆದೌ ತು ಮುಂಡನಂ ಕಾರ್ಯಂ ಸರ್ವಕೃಚ್ಛ್ರೇಷು ಭಾರ್ಗವ ।
ನಿತ್ಯಂ ತ್ರಿಷವಣಸ್ನಾನಂ ಕೇಶವಸ್ಯ ಚ ಪೂಜನಂ || ೫ ||

ಹೋಮಃ ಪವಿತ್ರಮಂತ್ರೈಶ್ಚ ತಥಾಂತೇ ಜಪ್ಯ ಏವ ಚ ।
ಸ್ತ್ರೀ ಶೂದ್ರಪತಿತಾನಾಂ ಚ ತಥಾಲಾಪಂ ವಿವರ್ಜಯೇತ್ || ೬ ||

---

೩. ಪರಶುರಾಮನು ಪುನಃ ಕೃಚ್ಛ್ರಗಳೆಲ್ಲವನ್ನೂ ಅವುಗಳ ನಾಮನಿರ್ದೇಶ ಪೂರ್ವಕವಾಗಿ ಅವುಗಳ ವಿಧಾನಕ್ರಮದೊಡನೆ ತಿಳಿಯಲಪೇಕ್ಷಿಸುತ್ತೇನೆ. ಎಲೈ ಧರ್ಮಜ್ಞನೇ ನೀನೇ ಅವುಗಳ ಯಥಾರ್ಥವಾದ ತತ್ವವನ್ನು ತಿಳಿದಿದ್ದೀಯೆ. ಆದುದ ರಿಂದ ಆ ಕೃಚ್ಛ್ರಗಳನ್ನು ನನಗೆ ಹೇಳು ಎಂದು ಪ್ರಶ್ನೆಮಾಡಲು ಪುಷ್ಕರನು ಹೇಳುತ್ತಾನೆ.

೪-೫. ಎಲೈ ಪರಶುರಾಮನೇ ಇಲ್ಲಿ ಹೇಳುವ ಈ ಕೃಚ್ಛ್ರಗಳೆಲ್ಲವೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದಿಂದಲೇ ಆಚರಿಸಲ್ಪಡತಕ್ಕವು ಗಳು. ಶೂದ್ರನಿಗೆ ಇವುಗಳಲ್ಲಿ ಯಾವಾಗಲೂ ಅಧಿಕಾರವಿರುವುದಿಲ್ಲ. ಈ ಕೃಚ್ಛ್ರ ಗಳನ್ನು ಆಚರಿಸುವಾಗ ಎಲ್ಲಾ ಕೃಚ್ಛ್ರಗಳಿಗೆ ಮೊದಲು ಕ್ಷೌರವನ್ನು ಮಾಡಿಸಿ ಕೊಳ್ಳಬೇಕು. ನಿತ್ಯವೂ ಮೂರು ಕಾಲದಲ್ಲಿಯೂ ಸ್ನಾನಮಾಡಬೇಕು. ಕೇಶವನ ಪೂಜೆಯನ್ನು ಮಾಡಬೇಕು.

೬-೭. ಪವಿತ್ರಮಂತ್ರಗಳಿಂದ ಹೋಮವನ್ನೂ ಮಾಡಬೇಕು ಕೊನೆಯಲ್ಲಿ ಜಪವನ್ನೂ ಮಾಡಬೇಕು. ಸ್ತ್ರೀಯರೊಡನೆಯೂ, ಶೂದ್ರರೊಡನೆಯೂ, ಪತಿತ ರೊಡನೆಯೂ ಮಾತನಾಡಬಾರದು. ಈ ನಿಯಮಗಳು ಎಲ್ಲಾ ಕೃಚ್ಛ್ರಗಳಿಗೂ

ಏತತ್ ಕೃಚ್ಛ್ರೇಷು ಸರ್ವೇಷು ಕರ್ತವ್ಯಂ ಚಾವಿಶೇಷತಃ ।
ವೀರಾಸನಂ ಚ ಕರ್ತವ್ಯಂ ಕಾಮತೋಽಪ್ಯಥವಾ ನವಾ ॥ ೭ ॥

ವೀರಾಸನೇನ ಸಹಿತಂ ಕೃಚ್ಛ್ರಂ ಬಹುಗುಣಂ ಭವೇತ್ ।
ವೀರಾಸನೇನ ರಹಿತಂ ವಿಧಿಹೀನಂ ಪ್ರಕೀರ್ತಿತಂ ॥ ೮ ॥

॥ ರಾಮ ಉವಾಚ ॥

ವೀರಾಸನಮಹಂ ತ್ವತ್ತಃ ಶ್ರೋತುಮಿಚ್ಛಾಮಿ ಸುವ್ರತ ।
ವೀರಾಸನೇನ ಸಹಿತಂ ಕೃಚ್ಛ್ರಂ ಬಹುಗುಣಂ ಭವೇತ್ ॥ ೯ ॥

॥ ಪುಷ್ಕರ ಉವಾಚ ॥

ಉತ್ಥಿತಸ್ತು ದಿವಾ ತಿಷ್ಠೇತ್ ಉಪವಿಷ್ಟಸ್ತಥಾ ನಿಶಿ ।
ಏತದ್ವೀರಾಸನಂ ಪ್ರೋಕ್ತಂ ಮಹಾಪಾತಕ ನಾಶನಂ ॥ ೧೦ ॥

---

ಸಮಾನವಾಗಿ ಅನ್ವಯಿಸುತ್ತವೆ. ಫಲಕಾಮನೆಯಿಂದಾಲಿ, ಫಲಕಾಮನೆಯನ್ನು ಬಿಟ್ಟಾಗಲಿ ವೀರಾಸನವನ್ನು ಆಚರಿಸಲೇ ಬೇಕು.

೮-೯. ವೀರಾಸನದಿಂದ ಕೃಚ್ಛ್ರಾನುಷ್ಠಾನವು ಬಹಳ ಫಲಪ್ರದವಾಗಿ ಆಗುತ್ತದೆ. ಅಂತಹ ವೀರಾಸನವಿಲ್ಲದ ಕೃಚ್ಛ್ರವು ವಿಧಿಬಾಹಿರವಾಗಿ ನಿಷ್ಫಲ ವಾದೀತು ಇದನ್ನು ಕೇಳಿ ಭಾರ್ಗವನು ಪ್ರಶ್ನೆಮಾಡುತ್ತಾನೆ. ಎಲೈ ವ್ರತಶಾಲಿಯೇ ಅಂತಹ ಆ ವೀರಾಸವನ್ನು ನಿನ್ನಿಂದ ತಿಳಿಯಲು ಆಶಿಸುತಿದ್ದೇನೆ. ವೀರಾಸನದಿಂದ ಕೂಡಿದ ಕೃಚ್ಛ್ರವು ಬಹಳ ಪ್ರಯೋಜನಕಾರಿ ಎಂದು ನೀನೇ ಹೇಳಿರುವೆಯಷ್ಟೆ.

೧೦-೧೨. ಬೆಳಿಗ್ಗೆ ಎದ್ದ ಒಡನೆಯೇ ನಿಂತುಕೊಂಡು ಹಗಲನ್ನೆಲ್ಲಾ ಕಳೆಯ ಬೇಕು. ಅನಂತರ ಕುಳಿತುಕೊಂಡೇ ರಾತ್ರಿಯನ್ನು ಕಳೆಯಬೇಕು (ನಿದ್ರಿಸಬಾರದೆಂದು ತಾತ್ಪರ್ಯ.) ಇದೇ ವೀರಾಸನವೆಂದು ಹೇಳಲ್ಪಟ್ಟಿದೆ. ಇದು ಮಹಾಪಾತಕಗಳಿಗೂ ನಾಶಕವಾಗುತ್ತದೆ. ಮತ್ತು ಆಮಿಕ್ಷಾ ಎಂಬ ಆಹಾರದಿಂದ (ಆಮಿಕ್ಷಾ ಎಂದರೆ ಕಾಯಿಸಿದ ಹಾಲಿನಲ್ಲಿ ಮೊಸರನ್ನು ಬೆರಸುವುದರಿಂದುಂಟಾದ ದ್ರವದ್ರವ್ಯ) ಎರಡು

**ಆಮಿಕ್ಷಯಾ ತು ದ್ವೌ ಮಾಸೌ ಪಕ್ಷಂ ತು ಪಯಸಾ ತಥಾ ।**
**ಅಷ್ಟರಾತ್ರಂ ತಥಾ ದಧ್ನಾ ತ್ರಿರಾತ್ರಮಥಸರ್ಪಿಷಾ ॥ ೧೧ ॥**

**ನಿರಾಹಾರಸ್ತ್ರಿರಾತ್ರಂ ತು ಕುರ್ಯಾದ್ವಾ ಬಾಲಕವ್ರತಂ ।**
**ಸರ್ವಪಾಪಪ್ರಶಮನಂ ಸರ್ವಕಾಮಪ್ರದಂ ತಥಾ ॥ ೧೨ ॥**

**ಸ್ಥಾಪಯೇದಾತ್ಮನೋಽರ್ಥಾಯ ಪಾವಕಂ ಭೃಗುನಂದನ ।**
**ವಹ್ನೌ ತತೋಽನ್ನು ಜುಹುಯಾದ್ದದ್ಯಾದನ್ನಂ ಚ ಕಸ್ಯಚಿತ್ ॥ ೧೩ ॥**

**ಬ್ರಹ್ಮಾದೇವೇತಿ ಮಂತ್ರೇಣ ಸಾಧ್ಯಮಾನೇ ವಿಚಕ್ಷಣಃ ।**
**ದರ್ಭಾಂಸ್ತು ಖಲು ಬಧ್ನೀಯಾದ್ರಕ್ಷಾರ್ಥಮಿತಿ ನಃ ಶ್ರುತಿಃ ॥ ೧೪ ॥**

**ಶ್ರೀತಂ ಚ ಶ್ರಾಪ್ಯಮಾಣಂ ಚ ಭಾಂಡೇ ನ್ಯಸ್ತಂ ತಥಾ ಪುನಃ ।**
**ಅನೇನ ರಾಮ ಮಂತ್ರೇಣ ನರಸ್ತ್ರಿರಭಿಮಂತ್ರಯೇತ್ ॥ ೧೫ ॥**

---

ತಿಂಗಳಿರಬೇಕು. ಅನಂತರ ಹಾಲಿನ ಆಹಾರದಿಂದ ಒಂದು ಪಕ್ಷವಿರಬೇಕು. ಅನಂತರ ಎಂಟು ರಾತ್ರಿ ಮೊಸರನ್ನು ಸೇವಿಸುತ್ತಾ ಇರಬೇಕು. ಆಮೇಲೆ ಮೂರು ರಾತ್ರಿ ತುಪ್ಪವನ್ನು ಸೇವಿಸುತ್ತಾ ಇರಬೇಕು. ಅನಂತರ ಮೂರುರಾತ್ರಿ ಆಹಾರ ಯಾವುದೂ ಇಲ್ಲದೆ ಉಪವಾಸವಿರಬೇಕು. ಅಥವಾ ಮಗುವಿನಂತೆ ಲಘುವಾದ ಹಾಲೇ ಮೊದಲಾದ ಆಹಾರದಿಂದ ಜೀವಿಸಬೇಕು. ಈ ವ್ರತವು ಸರ್ವಪಾಪಗಳಿಗೂ ನಾಶಕವಾಗಿಯೂ ಸರ್ವವಿಧವಾದ ಇಷ್ಟಾರ್ಥಪ್ರದವಾಗಿಯೂ ಆಗುತ್ತದೆ.

೧೩–೧೪. ಅನಂತರ ತನ್ನ ಈ ವ್ರತಕ್ಕಾಗಿ ಅಗ್ನಿಯನ್ನು ಸ್ಥಾಪಿಸಬೇಕು. ಬ್ರಹ್ಮಾದೇವಾ ಎಂಬ ಮಂತ್ರದಿಂದ ಅಗ್ನಿಯನ್ನು ಪ್ರತಿಷ್ಠೆಮಾಡಿ ಆ ಅಗ್ನಿಯಲ್ಲಿ ಹೋಮಮಾಡಬೇಕು. ಕೆಲವರಿಗೆ ಅನ್ನದಾನವನ್ನೂ ಮಾಡಬೇಕು. ಆ ಅಗ್ನಿಯ ರಕ್ಷಣೆಗಾಗಿ ದರ್ಭೆಗಳಿಂದ ಸುತ್ತಲೂ ಬಂಧನವನ್ನೂ ಮಾಡಬೇಕೆಂದು ನಾವು ಕೇಳಿರುತ್ತೇವೆ.

೧೫–೧೭. ಅಗ್ನಿಯಲ್ಲಿ ಪಾಕಮಾಡಿದ ಮತ್ತು ಪಾಕಮಾಡಲ್ಪಡುತ್ತಿರುವ ಮತ್ತು ಪಕ್ವವಾಗಿ ಪಾತ್ರೆಯಲ್ಲೇ ಇರುವ ಹವಿಸ್ಸನ್ನು ಈ ಮಂತ್ರದಿಂದ ಮೂರುಸಲ ಅಭಿಮಂತ್ರಿಸಬೇಕು. ನೀನು ಯವವಾಗಿದ್ದೀಯೆ, ಧಾನ್ಯರಾಜನೂ ಆಗಿದ್ದೀಯೆ

ಯವೋಽಸಿ ಧಾನ್ಯರಾಜೋಽಸಿ ವಾರುಣೋ ಮಧುಸಂಯುತಃ ।
ನಿರ್ಣೋದಃ ಸರ್ವಪಾಪಾನಾಂ ಪವಿತ್ರಮೃಷಿಭಿಃ ಸ್ಮೃತಂ ॥ ೧೬ ॥

ಘೃತಂ ಯವಾ ಮಧು ಯವಾ ಆಪೋ ವಾ ಅಮೃತಂ ಯವಾಃ ।
ಸರ್ವಂ ಪುನೀತ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ॥ ೧೭ ॥

ವಾಚಾಕೃತಂ ಕರ್ಮಕೃತಂ ದುಃಸ್ವಪ್ನಂ ದುರ್ವಿಚಿಂತಿತಂ ।
ಅಲಕ್ಷ್ಮೀಂ ನಾಶಯ ತಥಾ ಸರ್ವಂ ಪುನೀತ ಮೇ ಯವಾಃ ॥ ೧೮ ॥

ಶ್ವಸೂಕರಾವಲೀಢಂ ಚ ಹ್ಯುಚ್ಛಿಷ್ಟೋಪಹೃತಂ ಚ ಯತ್ ।
ಮಾತುರ್ಗುರೋರಶುಶ್ರೂಷಾಂ ಸರ್ವಂ ಪುನೀತ ಮೇ ಯವಾಃ ॥ ೧೯ ॥

---

ಜೇನಿನಿಂದ ಕೂಡಿದ ಅಥವಾ ಮಾಧುರ್ಯದಿಂದ ಕೂಡಿದ ಮದ್ಯವಿಶೇಷವೂ ಆಗಿದ್ದೀಯೆ, ನೀನು ನನ್ನ ಸರ್ವಪಾಪಗಳನ್ನೂ ನಾಶಮಾಡು ಋಷಿಗಳು ಹೇಳಿರುವ ಘೃತವೆಂಬ ವಸ್ತುವೂ ಯವಗಳೇ ಆಗಿವೆ. ಮಧುವೂ ಯವೆಗಳೇ ನೀರೂ ಅಮೃತವೂ ಸಹ ಯವೆಗಳೇ ಆಗಿವೆ. ಆದುದರಿಂದ ಸರ್ವವಸ್ತುರೂಪಗಳಾದ ಎಲೈ ಯವೆಗಳೇ ನಾನು ಮಾಡಿರುವ ಎಲ್ಲಾ ಪಾಪಗಳನ್ನೂ ಹೋಗಲಾಡಿಸಿ ನೀವು ನನ್ನನ್ನು ಪವಿತ್ರ ಗೊಳಿಸಿರಿ (ಇದೇ ಆ ಮಂತ್ರದ ಅರ್ಥ.)

೧೮-೧೯. ಎಲೈ ಯವೆಗಳಿರಾ, ನನಗೆ ಮಾತಿನಿಂದಲೂ, ಕರ್ಮಗಳಿಂದಲೂ ಉಂಟಾದ ಪಾಪಗಳನ್ನೂ ಮತ್ತು ದುಃಸ್ವಪ್ನದಿಂದಲೂ. ದುರ್ವಿಷಯಾಧ್ಯವಸಾನ ದಿಂದಲೂ ಉಂಟಾದ ಎಲ್ಲಾ ವಿಧವಾದ ಅಶುಭಗಳನ್ನೂ ನಾಶಪಡಿಸಿ ನನ್ನನ್ನು ಪವಿತ್ರಗೊಳಿಸಿರಿ. ನಾಯಿ ಮತ್ತು ಹಂದಿ ಇವುಗಳಿಂದ ಸೇವಿಸಲ್ಪಟ್ಟು ಉಳಿದ ಅನ್ನವನ್ನು ತಿಂದಿರುವುದರಿಂದಲೂ, ಎಂಜಲಾದ ಅನ್ನವನ್ನು ತಿಂದಿರುವುದರಿಂದಲೂ ಯಾವ ಪಾಪವು ಉಂಟಾಗಿರಬಹುದೋ ಮಾತೃ ಶುಶ್ರೂಷೆಯನ್ನೂ ಗುರುಶುಶ್ರೂಷೆ ಯನ್ನೂ ಮಾಡುವಾಗ ಯಾವ ಪಾಪಗಳುಂಟಾಗಿರಬಹುದೋ ಆ ಪಾಪಗಳೆಲ್ಲ ವನ್ನೂ ಹೋಗಲಾಡಿಸಿ ನನ್ನನ್ನು ಪವಿತ್ರಗೊಳಿಸಿರಿ.

**ಗಣಾನ್ನಂ ಗಣಿಕಾನ್ನಂ ಚ ಶೂದ್ರಾನ್ನಂ ಚ ತಥಾ ವಿಶಾಂ ।**
**ಚೌರಸ್ಯಾನ್ನಂ ನವಶ್ರಾದ್ಧಂ ಸರ್ವಂ ಪುನೀತ ಮೇ ಯವಾಃ ॥ ೨೦ ॥**

**ಬಾಲವೃತ್ತಮಧರ್ಮಂ ಚ ರಾಜಧರ್ಮಕೃತಂ ಚ ಯತ್ ।**
**ಸುವರ್ಣಸ್ತೇಯಮವ್ರಾತ್ಯಮಯಾಜ್ಯಸ್ಯ ಚ ಯಾಜನಂ ॥ ೨೧ ॥**

**ಬ್ರಾಹ್ಮಣಾನಾಂ ಪರೀವಾದಂ ಸರ್ವಂ ಪುನೀತ ಮೇ ಯವಾಃ ।**
**ಭಾಂಡೇ ನ್ಯಸ್ತ್ಯಸ್ಯ ಮಂತ್ರೋಽಯಂ ತತಸ್ತು ಪರಿಕೀರ್ತಯೇತ್ ॥ ೨೨ ॥**

**(ಯೇ ದೇವಾ ಮನೋಜಾತಾ ಮನೋಯುಜಃ ಸುದಕ್ಷಾದಕ್ಷಪಿತರಸ್ತೇ**
**ನಃ ಪಾಂತು ತೇ ನೋಽವಂತು ತೇಭ್ಯಃ ಸ್ವಾಹಾ ।)**

**ಅನೇನಾತ್ಮನಿ ಧರ್ಮಜ್ಞ ಜುಹುಯಾತ್ಪ್ರಯತಃ ಸದಾ ।**
**ನ ಕುರ್ಯಾದತಿಸೌಹಿತ್ಯಂ ವ್ರತಮೇತದ್ಧಿ ಯಾವಕಂ ॥ ೨೩ ॥**

---

೨೦-೨೧. ಸಂಘಾನ್ನ ಭಕ್ಷಣದಿಂದಲೂ ಮತ್ತು ವೇಶ್ಯಾನ್ನ ಶೂದ್ರಾನ್ನ ವೈಶಾನ್ನ ಚೋರಾನ್ನ ಇವುಗಳ ಭಕ್ಷಣದಿಂದಲೂ, ನವಶ್ರಾದ್ಧ ಭೋಜನದಿಂದಲೂ ಉಂಟಾದ ಎಲ್ಲಾ ವಿಧವಾದ ಪಾಪಗಳನ್ನೂ ಹೋಗಲಾಡಿಸಿ ನನ್ನನ್ನು ಪವಿತ್ರ ಗೊಳಿಸಿರಿ. ಬಾಲ್ಯಭಾಗದಲ್ಲಿ ಉಂಟಾದ ಅಧರ್ಮದಿಂದಲೂ, ರಾಜಧರ್ಮಾತಿಕ್ರಮ ದಿಂದಲೂ ಉಂಟಾದ ಅಧರ್ಮದಿಂದಲೂ, ಸುವರ್ಣದ ಚೌರ್ಯದಿಂದ ಉಂಟಾದ ಮತ್ತು ಯಾಜನಕ್ಕೆ ಅನರ್ಹನಾದವನಿಂದ ಯಾಗ ಮಾಡಿಸಿದುದರಿಂದ ಉಂಟಾದ ಅಧರ್ಮವನ್ನೂ ವ್ರಾತ್ಯನಾಗದಿರುವುದಕ್ಕಾಗಿ ನಾಶಮಾಡಿರಿ.

೨೨-೨೩. ಬ್ರಾಹ್ಮಣರನ್ನು ಜರಿದುದರಿಂದ ಉಂಟಾದ ಪಾಪವನ್ನೂ ನಾಶ ಮಾಡಿ ನನ್ನನ್ನು ಪವಿತ್ರಗೊಳಿಸಿರಿ. ಹೀಗೆ ಪ್ರಾರ್ಥಿಸಿ ನಂತರ ಪಾತ್ರೆಯೊಳಗಿರುವ ಆ ಹವಿಸ್ಸನ್ನು ಯೇ ದೇವಾ ಎಂಬ ಮುಂದೆ ಹೇಳುವ ಮಂತ್ರದಿಂದ ಅಭಿಮಂತ್ರಿಸ ಬೇಕು. ಈ ಮಂತ್ರದಿಂದ ಯಾವಾಗಲೂ ಮನಶ್ಶುದ್ಧಿಯಿಂದ ಕೂಡಿ ಹೋಮ ಮಾಡಬೇಕು. ಆಹಾರಾದಿಗಳಿಂದ ಬಹಳ ಮಟ್ಟಿನ ತೃಪ್ತಿಯನ್ನು ಹೊಂದದೆ ಈ ವ್ರತವನ್ನಾಚರಿಸಬೇಕು. ಈ ವ್ರತವು ಯಾವಕವೆಂಬ ಹೆಸರುಳ್ಳದ್ದು.

ಮೇಧಾರ್ಥಿನಃ ತ್ರಿರಾತ್ರಂ ತು ಷಡ್ರಾತ್ರಮತಿಪಾಪಿನಃ ।
ಉಪಪಾತಕಿನಃ ಪ್ರೋಕ್ತಂ ಸಪ್ತರಾತ್ರಮರಿಂದಮ ॥ ೨೪ ॥

ಮಹಾಪಾತಕಿನಶ್ಚೈವ ಷಡ್ರಾತ್ರಂ ದ್ವಿಗುಣಂ ಸ್ಮೃತಂ ।
ಏಕವಿಂಶತಿರಾತ್ರೇಣ ಕಾಮಾನಾಪ್ನೋತ್ಯಭೀಪ್ಸಿತಾನ್ ॥ ೨೫ ॥

ಮಾಸೇನ ಸರ್ವಪಾಪೇಭ್ಯೋ ಮೋಕ್ಷಮಾಪ್ನೋತ್ಯಸಂಶಯಂ ।
ಗವಾಂ ನಿಹಾರಮುಕ್ತೈಸ್ತು ಯವೈಃ ಕೃತ್ವೈತದೇವ ಹಿ ॥ ೨೬ ॥

ಫಲಂ ಪ್ರಾಪ್ನೋತಿ ಧರ್ಮಜ್ಞ ತಥಾ ದಶಗುಣಂ ಧ್ರುವಂ ।
ಮಾಸೇನ ಸಾಕ್ಷಾತ್ತ್ರಿದಶಾನ್ವೇದಾನ್ವಿದ್ಯಾಶ್ಚ ಪಶ್ಯತಿ ॥ ೨೭ ॥

ವರಶಾಪಸಮರ್ಥಸ್ತು ತಥಾ ಭವತಿ ಭಾರ್ಗವ ।
ಶುಕ್ಲಪಕ್ಷಸಮಾರಂಭಾದಾರಭೇತ್ಪ್ರತ್ಯಹಂ ನರಃ ॥ ೨೮ ॥

---

೨೪-೨೫. ಹೆಚ್ಚಾದ ಬುದ್ಧಿಯನ್ನು ಅಪೇಕ್ಷಿಸುವವನು ಈ ವ್ರತವನ್ನು ಮೂರುರಾತ್ರಿ ಆಚರಿಸಬೇಕು. ಬಹಳ ಪಾಪಮಾಡಿರುವವನು ಆರುರಾತ್ರಿ ಆಚರಿಸಬೇಕು. ಉಪಪಾತಕಗಳನ್ನು ಮಾಡಿದವನು ಏಳುರಾತ್ರಿ ಆಚರಿಸಬೇಕು. ಮಹಾಪಾತಕಿಯಾದವನು ಹನ್ನೆರಡು ರಾತ್ರಿ ಆಚರಿಸಬೇಕು. ಇಪ್ಪತ್ತೊಂದು ರಾತ್ರಿಯ ಪರ್ಯಂತ ಈ ವ್ರತವನ್ನು ಆಚರಿಸಿದವನು ತನಗೆ ಇಷ್ಟವಾದ ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ.

೨೬-೨೭. ಒಂದು ತಿಂಗಳು ಆಚರಿಸಿದಲ್ಲಿ ಸರ್ವಪಾಪಗಳಿಂದಲೂ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ. ಹೀಗೆ ಅಭಿಮಂತ್ರಿಸಿ ಹೊರಗೆ ತಂದ ಆ ಯವೆಗಳಿಂದ ಗೋವುಗಳನ್ನೂ ತೃಪ್ತಿಪಡಿಸಿ ಈ ವ್ರತವನ್ನು ಆಚರಿಸಿದಲ್ಲಿ ಹತ್ತರಷ್ಟು ಹೆಚ್ಚಾದ ಫಲವನ್ನು ಹೊಂದುತ್ತಾನೆ. ಒಂದೇ ಒಂದು ತಿಂಗಳಿನಲ್ಲಿ ದೇವತೆಗಳನ್ನೂ ವೇದಗಳನ್ನೂ ವಿದ್ಯೆಗಳನ್ನೂ ಪ್ರತ್ಯಕ್ಷವಾಗಿ ನೋಡುತ್ತಾನೆ.

೨೮-೨೯. ಈ ವ್ರತದಿಂದ ಶಾಪಾನುಗ್ರಹಸಮರ್ಥನಾಗಿಯೂ ಆಗುತ್ತಾನೆ. ಇದನ್ನು ಆಚರಿಸುವ ಮನುಷ್ಯನು ಶುಕ್ಲಪಕ್ಷದಲ್ಲಿ ಪ್ರತಿದಿನವೂ ಈ ರೀತಿ ಪ್ರಾರಂಭಿಸ

**ಏಕೈಕವೃದ್ಧ್ಯಾ ಹ್ಯಶ್ನೀಯಾತ್ಪಿಂಡಾನ್ ಶ್ರೀಖಂಡಸಂಯುತಾನ್ ।
ಏಕೈಕಂ ಹ್ರಾಸಯೇತ್ಕೃಷ್ಣೇ ಪ್ರತಿಪತ್ಪ್ರಭೃತಿಕ್ರಮಾತ್ ॥ ೨೯ ॥**

**ಹವಿಷ್ಯಸ್ಯ ಮಹಾಭಾಗ ನಾಶ್ನೀಯಾಚ್ಚಂದ್ರಸಂಕ್ಷಯೇ ।
ಏತಚ್ಚಾಂದ್ರಾಯಣಂ ಪ್ರೋಕ್ತಂ ಯವಮಧ್ಯಂ ಮಹಾತ್ಮಭಿಃ ॥ ೩೦ ॥**

**ಏತದೇವ ವಿಪರ್ಯಸ್ತಂ ವಜ್ರಮಧ್ಯಂ ಪ್ರಕೀರ್ತಿತಂ ।
ಅಷ್ಟಭಿಃ ಪ್ರತ್ಯಹಂ ಗ್ರಾಸೈರ್ಯತಿ ಚಾಂದ್ರಾಯಣಂ ಸ್ಮೃತಂ ॥ ೩೧ ॥**

**ಪ್ರಾತಃ ಚತುರ್ಭಿಃ ಸಾಯಂ ಚ ಶಿಶುಚಾಂದ್ರಾಯಣಂ ಸ್ಮೃತಂ ।
ಯದಾಕಥಂ ಚಿತ್ಪಿಂಡಾನಾಂ ಚತ್ವಾರಿಂಶಚ್ಛತದ್ವಯಂ ॥ ೩೨ ॥**

**ಮಾಸೇನ ಭಕ್ಷಯೇದೇತತ್ಸುರ ಚಾಂದ್ರಾಯಣಂ ಸ್ಮೃತಂ ।
ಗೋಕ್ಷೀರಂ ಸಪ್ತರಾತ್ರಂ ತು ಪಿಬೇತ್ ಸ್ತನಚತುಷ್ಟಯಂ ॥ ೩೩ ॥**

---

ಬೇಕು. ಪ್ರತಿದಿನದಲ್ಲಿಯೂ ಮೇಲೆ ಮೇಲೆ ಒಂದೊಂದು ಕಬಳವನ್ನು ಹೆಚ್ಚು ಮಾಡುತ್ತಾ ಚಂದನದೊಡನೆ ಅವುಗಳನ್ನು ಭಕ್ಷಿಸಬೇಕು. ಕೃಷ್ಣಪಕ್ಷದಲ್ಲಿ ಪಾಡ್ಯ ದಿಂದ ಒಂದೊಂದನ್ನಾಗಿ ಕಡಿಮೆಮಾಡುತ್ತಾ ಬರಬೇಕು.

೩೦–೩೧. ಅಮಾವಾಸ್ಯಾ ದಿನದಲ್ಲಿ ಹವಿಸ್ಸೇಷವನ್ನು ಭಕ್ಷಿಸಬಾರದು. ಇದನ್ನೇ ಯವಮಧ್ಯ ಚಂದ್ರಾಯಣವೆಂದು ಮಹಾತ್ಮರು ಹೇಳುತ್ತಾರೆ. ಇದನ್ನೇ ಪಕ್ಷವೇ ಮೊದಲಾದ ವ್ಯತ್ಯಾಸದಿಂದ ಮಾಡಿದಲ್ಲಿ ವಜ್ರಮಧ್ಯವೆಂದು ಹೇಳುತ್ತಾರೆ. ಪ್ರತಿನಿತ್ಯವೂ ಎಂಟೆಂಟು ಗ್ರಾಸಗಳಿಂದ ಮಾಡಬಹುದಾದ ವ್ರತವೇ ಯತಿ ಚಾಂದ್ರಾಯಣವೆಂದು ಹೇಳಲ್ಪಡುತ್ತದೆ.

೩೨–೩೪ ಬೆಳಗಿನ ವೇಳೆಯಲ್ಲಿ ನಾಲ್ಕು ಗ್ರಾಸಗಳು ಸಾಯಂಕಾಲದಲ್ಲಿ ನಾಲ್ಕು ಗ್ರಾಸಗಳು ಈ ರೀತಿ ಎಂಟು ಗ್ರಾಸಗಳಿಂದ ಪ್ರತಿದಿನದಲ್ಲಿಯೂ ನಡೆಸುವ ವ್ರತಕ್ಕೆ ಶಿಶು ಚಾಂದ್ರಾಯಣವೆಂದು ಹೆಸರು. ದಿನಗಳಲ್ಲಿ ಗ್ರಾಸಗಳ ಸಂಖ್ಯೆ ನಿಯಮವಿಲ್ಲದೆ ಒಟ್ಟು ಇನ್ನೂರ ನಲವತ್ತು ಗ್ರಾಸಗಳನ್ನು ಆ ತಿಂಗಳಿನಲ್ಲಿ ಭಕ್ಷಿಸಿ ಮಾಡುವ ವ್ರತಕ್ಕೆ ಸುರಚಾಂದ್ರಾಯಣವೆಂದು ಹೆಸರು. ಏಳು ರಾತ್ರಿಯ ವರೆಗೂ ಹಸುವಿನ ಹಾಲನ್ನೇ ನಾಲ್ಕು ಮೊಲೆಗಳಲ್ಲಿಯೂ ಸೇವಿಸಿಕೊಂಡಿರುವುದು. ಅನಂತರ ಏಳು ರಾತ್ರಿ ಮೂರೇ ಮೊಲೆಯ ಹಾಲನ್ನು ಸೇವಿಸಿರುವುದು. ಅನಂತರ ಏಳು

ಸ್ತನತ್ರಯಾತ್ಸಪ್ತರಾತ್ರಂ ಸಪ್ತರಾತ್ರಂ ಸ್ತನದ್ವಯಾತ್ ।
ಸ್ತನಾತ್ತಥೈವ ಷಡ್ರಾತ್ರಂ ತ್ರಿರಾತ್ರಂ ವಾಯುಭುಗ್ಭವೇತ್ ॥ ೩೪ ॥

ಏತತ್ಸೋಮಾಯನಂ ನಾಮ ವ್ರತಂ ಕಲ್ಮಷನಾಶನಂ ।
ತ್ರ್ಯಹಂ ಪಿಬೇದಪಸ್ತೂಷ್ಣಾಸ್ತ್ರ್ಯಹಮುಷ್ಣಂ ಪಯಃ ಪಿಬೇತ್ ॥ ೩೫ ॥

ತ್ರ್ಯಹಮುಷ್ಣಂ ಘೃತಂ ಪೀತ್ವಾ ವಾಯುಭಕ್ಷೋ ಭವೇತ್ತ್ರ್ಯಹಂ ।
ತಪ್ತಕೃಚ್ಛ್ರಮಿದಂ ಪ್ರೋಕ್ತಂ ಶೀತೈಃ ಶೀತಂ ಪ್ರಕೀರ್ತಿತಂ ॥ ೩೬ ॥

ಕೃಚ್ಛ್ರಾತಿಕೃಚ್ಛ್ರಂ ಪಯಸಾ ದಿವಸಾನೇಕವಿಂಶತೀನ್ ।
ಗೋಮೂತ್ರಂ ಗೋಮಯಂ ಕ್ಷೀರಂ ದಧಿಸರ್ಪಿಃ ಕುಶೋದಕಂ ॥ ೩೭ ॥

ಏಕರಾತ್ರೋಪವಾಸಶ್ಚ ಕೃಚ್ಛ್ರಂ ಸಾಂತಪನಂ ಸ್ಮೃತಂ ।
ಏತಚ್ಚ ಪ್ರತ್ಯಹಾಭ್ಯಸ್ತಂ ಮಹಾಸಾಂತಪನಂ ಸ್ಮೃತಂ ॥ ೩೮ ॥

---

ರಾತ್ರಿ ಎರಡೇ ಮೊಲೆಗಳ ಹಾಲನ್ನು ಸೇವಿಸಿರುವುದು. ಅನಂತರ ಆರು ರಾತ್ರಿ ಒಂದೇ ಮೊಲೆಯ ಹಾಲನ್ನುಂಡು ಜೀವಿಸಿರುವುದು. ಅನಂತರ ಮೂರು ರಾತ್ರಿ ಯಾವ ಆಹಾರವೂ ಇಲ್ಲದೆ ವಾಯು ಭಕ್ಷಕನಾಗಿರುವುದು. ಇದು ಸೋಮಾಯನ ವ್ರತವೆಂದು ಹೇಳಲ್ಪಡುತ್ತದೆ. ಇದು ಸಕಲ ವಿಧವಾದ ಪಾಪಗಳಿಗೂ ನಾಶಕ ವಾಗುತ್ತದೆ.

೩೫-೩೯. ಮೂರು ದಿನಗಳು ಪೂರ್ತಿಯಾಗಿ ಬಿಸಿಯ ನೀರನ್ನೇ ಕುಡಿಯ ಬೇಕು. ಅನಂತರ ಮೂರು ದಿನಗಳು ಬಿಸಿಯಾದ ಹಾಲನ್ನು ಕುಡಿಯಬೇಕು. ನಂತರ ಮೂರು ದಿನಗಳಲ್ಲಿ ಬಿಸಿಯಾದ ತುಪ್ಪವನ್ನೂ ಕುಡಿದು ಪುನಃ ಮೂರು ದಿನಗಳವರಿಗೆ ವಾಯುಭಕ್ಷಕನಾಗಿ ನಿರಾಹಾರನಾಗಿರಬೇಕು. ಈ ವ್ರತವು ಶಾಸ್ತ್ರದಲ್ಲಿ ತಪ್ತಕೃಚ್ಛ್ರವೆಂದು ಹೇಳಲ್ಪಟ್ಟಿದೆ. ಈ ಪದಾರ್ಥಗಳನ್ನು ಕಾಯಿಸದೆ ತಣ್ಣಗಿರು ವಾಗಲೇ ಪಾನಮಾಡಿ ವ್ರತವನ್ನು ಆಚರಿಸಿದಲ್ಲಿ ಆ ವ್ರತವು ಶೀತ ಕೃಚ್ಛ್ರವೆಂದು ಹೇಳಲ್ಪಡುತ್ತದೆ. ಬರಿಯ ಹಾಲಿನ ಆಹಾರದಿಂದಲೇ ಇಪ್ಪತ್ತೊಂದು ದಿನಗಳು ವ್ರತವನ್ನು ಆಚರಿಸಿದಲ್ಲಿ ಆ ವ್ರತಕ್ಕೆ ಕೃಚ್ಛ್ರಾತಿಕೃಚ್ಛ್ರವೆಂದು ಹೆಸರು. ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ, ಶುದ್ಧೋದಕ ಇವುಗಳನ್ನು

ಕೃಚ್ಛ್ರಂ ಪರಾಕಸಂಜ್ಞಂ ಸ್ಯಾದ್ದ್ವಾದಶಾಹಮಭೋಜನಂ ।
ಏಕಭುಕ್ತೇನ ನಕ್ತೇನ ತಥೈವಾಯಾಚಿತೇನ ಚ ॥ ೩೯ ॥

ಉಪವಾಸೇನ ಚೈಕೇನ ಕೃಚ್ಛ್ರಪಾದಃ ಪ್ರಕೀರ್ತಿತಃ ।
ಏತದೇವ ತ್ರಿರಭ್ಯಸ್ತಂ ಶಿಶುಕೃಚ್ಛ್ರಂ ಪ್ರಕೀರ್ತಿತಂ ॥ ೪೦ ॥

ತ್ರ್ಯಹಂ ಸಾಯಂ ತ್ರ್ಯಹಂ ಪ್ರಾತಃ ತ್ರ್ಯಹಮದ್ಯಾದಯಾಚಿತಂ ।
ತ್ರ್ಯಹಂ ಪರಂ ಚ ನಾಶ್ನೀಯಾತ್ಪ್ರಾಜಾಪತ್ಯಂ ಚರನ್ ದ್ವಿಜಃ ॥ ೪೧ ॥

ಪಿಣ್ಯಾಕಾಚಾಮತಕ್ರಾಂಬುಸಕ್ತೂನಾಂ ಪ್ರತಿವಾಸರಂ ।
ಏಕೈಕಮುಪವಾಸಂ ಚ ಸೌಮ್ಯಕೃಚ್ಛ್ರಂ ಪ್ರಕೀರ್ತಿತಂ ॥ ೪೨ ॥

---

ಸೇವಿಸಿ ಒಂದು ರಾತ್ರಿ ಉಪವಾಸವಿದ್ದಲ್ಲಿ ಅಂತಹ ಕೃಚ್ಛ್ರಕ್ಕೆ ಸಾಂತಪನವೆಂದು ಹೆಸರು. ಈ ವ್ರತವನ್ನೇ ಪ್ರತಿದಿನದಲ್ಲಿಯೂ ಬಾರಿಬಾರಿಗೂ ನಡೆಸಿದಲ್ಲಿ ಅದೇ ಮಹಾ ಸಾಂತಪನವೆಂದು ಹೇಳಲ್ಪಡುತ್ತದೆ.

೩೯-೪೦. ಹನ್ನೆರಡು ದಿನಗಳವರಿಗೂ ಭೋಜನವನ್ನು ತೊರೆದು ನಡೆಯಿಸುವ ಕೃಚ್ಛ್ರಕ್ಕೆ ಪರಾಕವೆಂದು ಹೆಸರು. ರಾತ್ರಿಯ ಒಂದೇ ಹೊತ್ತಿನಲ್ಲಿ ಊಟ ಮಾಡುತ್ತಾ ಯಾಚನಾದಿಗಳಿಂದ ಬಿಡುಗಡೆ ಹೊಂದಿ ಒಂದೇ ಒಂದು ಉಪವಾಸ ಮಾಡಿದಲ್ಲಿ ಆ ವ್ರತಕ್ಕೆ ಕೃಚ್ಛ್ರಪಾದವೆಂದೂ ಹೆಸರು. ಇದನ್ನೇ ಮೂರಾವರ್ತಿ ನಡೆಸಿದಲ್ಲಿ ಶಿಶು ಕೃಚ್ಛ್ರವೆಂದು ಕರೆಯಲ್ಪಡುತ್ತದೆ.

೪೧-೪೨. ಮೂರು ದಿನಗಳು. ಸಾಯಂಕಾಲದಲ್ಲಿಯೂ ಮೂರು ದಿನಗಳು ಪ್ರಾತಃಕಾಲದಲ್ಲಿಯೂ, ಮೂರು ದಿನಗಳು ಯಾಚಿಸದೆ ಇದ್ದ ವಸ್ತುಗಳ ಭೋಜನ ದಲ್ಲಿಯೂ ಅನಂತರ ಮೂರು ದಿನ ಶುದ್ಧೋಪವಾಸದಲ್ಲಿಯೂ ಇದ್ದು ಪ್ರಾಜಾಪತ್ಯ ವೆಂಬ ಈ ಕೃಚ್ಛ್ರವನ್ನು ದ್ವಿಜರಾದವರು ಆಚರಿಸಬೇಕು. ಪ್ರತಿದಿನದಲ್ಲಿಯೂ ಹಿಂಡಿ, ಅನ್ನದ ಮೇಲಿನ ಗಂಜಿ, ಮಜ್ಜಿಗೆ, ಹುರಿಹಿಟ್ಟು ಇವುಗಳನ್ನು ಸೇವಿಸುತ್ತಾ ಒಂದೊಂದನ್ನು ಸೇವಿಸಿದ ಮಾರನೇ ದಿನ ಒಂದೊಂದು ಉಪವಾಸಮಾಡುತ್ತಾ ಆಚರಿಸುವ ಈ ಕೃಚ್ಛ್ರವು ಸೌಮ್ಯಕೃಚ್ಛ್ರವೆಂದು ಹೇಳಲ್ಪಡುತ್ತದೆ

ಅಂಬುಸಿದ್ಧೈಸ್ತಥಾ ಮಾಸಃ ಕೇವಲೈರ್ವಾರುಣಂ ಸಹ ।
ಫಲೈರ್ಮಾಸೇನ ಕಥಿತಂ ಫಲಕೃಚ್ಛ್ರಂ ಮನೀಷಿಭಿಃ ॥ ೪೩ ॥

ಶ್ರೀಕೃಚ್ಛ್ರಂ ಶ್ರೀಫಲೈಃ ಪ್ರೋಕ್ತಂ ಪದ್ಮಾಕ್ಷೈರಪರಂ ತಥಾ ।
ಮಾಸಮಾಮಲಕೈರೈವ ಶ್ರೀಕೃಚ್ಛ್ರಮಪರಂ ಸ್ಮೃತಂ ॥ ೪೪ ॥

ಪತ್ರೈರ್ಮತಂ ಪತ್ರಕೃಚ್ಛ್ರಂ ಪುಷ್ಪೈಸ್ತತ್ ಕೃಚ್ಛ್ರಮುಚ್ಯತೇ ।
ಮೂಲಕೃಚ್ಛ್ರಂ ತಥಾಮೂಲೈಃ ತೋಯಕೃಚ್ಛ್ರಂ ಜಲೇನ ತು ॥ ೪೫ ॥

ದದ್ನಾ ಕ್ಷೀರೇಣ ತಕ್ರೇಣ ಪಿಣ್ಯಾಕೇನ ಕಣೈಸ್ತಥಾ ।
ಶಾಕೈರ್ಮಾಸಂ ಚ ಕಾರ್ಯಾಣಿ ಸುನಾಮಾನಿ ವಿಚಕ್ಷಣೈಃ ॥ ೪೬ ॥

---

೪೩-೪೪. ಕೇವಲ ನೀರಿನಿಂದಲೇ ಒಂದು ತಿಂಗಳು ವ್ರತವನ್ನು ನಡೆಯಿಸಿದಲ್ಲಿ ಅದಕ್ಕೆ ವಾರುಣಕೃಚ್ಛ್ರವೆಂದೂ, ಕೇವಲ ಹಣ್ಣುಗಳಿಂದಲೇ ನಡೆಯಿಸುವ ಅಂತಹ ವ್ರತಕ್ಕೆ ಫಲಕೃಚ್ಛ್ರವೆಂದೂ ಪಂಡಿತರು ಹೇಳುತ್ತಾರೆ. ಬಿಲ್ವಪತ್ರೆಯ ಹಣ್ಣುಗಳಿಂದಲೇ ನಡೆಯಿಸಬಹುದಾದ ವ್ರತಕ್ಕೆ ಶ್ರೀಕೃಚ್ಛ್ರವೆಂದೂ ಕಮಲದ ಬೀಜಗಳಿಂದಲೇ ನಡೆಸಬಹುದಾದ ಅಂತಹ ವ್ರತಕ್ಕೆ ಪದ್ಮಾಕ್ಷಕೃಚ್ಛ್ರವೆಂದೂ ಹೆಸರು. ಒಂದು ತಿಂಗಳವರಿಗೆ ನೆಲ್ಲಿಯ ಕಾಯಿನಿಂದಲೇ ಆಚರಿಸಬಹುದಾದ ವ್ರತಕ್ಕೂ ಶ್ರೀಕೃಚ್ಛ್ರವೆಂದೇ ಹೆಸರು

೪೫-೪೬. ಕೇವಲ ಎಲೆಗಳಿಂದಲೇ ನಡೆಸ್ಬಹುದಾದ ವ್ರತಕ್ಕೆ ಪತ್ರಕೃಚ್ಛ್ರವೆಂದೂ, ಹೂವುಗಳಿಂದಲೇ ನಡೆಸುವ ಅಂತಹ ಕೃಚ್ಛ್ರಗಳಿಗೆ ಪುಷ್ಪಕೃಚ್ಛ್ರವೆಂದೂ, ಗೆಡ್ಡೆಗೆಣಸುಗಳಿಂದ ಮಾಡಬಹುದಾದ ಅಂತಹ ವ್ರತಕ್ಕೆ ಮೂಲಕೃಚ್ಛ್ರವೆಂದೂ ನೀರಿನಿಂದಲೇ ನಡೆಸುವ ಆ ವ್ರತಕ್ಕೆ ತೋಯಕೃಚ್ಛ್ರವೆಂದೂ ಹೆಸರು. ಹೀಗೆಯೇ ಮೊಸರಿನಿಂದಲೂ, ಹಾಲಿನಿಂದಲೂ, ಮಜ್ಜಿಗೆಯಿಂದಲೂ, ಹಿಂಡಿಯಿಂದಲೂ, ಧಾನ್ಯಗಳ ನುಚ್ಚಿನಿಂದಲೂ, ಕಾಯಿಪಲ್ಯಗಳಿಂದಲೂ ಒಂದು ತಿಂಗಳವರಿಗೆ ನಡೆಸಬಹುದಾದ ಆಯಾಯ ಕೃಚ್ಛ್ರಗಳಿಗೆ ತಕ್ಕ ಹೆಸರುಗಳನ್ನು ಪಂಡಿತರು ಊಹಿಸಿ ತಿಳಿದುಕೊಳ್ಳಬೇಕು.

ಸಾಯಂ ಪ್ರಾತಸ್ತು ಭುಂಜಾನೋ ನರೋ ಯೋ ನಾಂತರಾ ಪಿಬೇತ್ ।
ಷಡ್ಭಿರ್ವರ್ಷೈರಿದಂ ಪ್ರೋಕ್ತಂ ಕೃಚ್ಛ್ರಂ ನಿತ್ಯೋಪವಾಸಿತಾ ॥ ೪೭ ॥

ಏಕಭುಕ್ತೇನ ಮಾಸೇನ ಕಥಿತಂ ಚೈಕ ಭಕ್ತಕಂ ।
ನ ತು ಕೃಚ್ಛ್ರಂ ತು ನಕ್ತೇನ ಮಹತ್ಸಂವತ್ಸರಾದ್ಭವೇತ್ ॥ ೪೮ ॥

ನಕ್ತಾಶಿನಸ್ತು ಧರ್ಮಜ್ಞ ಏಕಭುಕ್ತಸ್ಯ ವಾ ಪುನಃ ।
ತ್ರ್ಯಹಂ ವೋಪವಸೇದ್ಯುಕ್ತಃ ಸ್ನಾಯೀತ ಸವನತ್ರಯಂ ॥ ೪೯ ॥

ನಿಮ್ನವತ್ಸು ತಥೈವಾಪ್ಸು ತ್ರಿಃ ಪಠೇದಘಮರ್ಷಣಂ ।
ದೇವತಾಭಾವವೃತ್ತಸ್ತು ಛಂದಶ್ಚೈವಾಪ್ಯನುಷ್ಟುಭಂ ॥ ೫೦ ॥

ಸಂಸ್ಮರೇತ್ತಸ್ಯ ಚ ತಥಾ ಋಷಿಂ ಚೈವಾಘಮರ್ಷಣಂ ।
ಚತುರ್ಥೇಹನಿ ದಾತವ್ಯಾ ಬ್ರಾಹ್ಮಣಾಯ ತಪಸ್ವಿನೇ ॥ ೫೧ ॥

೪೭–೪೮. ಹಗಲು ಮತ್ತು ರಾತ್ರಿ ಎರಡು ವೇಳೆಗಳಲ್ಲಿಯೂ ಊಟಮಾಡುವವನು ಮಧ್ಯಕಾಲದಲ್ಲಿ ಜಲಪಾನವನ್ನೂ ಸಹ ಮಾಡದೇ ಇರುವನೋ ಆರುವರ್ಷ ಕಾಲ ಹೀಗೆಯೇ ಮಾಡಿದಲ್ಲಿ ಇದು ನಿತ್ಯೋಪಾಸಿತಾ ಎಂಬ ಕೃಚ್ಛ್ರವಾಗುತ್ತದೆ. ಒಂದು ತಿಂಗಳವರಿಗೂ ಏಕಭುಕ್ತಿಯಿಂದ ಇದ್ದಲ್ಲಿ ಇದಕ್ಕೆ ಏಕಭುಕ್ತಕವೆಂದು ಹೆಸರು. ಇದು ಕೃಚ್ಛ್ರವಲ್ಲ. ಆದರೆ ಈ ಏಕಭುಕ್ತಿಯಲ್ಲಿಯೂ ಒಂದು ವರ್ಷಕಾಲ ರಾತ್ರಿಯಲ್ಲಿ ಮಾತ್ರ ಏಕಭುಕ್ತವನ್ನು ಮಾಡಿದಲ್ಲಿ ಮಹಾಕೃಚ್ಛ್ರವೆಂದೂ ಹೇಳಲ್ಪಡುತ್ತದೆ.

೪೯–೫೧. ಅಥವಾ ನಿಯಮಪರನಾಗಿದ್ದು ಮೂರು ದಿವಸ ಉಪವಾಸಮಾಡಿ ಮೂರು ಹೊತ್ತಿನಲ್ಲಿಯೂ ಸ್ನಾನಮಾಡಬೇಕು. ಆಳದಲ್ಲಿರುವ ನೀರಿನಲ್ಲಿ ನಿಂತು ಮೂರಾವರ್ತಿ ಅಘಮರ್ಷಣಮಂತ್ರವನ್ನು ಪಠಿಸಬೇಕು. ಆಯಾಯ ಅಭಿಮಾನ ದೇವತೆಯ ಭಾವನೆಯಿಂದ ಕೂಡಿ ಅನುಷ್ಟುಪ್ ಎಂಬ ಛಂದಸ್ಸನ್ನೂ ಅಪರ ಅಘಮರ್ಷಣ ಋಷಿಯನ್ನೂ ಸಹ ಸ್ಮರಿಸಬೇಕು. ನಾಲ್ಕನೆಯ ದಿನ ತಪಸ್ವಿಯಾದ ಬ್ರಾಹ್ಮಣನಿಗೆ ದಾನಮಾಡಬೇಕು.

ತ್ರ್ಯಹಂ ಜಪೇದ್ಯಥಾಶಕ್ತಿ ಶುಚಿಶ್ಶೈವಾಘಮರ್ಷಣಂ ।
ಭಾವವೃತ್ತಿಸ್ತಥಾ ದೇವಃ ತಥಾ ಚ ಪುರುಷಃ ಪರಃ ॥ ೫೨ ॥

ತದ್ದೈವತ್ಯಂ ವಿಜಾನೀಯಾತ್ಸೂಕ್ತಂ ತದಘಮರ್ಷಣಂ ।
ಯಥಾಶ್ವಮೇಧಃ ಕ್ರತುರಾಟ್ ಸರ್ವಪಾಪಾಪನೋದನಃ ॥ ೫೩ ॥

ತಥಾಘಮರ್ಷಣಂ ಸೂಕ್ತಂ ಸರ್ವಕಲ್ಮಷನಾಶನಂ ।
ಕೃಷ್ಣಾಜಿನಂ ವಾ ಕುತಪಂ ಪರಿಧಾಯಾಥ ವಲ್ಕಲಂ ॥ ೫೪ ॥

ಸಂವತ್ಸರಂ ವ್ರತಂ ಕುರ್ಯಾತ್ಸಂಮಿತಂ ನಾಮ ಭಾರ್ಗವ ।
ಗೃಹಂ ನ ಪ್ರವಿಶೇತ್ತತ್ರ ಭವೇದಾಕಾಶ ಶಾಯಿಕಃ ॥ ೫೫ ॥

ಅಶಕ್ತೌ ವಾ ಭವೇದ್ರಾಮ ತಥಾ ಶೈಲಗುಹಾಶಯಃ ।
ನಿತ್ಯಂ ತ್ರಿಷವಣಸ್ನಾಯೀ ತಥಾ ಸ್ಯಾದ್ದ್ವಿಜಸತ್ತಮ ॥ ೫೬ ॥

---

೫೨-೫೩. ಮೂರು ದಿನಗಳವರೆಗೂ ಶುಚಿಯಾಗಿದ್ದು ಯಥಾಶಕ್ತಿ ಅಘಮರ್ಷಣವನ್ನು ಜಪಿಸಬೇಕು. ಆದರಿಂದ ಪರಮಪುರುಷನೇ ದೇವತೆಯಾಗಿ ಅಂತಃಕರಣದಲ್ಲಿ ನಿಲ್ಲುತ್ತಾನೆ. ಅವನನ್ನೇ ದೇವತೆಯುಳ್ಳದ್ದನ್ನಾಗಿ ಆ ಅಘಮರ್ಷಣವನ್ನು ತಿಳಿಯಬೇಕು. ಕ್ರತುಗಳಲ್ಲಿ ರಾಜನಾದ ಅಶ್ವಮೇಧವು ಹೇಗೆ ಸರ್ವಪಾಪಗಳನ್ನೂ ನಾಶಮಾಡುತ್ತದೆಯೋ ಹಾಗೆಯೇ ಅಘಮರ್ಷಣ ಸೂಕ್ತವೂ ಸಕಲ ಪಾಪಗಳನ್ನೂ ನಾಶಮಾಡುತ್ತದೆ.

೫೪-೫೫. ಕೃಷ್ಣಾಜಿನವನ್ನಾಗಲಿ ನಾರುಮಡಿಯನ್ನಾಗಲಿ ದಿನದ ಎಂಟನೆಯ ಭಾಗದ ಕುತಪವೆಂಬ ಕಾಲಪರ್ಯಂತವೂ ಧರಿಸಿ ಒಂದುವರ್ಷ ಪರ್ಯಂತರವಾಗಿಯೂ ಆಚರಿಸುವ ವ್ರತಕ್ಕೆ ಸಂಮಿತವೆಂದು ಹೆಸರು. ಆ ವ್ರತವನ್ನು ಆಚರಿಸುವಾಗ ಮನೆಗೆ ಪ್ರವೇಶಿಸಬಾರದು. ನಿರಾಶ್ರಯವಾದ ಆಕಾಶ ಭಾಗದಲ್ಲಿ ಶಯನ ಮಾಡಬೇಕು. (ಗೋಡೆ ಮೇಲ್ಛಾವಣಿ ಯಾವುದೂ ಇಲ್ಲದಿರುವ ಪ್ರದೇಶದಲ್ಲಿ ಎಂದು ತಾತ್ಪರ್ಯ.) ಹಾಗೆ ಮಾಡಲು ಶಕ್ತಿಯಿಲ್ಲದಿದ್ದಲ್ಲಿ ಪರ್ವತಗಳ ಗುಹೆಯಲ್ಲಾದರೂ ಶಯನ ಮಾಡಬೇಕು.

೫೬-೫೭. ಈ ವ್ರತದಲ್ಲಿರುವಾಗ ನಿತ್ಯವೂ ಮೂರು ಕಾಲದಲ್ಲಿಯೂ ಸ್ನಾನ ಮಾಡಬೇಕು. ಮತ್ತು ಭಿಕ್ಷಾಟನೆಯಿಂದ ಬಂದ ಭೋಗ್ಯವಸ್ತುಗಳನ್ನೂ ಕಾಯಿ

ಭೈಕ್ಷ್ಯಶಾಕಫಲಾಹಾರಃ ಕಾಮಂ ಸ್ಯಾದ್ದ್ವಿಜಪುಂಗವ ।
ವೀರಾಸನಂ ತಥಾ ಕುರ್ಯಾತ್ಕಾಷ್ಠಮೌನಂ ತಥೈವ ಚ　　　　|| ೫೭ ||

ಸರ್ವಕಾಮಪ್ರದಂ ಹ್ಯೇತತ್ಸರ್ವಕಲ್ಮಷನಾಶನಂ ।
ವಾಯವ್ಯಂ ಕೃಚ್ಛ್ರಮುಕ್ತಂ ತು ಪಾಣಿಪೂರಾನ್ನಭೋಜಿನಃ　　|| ೫೮ ||

ಮಾಸೇನೈಕೇನ ಧರ್ಮಜ್ಞ ಸರ್ವಕಲ್ಮಷನಾಶನಂ ।
ತಿಲೈರ್ದ್ವಾದಶರಾತ್ರೇಣ ಕೃಚ್ಛ್ರಮಾಗ್ನೇಯಮುಚ್ಯತೇ　　　|| ೫೯ ||

ಲಾಜಾಪ್ರಸೃತಿಮಪ್ಯೇಕಾಂ ಕನಕೇನ ಸಮನ್ವಿತಾಂ ।
ಭುಂಜಾನಸ್ಯ ತಥಾ ಮಾಸಂ ಕೃಚ್ಛ್ರಂ ಧನದದೈವತಂ　　　|| ೬೦ ||

ಗವಾಂ ನಿರ್ಹಾರನಿರ್ಮುಕ್ತೈಃ ಯವೈಃ ಸಕ್ತೂನ್ಸಮಂತತಃ ।
ಯಾಮ್ಯಂ ಕೃಚ್ಛ್ರಂ ವಿನಿರ್ದಿಷ್ಟಂ ಮಾಸೇನ ಭೃಗುನಂದನ　　|| ೬೧ ||

---

ಪಲ್ಯ ಮತ್ತು ಹಣ್ಣುಗಳನ್ನೂ ಇಚ್ಛೆಬಂದಷ್ಟು ಉಪಯೋಗಿಸಬಹುದು. ವೀರಾಸನವನ್ನೇ ಆಶ್ರಯಿಸಿರಬೇಕು. ಕಟ್ಟಿಗೆಯಂತೆ ಮೌನದಿಂದಿರಬೇಕು ಈ ವ್ರತವು ಸರ್ವವಿಧವಾದ ಮನೋರಥಗಳಿಗೆ ಸಿದ್ಧಿಪ್ರದವೂ ಸರ್ವಪಾಪನಾಶಕವೂ ಆಗಿರುತ್ತದೆ.

೫೮-೬೦. ಒಂದು ತಿಂಗಳವರಿಗೂ ಒಂದೇಒಂದು ಕೈಯ್ಯಿನಲ್ಲಿ ಇಟ್ಟುಕೊಳ್ಳುವಷ್ಟು ಅನ್ನದಿಂದಲೇ ಭೋಜನ ಮಾಡಿಕೊಂಡು ನಡೆಸುವ ವ್ರತಕ್ಕೆ ವಾಯವ್ಯಕೃಚ್ಛ್ರವೆಂದು ಹೆಸರು. ಇದೂ ಸಹ ಸರ್ವಪಾಪನಾಶಕವಾದದ್ದು. ಹನ್ನೆರಡು ರಾತ್ರಿಗಳಲ್ಲಿ ಕೇವಲ ಎಳ್ಳನ್ನೇ ಭಕ್ಷಣೆ ಮಾಡುತ್ತಾ ನಡೆಸುವ ವ್ರತಕ್ಕೆ ಆಗ್ನೇಯಕೃಚ್ಛ್ರವೆಂದು ಹೆಸರು. ಒಂದೇ ಒಂದು ಬೊಗಸೆ ಹಿಡಿಯುವಷ್ಟು ಅರಳನ್ನು ಚಿನ್ನದೊಡನೆ ಸೇವಿಸುತ್ತಾ ಒಂದು ತಿಂಗಳಕಾಲ ನಡೆಸುವ ವ್ರತಕ್ಕೆ ಕುಬೇರದೈವತವಾದ ಕೃಚ್ಛ್ರವೆಂದು ಹೆಸರು.

೬೧-೬೨. ಗೋವು ಸ್ವೀಕರಿಸಿ ಉಳಿದಿರುವ ಯವಧಾನ್ಯವನ್ನು ಹುರಿಟ್ಟಿನೊಡನೆ ಮಿಶ್ರಮಾಡಿ ಭಕ್ಷಿಸುತ್ತಾ ಒಂದು ತಿಂಗಳವರಿಗೂ ನಡೆಸಬಹುದಾದ

ಗೋಮೂತ್ರೇಣ ಚರೇತ್ಸ್ನಾನಂ ವೃತ್ತಿಂ ಗೋಮಯಮಾಚರೇತ್ ।
ಗವಾಂ ಮಧ್ಯೇ ಸದಾ ತಿಷ್ಠೇದ್ಗೋಪುರೀಷೇ ಚ ಸಂವಸೇತ್ ॥ ೬೨ ॥

ಗೋಷ್ವತೃಪ್ತಾಸು ನ ಪಿಬೇದುದಕಂ ಭೃಗುನಂದನ ।
ಅಭುಕ್ತಾಸು ತು ನಾಶ್ನೀಯಾದುತ್ಥಿತಾಸೂತ್ಥಿತೋ ಭವೇತ್ ॥ ೬೩ ॥

ತಥಾ ಚೈವೋಪವಿಷ್ಟಾಸು ಸರ್ವಾಸೂಪವಿಶೇನ್ನರಃ ।
ಮಾಸೇನೈಕೇನ ಕಥಿತಂ ಗೋಮೂತ್ರಂ ಕಲ್ಮಷಾಪಹಂ ॥ ೬೪ ॥

ಅಜಾಕೃಚ್ಛ್ರಂ ತಥೈವೈತಪಜಾಮಧ್ಯೇ ತು ವರ್ತತಃ ।
ತೃಣಾನಾಂ ಭಕ್ಷಣೇನೇಹ ಸಮತುಲ್ಯಫಲೇ ಉಭೇ ॥ ೬೫ ॥

---

ವ್ರತಕ್ಕೆ ಯಾಮ್ಯ ಕೃಚ್ಛ್ರವೆಂದು ಹೆಸರು. ಗೋಮೂತ್ರದಿಂದಲೇ ಸ್ನಾನಮಾಡುತ್ತಾ ಗೋಮಯದಿಂದಲೇ ಜೀವಿಸುತ್ತಾ ಗೋವುಗಳ ಮಧ್ಯದಲ್ಲಿಯೇ ಯಾವಾಗಲೂ ಇರುತ್ತಾ, ಗೋಮಯದೊಡನೆಯೇ ವಾಸಿಸಬೇಕು.

೬೩-೬೪. ಗೋವುಗಳು ನೀರಿನಿಂದ ತೃಪ್ತಿಹೊಂದದೇ ಇದ್ದಲ್ಲಿ ತಾನೂ ಜಲ ಪಾನ ಮಾಡಬಾರದು. ಅವು ಗ್ರಾಸವನ್ನು ಸ್ವೀಕರಿಸದಿದ್ದಲ್ಲಿ ತಾನೂ ಊಟ ಮಾಡ ಬಾರದು. ಅವು ಮೇಲಕ್ಕೆ ಎದ್ದು ನಿಂತಲ್ಲಿ ತಾನೂ ನಿಲ್ಲಬೇಕು. ಅವೆಲ್ಲವೂ ಮಲಗಿದಕಾಲದಲ್ಲಿ ತಾನೂ ಕೂಡಬೇಕು. ಇದೇರೀತಿ ಒಂದು ತಿಂಗಳವರಿವಿಗೂ ಆಚರಿಸಬಹುದಾದ ವ್ರತಕ್ಕೆ ಗೋಮೂತ್ರವ್ರತವೆಂದು ಹೆಸರು. ಇದೂ ಸಹ ಸಕಲ ಪಾಪನಾಶಕವಾದದ್ದು.

೬೫. ಹೀಗೆಯೇ ಆಡುಗಳ ಮಧ್ಯದಲ್ಲಿ ವಾಸಿಸುತ್ತಾ ಮಾಡಬಹುದಾದ ಕೃಚ್ಛ್ರವು ಅಜಾಕೃಚ್ಛ್ರವೆಂದು ಹೇಳಲ್ಪಡುತ್ತದೆ. ಗೋವಿನಂತೆ ಹುಲ್ಲನ್ನು ತಿನ್ನುವುದರಿಂದ ಆಡೂ ಸಹ ಗೋವಿಗೆ ಸರಿಸಮಾನವಾದ ಪವಿತ್ರ ಪ್ರಾಣಿ. ಆದುದ ರಿಂದ ಈ ಕೃಚ್ಛ್ರವೂ ಗೋವಿನ ಕೃಚ್ಛ್ರಕ್ಕೆ ಸಮಾನವಾದ ಫಲ ಉಳ್ಳದ್ದು. ಇದು ಹನ್ನೆರಡು ದಿನಗಳಲ್ಲಿ ಮಾಡತಕ್ಕದ್ದು. ಇದೂ ಸಹ ಸರ್ವ ಪಾಪನಾಶಕವಾದುದು.

ದ್ವಾದಶಾಹೇನ ಕಥಿತಂ ಸರ್ವಪಾತಕನಾಶನಂ ।
ಉಪೋಷಿತಃ ಚತುರ್ದಶ್ಯಾಂ ಪಂಚದಶ್ಯಾಮನಂತರಂ ॥ ೬೬ ॥

ಪಂಚಗವ್ಯಂ ಸಮಶ್ನೀಯಾದ್ಧವಿಷ್ಯಾಶೀತ್ವನಂತರಂ ।
ಬ್ರಹ್ಮಕೂರ್ಚಮಿದಂ ಕುರ್ಯಾದುಕ್ತಪ್ರಶಮನಾಯ ವೈ ॥ ೬೭ ॥

ಪಕ್ಷಾಂತೇ ತ್ವಥವಾ ಕಾರ್ಯಂ ಮಾಸಮಧ್ಯೇ ತು ವಾ ಪುನಃ ।
ಬ್ರಹ್ಮಕೂರ್ಚಂ ನರಃ ಕುರ್ಯಾತ್ಪೌರ್ಣಮಾಸೇಷು ಯಃ ಸದಾ ॥ ೬೮ ॥

ತಸ್ಯ ಪಾಪಂ ಕ್ಷಯಂ ಯಾತಿ ದುರ್ಭುಕ್ತಾದಿ ನ ಸಂಶಯಃ ।
ಮಾಸಾಭ್ಯಾಂ ಚ ನರಃ ಕೃತ್ವಾ ಬ್ರಹ್ಮಕೂರ್ಚಂ ಸಮಾಹಿತಃ ॥ ೬೯ ॥

ಸರ್ವಪಾಪವಿನಿರ್ಮುಕ್ತೋ ಯಥೇಷ್ಟಾಂ ಗತಿಮಾಪ್ನುಯಾತ್ ।
ಬ್ರಹ್ಮಭೂತಮಮಾವಾಸ್ಯಾಂ ಪೌರ್ಣಮಾಸ್ಯಾಂ ತಥೈವ ಚ ॥ ೭೦ ॥

---

೬೬-೬೮. ಚತುರ್ದಶಿಯಲ್ಲಿ ಉಪವಾಸವಿದ್ದು ಮಾರನೇ ದಿವಸ ಪಂಚಗವ್ಯವನ್ನು ಸೇವಿಸಬೇಕು ಅನಂತರ ಹವಿಯೋಗ್ಯವಾದ ಆಹಾರದಲ್ಲಿರಬೇಕು. ಈ ಪಂಚಗವ್ಯಪ್ರಾಶನವನ್ನೂ ಸಹ ಬ್ರಹ್ಮಕೂರ್ಚವಿಧಾನದಿಂದ ನಡೆಸಬೇಕು. ಇದರಿಂದ ಹಿಂದೆ ಹೇಳಿರುವ ಎಲ್ಲಾ ಪಾಪಗಳೂ ಶಾಂತವಾಗುತ್ತವೆ. ಪ್ರತಿಯೊಂದು ಪಕ್ಷದ ಕೊನೆಯಲ್ಲಿಯಾಗಲಿ ಅಥವಾ ಮಾಸದ ಮಧ್ಯದಲ್ಲಿಯಾಗಲಿ ಪಂಚಗವ್ಯವನ್ನು ಬ್ರಹ್ಮಕೂರ್ಚವಿಧಿಯಿಂದ ಸೇವಿಸಬೇಕು. ಯಾವನು ಪೌರ್ಣಮಾಸ್ಯೆಯಲ್ಲಿಯೂ ಪಂಚಗವ್ಯಪ್ರಾಯಶ್ಚಿತ್ತವನ್ನು ಮಾಡುತ್ತಾನೆಯೋ ಅಂತಹವನಿಗೆ ದುಷ್ಟವಾದ ಭೋಜನಾದಿಗಳಿಂದ ಉಂಟಾಗಬಹುದಾದ ಎಲ್ಲಾ ಪಾಪಗಳೂ ಕ್ಷಯಹೊಂದುತ್ತವೆ. ಇದರಲ್ಲಿ ಸಂದೇಹವಿಲ್ಲ.

೬೯-೭೧. ಯಾವ ದ್ವಿಜನಾದರೂ ಎರಡು ತಿಂಗಳಪರ್ಯಂತ ಶಾಂತಮನಸ್ಕನಾಗಿ ಈ ಬ್ರಹ್ಮಕೂರ್ಚವನ್ನು ಸೇವಿಸಿದುದೇ ಆದರೆ ಅವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಿ ತನಗೆ ಅಭಿಮತವಾದ ಸದ್ಗತಿಯನ್ನು ಹೊಂದುತ್ತಾನೆ. ಯೋಗಮಹಿಮೆಯ ಸ್ವರೂಪನಾಗಿರುವ ಕೇಶವನು ತನ್ನ ಮಾಹಾತ್ಮ್ಯದಿಂದ ಅಮಾವಾಸ್ಯೆ

**ಯೋಗಭೂತಂ ಪರಿಚರೇತ್ಕೇಶವಂ ಮಹದಾಪ್ನುಯಾತ್ ।**
**ಏವಮೇತಾನಿ ಕೃಚ್ಛ್ರಾಣಿ ಕಥಿತಾನಿ ಮಯಾ ತವ ॥ ೭೧ ॥**

**ಶಾಸನಾನೀಹ ಪಾಪಾನಾಂ ದುರಿತಾನಾಂ ಚ ಭಾರ್ಗವ ।**
**ಸಂವತ್ಸರಸ್ಯೈಕಮಪಿ ಚರೇತ್ ಕೃಚ್ಛ್ರಂ ದ್ವಿಜೋತ್ತಮಃ ॥ ೭೨ ॥**

**ಅಜ್ಞಾತಭುಕ್ತಶುದ್ಧ್ಯರ್ಥಂ ಜ್ಞಾತಸ್ಯ ಚ ವಿಶೇಷತಃ ।**
**ಅಜ್ಞಾತಂ ಯದಿ ವಾ ಜ್ಞಾತಂ ಕೃಚ್ಛ್ರಂ ಪಾಪಂ ವಿಶೋಧಯೇತ್ ॥**

**ಕೃಚ್ಛ್ರಸಂಶುದ್ಧಪಾಪಾನಾಂ ನರಕಂ ನ ವಿಧೀಯತೇ ।**
**ಶ್ರೀಕಾಮಃ ಪುಷ್ಟಿಕಾಮಶ್ಚ ಸ್ವರ್ಗಕಾಮಸ್ತಥೈವ ಚ ॥ ೭೪ ॥**

---

ಯಲ್ಲಿಯೂ, ಪೌರ್ಣಮಿಯಲ್ಲಿಯೂ ಬ್ರಹ್ಮಸ್ವರೂಪನಾಗಿಯೇ ಇರುತ್ತಾನೆ. ಅಂತಹ ಕೇಶವನನ್ನು ಸೇವಿಸಿದವನು ಮಹಾಫಲವನ್ನೇ ಹೊಂದುತ್ತಾನೆ. ಈ ರೀತಿ ಎಲ್ಲಾ ಕೃಚ್ಛ್ರಗಳನ್ನೂ ನಿನಗೆ ಹೇಳಿದ್ದಾಯಿತು.

೭೨–೭೩. ಎಲೈ ಭಾರ್ಗವನೇ ಈ ಕೃಚ್ಛ್ರಗಳೆಲ್ಲವೂ ಪಾಪಗಳಿಗೂ ಅಂತಹ ಪಾಪಗಳಿಗೂ ಕಾರಣವಾದ ದುಷ್ಕರ್ಮಗಳಿಗೂ ಬಹಳ ಮಟ್ಟಿಗೂ ನಾಶಕವಾಗುತ್ತವೆ ದ್ವಿಜನಾದವನು ಒಂದು ವರ್ಷಕ್ಕೆ ಒಂದು ಕೃಚ್ಛ್ರವನ್ನಾದರೂ ಆಚರಿಸಲೇ ಬೇಕು. ತಿಳಿಯದೆ ಇರುವ ದುಷ್ಟಾನ್ನದ ಭೋಜನದಿಂದಲೂ ತಿಳಿದಿದ್ದರೂ ನಿರ್ವಾಹವಿಲ್ಲದೆ ಉಂಟಾದ ಅನ್ನ ದೋಷದಿಂದಲೂ ಸಂಭವಿಸಬಹುದಾದ ಜ್ಞಾತಾಜ್ಞಾತವಿಶಿಷ್ಟ ಪಾಪಗಳನ್ನು ಈ ಕೃಚ್ಛ್ರವು ಶೋಧಿಸಿ ಆತ್ಮಶುದ್ಧಿಯನ್ನುಂಟುಮಾಡುತ್ತದೆ.

೭೪–೭೫. ಕೃಚ್ಛ್ರದ ಆಚರಣೆಯಿಂದ ಪಾಪ ಶೋಧನೆಯನ್ನು ಹೊಂದಿದವರಿಗೆ ನರಕವೂ ಉಂಟಾಗುವುದಿಲ್ಲ. ಐಶ್ವರ್ಯವನ್ನು ಅಪೇಕ್ಷಿಸುವವನೂ, ಪುಷ್ಟಿಯನ್ನು ಅಪೇಕ್ಷಿಸುವವನೂ, ಹಾಗೆಯೇ ಸ್ವರ್ಗವನ್ನು ಅಪೇಕ್ಷಿಸುವವನೂ ಮತ್ತು ದೇವತಾ ಪೂಜೆಯನ್ನು ಅಪೇಕ್ಷಿಸುವವನೂ ಸಹ ಕೃಚ್ಛ್ರವನ್ನು ಮಾಡಬೇಕು. ಯಾವನು

ದೇವತಾರಾಧನಪರಃ ತಥಾ ಕೃಚ್ಛ್ರಂ ಸಮಾಚರೇತ್ ।
ರಸಾಯನಾನಿ ಮಂತ್ರಾಶ್ಚ ತಥಾ ಚೈವೌಷಧಾಶ್ಚ ಯೇ ॥ ೭೫ ॥

ತಸ್ಯ ಸರ್ವೇ ಹಿ ಸಿಧ್ಯಂತಿ ಯೋ ನರಃ ಕೃಚ್ಛ್ರಕೃದ್ಭವೇತ್ ।
ವೈದಿಕಾನಿ ಚ ಕರ್ಮಾಣಿ ಯಾನಿ ಕಾಮ್ಯಾನಿ ಕಾನಿ ಚಿತ್ ॥ ೭೬ ॥

ಸಿಧ್ಯಂತಿ ಸರ್ವಾಣಿ ತದಾ ಕೃಚ್ಛ್ರಕರ್ತುರ್ಭೃಗೂತ್ತಮ ।
ತೇಜಸಾ ತಸ್ಯ ಸಂಯೋಗೋ ಮಹತಾ ಚೈವ ಜಾಯತೇ ॥ ೭೭ ॥

ವಾಂಛಿತಾನ್ಮಾನಸಾನ್ ಕಾಮಾನ್ಸ ಚಾಪ್ನೋತಿ ನ ಸಂಶಯಃ ।
ಜ್ಞಾತೋ ಭವತಿ ದೇವೇಷು ತಥಾ ಚರ್ಷಿಗಣೇಷು ಚ ।
ವಿಪಾಪ್ಮಾ ವಿತಮಸ್ಕಶ್ಚ ಸಂಶುದ್ಧಶ್ಚ ವಿಶೇಷತಃ ॥ ೭೮ ॥

---

ಇಂತಹ ಕೃಚ್ಛ್ರವನ್ನು ಆಚರಿಸುತ್ತಾನೆಯೋ ಅವನಿಗೆ ರಸಾಯನಗಳು ಮಹಾ ಮಂತ್ರಗಳು ಔಷಧಿಗಳು ಇವೆಲ್ಲವೂ ಸಿದ್ಧಿಸುತ್ತವೆ.

೭೬-೭೭. ನಿತ್ಯನೈಮಿತ್ತಿಕ ರೂಪಗಳಾದ ಯಾವ ವೈದಿಕ ಕರ್ಮಗಳಿವೆಯೋ ಕಾಮ್ಯಗಳೆಂಬ ಯಾವ ಕರ್ಮಗಳಿವೆಯೋ ಅವೆಲ್ಲವೂ ಈ ಕೃಚ್ಛ್ರವನ್ನು ಆಚರಿಸಿದವನಿಗೆ ಸಿದ್ಧಿಸುತ್ತವೆ. ಮತ್ತು ಅಂತಹವನಿಗೆ ಹೆಚ್ಚಾದ ತೇಜಸ್ಸೂ ಉಂಟಾಗುತ್ತದೆ ಅವನು ತನಗೆ ಇಷ್ಟವಾದ ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

೭೮-೭೯. ಈ ರೀತಿ ಕೃಚ್ಛ್ರವನ್ನು ಮಾಡಿದವನು ದೇವತೆಗಳಲ್ಲಿಯೂ, ಋಷಿಗಳಲ್ಲಿಯೂ ಪ್ರಸಿದ್ಧಿಹೊಂದುತ್ತಾನೆ. ಬಹಳಮಟ್ಟಿಗೂ ನಿಷ್ಪಾಪನಾಗಿಯೂ ತಮೋಗುಣರಹಿತನಾಗಿ ಸಾತ್ವಿಕನಾಗಿಯೂ, ಶುದ್ಧನಾಗಿಯೂ ಆಗುತ್ತಾನೆ. ಪರಮ ಪುರುಷನಾದ ಮಧುಸೂದನನನ್ನು ಪೂಜಿಸುವುದಕ್ಕಾಗಿ ಈ ಕೃಚ್ಛ್ರಗಳನ್ನು ಮಾಡಿ ದೇಹಶುದ್ಧಿಯನ್ನು ಹೊಂದಿದಲ್ಲಿ ದೇವತೋತ್ತಮರಿಂದಲೂ ಬಹು ವಿಲಂಬದಿಂದ

ಆರಾಧನಾರ್ಥಂ ಪುರುಷೋತ್ತಮಸ್ಯ
ಕೃಚ್ಛ್ರಾಣಿ ಕೃತ್ವಾ ಮಧುಸೂದನಸ್ಯ ।
ಸುರೋತ್ತಮಾನಾಂ ಸಮತೀತಲಬ್ಧಂ
ತಲ್ಲೋಕಮಾಪ್ನೋತಿ ಜನಾರ್ದನಸ್ಯ ॥ ೭೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಕೃಚ್ಛ್ರಪ್ರಾಯಶ್ಚಿತ್ತವರ್ಣನಂ ನಾಮ
ತ್ರಯೋವಿಂಶತ್ಯುತ್ತರಶತತಮೋಽಧ್ಯಾಯಃ

---

ಹೊಂದಲು ಸಾಧ್ಯವಾದ ಜನಾರ್ದನನ ಲೋಕವನ್ನು ಅಲ್ಪಾಯಾಸದಿಂದಲೇ ಹೊಂದುತ್ತಾನೆ. (ಪರಮಪುರುಷನ ಅನುಗ್ರಹಕ್ಕೂ ಈ ಕೃಚ್ಛ್ರಗಳ ಆಚರಣೆಯೇ ಕಾರಣವಾಗುತ್ತದೆ ಎಂದು ತಾತ್ಪರ್ಯ.)

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ಕೃಚ್ಛ್ರಪ್ರಾಯಶ್ಚಿತ್ತವರ್ಣನವೆಂಬ ನೂರ ಇಪ್ಪತ್ತಮೂರನೆಯ
ಅಧ್ಯಾಯ ಮುಗಿದಿದೆ.



## ನೂರ ಇಪ್ಪತ್ತಮೂರನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಪಾಪನಾಶಕ್ಕಾಗಿಯೂ ದೇಹಶುದ್ಧಿಗಾಗಿಯೂ ವೈದಿಕ ಕರ್ಮಾಚರಣೆಗೆ ಹಾಗೂ ಅದರಿಂದ ಹೊಂದಬಹುದಾದ ಪರಮಾತ್ಮನ ಅನುಗ್ರಹಕ್ಕೆ ಕಾರಣಗಳಾದ ಕೃಚ್ಛ್ರಗಳೆಂಬ ಪ್ರಾಯಶ್ಚಿತ್ತಗಳನ್ನೂ ಅದರ ಸಾಮಾನ್ಯವಿಶೇಷ ಸ್ವರೂಪಗಳನ್ನೂ ಸಹ ವಿಸ್ತಾರವಾಗಿ ಹೇಳಿರುತ್ತಾರೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ

**॥ ರಾಮ ಉವಾಚ ॥**

**ವೈದಿಕಾನಿ ಸಮಾಚಕ್ಷ್ವ ಕರ್ಮಾಣಿ ಸುರಸತ್ತಮ ।**
**ಅಧಿಕಾರೀ ಭವೇದ್ಯೇಷಾಂ ಕೃಚ್ಛ್ರಕಾರೀತ್ವನಂತರಂ ॥ ೧ ॥**

**॥ ಪುಷ್ಕರ ಉವಾಚ ॥**

**ಶೃಣು ಕಾಮ್ಯಾನಿ ಕರ್ಮಾಣಿ ಪುಷ್ಕಲಾನಿ ಮಮಾನಘ ।**
**ಪ್ರತಿವೇದಂ ಮಹಾಭಾಗ ಗದತೋ ಭೃಗುನಂದನ ॥ ೨ ॥**

---

### ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ.

೧. ಭಾರ್ಗವನು ಪುನಃ ಪ್ರಶ್ನೆಮಾಡುತ್ತಾನೆ:—ಕೃಚ್ಛ್ರವನ್ನು ಆಚರಿಸಿದವನು ಅನಂತರ ಎಂತಹ ವೈದಿಕ ಕರ್ಮಗಳಿಗೆ ಅಧಿಕಾರಿಯಾಗುವನೋ ಅಂತಹ ವೈದಿಕ ಕರ್ಮಗಳನ್ನೆಲ್ಲಾ ದಯವಿಟ್ಟು ನನಗೆ ಹೇಳಬೇಕು ಎಂದು ಪ್ರಶ್ನೆಮಾಡಲು ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಎಲೈ ಭಾಗ್ಯಶಾಲಿಯೇ ಪ್ರತಿಯೊಂದು ವೇದದಲ್ಲಿಯೂ ಎಷ್ಟು ಕಾಮ್ಯಕರ್ಮಗಳು ಹೇಳಲ್ಪಟ್ಟಿವೆಯೋ ಅಪರಿಮಿತಗಳಾದ ಆ ಕರ್ಮಗಳೆಲ್ಲವನ್ನೂ ಹೇಳುತ್ತೇನೆ. ನಿಷ್ಪಾಪನಾಗಿರುವ ನೀನು ಅವೆಲ್ಲವನ್ನೂ ನನ್ನಿಂದ ಕೇಳು. ಗಾಯತ್ರಿ ಎಂಬ ಮಹಾಮಂತ್ರವನ್ನು ಜಲಮಧ್ಯದಲ್ಲಿ ನಿಂತೂ ಹೋಮಗಳಲ್ಲಿಯೂ ಕೂಡ

ಅಂತರ್ಜಲೇ ತಥಾ ಹೋಮೇ ಜಪೇಚ್ಚ ಮನಸೇಪ್ಸಿತಂ ।
ಕಾಮಂ ಕರೋತಿ ಗಾಯತ್ರೀ ಪ್ರಾಣಾಯಾಮಾದ್ವಿಶೇಷತಃ ॥ ೩ ॥

ಗಾಯತ್ರ್ಯಾ ದಶಸಾಹಸ್ರೋ ಜಪೋ ನಕ್ತಾಶಿನೋ ದ್ವಿಜ ।
ಬಹಿಃ ಸ್ನಾತಸ್ಯ ತತ್ರೈವ ಸರ್ವಕಲ್ಮಷನಾಶನಃ ॥ ೪ ॥

ದಶಾಯುತಾನಿ ಜಪ್ತ್ವಾ ಚ ಹವಿಷ್ಯಾಶೀ ಸುಸಂಯುತಃ ।
ವಾಯುಭೂತಸ್ತದಾಪ್ನೋತಿ ಯದ್ವಿಷ್ಣೋಃ ಪರಮಂ ಪದಂ ॥ ೫ ॥

ಪರಸ್ಯ ಬ್ರಹ್ಮಣೋ ರಾಮ ವಾಚಕಃ ಪ್ರಣವಃ ಸ್ಮೃತಃ ।
ಪುರುಷಸ್ಯಾಪ್ರಮೇಯಸ್ಯ ಸರ್ವಗಸ್ಯಾವಿನಾಶಿನಃ ॥ ೬ ॥

ತಜ್ಜಪೇನೇಹ ಪೂಯಂತೇ ಯೇಪಿ ದುಷ್ಕೃತಕಾರಿಣಃ ।
ಓಂಕಾರಪೂತಂ ಸಲಿಲಂ ನಾಭಿಮಾತ್ರೋದಕಸ್ಥಿತಃ ॥ ೭ ॥

---

ಜಪಿಸಬೇಕು ಪ್ರಾಣಾಯಾಮದೊಡನೆ ಇದನ್ನು ಜಪಿಸಿದ್ದೇ ಆದರೆ ಮನಸ್ಸಿಗೆ ಇಷ್ಟವಾದ ಎಲ್ಲಾ ಮನೋರಥಗಳನ್ನೂ ಸಹ ಈ ಗಾಯತ್ರಿಯೇ ಉಂಟುಮಾಡುತ್ತದೆ.

೪–೫. ಹೊರಗಿನ ತೀರ್ಥದಲ್ಲಿ ಸ್ನಾನಮಾಡುತ್ತಾ ರಾತ್ರಿಯ ಕಾಲದಲ್ಲಿ ಮಾತ್ರ ಭೋಜನಮಾಡುತ್ತಾ ಹಗಲಿನಲ್ಲಿ ಉಪವಾಸದಿಂದಿರುತ್ತಾ ಹತ್ತುಸಾವಿರ ಗಾಯತ್ರಿಯನ್ನು ಜಪಮಾಡಿದ್ದೇ ಆದರೆ ಸಮಸ್ತಪಾಪಗಳೂ ಈ ಜಪದಿಂದ ನಾಶವಾಗುತ್ತವೆ. ಕ್ಷಾರಲವಣವರ್ಜಿತವಾದ ಹವಿಷ್ಯಾನ್ನದಿಂದಲೇ ನಿಯಮಪರನಾಗಿರುತ್ತಾ ಒಂದು ಲಕ್ಷ ಈ ಗಾಯತ್ರಿಯನ್ನು ಜಪಿಸಿದ್ದೇ ಆದರೆ ಅಂತಹವನು ಈ ಜಪದ ಮಾಹಾತ್ಮ್ಯದಿಂದ ವಾಯುವಿನಂತೆ ಸೂಕ್ಷ್ಮದೇಹವನ್ನು ಹೊಂದಿ ಪುನರಾವರ್ತಿರಹಿತವಾದ ವಿಷ್ಣುವಿನ ಪರಮಪದವನ್ನೇ ಹೊಂದುತ್ತಾನೆ.

೬–೭ ಎಲೈ ಭಾರ್ಗವನೇ ಪ್ರಣವವೆಂಬುದು ಅಪರಿಚ್ಛಿನ್ನನಾಗಿಯೂ ಸರ್ವವ್ಯಾಪಕನಾಗಿಯೂ, ನಿತ್ಯನಾಗಿಯೂ ಇರುವ ಪರಮಪುರುಷನಿಗೆ ವಾಚಕವಾದುದು. ಅಂತಹ ಪ್ರಣವದ ಜಪದಿಂದ ದುಷ್ಕರ್ಮಕಾರಿಗಳೂ ಸಹ ಪರಿಶುದ್ಧರಾಗುತ್ತಾರೆ ಯಾವ ದ್ವಿಜನು ನಾಭಿಪರಿಮಾಣ ಉಳ್ಳ ಜಲದಲ್ಲಿ ನಿಂತು ಓಂಕಾರದಿಂದ ನೂರಾವರ್ತಿ ಜಪಿಸಲ್ಪಟ್ಟ ಪರಿಶುದ್ಧವಾದ ತೀರ್ಥವನ್ನು ಪಾನಮಾಡುತ್ತಾನೆಯೋ ಅವನು ಸಕಲವಿಧವಾದ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.

ಶತಜಪ್ತಂ ಪಿಬೇದ್ಯಸ್ತು ಸ ಪಾಪೈರ್ವಿಪ್ರಮುಚ್ಯತೇ ।
ಅಕಾರಶ್ಚಾಪ್ಯುಕಾರಶ್ಚ ಮಕಾರಶ್ಚ ಭೃಗೂತ್ತಮ ॥ ೮ ॥

ಯಜುರ್ವೇದಃ ಸಾಮವೇದಃ ಋಗ್ವೇದಶ್ಚ ವಿಚಕ್ಷಣೈಃ ।
ಕಥಿತಸ್ತು ತ್ರಿಮಾತ್ರಶ್ಚ ಪ್ರಣವಃ ಪರಿಕೀರ್ತಿತಃ ॥ ೯ ॥

ಮಾತ್ರಾತ್ರಯಂ ತು ಪ್ರಣವಃ ತ್ರಯೋ ವೇದಾಃ ಸನಾತನಾಃ ।
ಏತಏವ ತ್ರಯೋ ಲೋಕಾಸ್ತ್ರಯಶ್ಚೈವಾಗ್ನಯಸ್ತಥಾ ॥ ೧೦ ॥

ಮಹಾವ್ಯಾಹೃತಿಭಿರ್ಹೋಮಾತ್ಸರ್ವಪಾಪೈಃ ಪ್ರಮುಚ್ಯತೇ ।
ಮಹಾವ್ಯಾಹೃತಯೋ ಜ್ಞೇಯಾಃ ಸಪ್ತಲೋಕಾ ವಿಚಕ್ಷಣೈಃ ॥ ೧೧ ॥

ಗಾಯತ್ರೀ ಪರಮಾ ಜಪ್ಯೇ ಹೋಮೇ ವ್ಯಾಹೃತಯಸ್ತಥಾ ।
ಅನ್ತರ್ಜಲೇ ತಥಾ ರಾಮ ಪ್ರೋಕ್ತಶ್ಚೈವಾಘಮರ್ಷಣಃ ॥ ೧೨ ॥

---

೮-೧೦. ಪ್ರಣವವು ಅಕಾರ ಉಕಾರ ಮಕಾರವೆಂಬ ಮೂರು ಮಾತ್ರೆಗಳುಳ್ಳದ್ದೆಂದು ಪಂಡಿತರು ಹೇಳಿರುವರು. ಈ ಮೂರು ಮಾತ್ರೆಗಳೂ ಕ್ರಮವಾಗಿ ಯಜುರ್ವೇದ ಸಾಮವೇದ ಋಗ್ವೇದದ ಸ್ವರೂಪಗಳೆಂದು ನಿರ್ಣಯಿಸಿರುವರು. ಈ ರೀತಿ ಮೂರು ಮಾತ್ರೆಗಳಿಂದ ಕೂಡಿದ ಪ್ರಣವವು ಪುರಾತನಗಳಾದ ಮೂರು ವೇದಗಳ ಸ್ವರೂಪವೆಂದೂ, ಲೋಕತ್ರಯ ಸ್ವರೂಪವೆಂದೂ, ಹಾಗೆಯೇ ಅಗ್ನಿತ್ರಯಸ್ವರೂಪವೆಂದೂ ಹೇಳಲಾಗಿದೆ.

೧೧-೧೨. ಮಹಾವ್ಯಾಹೃತಿಗಳಿಂದ ಹೋಮಮಾಡಿದವನು ಎಲ್ಲಾ ಪಾಪಗಳಿಂದಲೂ ವಿಮೋಚನೆ ಹೊಂದುತ್ತಾನೆ. ಮಹಾವ್ಯಾಹೃತಿಗಳೆಂದರೆ ಸಪ್ತಲೋಕಗಳಿಗೂ ಪ್ರಕಾಶಕವಾಗಿ ಆ ಲೋಕಗಳ ಸ್ವರೂಪವೇ ಆಗಿರುವ ಮಂತ್ರಗಳು. ಜಪಮಾಡುವ ಪ್ರಸಂಗದಲ್ಲಿ ಗಾಯತ್ರಿಯೇ ಉತ್ತಮವಾದುದು. ಹೋಮ ಪ್ರಸಂಗದಲ್ಲಿ ಮಹಾವ್ಯಾಹೃತಿಗಳೇ ಉತ್ತಮವಾದುವು. ನೀರಿನಲ್ಲಿ ನಿಂತು ಜಪಿಸತಕ್ಕ ಮಹಾಮಂತ್ರಗಳಲ್ಲಿ ಅಘಮರ್ಷಣ ಸೂಕ್ತಗಳೇ ಉತ್ತಮವಾದುವೆಂದೂ ಹೇಳಲ್ಪಟ್ಟಿದೆ.

**ಅಗ್ನಿಮೀಳೇ ಪುರೋಹಿತಂ ಸೂಕ್ತ್ಯೋಯಂ ವಹ್ನಿದೈವತಃ ।**
**ಶಿರಸಾ ಧಾರಯೇದ್ವಹ್ನಿಂ ಯೋ ಜಪೇತ್ಪರಿವತ್ಸರಂ ॥ ೧೩ ॥**

**ಹೋಮಂ ತ್ರಿಷವಣಂ ಚೈವ ತಥಾ ತೇನ ಸಮಾಚರೇತ್ ।**
**ಅನಗ್ನಿಜ್ವಲನಂ ಕುರ್ಯಾದ್ಭೈಕ್ಷಾಹಾರಸ್ತು ವತ್ಸರಾನ್ ॥ ೧೪ ॥**

**ಅತಃಪರಮೃಚಃ ಸಪ್ತ ಚಾಗ್ನೇಯ್ಯಃ ಪರಿಕೀರ್ತಿತಾಃ ।**
**ತಾ ಜಪನ್ ಪ್ರಯತೋ ನಿತ್ಯಮಿಷ್ಟಾನ್ ಕಾಮಾನ್ಸಮಶ್ನುತೇ ॥ ೧೫ ॥**

**ಮೇಧಾಕಾಮೋ ಜಪೇನ್ನಿತ್ಯಂ ಸದಸಸ್ಪತಿಮಿತ್ಯೃಚಂ ।**
**ಅಂಬಯೋ ಯಾಂತಿ ಯಾಃ ಪ್ರೋಕ್ತಾಃ ನ ಬಂಧೋರ್ಮೃತ್ಯುನಾಶಿನೀ ॥**

**ಶುನಃಶೇಪಮೃಷಿಂ ತದ್ವತ್ಸನ್ನಿರುದ್ಧೋಥವಾ ಜಪೇತ್ ।**
**ಮುಚ್ಯತೇ ಸರ್ವಪಾಪೇಭ್ಯೋ ಗದಾ ಚಾಪಗದೀ ಗದನ್ ॥ ೧೭ ॥**

---

೧೩-೧೪. ಅಗ್ನಿಮೀಳೆ ಪುರೋಹಿತಂ ಎಂಬ ಸೂಕ್ತವು ಅಗ್ನಿ ದೇವತಾಕ ವಾದದ್ದು. ಈ ಸೂಕ್ತವನ್ನು ಯಾವನು ನಿಯಮದಲ್ಲಿದ್ದು ವರ್ಷಪೂರ್ತಿಯಾಗಿ ಜಪಿಸುತ್ತಾನೆಯೋ ಅವನು ಅಗ್ನಿಯನ್ನು ತಲೆಯ ಮೇಲೆಯೇ ಇಟ್ಟುಕೊಳ್ಳುತ್ತಾನೆ. ಈ ಸೂಕ್ತದಿಂದಲೇ ಹೋಮವನ್ನೂ ತ್ರಿಕಾಲ ಸ್ನಾನವನ್ನೂ ಮಾಡಬೇಕು. ಹೀಗೆ ಮಾಡುವವನು ಅನೇಕ ವರ್ಷಪರ್ಯಂತರವೂ ಭಿಕ್ಷಾಟನೆಯಿಂದಲೇ ನಿಯಮ ಪರನಾಗಿದ್ದಲ್ಲಿ ಅಗ್ನಿ ಇಲ್ಲದೆಯೂ ಅದರ ಜ್ವಾಲೆಯನ್ನೇ ತೇಜೋರೂಪದಿಂದ ಹೊಂದುತ್ತಾನೆ.

೧೫-೧೬. ಅದಕ್ಕೆ ಮುಂದೆ ಇರುವ ಏಳು ಋಕ್ಕುಗಳೂ ಅಗ್ನಿದೇವತಾಕ ವಾದುವು. ಎಂದು ಹೇಳಲ್ಪಟ್ಟಿದೆ ಆ ಋಕ್ಕಗಳನ್ನೂ ಸಹ ನಿಯಮದಿಂದ ಶುದ್ಧ ನಾಗಿದ್ದು ಜಪಿಸುವವನು ಯಾವಾಗಲೂ ತನ್ನ ಇಷ್ಟಸಿದ್ಧಿಯನ್ನು ಹೊಂದುತ್ತಾನೆ. ಬುದ್ಧಿವಿಶೇಷವನ್ನು ಅಪೇಕ್ಷಿಸುವವನು ಸದಸತ್ಪದವೆಂಬ ಋಕ್ಕನ್ನು ನಿತ್ಯವೂ ಜಪಿಸ ಬೇಕು. ಅಂಬಯೋಯಾಂತಿ ಎಂಬ ಋಕ್ಕನ್ನು ಜಪಿಸುವವನಿಗೆ ಬಂಧುಗಳಿಗೆ ಉಂಟಾಗುವ ಮೃತ್ಯುಭಯವು ತಪ್ಪುತ್ತದೆ.

೧೭-೧೮. ಶುನಃಶೇಫಮೃಷಿಂ ಮತ್ತು ಸನ್ನಿರುದ್ಧೋಥವಾ ಎಂಬ ಋಕ್ಕನ್ನು ಜಪಿಸಬೇಕು. ಗದಾ ಅಪಗದೀ ಎಂಬ ಸೂಕ್ತಗಳನ್ನು ಪಠನಮಾಡು ವವನು ಸಕಲಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಪುರಂದರನೆಂಬ

ಯದೀಚ್ಛೇಚ್ಛಾಶ್ವತಂ ಕಾಮಮಿಂದ್ರಾತ್ಪ್ರಾಪ್ತುಂ ಪುರಂದರಾತ್ ।
ಋಗ್ಭಿಃ ಷೋಡಶಭಿಃ ಸ್ತುಯಾದಿಂಪ್ರಮೇತಿ ದಿನೇದಿನೇ ॥ ೧೮ ॥

ಹಿರಣ್ಯಸ್ತೂಪಮಿತ್ಯೇತಜ್ಜಪನ್ ಶತ್ರೂನ್ ಪ್ರಬಾಧತೇ ।
ಕ್ಷೇಮೀ ಭವತಿ ಚಾಧ್ವಾನೇ ಯೇನ ಪಂಥಾ ಜಪನ್ನರಃ ॥ ೧೯ ॥

ರೌದ್ರೀಭಿಃ ಷಡ್ಭಿರೀಶಾನಂ ಸ್ತುಯಾದ್ಯೋ ವೈ ದಿನೇದಿನೇ ।
ಚರುಂ ವಾ ಕಲ್ಪಯೇದ್ರೌದ್ರಂ ತಸ್ಯ ಶಾಂತಿಃ ಪರಾಭವೇತ್ ॥ ೨೦ ॥

ಉದಿತ್ಯುದ್ಯಂತಮಾದಿತ್ಯಂ ಉಪತಿಷ್ಠೇದ್ದಿನೇದಿನೇ ।
ಕ್ಷಿಪೇಜ್ಜಲಾಂಜಲೀನ್ ಸಪ್ತ ಮನೋದುಃಖವಿನಾಶನಂ ॥ ೨೧ ॥

ದ್ವಿಷಂತಮಿತ್ಯಥಾನರ್ಘ್ಯ ದ್ವಿಷಂತಂ ಚ ಜಪನ್ ಸ್ಮರೇತ್ ।
ಅಗಚ್ಛನ್ ಸಪ್ತರಾತ್ರೇಣ ವಿದ್ವೇಷಮಧಿಗಚ್ಛತಿ ॥ ೨೨ ॥

---

ಪ್ರಸಿದ್ಧಿ ಪಡೆದಿರುವ ಇಂದ್ರನಿಂದ ಶಾಶ್ವತವಾದ ಪುರುಷಾರ್ಥವನ್ನು ಅಪೇಕ್ಷಿಸುವವನು ಇಂದ್ರಮೇತಿ ಎಂಬ ಹದಿನಾರು ಋಕ್ಕುಗಳಿಂದ ಪ್ರತಿನಿತ್ಯವೂ ಇಂದ್ರನನ್ನು ಸ್ತೋತ್ರ ಮಾಡಬೇಕು.

೧೯-೨೦. ಹಿರಣ್ಯಸ್ತೂಪವೆಂಬ ಮಂತ್ರವನ್ನು ಜಪಿಸುವವನು ಶತ್ರುಗಳನ್ನು ತಡೆದು ಜಯಶೀಲನಾಗುತ್ತಾನೆ. ಅಧ್ವಾನೆ ಯೇನ ಪಂಥಾ ಎಂಬ ಮಂತ್ರವನ್ನು ಜಪಿಸುವವನು ಕ್ಷೇಮವನ್ನು ಹೊಂದುತ್ತಾನೆ. ರುದ್ರದೇವತಾಕವಾದ ಆರು ಮಂತ್ರಗಳಿಂದ ಯಾವನು ಪ್ರತಿದಿನದಲ್ಲಿಯೂ ರುದ್ರದೇವನನ್ನು ಸ್ತೋತ್ರಮಾಡುತ್ತಾನೆಯೋ ಮತ್ತು ಆ ರುದ್ರದೇವತಾಕವಾದ ಚರುವನ್ನೂ ಕಲ್ಪಿಸುತ್ತಾನೆಯೋ ಅವನು ಬಹಳ ವುಟ್ಟಿಗೂ ಶಾಂತಿಯಿಂದ ಸುಖಿಸುತ್ತಾನೆ.

೨೧-೨೨. ಯಾವನು ಉದಿತ್ಯಂ ಎಂಬ ಮಂತ್ರವನ್ನು ಪ್ರತಿದಿನದಲ್ಲಿಯೂ ಉದಯಾಭಿಮುಖನಾಗಿ ಸೂರ್ಯನನ್ನು ಉದ್ದೇಶಿಸಿ ಪಠಿಸುತ್ತಾ ಪೂಜಿಸುತ್ತಾನೆಯೋ ಮತ್ತು ಏಳು ಬೊಗಸೆ ಜಲವನ್ನು ಆ ಸೂರ್ಯನಿಗೆ ಅಭಿಮುಖವಾಗಿ ಎರಚಿ ಸೇವಿಸುತ್ತಾನೆಯೋ ಅವನಿಗೆ ಮನಸ್ಸಿನ ದುಃಖಗಳೆಲ್ಲವೂ ನಾಶಹೊಂದುತ್ತವೆ ಯಾವನು ದ್ವಿಷಂತಮಿತ್ಯಥಾನರ್ಘ್ಯ ಎಂಬ ಮಂತ್ರವನ್ನು ಸ್ಮರಿಸುತ್ತಾನೆಯೋ ಅವನು ತಾನಾಗಿ ಶತ್ರುವಿನ ಸಮೀಪಕ್ಕೆ ಹೋಗದೆ ಏಳು ರಾತ್ರಿಯಲ್ಲಿ ಆ ಶತ್ರುವನ್ನೇ ತಾನು ಹೊಂದುತ್ತಾನೆ.

ಆರೋಗ್ಯಕಾಮೋ ರೋಗೀ ಚ ಪ್ರಸ್ಕನ್ನಸ್ತ್ಯೋತ್ತಮಂ ಜಪೇತ್ |
ಉತ್ತಮಸ್ತ್ಯಸ್ಯ ಚಾವ ಜಪೇದ್ವೈರವಿನಾಶನೇ || ೨೩ ||

ಉದಯುತ್ಯಾಯುರಕ್ಷಯ್ಯಂ ತೇಜೋ ಮಧ್ಯಂ ದಿನೇ ಜಪೇತ್ |
ಅಸ್ತಂ ವ್ರಜತಿ ಸೂರ್ಯೇ ಚ ದ್ವಿಷಂತಂ ಪ್ರತಿಪಾದಿತಂ || ೨೪ ||

ನವಪದ್ಯೇತಿ ಸೂಕ್ತಾನಿ ಜಪನ್ ಶತ್ರೂನ್ನಿಯಚ್ಛತಿ |
ಏಕಾದಶ ಸುವರ್ಣಸ್ಯ ಸರ್ವಕಾಮಾಂಸ್ತು ನಿರ್ದಿಶೇತ್ || ೨೫ ||

ಆಧ್ಯಾತ್ಮಿಕೈಃ ಕ ಇತ್ಯೇತಜ್ಜಪನ್ ಮೋಕ್ಷಮವಾಪ್ನುಯಾತ್ |
ಆಸನೋ ರುದ್ರಮಿತ್ಯೇತದ್ದೀರ್ಘಮಾಯುರವಾಪ್ನುಯಾತ್ || ೨೬ ||

ತ್ವಂ ಸೋಮೇತಿ ಚ ಸೂಕ್ತೇನ ನವಂ ಪಶ್ಯೇನ್ನಿಶಾಕರಂ |
ಉಪತಿಷ್ಠೇತ್ಸಮಿತ್ಪಾಣಿರ್ವಾಸಾಂಸ್ಯಾಪ್ನೋತ್ಯಸಂಶಯಂ || ೨೭ ||

---

೨೩-೨೪. ಆರೋಗ್ಯವನ್ನು ಅಪೇಕ್ಷಿಸುವವನೂ ರೋಗಿಯೂ ಸಹ ಪ್ರಸ್ಕನ್ನ ಸ್ತ್ಯೋತ್ತಮಂ ಎಂಬ ಮಂತ್ರವನ್ನು ಜಪಿಸಬೇಕು. ವೈರಿನಾಶವನ್ನು ಅಪೇಕ್ಷಿಸುವವನು ಉತ್ತಮಸ್ಯಚಾವ ಮಂತ್ರವನ್ನು ಜಪಿಸಬೇಕು. ಉದಯುತ್ಯಾಯುರಕ್ಷಯ್ಯಂ ತೇಜಃ ಎಂಬ ಮಂತ್ರವನ್ನು ಮಧ್ಯಾಹ್ನ ಕಾಲದಲ್ಲಿ ಜಪಿಸಬೇಕು. ಅಸ್ತವನ್ನು ಸೂರ್ಯನು ಹೊಂದುತ್ತಿರುವಾಗ ದ್ವಿಷಂತಂ ಪ್ರತಿಪಾದಿತಂ ಎಂಬ ಮಂತ್ರವನ್ನು ಜಪಿಸಬೇಕು

೨೫-೨೬ ನವಪದ್ಯಾ ಇತ್ಯಾದಿ ಶ್ಲೋಕಗಳನ್ನು ನಿಯಮದಿಂದ ಜಪಿಸುವವನು ಶತ್ರುಗಳನ್ನು ನಿಗ್ರಹಿಸಿ ಸ್ವಾಧೀನಪಡಿಸಿಕೊಳ್ಳುತ್ತಾನೆ. ಏಕಾದಶ ಸುವರ್ಣಸ್ಯ ಎಂಬ ಸೂಕ್ತವು ಸರ್ವವಿಧವಾದ ಇಷ್ಟವನ್ನೂ ಪೂರ್ತಿಗೊಳಿಸುತ್ತದೆ. ಕಇತಿ ಎಂಬ ಆಧ್ಯಾತ್ಮಿಕ ಸೂಕ್ತಗಳನ್ನು ಜಪಿಸುವವನು ಮೋಕ್ಷವನ್ನು ಹೊಂದುತ್ತಾನೆ. ಆಸನೋ ರುದ್ರಂ ಎಂಬ ಸೂಕ್ತವನ್ನು ಜಪಿಸುವವನು ದೀರ್ಘವಾದ ಆಯುಸ್ಸನ್ನು ಹೊಂದುತ್ತಾನೆ.

೨೭-೨೮. ತ್ವಂ ಸೋಮ ಎಂಬ ಸೂಕ್ತದಿಂದ ಪ್ರತಿಪತ್ತಿನಲ್ಲಿ ಉದಯಿಸಿದ ಹೊಸದಾದ ಚಂದ್ರನನ್ನು ನೋಡಬೇಕು. ಸಮಿತ್ಪಾಣಿಯಾಗಿ ನಿಂತು ಅವನನ್ನು ಪೂಜಿಸಿ ಸ್ತೋತ್ರಮಾಡಬೇಕು. ಇಂತಹವನು ಬಹಳವಾದ ವಸ್ತ್ರಸಮೃದ್ಧಿಯನ್ನು

ಆಯುರೀಪ್ಸನ್ನಿದಮಿತಿ ಕೌತ್ಸಸೂಕ್ತಂ ಯದಾಭ್ಯಸೇತ್ ।
ಅಪನಃ ಶೋಶುಚದಿತಿ ಸ್ತುತ್ವಾ ಮಧ್ಯೇ ದಿವಾಕರಂ ॥ ೨೮ ॥

ಯಥಾ ಮುಂಜಾದಿವೇಷೀಕಾ ತಥಾ ಪಾಪಂ ಪ್ರಮುಂಚತಿ ।
ಜಾತವೇದಸ ಇತ್ಯೇತಜ್ಜಪೇತ್ಸ್ವಸ್ತ್ಯಯನಂ ಪಥಿ ॥ ೨೯ ॥

ಭಯೈರ್ವಿಮುಚ್ಯತೇ ಸರ್ವೈಃ ಸ್ವಸ್ತಿಮಾನಾಪ್ನುಯಾದ್ಗೃಹಂ ।
ವ್ಯುಷ್ಟಾಯಾಂ ಚ ತಥಾರಾತ್ರ್ಯಾವೇತದ್ದುಃಸ್ವಪ್ನನಾಶನಂ ॥ ೩೦ ॥

ಪ್ರಮಂದಿತೇತಿ ಸೂರ್ಯಸ್ಯ ಜಪೇದ್ಗರ್ಭವಿಮೋಚನಂ ।
ಜಪನ್ನಿಂದ್ರಮಿತಿಸ್ನಾತೋ ವೈಶ್ವದೇವಂ ತು ಸಪ್ತಕಂ ॥ ೩೧ ॥

ಮುಂಚತ್ಯಾಜ್ಯಂ ತಥಾ ಜುಹ್ವತ್ಸಕಲಂ ಕಿಲ್ಬಿಷಂ ನರಃ ।
ಇಮಾಮಿತಿ ಜಪನ್ ಶಶ್ವತ್ಕಾಮಾನಾಪ್ನೋತ್ಯಭೀಪ್ಸಿತಾನ್ ॥ ೩೨ ॥

---

ಹೊಂದುತ್ತಾನೆ. ಇದರಲ್ಲಿ ಸಂದೇಹವಿಲ್ಲ. ಇದಂ ಎಂಬ ಕೌತ್ಸಸೂಕ್ತವನ್ನು ಪುನಶ್ಚರಣೆಮಾಡುವವನು ಆಯುಸ್ಸಮೃದ್ಧಿಯನ್ನು ಹೊಂದುತ್ತಾನೆ. ಅಪನಃ ಶೋಶು ಚದಘಂ ಎಂಬ ಮಂತ್ರದಿಂದ ಮಧ್ಯಾಹ್ನದಲ್ಲಿ ಸೂರ್ಯನನ್ನು ಸ್ತೋತ್ರಮಾಡಿದಲ್ಲಿ ಮುಂಜವೆಂಬ ಹುಲ್ಲುಗಳಿಂದ ಇಷೀಕಾ ಎಂಬ ಸೂಕ್ಷ್ಮವಾದ ಹುಲ್ಲು ಬೇರೆಯಾಗು ವಂತೆ ಪಾಪಗಳಿಂದ ಬೇರೆಯಾಗುತ್ತಾನೆ.

೨೯-೩೦. ಮಾರ್ಗಸ್ಥನಾದವನು ಮಾರ್ಗದಲ್ಲಿ ತನಗೆ ಒಳ್ಳೆಯದಾಗುವುದ ಕ್ಕಾಗಿ ಜಾತವೇದಸಃ ಎಂಬ ಸೂಕ್ತವನ್ನು ಜಪಿಸಬೇಕು. ಹೀಗೆ ಜಪಿಸಿದಲ್ಲಿ ಅವನಿಗೆ ಮಾರ್ಗದಲ್ಲಿ ಯಾವ ಭಯವೂ ಇರುವುದಿಲ್ಲ. ಕ್ಷೇಮಿಯಾಗಿ ಮನೆಯನ್ನು ಹೊಂದುತ್ತಾನೆ. ಇವನ್ನು ರಾತ್ರಿಯಾಗಲಿ ಬೆಳಗಿನ ಜಾವದಲ್ಲಾಗಲಿ ಜಪಿಸಿದರೂ ಸಹ ದುಃಸ್ವಪ್ನನಾಶನ ಉಂಟಾಗುತ್ತದೆ. ಪ್ರಮಂದಿತ ಎಂಬ ಸೂರ್ಯಸೂಕ್ತವನ್ನು ಜಪಿಸಿದಲ್ಲಿ ಗರ್ಭದಲ್ಲಿದ್ದ ಶಿಶುವಿಗೆ ಜಾಗ್ರತೆಯಾಗಿ ಜನನ ಉಂಟಾಗುತ್ತದೆ.

೩೧-೩೨. ಇಂದ್ರಂ ಎಂಬ ವೈಶ್ವದೇವ ಸಂಜ್ಞಕವಾದ ಏಳು ಸೂಕ್ತಗಳನ್ನು ಸ್ನಾನಮಾಡಿ ಶುದ್ಧನಾಗಿದ್ದು ಜಪಿಸಿದಲ್ಲಿ ಮತ್ತು ಆ ಸೂಕ್ತಗಳಿಂದ ಆಜ್ಯಹೋಮ ವನ್ನೂ ಮಾಡಿದಲ್ಲಿ ಪಾಪಗಳೆಲ್ಲವೂ ನಾಶವಾಗುತ್ತವೆ. ಇಮಾಂ ಎಂಬ ಋಕ್ಕನ್ನು ಬಾರಿಬಾರಿಗೂ ಜಪಿಸುತ್ತಿದ್ದಲ್ಲಿ ಅವನು ತನಗೆ ಇಷ್ಟವಾದ ಮನೋರಥಗಳೆಲ್ಲವನ್ನೂ

ಮಾನಸ್ತೋಕ ಇತಿ ದ್ವಾಭ್ಯಾಂ ತ್ರಿರಾತ್ರೋಪೋಷಿತಃ ಶುಚಿಃ ।
ಔದುಂಬರೀಸ್ತು ಜುಹುಯಾದ್ದಧಿಮಧ್ವಾಜ್ಯಸಂಸ್ಕೃತಾಃ || ೩೩ ||

ಛಿತ್ವಾ ಸರ್ವಾನ್ ಮೃತ್ಯುಪಾಶಾನ್ ಜೀವೇದ್ರೋಗವಿವರ್ಜಿತಃ ।
ಊರ್ಧ್ವಬಾಹುರನೇನೈವ ಸ್ತುತ್ವಾ ಶಸ್ತ್ರಂ ತಥೈವ ಚ || ೩೪ ||

ಮಾನಸ್ತೋಕೇತಿ ಚ ಋಚಾ ಶಿಖಾಬಂಧೇ ಕೃತೇ ನರಃ ।
ಅದೃಶ್ಯಃ ಸರ್ವಭೂತಾನಾಂ ಜಾಯತೇ ಸಂಶಯಂ ವಿನಾ || ೩೫ ||

ಚಿತ್ರಮಿತ್ಯುಪತಿಷ್ಠೇತ ತ್ರಿಸಂಧ್ಯಂ ಭಾಸ್ಕರಂ ತಥಾ ।
ಸಮಿತ್ಪಾಣಿರ್ನರೋ ನಿತ್ಯಂ ಪ್ರಾಪ್ನುಯಾತ್ತು ಧನಾಯುಷೀ || ೩೬ ||

ಏತದ್ದುಃಸ್ವಪ್ನಸ್ಯೇತಿ ಚ ಜಪನ್ ಪ್ರಾತಃ ದಿನೇ ದಿನೇ ।
ದುಃಸ್ವಪ್ನಂ ದಹತೇ ಕೃತ್ಸ್ನಂ ಭೋಜನಂ ಚಾಪ್ನುಯಾಚ್ಛುಭಂ || ೩೭ ||

---

ಹೊಂದುತ್ತಾನೆ. ಯಾವನು ಮೂರು ರಾತ್ರಿ ಉಪವಾಸದಲ್ಲಿದ್ದು ಶುಚಿಯಾಗಿರುತ್ತಾ ಮಾನಸ್ತೋಕ ಎಂಬ ಎರಡು ಮಂತ್ರಗಳಿಂದ ಮೊಸರು, ಜೇನು, ಆಜ್ಯ ಇವುಗಳಿಂದ ಸಂಸ್ಕರಿಸಲ್ಪಟ್ಟ ಅತ್ತಿಯ ಸಮಿತ್ತುಗಳನ್ನು ಹೋಮಮಾಡುತ್ತಾನೆಯೋ ಇವನು ಮೃತ್ಯುವಿನಿಂದ ಉಂಟಾಗಬಹುದಾದ ಎಲ್ಲಾ ಕಂಟಕಗಳನ್ನೂ ಹೋಗಲಾಡಿಸಿಕೊಂಡು ಯಾವ ರೋಗವೂ ಇಲ್ಲದೆ ಬದುಕುತ್ತಾನೆ.

೩೪-೩೬ ಬಾಹುಗಳನ್ನೆತ್ತಿ ನಿಂತು ಈ ಋಕ್ಕಿನಿಂದಲೇ ಶಸ್ತ್ರವನ್ನು ಸ್ತೋತ್ರಮಾಡಿ ಮಾನಸ್ತೋಕೇ ಎಂಬ ಮಂತ್ರದಿಂದ ಶಿಖಾಬಂಧವನ್ನು ಮಾಡಿದಲ್ಲಿ ಸರ್ವಪ್ರಾಣಿಗಳಿಗೂ ಅವನು ಅದೃಶ್ಯನಾಗುತ್ತಾನೆ ಇದರಲ್ಲಿ ಸಂಶಯವಿಲ್ಲ ಚಿತ್ರಂ ಎಂಬ ಮಂತ್ರದಿಂದ ಸೂರ್ಯನನ್ನು ತ್ರಿಸಂಧ್ಯಾಕಾಲಗಳಲ್ಲಿಯೂ ಸಮಿತ್ತುಗಳನ್ನು ಹಿಡಿದು ಸ್ತೋತ್ರಮಾಡಿದಲ್ಲಿ ಅವನು ಆಯುಸ್ಸುಗಳನ್ನು ನಿಯತವಾಗಿಯೂ ಹೊಂದಿಯೇ ಹೊಂದುತ್ತಾನೆ.

೩೭-೩೮. ಪ್ರತಿದಿನದಲ್ಲಿಯೂ ಪ್ರಾತಃಕಾಲದಲ್ಲಿ ಏತದ್ದುಃಸ್ವಪ್ನಸ್ಯಚ ಎಂಬ ಮಂತ್ರವನ್ನು ಜಪಿಸುವವನು ದುಃಸ್ವಪ್ನವನ್ನು ಹೋಗಲಾಡಿಸಿಕೊಳ್ಳುತ್ತಾನೆ. ಶುಭಕರವಾದ ಭೋಜನವನ್ನೂ ಸಹ ಹೊಂದುತ್ತಾನೆ. ಹಾಗೆಯೇ ಉಭೇಷು

ಉಭೇಷುನಾಮಿಾತಿ ತಥಾ ರಕ್ಷಾ ಚ ಪರಿಕೀರ್ತಿತಾ ।
ನಿರ್ವರ್ತ್ಯ ಪಂಚಯಜ್ಞಾಂಶ್ಚ ಹುತ್ವಾ ಚಾಗ್ನಿಂ ಕೃತಾಹ್ನಿಕಃ || ೩೮ ||

ದೇವಾಸಾವಿತಿ ದೇವ್ಯೇದಂ ಜಪನ್ ಕಾಮಾನವಾಪ್ನುಯಾತ್ ।
ಆತತಾಯಿನಮಾಯಾಂತಂ ದೃಷ್ಟ್ವಾ ವ್ಯಾಘ್ರಾದಿಕಂ ನರಃ || ೩೯ ||

ನ ಮಾಗಿರನ್ನಿತಿ ಜಪಂಸ್ತೇಭ್ಯ ಏವ ಪ್ರಮುಚ್ಯತೇ ।
ಕಯಾ ಶುಭೇತಿ ಚ ಜಪನ್ ಜ್ಞಾತಿಶ್ರೈಷ್ಠ್ಯಮವಾಪ್ನುಯಾತ್ || ೪೦ ||

ಇಮಂ ನು ಸೋಮಮಿತ್ಯೇತತ್ಸರ್ವಾನ್ಕಾಮಾನವಾಪ್ನುಯಾತ್ ।
ಪಿತ್ರಂತ್ವಿತ್ಯುಪತಿಷ್ಠೇತ ನಿತ್ಯಮನ್ನಮುಪಸ್ಥಿತಂ || ೪೧ ||

---

ನಾಮಿಾ ಎಂಬ ಮಂತ್ರವೂ ರಕ್ಷಾರೂಪವೆಂದು ಹೇಳಲ್ಪಟ್ಟಿದೆ. ಆಹ್ನಿಕವೆಲ್ಲವನ್ನೂ ನೆರವೇರಿಸಿ ಅಗ್ನಿಯ ಹೋಮಾದಿಗಳನ್ನೂ ಪಂಚಯಜ್ಞಗಳನ್ನೂ ಮಾಡಿ ಅನಂತರ ದೇವಾಸಾವಿತಿ ದೇವೇದಂ ಎಂಬ ಮಂತ್ರವನ್ನು ಜಪಿಸುವವನು ಎಲ್ಲಾ ಇಷ್ಟಗಳನ್ನೂ ಹೊಂದುತ್ತಾನೆ.

೩೯-೪೦ ತನ್ನನ್ನು ಕೊಲ್ಲಲು ಎದುರಾಗಿ ಬರುತ್ತಿರುವ ಹುಲಿಯೇ ಮೊದಲಾದವುಗಳನ್ನು ನೋಡಿದೊಡನೆಯೇ ನಮಾಗಿರ್ರ ಎಂಬ ಮಂತ್ರವನ್ನು ಜಪಿಸಿದ್ದೇ ಆದರೆ ತಾನು ಬೇರೆ ಯಾವ ಪ್ರಯತ್ನವನ್ನೂ ಹೊಂದದೆ ಇದ್ದರೂ ಸಹ ಹಿಂಸಕಗಳಾದ ಆ ಪ್ರಾಣಿಗಳಿಂದಲೇ ಇವನು ವಿಮೋಚನೆ ಹೊಂದುತ್ತಾನೆ. ಕಯಾಶುಭಾ ಎಂಬ ಮಂತ್ರವನ್ನು ಜಪಿಸುವವನು ಸ್ವಜನಗಳಲ್ಲಿ ಶ್ರೇಷ್ಠನಾಗಿ ಬದುಕುತ್ತಾನೆ. ಇಮಂನು ಸೋಮಂ ಎಂಬ ಮಂತ್ರವನ್ನು ಜಪಿಸುವವನು ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ.

೪೧-೪೨. ನಿತ್ಯವೂ ಭೋಜನಕ್ಕಾಗಿ ಅನ್ನವು ಹತ್ತಿರದಲ್ಲಿ ಬಡಿಸಲ್ಪಟ್ಟಾಗ ಪಿತ್ರಂತು ಎಂಬ ಮಂತ್ರದಿಂದ ಆ ಅನ್ನವನ್ನು ಸ್ತೋತ್ರಮಾಡಬೇಕು. ಹೀಗೆ ಮಾಡುವವನಿಗೆ ಅನ್ನದಿಂದ ಯಾವ ವ್ಯಾಧಿಯೂ ಉಂಟಾಗುವುದಿಲ್ಲ. ಇಂತಹವನಿಗೆ ವಿಷವೂ ಸಹ ಅನ್ನದಂತೆ ಅನುಕೂಲ ಪರಿಣಾಮಿಯಾಗುತ್ತದೆ. ಅಗ್ನೇನಯ ಎಂಬ

ನಾಸ್ಯಸ್ಯಾದನ್ನತೋ ವ್ಯಾಧಿರ್ವಿಷಮಪ್ಯನ್ನತಾಮಿಯಾತ್ ।
ಅಗ್ನೇ ನಯೇತಿ ಸೂಕ್ತೇನ ಪ್ರತ್ಯೃಚಂ ಜುಹುಯಾತ್ ಘೃತಂ ॥ ೪೨ ॥

ಪಕ್ವಾನ್ನಂ ಪ್ರತಿಪದ್ಯೇತ ಕೃತ್ವಾಚಾಕರ್ಮ ಗರ್ಹಿತಂ ।
ವೀರಾನ್ವಯಂ ಸಮಾಪ್ನೋತಿ ಸಶ್ಲೋಕಂ ಯೋ ಜಪೇತ್ಸದಾ ॥ ೪೩ ॥

ಕಂ ಕತಾ ಚೇತಿ ಸೂಕ್ತೇನ ವಿಘ್ನಾನ್ ಸರ್ವಾನಪೋಹತಿ ।
ಯೋ ಜಾತ ಇತಿ ಸೂಕ್ತೇನ ಸುಖಮಾಪ್ನೋತ್ಯನುತ್ತಮಂ ॥ ೪೪ ॥

ಯೋ ಪರಾಜನ್ನಿತೀಮಾಂ ತು ದುಃಸ್ವಪ್ನಶಮನಾಮೃಚಂ ।
ಏಕಾಮಾಹಮಿತೀಯಾಂ ತು ವಿಜ್ಞೇಯಾ ಶ್ರೀಕರೀ ತಥಾ । ೪೫ ॥

ಚತುರ್ದಶೀಮುಪೋಷ್ಯೈಕಾಂ ಕೃಷ್ಣಾಸು ಜುಹುಯಾತ್ ಘೃತಂ ।
ಆತ್ತಸೂಕ್ತೇನ ರೌದ್ರೇಣ ವ್ಯಾಧಿನೋಕಂ ವಿಮುಂಚತಿ ॥ ೪೬ ॥

---

ಸೂಕ್ತದಿಂದ ಪ್ರತಿಯೊಂದು ಋಕ್ಕಿನಿಂದಲೂ ಆಜ್ಯವನ್ನು ಹೋಮಮಾಡಬೇಕು. ಹೀಗೆ ಮಾಡುವವನು ನಿಂದಿತ ಕರ್ಮವನ್ನು ಮಾಡಿದ್ದರೂ ಅವನು ಪಕ್ವಾನ್ನವನ್ನು ಹೊಂದುತ್ತಾನೆ.

೪೩–೪೪. ಇದನ್ನು ಶ್ಲೋಕದೊಡನೆ ಯಾವಾಗಲೂ ಜಪಿಸುವವನು ಶೂರರಾದವರ ವಂಶವನ್ನೂ ಹೊಂದುತ್ತಾನೆ. ಕಂಕತಾ ಚ ಎಂಬ ಸೂಕ್ತದಿಂದ ಕಾರ್ಯಮಧ್ಯದಲ್ಲಿ ಉಂಟಾಗುವ ಎಲ್ಲಾ ವಿಘ್ನಗಳನ್ನೂ ಹೋಗಲಾಡಿಸಿಕೊಳ್ಳುತ್ತಾನೆ. ಯೋ ಜಾತಃ ಎಂಬ ಸೂಕ್ತವನ್ನು ಜಪಿಸುವವನು ಉತ್ತಮೋತ್ತಮವಾದ ಸುಖವನ್ನು ಹೊಂದುತ್ತಾನೆ. ಯೋಪರಾಜನ್ ಎಂಬ ಋಕ್ಕು ದುಃಸ್ವಪ್ನನಾಶಕವಾದದ್ದು.

೪೫–೪೬. ಏಕಾಮಾಹಮಿತೀಯಾಂ ಎಂಬ ಋಕ್ಕು ಸಂಪತ್ಪ್ರದವೆಂದು ತಿಳಿಯಬೇಕು. ಕೃಷ್ಣಪಕ್ಷದ ತಿಥಿಗಳಲ್ಲಿ ಒಂದು ಚತುರ್ದಶೀ ದಿನ ಉಪವಾಸ ಮಾಡಿ ರುದ್ರದೇವತಾಕವಾದ ಆತ್ತಸೂಕ್ತದಿಂದ ಆಜ್ಯವನ್ನು ಹೋಮಮಾಡಿದಲ್ಲಿ ಪ್ರಬಲವಾದ ವ್ಯಾಧಿಯು ನಾಶವಾಗುತ್ತದೆ. ಅಜ್ಞಾನದಿಂದ ನಿಂದಿತಕಾರ್ಯ

ಸ್ನಾತ್ವಾನಶ್ನನ್ ಜಪೇದಪ್ಸು ಶೀತತ್ರಯಮತಂದ್ರಿತಃ ।
ಆಮಿಷಸ್ಯೇತಯೋರ್ನೋಹಾಶ್ ಕೃತ್ವಾ ವಾ ಕರ್ಮ ಗರ್ಹಿತಂ ॥ ೪೭ ॥

ಅಧ್ವನಿ ಪ್ರಸ್ಥಿತೋ ಯಸ್ತು ಪಶ್ಯೇಚ್ಛಕುನಮುತ್ಥಿತಂ ।
ಅಪ್ರಶಸ್ತೇ ಪ್ರಶಸ್ತೇ ವಾ ಕನಿಕ್ರದಮಿದಂ ಜಪೇತ್ ॥ ೪೮ ॥

ಅಸ್ಪೃಷ್ಟ್ವೈವ ಚ ಜಪ್ತಮೇತತ್ತಸ್ಕರಮೋಹನಂ ।
ಓಂಷ್ವಿತ್ಯೃಚಮಪಾಂ ಮಧ್ಯೇ ಜಪೇದ್ಯೋ ವೈ ನದೀಂ ತರೇತ್ ॥ ೪೯ ॥

ಉದ್ಧೋರ್ಮಿಭಿರಿತೀಮಾಂ ತು ಜಪೇದ್ರಥಗತಸ್ತರನ್ ।
ಅಧ್ವಾನಂ ಪ್ರಸ್ಥಿತಶ್ಚೈವ ಮಂತ್ರೈರಿತಿಚ ಸಂಸ್ಮರೇತ್ ॥ ೫೦ ॥

ಸುದಾತಾರಂ ಸುಪುಷ್ಟ್ಯರ್ಥಂ ಸರ್ವವೇದೇ ಸ್ಥಿತಂ ನರಂ ।
ನಾಸ್ತಿ ವಿದ್ಯಾಗಮೋ ಯಸ್ಯ ಸುಯುಕ್ತಸ್ಯಾಪಿ ಭಾರ್ಗವ ॥ ೫೧ ॥

---

ವನ್ನಾಚರಿಸಿರುವವನು ಆ ಪಾಪನಾಶಕ್ಕಾಗಿ ಸ್ನಾನಮಾಡಿ ಊಟಮಾಡದೆ ನೀರಿನಲ್ಲಿ ನಿಂತು ಶೀತತ್ರಯವನ್ನೂ ಆಮಿಷಸ್ಯೇತಯೋ ಎಂಬ ಋಕ್ಕನ್ನೂ ಸಹ ಪಠಿಸಬೇಕು.

೪೮-೪೯. ಮಾರ್ಗಸ್ಥನಾಗಿರುವವನು ಅಲ್ಲಿ ಉಂಟಾದ ಶಕುನವನ್ನು ನೋಡಿದಲ್ಲಿ ಆ ಶಕುನವು ಪ್ರಶಸ್ತವಾಗಿರಲಿ ಅಥವ ಅಪ್ರಶಸ್ತವಾಗಿರಲಿ ಕನಿಕ್ರದಂ ಎಂಬ ಋಕ್ಕನ್ನು ಜಪಿಸಬೇಕು. ಇದೇ ಮಂತ್ರವನ್ನು ಕಳ್ಳನನ್ನು ಮುಟ್ಟದೆ ಜಪಿಸಿದಲ್ಲಿ ಆ ಕಳ್ಳನಿಗೂ ಮೋಹವನ್ನು ಉಂಟುಮಾಡುತ್ತದೆ ಯಾವನು ಓಂಷ್ವಿತಿ ಋಕ್ಕನ್ನು ನೀರಿನ ಮಧ್ಯದಲ್ಲಿ ಜಪಿಸುತ್ತಾನೆಯೋ ಅವನು ನದಿಯನ್ನು ಸುಖದಿಂದ ದಾಟುತ್ತಾನೆ.

೫೦. ರಥವೇ ಮೊದಲಾದುದರಿಂದ ನದಿಯನ್ನು ದಾಟುವ ಸಮಯದಲ್ಲಿ ಉದ್ಧೋರ್ಮಿಭಿಃ ಎಂಬ ಋಕ್ಕನ್ನು ಜಪಿಸಬೇಕು. ಮಾರ್ಗಸ್ಥನಾಗಿರುವವನು ಈ ಮಂತ್ರಗಳಿಂದಲೇ ಸುದಾತಾ ಎಂಬ ಸರ್ವವೇದಪ್ರತಿಪಾದ್ಯನಾದ ದಿವ್ಯ ಮನುಷ್ಯನನ್ನು ತನ್ನ ಪುಷ್ಟಿಗಾಗಿ ಯಾವಾಗಲೂ ಸ್ಮರಿಸುತ್ತಿರಬೇಕು.

೫೧-೫೨. ಯಾವನು ಬಹಳ ಪ್ರಯತ್ನಪಟ್ಟರೂ ವಿದ್ಯಾಲಾಭವನ್ನು ಹೊಂದದೇ ಇರುತ್ತಾನೆಯೋ ಅವನು ಸರ್ಪಿಃ ಎಂಬ ಮಂತ್ರವನ್ನು ಜಪಮಾಡಿದಲ್ಲಿ

**ಸ ಸರ್ಪಿರಿತಿ ಚ ಜಪನ್ಮಾಸಾತ್ತಂ ಪ್ರತಿಪದ್ಯತೇ ।**
**ಯಾನಾಕ್ಷಂ ಸಮುಭಜ್ಯಂತಿ ದೃಷ್ಟ್ವಾ ದುರ್ಗೇಧ್ವನಿ ದ್ವಿಜ ॥ ೫೨ ॥**

**ಅಭಿತ್ಯವಸ್ಯೇತಿ ಜಪೇದ್ವೃಕ್ಷ ಮಕ್ಷಬಲಂ ದಧತ್ ।**
**ಕೃಷ್ಣಪಕ್ಷಚತುರ್ದಶ್ಯಾಂ ತ್ರಿರಾತ್ರೋಪೋಷಿತಃ ಶುಚಿಃ ॥ ೫೩ ॥**

**ದಕ್ಷಿಣಾಪ್ರವಣೇ ದೇಶೇ ಶ್ಮಶಾನಸ್ಥಃ ಸಮಾಹಿತಃ ।**
**ರಕ್ತೋಷ್ಣೀಷ್ಯಸಿಪಾಣಿಶ್ಚ ತೌಲಾಕೀಭ್ಯೋಽನಿಲಾಶನಃ ॥ ೫೪ ॥**

**ಸಪ್ತಾಹಂ ಜುಹುಯಾತ್ತೈಲಂ ಸಾರ್ಷಪಂ ಲವಣಾನ್ವಿತಂ ।**
**ಸಮಿಧೋ ರಾಜವೃಕ್ಷಸ್ಯ ವಸಿಷ್ಠೇದ್ವೇಷಿಣೀಃ ಪಠನ್ ॥ ೫೫ ॥**

**ಯಂ ದ್ವಿಷ್ಯಾತ್ತಸ್ಯ ಕೃತ್ವಾ ತು ಶಮ್ಯಾಕೇನಾಹೃತಂ ನಿಶಿ ।**
**ಅಧಿಷ್ಠಾಯ ಚ ತಂ ಕುರ್ಯಾದೃಗ್ಭಿಶ್ಚತಿಸೃಭಿಃ ದ್ವಿಜಃ ॥ ೫೬ ॥**

---

ಒಂದು ತಿಂಗಳಲ್ಲಿ ವಿದ್ಯಾಲಾಭವನ್ನು ಹೊಂದುತ್ತಾನೆ ದುರ್ಗಮವಾದ ಮಾರ್ಗದಲ್ಲಿ ರಥದ ಅಚ್ಚು ಮುರಿದುಹೋಗುತ್ತಿರುವುದನ್ನು ನೋಡಿದುದೇ ಆದರೆ ಆ ಅಚ್ಚಿಗೆ ಬಲವನ್ನುಂಟುಮಾಡುವ ಅಭಿತ್ಯವಸ್ಯ ಎಂಬ ಮಂತ್ರವನ್ನು ಜಪಿಸಬೇಕು.

೫೩-೫೬. ಕೃಷ್ಣಪಕ್ಷದಲ್ಲಿ ಮೂರು ರಾತ್ರಿ ಉಪವಾಸದಿಂದ ಶುಚಿಯಾಗಿದ್ದು ಚತುರ್ದಶಿಯ ದಿನದಲ್ಲಿ ದಕ್ಷಿಣದಿಕ್ಕಿನ ಕಡೆಗೆ ತಗ್ಗಾಗಿರುವ ಶ್ಮಶಾನಭೂಮಿಯಲ್ಲಿ ಮನಃಶ್ಶಾಂತಿಯಿಂದ ಕೆಂಪಾದ ರುಮಾಲನ್ನೂ ಕತ್ತಿಯನ್ನೂ ಧರಿಸಿ ವಾಯುಭಕ್ಷನಾಗಿ ಕೂಡಬೇಕು. ರಾತ್ರಿಯ ಕಾಲದಲ್ಲಿ ಏಳು ದಿನಗಳ ಪರ್ಯಂತ ಉಪ್ಪಿನಿಂದ ಕೂಡಿದ ಸಾಸವೆಯ ಎಣ್ಣೆಯನ್ನು ತೌಲಾಕೀ ದೇವತೆಗಳಿಗೆ ಹೋಮಮಾಡಬೇಕು. ಕಕ್ಕೆಯ ಸಮಿತ್ತನ್ನು ಸಿದ್ಧಪಡಿಸಿ ವಸಿಷ್ಠ ದೇಷಿಣೀಃ ಎಂಬ ಮಂತ್ರಗಳನ್ನು ಜಪಮಾಡುತ್ತಾ ಯಾವನು ತನಗೆ ದ್ವೇಷಿಯಾಗಿರುವನೋ ಅವನ ಮೂರ್ತಿಯನ್ನು ಕಕ್ಕೆಯ ಕಾಷ್ಠದಿಂದ ಮಾಡಿ ಅದರ ಮೇಲೆ ಕುಳಿತು ಮೂರು ಋಕ್ಕುಗಳಿಂದ ಹೋಮಮಾಡಬೇಕು. ಈ ಪ್ರಯೋಗವನ್ನೂ ರಾತ್ರಿವೇಳೆಯಲ್ಲಿ ನಡೆಸಬೇಕು. ಯಾವ ದ್ವೇಷಿಯನ್ನುದ್ದೇಶಿಸಿ ಈ ಪ್ರಯೋಗವನ್ನು ನಡೆಸಲಾಗುವುದೋ ಅವನು ಏಳುರಾತ್ರಿಯ ವರಿಗೂ ಸಹ ಬದುಕಿರುವುದಿಲ್ಲ.

ಉದ್ದಿಶ್ಯ ರಾಮ ಹೋಮೋಯಂ ಸಪ್ತರಾತ್ರಂ ನ ಜೀವಿತಿ ।
ದ್ವಾವಿಂಶಕಂ ಜಪನ್ ಸೂಕ್ತಂ ಆಧ್ಯಾತ್ಮಿಕಮನುತ್ತಮಂ ॥ ೫೭ ॥

ಪರ್ವಸು ಪ್ರಯತೋ ನಿತ್ಯಮಿಷ್ಟಾನ್ಕಾಮಾನುಪಾಶ್ನುತೇ ।
ಬೃಹಸ್ಪತಿಮಜಾಕ್ಷಂ ಚ ಸತಾರಂ ಬಭ್ರುಮೇವ ಚ ॥ ೫೮ ॥

ಪಂಚರ್ಚೇನ ಸ್ತುವನ್ನೇತಾನ್ಪಂಚಕಾಮಾನವಾಪ್ನುಯಾತ್ ।
ಕೃಣುಷ್ವೇತಿ ಜಪನ್ ಸೂಕ್ತಂ ಜುಹ್ವದಾಜ್ಯಂ ಸಮಾಹಿತಃ ॥ ೫೯ ॥

ಅರಾತೀನಾಂ ಹರೇತ್ಪ್ರಾಣಾನ್ ರಕ್ಷಾಂಸ್ಯಪಿ ಚ ನಾಶಯೇತ್ ।
ಉಪತಿಷ್ಠೇತ ಯೋ ವಹ್ನಿಂ ಪರೀತ್ಯ ಚ ದಿನೇ ದಿನೇ ॥ ೬೦ ॥

ತಂ ರಕ್ಷತಿ ಸ್ವಯಂ ವಹ್ನಿರ್ವಿಶ್ವತೋ ವಿಶ್ವತೋಮುಖಃ ।
ಕೋ ಅದ್ಯೇತಿ ಚ ಸೂಕ್ತೇನ ವಾಸಾಂಸಿ ಲಭತೇ ಪರಂ ॥ ೬೧ ॥

---

೫೭-೫೮. ಆಧ್ಯಾತ್ಮವಿಷಯಕವಾದ ಸರ್ವೋತ್ತಮವಾದ ಇಪ್ಪತ್ತೆರಡನೆಯ ಸೂಕ್ತವನ್ನು ಪರ್ವಕಾಲಗಳಲ್ಲಿ ಪರಿಶುದ್ಧನಾಗಿದ್ದು ಜಪಿಸುವವನು ನಿತ್ಯವೂ ತನ್ನ ಇಷ್ಟಾರ್ಥಗಳನ್ನು ಹೊಂದುತ್ತಾನೆ. ಬೃಹಸ್ಪತಿ, ಅಜಾಕ್ಷ, ಸತಾರ, ಬಭ್ರು ಈದೇವತೆಗಳನ್ನು ಪಂಚ ಸೂಕ್ತಗಳಿಂದ ಸ್ತೋತ್ರಮಾಡುವವನು ಐದು ವಿಧವಾದ ಕಾಮಗಳನ್ನೂ ಹೊಂದುತ್ತಾನೆ.

೫೯-೬೦. ಕೃಣುಷ್ವ ಎಂಬ ಸೂಕ್ತವನ್ನು ಜಪಿಸುತ್ತಾ ಯಾವನು ಜಿತೇಂದ್ರಿಯ ನಾಗಿದ್ದು ಆಜ್ಯಹೋಮವನ್ನು ಮಾಡುತ್ತಾನೆಯೋ ಅವನು ಶತ್ರುಗಳ ಪ್ರಾಣವನ್ನು ಹೋಗಲಾಡಿಸುತ್ತಾನೆ, ರಾಕ್ಷಸರನ್ನೂ ನಾಶಮಾಡುತ್ತಾನೆ. ಯಾವನು ಪ್ರದಕ್ಷಿಣಾದಿ ಗಳಿಂದ ಪ್ರತಿದಿನದಲ್ಲಿಯೂ ಅಗ್ನಿಯನ್ನು ಪೂಜಿಸುತ್ತಾನೆಯೋ ಅವನನ್ನು ಸರ್ವತೋ ಮುಖಿಯಾದ ಅಗ್ನಿದೇವನು ಎಲ್ಲಾ ಕಡೆಯಿಂದಲೂ ತಾನಾಗಿ ನಿಂತು ರಕ್ಷಿಸುತ್ತಾನೆ.

೬೧-೬೨. ಕೋಅದ್ಯ ಎಂಬ ಸೂಕ್ತದಿಂದ ಹೆಚ್ಚಾದ ವಸ್ತ್ರಸಮೃದ್ಧಿಯನ್ನು ಹೊಂದುತ್ತಾನೆ. ತಾಯಾ ಎಂಬ ವಾಮದೇವ ಸೂಕ್ತದಿಂದ ರಾತ್ರಿಯಲ್ಲಿ ಸ್ವಸ್ತ್ಯಯ

ಕಾಯೇತಿ ವಾಮದೇವೇನ ಕುರ್ಯಾತ್ಸ್ವಸ್ತ್ಯಯನಂ ನಿಶಿ ।
ಹಂಸಃ ಶುಚಿಷದಿತ್ಯೇತಚ್ಛುಚಿರೀಕ್ಷನ್ ದಿವಾಕರಂ　　॥ ೬೨ ॥

ಕೃಷಿಂ ಪ್ರಪದ್ಯಮಾನಸ್ತು ಸ್ಥಾಲೀಪಾಕಂ ಯಥಾವಿಧಿ ।
ಜುಹುಯಾತ್ಕ್ಷೇತ್ರಮಧ್ಯೇ ತು ಶುನಾವಾಹಸ್ತು ಪಂಚಭಿಃ　　॥ ೬೩ ॥

ಇಂದ್ರಾಯ ಚ ಮರುದ್ಭ್ಯಶ್ಚ ಪರ್ಜನ್ಯಾಯ ಭಗಾಯ ಚ ।
ಯಥಾಲಿಂಗಂ ತು ವಿಹರೇಲ್ಲಾಂಗಲಂ ತು ಕೃಷೀವಲಃ　　॥ ೬೪ ॥

ಪೂಷ್ಣೇ ಧಾನ್ಯಾಯ ಸೀತಾಯೈ ಶುನಾಸೀರಮಥೋತ್ತರಂ ।
ಗಂಧಮಾಲ್ಯೋಪಹಾರೈಶ್ಚ ಯಜೇದೇತಾಶ್ಚ ದೇವತಾಃ　　॥ ೬೫ ॥

ಪ್ರವಾಪಣೇ[1] ಪ್ರಲಪನೇ ಖಲಸೀತೋಪಹಾರಯೋಃ ।
ಅಮೋಘಂ ಕರ್ಮ ಭವತಿ ವರ್ಧತೇ ಸರ್ವದಾ ಕೃಷಿಃ　　॥ ೬೬ ॥

---

ವನ್ನು ಮಾಡಬೇಕು. ಹಂಸಃ ಶುಚಿಸತ್ ಎಂಬ ಮಂತ್ರದಿಂದ ಶುಚಿಯಾಗಿದ್ದು ಸೂರ್ಯನನ್ನು ನೋಡಬೇಕು. ಹಾಗೆ ನೋಡಿ ಕೃಷಿಮಾಡಲುಪಕ್ರಮಿಸಿ ಕ್ಷೇತ್ರದ ಮಧ್ಯದಲ್ಲಿ ಯಥಾವಿಧಿಯಾಗಿ ಶುನಾವಾಹಃ ಎಂಬ ಐದು ಮಂತ್ರಗಳಿಂದ ಹೋಮ ಮಾಡಿ ಸ್ಥಾಲೀಪಾಕವನ್ನು ಮಾಡಬೇಕು.

೬೪-೬೬. ಅಂತಹ ಸ್ಥಾಲೀಪಾಕದಲ್ಲಿ ಇಂದ್ರನನ್ನೂ, ಮರುತ್ತುಗಳನ್ನೂ, ಮೇಘವನ್ನೂ, ಭಗನೆಂಬ ದೇವತೆಯನ್ನೂ ಉದ್ದೇಶಿಸಿ ಹೋಮಮಾಡಬೇಕು. ವ್ಯವಸಾಯಗಾರನಾದವನು ಶಾಸ್ತ್ರವಿಹಿತರೀತಿಯಿಂದ ನೇಗಿಲನ್ನು ಭಾವಿಸಿ ಕೃಷಿ ಕರ್ಮವನ್ನು ನಡೆಸಬೇಕು. ಬಿತ್ತುವ ಕಾಲದಲ್ಲಿಯೂ, ಹರಗುವ ಕಾಲದಲ್ಲಿಯೂ, ಕಣವನ್ನು ಮಾಡುವ ಕಾಲದಲ್ಲಿಯೂ, ಉಳುಮೆಯ ಕಾಲದಲ್ಲಿಯೂ, ಧಾನ್ಯಸಂಗ್ರಹ ಕಾಲದಲ್ಲಿಯೂ ಸಹ ಪೂಷಾ ಎಂಬ ದೇವತೆಯನ್ನೂ, ಧಾನ್ಯವನ್ನೂ ಸೀತಾ ಎಂಬ ದೇವಿಯನ್ನೂ, ಇಂದ್ರನನ್ನೂ ಸಹ ಗಂಧಪುಷ್ಪನೈವೇದ್ಯಾದಿಗಳಿಂದ ಪೂಜಿಸಬೇಕು. ಹೀಗೆ ಪೂಜಿಸಿದಲ್ಲಿ ಆ ಕರ್ಮವು ಸಫಲವೇ ಆಗುತ್ತದೆ. ಯಾವಾಗಲೂ ಕೃಷಿಯು ಅಭಿವೃದ್ಧಿ ಹೊಂದುತ್ತಲೇ ಇರುತ್ತದೆ.

---

1 ಇಲ್ಲಿ ಪ್ರಲಿಖನೆ ಎಂದು ಪಾಠವಿರಬೇಕೆಂದು ತೋರುತ್ತದೆ.

ಕ್ಷೇತ್ರಸ್ಯಪತ್ಯೇ ತಕ್ಕ್ಷೇತ್ರಂ ಸೂರ್ಯದ್ಯೃಗ್ಭಿಂದತೇ ಭುವಂ ।
ಆಖೂತ್ಕರೇಷು ಚರಣೌ ಯಜೇದೇತೇನ ಮೂಷಿಕಾಂ ॥ ೬೭ ॥

ಚಿತ್ರಾ ಇಂದ್ರೇತಿ ಚ ಸ್ತುತ್ವಾ ಯೋನ್ನಾಸ್ಯ ವೃಷ್ಟಿಭಯಂ ಭವೇತ್ ।
ವಿಜ್ಯೇತಿಷ್ಯೇತಿ ಜ್ವಲಯೇದ್ಯತ್ರೇಚ್ಛೇ ಜ್ಞಾತವೇದಸಂ ॥ ೬೮ ॥

ಸಮುದ್ರಾದಿತಿ ಸೂಕ್ತೇನ ಕಾಮಾನಾಪ್ನೋತಿ ಪಾವಕಾನ್ ।
ವಿಶ್ವಾನಿ ಚ ಇತಿ ದ್ವಾಭ್ಯಾಂ ಋಗ್ಭ್ಯಾಂ ಯೋ ವಹ್ನಿಮರ್ಚತಿ ॥ ೬೯ ॥

ಸ ತರತ್ಯಾಪದಃ ಸರ್ವಾಃ ಯಶಃ ಪ್ರಾಪ್ನೋತಿ ಚಾಕ್ಷಯಂ ।
ಅಗ್ನೇ ತ್ವಮಿತಿ ಚಸ್ತುತ್ವಾ ಧನಮಾಪ್ನೋತಿ ವಾಂಛಿತಂ ॥ ೭೦ ॥

ಉರೋಷ್ಟ ಇತಿ ಸೂಕ್ತೇನ ವಿತ್ತಮಾಪ್ನೋತ್ಯಸಂಶಯಂ ।
ಪ್ರಜಾಕಾಮೋ ಜಪೇನ್ನಿತ್ಯಂ ವರುಣಾದೇವಸನ್ನಯಾ ॥ ೭೧ ॥

---

೬೭-೬೮. ಕ್ಷೇತ್ರಸ್ಯಪತ್ಯೇ ಇತ್ಯಾದಿ ಮಂತ್ರದಿಂದ ಸೂರ್ಯೋಪಾಸನೆ ಮಾಡಿದವನು ಭೂಮಿಯನ್ನು ಹೊಂದುತ್ತಾನೆ. ಆವನು ಆಖೂತ್ಕರೇಷು ಎಂಬ ಮಂತ್ರದಿಂದ ಮೂಷಿಕವನ್ನುದ್ದೇಶಿಸಿ ಯಾಗಮಾಡಬೇಕು. ಚಿತ್ರಾ ಇಂದ್ರ ಎಂಬ ಸೂಕ್ತದಿಂದ ಸ್ತೋತ್ರಮಾಡಬೇಕು. ಹೀಗೆ ಮಾಡಿದವನಿಗೆ ಕೃಷಿಯಲ್ಲಿ ವೃಷ್ಟಿಭಯವು ಉಂಟಾಗುವುದಿಲ್ಲ. ವಿಜ್ಯೇತಿಷ್ಯಾ ಎಂಬ ಮಂತ್ರದಿಂದ ತನಗೆ ತೋರಿಬಂದ ಭೂಮಿಯಲ್ಲಿ ಅಗ್ನಿಯನ್ನು ಜ್ವಲಿಸುವಂತೆ ಮಾಡಬೇಕು.

೬೯-೭೦. ಸಮುದ್ರಾತ್ ಎಂಬ ಸೂಕ್ತದಿಂದ ಅಗ್ನಿಯನ್ನು ಪೂಜಿಸಿದವನು ಆ ಅಗ್ನಿಯಿಂದ ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ. ವಿಶ್ವಾನಿ ಎಂಬ ಎರಡು ಋಕ್ಕುಗಳಿಂದ ಯಾವನು ಅಗ್ನಿಯನ್ನು ಪೂಜಿಸುತ್ತಾನೆಯೋ ಅವನು ಎಲ್ಲಾ ವಿಧವಾದ ವಿಪತ್ತುಗಳನ್ನೂ ಹೋಗಲಾಡಿಸಿಕೊಂಡು ಶಾಶ್ವತವಾದ ಯಶಸ್ಸನ್ನೂ ಹೊಂದುತ್ತಾನೆ. ಅಗ್ನೇತ್ವಂ ಎಂಬ ಋಕ್ಕಿನಿಂದ ಅಗ್ನಿಯನ್ನು ಸ್ತೋತ್ರಮಾಡಿದವನು ತಾನು ಇಷ್ಟಪಟ್ಟ ಧನವನ್ನು ಹೊಂದುತ್ತಾನೆ.

೭೧-೭೨. ಉರೋಷ್ಟ ಎಂಬ ಸೂಕ್ತವನ್ನು ಜಪಿಸುವವನು ನಿಸ್ಸಂಶಯವಾಗಿ ಧನವನ್ನು ಹೊಂದಿಯೇ ಹೊಂದುತ್ತಾನೆ. ಪ್ರಜಾಕಾಮನೆಯುಳ್ಳವನು ವರುಣಾದೇವಸನ್ನಯಾ ಎಂಬ ಮಂತ್ರವನ್ನು ನಿತ್ಯವೂ ಜಪಿಸಬೇಕು. ಸ್ವತ್ಯಾತ್ರೇಯಂ

ಸ್ವಸ್ತ್ಯಾತ್ರೇಯಂ ಜಪೇತ್ಪ್ರಾತಃ ಸದಾಸ್ವಸ್ತ್ಯಯನಂ ಜಪೇತ್ ।
ಸ್ವಸ್ತಿ ಪಂಥಾಮಿತಿ ಪ್ರೋದ್ಯ ಸ್ವಸ್ತಿಮಾನ್ ವ್ರಜತೇಽಧ್ವನಿ ॥ ೭೨ ॥

ವಿಜಹ್ರೇಷುರ್ವನಸ್ಯಾಂತೇ ಶತ್ರೂಣಾಂ ಬಂಧನಂ ಭವೇತ್ ।
ಸ್ತ್ರೀಯೋಗರ್ಭಪ್ರಮೂಢಾಯಾ ಗರ್ಭಮೋಕ್ಷಣಮುತ್ತಮಂ ॥ ೭೩ ॥

ಅವಚ್ಛಾದಿತಿ ಸೂಕ್ತೇನ ವೃಷ್ಟಿಕಾಮಃ ಪ್ರಯೋಜಯೇತ್ ।
ನಿರಾಹಾರಃ ಕ್ಲಿನ್ನವಾಸಾ ನ ಚಿರೇಣ ಪ್ರವರ್ಷತಿ ॥ ೭೪ ॥

ಶ್ರಿಯಃ ಪಂಚದಶರ್ಚಂ ತು ಜಪನ್ ಜುಹುಯಾತ್ ಘೃತೇನ ವಾ ।
ಉಪೈತು ಮಾಂ ದೇವಸಖ ಇತಿ ಸರ್ವೌಷಧೀಜಲೈಃ ॥ ೭೫ ॥

ಸದಾ ಸ್ನಾತಃ ಶ್ರಿಯಂ ದೀಪ್ತಾಂ ಕುಲೇ ಪ್ರಾಪ್ನೋತ್ಯಸಂಶಯಂ ।
ಮನಸಃ ಕಾಮ ಇತ್ಯೇತಾಂ ಪಶುಕಾಮೋ ನರೋ ಜಪೇತ್ ॥ ೭೬ ॥

---

ಎಂಬ ಮಂತ್ರವನ್ನು ಪ್ರಾತಃಕಾಲದಲ್ಲಿ ಜಪಿಸಬೇಕು. ಸ್ವಸ್ತ್ಯಯನ ಋಕ್ಕನ್ನು ಯಾವಾಗಲೂ ಜಪಿಸಬೇಕು. ಸ್ವಸ್ತಿಪಂಥಾಂ ಎಂಬ ಋಕ್ಕನ್ನು ಉಚ್ಚರಿಸುವವನು ಮಾರ್ಗದಲ್ಲಿ ತಾನು ಕ್ಷೇಮದಿಂದಿರುತ್ತಾನೆ.

೭೩-೭೪. ಈ ಮಂತ್ರದ ಜಪದಿಂದ ಕಾಡಿನಲ್ಲಿ ತಾನು ವಿಹರಿಸುತ್ತಿದ್ದರೂ ಶತ್ರುಗಳು ತನ್ನ ಬಂಧನಕ್ಕೆ ಬಂದು ಬೀಳುತ್ತಾರೆ. ಮತ್ತು ಗರ್ಭದ ನೋವಿನಿಂದ ದುಃಖಪಡುತ್ತಿರುವ ಸ್ತ್ರೀಯೂ ಸಹ ಜಾಗ್ರತೆಯಾಗಿ ಪ್ರಸವವನ್ನು ಹೊಂದುತ್ತಾಳೆ. ಮಳೆಯನ್ನು ಅಪೇಕ್ಷಿಸುವವನು ನಿರಾಹಾರನಾಗಿದ್ದು ನೀರಿನಿಂದ ತೊಯ್ದ ವಸ್ತ್ರವನ್ನುಟ್ಟು ಅವಚ್ಛಾತ್ ಎಂಬ ಸೂಕ್ತವನ್ನು ಪ್ರಯೋಗಿಸಿದುದೇ ಆದರೆ ಜಾಗ್ರತೆಯಾಗಿಯೇ ಮಳೆಯುಂಟಾಗುತ್ತದೆ.

೭೫-೭೬. ಶ್ರೀ ಸೂಕ್ತದ ಹದಿನೈದು ಋಕ್ಕುಗಳನ್ನೂ ಜಪಿಸುತ್ತಾ ಇರಬೇಕು. ಅಥವಾ ಆ ಋಕ್ಕುಗಳಿಂದ ಆಜ್ಯಹೋಮವನ್ನಾದರೂ ಮಾಡುತ್ತಿರಬೇಕು. ಉಪೈತುಮಾಂ ದೇವಸಖ ಎಂಬ ಋಕ್ಕಿನಿಂದ ಸರ್ವೌಷಧಿಗಳ ಜಲದಿಂದ ನಿತ್ಯವೂ ಸ್ನಾನಮಾಡುವವನು ತನ್ನ ವಂಶಕ್ಕೆಲ್ಲಾ ವ್ಯಾಪಿಸುವಂತಹ ಉಜ್ವಲವಾದ ಸಂಪತ್ತನ್ನು ಹೊಂದಿಯೇ ಹೊಂದುತ್ತಾನೆ ಪಶುಸಮೃದ್ಧಿಯನ್ನು ಅಪೇಕ್ಷಿಸುವವನು ಮನಸಃ ಕಾಮ ಎಂಬ ಋಕ್ಕನ್ನು ಜಪಿಸಬೇಕು.

ಕರ್ದಮೋನೇತಿ ಚ ಸ್ನಾಯಾತ್ಪ್ರಜಾಕಾಮಃ ಶುಚಿವ್ರತಃ ।
ಅಶ್ವಪೂರ್ವಾಮಿತಿ ಸ್ನಾಯಾದ್ರಾಜ್ಯಕಾಮಸ್ತು ಮಾನವಃ ॥ ೭೭ ॥

ರೋಹಿತೇ ಚರ್ಮಣಿ ಸ್ನಾಯಾದ್ಬ್ರಾಹ್ಮಣಸ್ತು ಯಥಾವಿಧಿ ।
ರಾಜಾ ಚರ್ಮಣಿ ವೈಯಾಘ್ರೇ ಛಾಗೇ ವೈಶ್ಯಸ್ತಥೈವ ಚ ॥ ೭೮ ॥

ದಶಸಾಹಸ್ರಿಕೋ ಹೋಮಃ ಪ್ರತ್ಯೇಕಂ ಪರಿಕೀರ್ತಿತಃ ।
ಅಪ್ಸ್ವಥಾ ಜುಹುಯಾದ್ರಾಮ ಪದ್ಮಾನ್ಯಯುತಶೋಽಗ್ನಿಷು ॥ ೭೯ ॥

ಇಷ್ವಾನ ಇತ್ಯೃಚಾ ವಹ್ನಿಂ ಸ್ತುವನ್ ಶತ್ರೂನ್ ವಿನಾಶಯೇತ್ ।
ಆಚಾರ ಇತಿ ಸೂಕ್ತೇನ ಗೋಷ್ಠೇ ಗಾಂ ಲೋಕಮಾತರಂ ॥ ೮೦ ॥

---

೭೭-೭೮. ಪ್ರಜಾಸಮೃದ್ಧಿಯನ್ನು ಅಪೇಕ್ಷಿಸುವವನು ಶುಚಿಯಾಗಿದ್ದು ಕರ್ದಮೇನ ಪ್ರಜಾ ಎಂಬ ಋಕ್ಕಿನಿಂದ ಸ್ನಾನಮಾಡಬೇಕು. ರಾಜ್ಯಾಪೇಕ್ಷೆಯುಳ್ಳ ಪುರುಷನು ಅಶ್ವಪೂರ್ವಾ ಎಂಬ ಋಕ್ಕಿನಿಂದ ಸ್ನಾನಮಾಡಬೇಕು ಬ್ರಾಹ್ಮಣನಾದವನು ಯಥಾವಿಧಿಯಾದ ಈ ಸ್ನಾನದಲ್ಲಿ ಕೃಷ್ಣಾಜಿನವನ್ನು ಉಪಯೋಗಿಸಬೇಕು. ರಾಜನಾಗಿರುವ ಕ್ಷತ್ರಿಯನು ಹುಲಿಯ ಚರ್ಮವನ್ನು ಉಪಯೋಗಿಸಬೇಕು. ವೇಶ್ಯನು ಆಡಿನ ಚರ್ಮವನ್ನು ಉಪಯೋಗಿಸಬೇಕು.

೭೯-೮೦. ಹೀಗೆ ಸ್ನಾನಮಾಡುವವರು ಹತ್ತು ಸಾವಿರ ಹೋಮವನ್ನು ಪ್ರತ್ಯೇಕವಾಗಿ ಮಾಡಬೇಕೆಂದು ಹೇಳಲ್ಪಟ್ಟಿದೆ. ಅಥವಾ ಜಲದಲ್ಲಿಯಾಗಲಿ ಅಗ್ನಿಯಲ್ಲಿಯಾಗಲಿ ಹತ್ತು ಸಾವಿರ ಪದ್ಮಗಳನ್ನು ಹೋಮಮಾಡಬೇಕು. ಇಷ್ವಾನ ಎಂಬ ಋಕ್ಕಿನಿಂದ ಅಗ್ನಿಯನ್ನು ಸ್ತೋತ್ರವನ್ನು ಮಾಡುವವನು ಶತ್ರುಗಳನ್ನು ನಾಶಮಾಡುತ್ತಾನೆ. ಯಾವನು ಅಕ್ಷಯವಾದ ಗೋಸಂಪತ್ತನ್ನು ಯಾವಾಗಲೂ ಅಪೇಕ್ಷಿಸುತ್ತಾನೆಯೋ ಅವನು ಆಚಾರಃ ಎಂಬ ಸೂಕ್ತದಿಂದ ಲೋಕಮಾತೆಯಾದ ಗೋವನ್ನು ಪೂಜಿಸಬೇಕು. ಮತ್ತು ಅದನ್ನು ಅನುವರ್ತಿಸಬೇಕು. ಹೊರಕ್ಕೆ ಹೊರಡುವಾಗ ಅನುಸರಿಸಿ ತಾನೂ ಹೋಗಿ ಉಪಚರಿಸಬೇಕೆಂದು ತಾತ್ಪರ್ಯ.

ಉಪತಿಷ್ಠೇದ್ವ್ಯಜೇಚ್ಚೈವ ಯ ಇಚ್ಛೇದ್ಗಾಃ ಸದಾಕ್ಷಯಾಃ ।
ವಾಕ್ಸಿದ್ಧಿಂ ತು ಸ್ತುವನ್ ಶಕ್ರಂ ಮಹದ್ಧನಮವಾಪ್ನುಯಾತ್ ॥ ೮೧ ॥

ಉಪೈತೇತಿ ಸ್ತುತೀ ರಾಜ್ಞೋ ದುಂದುಭೀನಭಿಮಂತ್ರಯೇತ್ ।
ತೇಜೋ ಬಲಂ ಚ ಪ್ರಾಪ್ನೋತಿ ಶತ್ರೂಂಶ್ಚೈವ ನಿಯಚ್ಛತಿ ॥ ೮೨ ॥

ತೃಣಪಾಣಿರ್ಜಪೇತ್ಸೂಕ್ತಂ ರಕ್ಷೋಘ್ನಂ ದಸ್ಯುಭಿರ್ವೃತಃ ।
ಯೇ ಕೇಚ ಮೇತ್ಯೃಚಂ ಜಪ್ತ್ವಾ ದೀರ್ಘಮಾಯುರವಾಪ್ನುಯಾತ್ ॥

ಯಸ್ಯ ನಷ್ಟಂ ಭವೇದ್ದ್ರವ್ಯಂ ಸಂಪೂಜ್ಯ ಸ ಜಪೇನ್ನಿಶಿ ।
ಸೌಮಾರೌದ್ರಂ ಜಪನ್ ಸೂಕ್ತಂ ಸರ್ವಪಾಪೈಃ ಪ್ರಮುಚ್ಯತೇ ॥ ೮೪ ॥

ಜೀಮೂತಸೂಕ್ತೇನ ತಥಾ ಸೇನಾಂಗಾನಭಿಮಂತ್ರಯೇತ್ ।
ಯಥಾಲಿಂಗಂ ತಥಾ ರಾಜಾ ವಿನಿಹಂತಿ ರಣೇ ರಿಪೂನ್ ॥ ೮೫ ॥

---

೮೧-೮೨. ವಾಕ್ಸಿದ್ಧಿಂ ಎಂಬ ಮಂತ್ರದಿಂದ ಇಂದ್ರನನ್ನು ಸ್ತೋತ್ರಮಾಡುವವನು ಹೆಚ್ಚಾದ ಐಶ್ವರ್ಯವನ್ನು ಹೊಂದುತ್ತಾನೆ. ಉಪೈೀತಿ ಎಂಬ ಸ್ತುತಿಗಳಿಂದ ರಾಜನ ರಣಭೇರಿಯನ್ನು ಅಭಿಮಂತ್ರಿಸಬೇಕು. ಹೀಗೆ ಜಪಿಸಿದವನು ಬಹಳ ಬಲಿಷ್ಠವಾದ ತೇಜಸ್ಸನ್ನು ಹೊಂದಿ ಆ ಮೂಲಕ ಶತ್ರುಗಳನ್ನು ನಿಗ್ರಹಿಸುತ್ತಾನೆ. ಕಳ್ಳರಿಂದ ಆವರಿಸಲ್ಪಟ್ಟು ಉಪದ್ರವ ಹೊಂದುತ್ತಿರುವವನುಹುಲ್ಲನ್ನು ಕೈಯಲ್ಲಿ ಹಿಡಿದುಕೊಂಡು ರಕ್ಷೋಘ್ನಸೂಕ್ತವನ್ನು ಜಪಿಸಬೇಕು.

೮೩-೮೫. ಯೇಕೇಚಮೇ ಎಂಬ ಋಕ್ಕನ್ನು ಜಪಿಸುವವನು ದೀರ್ಘಕಾಲದ ಆಯುಸ್ಸನ್ನು ಹೊಂದುತ್ತಾನೆ. ಯಾವನಿಗೆ ದ್ರವ್ಯನಾಶ ಉಂಟಾಗುವುದೋ ಅವನೂ ಈ ಋಕ್ಕನ್ನು ದೇವತಾಪೂಜೆಯನ್ನು ಮಾಡಿ ರಾತ್ರಿಯಕಾಲದಲ್ಲಿ ಜಪಿಸಬೇಕು. ಸೌಮಾರೌದ್ರವೆಂಬ ಸೂಕ್ತವನ್ನು ಜಪಿಸುವವನು ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಜೀಮೂತಸೂಕ್ತದಿಂದ ಸೇನಾ ಸಾಮಗ್ರಿಗಳನ್ನು ಅಭಿಮಂತ್ರಿಸಬೇಕು. ಮಂತ್ರಲಿಂಗಕ್ಕೆ ಅನುಗುಣವಾಗಿ ಅಭಿಮಂತ್ರಿಸುವ ರಾಜನು ಯುದ್ಧದಲ್ಲಿ ಶತ್ರುಗಳನ್ನು ನಾಶಮಾಡಿ ವಿಜಯವನ್ನು ಗಳಿಸುತ್ತಾನೆ.

ಅಗ್ನಿಂ ನರೇತಿ ಸೂಕ್ತೇನ ಸ್ತುವನ್ನಗ್ನಿಂ ಸುಖೀ ಭವೇತ್ |
ಪ್ರಾಣಪೇತಿ ತ್ರಿಭಿಃ ಸೂಕ್ತೈಃ ಧನಮಾಪ್ನೋತಿ ಚಾಕ್ಷಯಂ || ೮೬ ||

ಅಭೀತಯಃ ಪ್ರಗಾಥೇನ ಸ್ತುತ್ವಾ ಶಕ್ರಂ ಧನೀ ಭವೇತ್ |
ಶಂವತೀಃ ಶನ್ನ ಇಂದ್ರಾಗ್ನೀ ಜಪೇದ್ವ್ಯಾಧಿವಿನಾಶನಂ || ೮೭ ||

ಸಮುದ್ರಜ್ಯೇಷ್ಠೇತಿ ಜಪೇತ್ಸೂಕ್ತಮೇತಜ್ಜಯಾವಹಂ |
ವಾಸ್ತೋಷ್ಪತೇಪ್ರತೀತ್ಯೇತತ್ಸೂಕ್ತಂ ವಾತೋಷ್ಪತೇ ಜಪೇತ್ || ೮೮ ||

ಅನೀವಹೇತಿ ಸೂಕ್ತೇನ ಭೂತಾನ್ನಿಃಸ್ವಾಪಯೇನ್ನಿಶಿ |
ಸಂಬಾಧೇ ವಿಷಮೇ ದುರ್ಗೇ ಬಂಧೇ ವಾ ನಿಗಡೈಃ ಕ್ವಚಿತ್ || ೮೯ ||

ಪಲಾಯಿತ್ವಾ ಗೃಹೀತೋ ವಾ ಸೂಕ್ತಮೇತತ್ತಥಾ ಜಪೇತ್ |
ತ್ರಿರಾತ್ರಂ ನಿಯತೋಽಪೋಷ್ಯ ಶ್ರಪಯೇತ್ಪಾಯಸಂ ಚರುಂ || ೯೦ ||

---

೮೬-೮೭. ಅಗ್ನಿಂ ನರ ಎಂಬ ಸೂಕ್ತದಿಂದ ಅಗ್ನಿಯನ್ನು ಸ್ತೋತ್ರಮಾಡುವವನು ಸುಖಿಯಾಗಿ ಬದಕುತ್ತಾನೆ. ಪ್ರಾಣಪಾ ಎಂಬ ಮೂರು ಸೂಕ್ತಗಳಿಂದ ಅಗ್ನಿಯನ್ನು ಸ್ತೋತ್ರಮಾಡುವವನು ಅಕ್ಷಯವಾದ ಧನಸಮೃದ್ಧಿಯನ್ನು ಹೊಂದುತ್ತಾನೆ. ಅಭೀತಯಃ ಪ್ರಗಾಥೇನ ಎಂಬ ಸೂಕ್ತದಿಂದ ಇಂದ್ರನನ್ನು ಸ್ತೋತ್ರಮಾಡಿದವನು ಬಹಳ ಮಟ್ಟಿಗೂ ಧನವಂತನಾಗುತ್ತಾನೆ. ಶಂವತೀಃ ಶನ್ನ ಇಂದ್ರಾಗ್ನೀ ಎಂಬ ಋಕ್ಕನ್ನು ಜಪಿಸುವವನು ವ್ಯಾಧಿನಿವೃತ್ತಿಯನ್ನು ಹೊಂದುತ್ತಾನೆ.

೮೮-೮೯. ಸಮುದ್ರಜ್ಯೇಷ್ಠಾ ಎಂಬ ಸೂಕ್ತದ ಜಪವು ಜಯಪ್ರದವಾದುದು. ವಾತೋಷ್ಪತಿಯಿಂದ ಅಭಿವ್ಯಕ್ತಗೊಳಿಸಲ್ಪಟ್ಟ ವಾಸ್ತೋಷ್ಪತೇಪ್ರತಿ ಎಂಬ ಸೂಕ್ತವನ್ನೂ ಜಪಿಸಬೇಕು. ಅನೀವಹ ಎಂಬ ಸೂಕ್ತವನ್ನು ಜಪಿಸುವವನು ರಾತ್ರಿಯಲ್ಲಿ ಭೂತಗಳನ್ನು ಬಹಳ ಮಟ್ಟಿಗೂ ಅಡಗಿಸುತ್ತಾನೆ. ಹಾಗೆಯೇ ಇಕ್ಕಟ್ಟಾದ ಪ್ರದೇಶದಲ್ಲಿಯೂ, ದುಃಖಪ್ರದವಾದ ಸ್ಥಳದಲ್ಲಿಯೂ, ದುರ್ಗಭೂಮಿಗಳಲ್ಲಿಯೂ, ಸಿಕ್ಕಿ ಬಿದ್ದಿರುವವನೂ ಮತ್ತು ಸಂಕೋಲೆಯಿಂದ ಕಟ್ಟಲ್ಪಟ್ಟಿರುವವನೂ ಓಡಿ ಹೋಗುವಾಗ ಮತ್ತೊಬ್ಬನಿಂದ ಹಿಡಿಯಲ್ಪಟ್ಟವನೂ ಸಹ ತನ್ನ ದುಃಖಶಾಂತಿಗಾಗಿ ಈ ಸೂಕ್ತವನ್ನೇ ಜಪಿಸಬೇಕು.

೯೦-೯೧. ಮೂರುರಾತ್ರಿ ನಿಯಮದೊಡನೆ ಉಪವಾಸಮಾಡಿ ಪಾಯಸರೂಪವಾದ ಚರುದ್ರವ್ಯವನ್ನು ಪಾಕಮಾಡಬೇಕು. ಆ ಚರುವಿನಿಂದ ಒಂದುಕೋಟಿ

**ತೇನಾಯುತಶತಂ ಪೂರ್ಣಂ ಜುಹುಯಾತ್ತ್ರ್ಯಂಬಕೇತ್ಯೃಚಾ ।
ಸಮುದ್ದಿಶ್ಯ ಮಹಾದೇವಂ ಜೀವೇದಬ್ದಶತಂ ಸುಖೀ ॥ ೯೧ ॥**

**ತಚ್ಚಕ್ಷುರಿತ್ಯೃಚಾ ಸ್ನಾತಃ ಉಪತಿಷ್ಠೇದ್ದಿವಾಕರಂ ।
ಉದ್ಯಂತಂ ಮಧ್ಯಮಂ ಚೈವ ದೀರ್ಘಮಾಯುರ್ಜಿಜೀವಿಷುಃ ॥ ೯೨ ॥**

**ವೃಷಾ ಇತ್ಯುಪತಿಷ್ಠೇತ ಯಃ ಪ್ರಾತಃ ಪ್ರಯತಃ ಶುಚಿಃ ।
ಪ್ರಾಪ್ನುಯಾತ್ಸಹಿರಣ್ಯಾದಿ ನಾನಾರೂಪಧರಂ ಬಹು ॥ ೯೩ ॥**

**ಧ್ರುವಂ ಸಂಧ್ಯಾಸು ಕ್ಷಿತಿಷು ಜಪನ್ ಬದ್ಧಃ ಪ್ರಮುಚ್ಯತೇ ।
ಇದಮಾಪಃಪ್ರವಹತ ಯತ್ಕಿಂಚಿದ್ದುರಿತಂ ಪುನಃ ॥ ೯೪ ॥**

**ಅಪಃ ಪ್ರವಿಶ್ಯ ತು ಜಪನ್ ಸರ್ವಪಾಪೈಃ ಪ್ರಮುಚ್ಯತೇ ।
ಸೂಕ್ತಾಭ್ಯಾಂ ಪರ ಏತಾಭ್ಯಾಂ ಹುತಾಭ್ಯಾಂ ಭೂತಿಮಾಪ್ನುಯಾತ್ ॥೯೫॥**

---

ಹೋಮಗಳನ್ನು ತ್ರ್ಯಂಬಕ ಎಂಬ ಋಕ್ಕಿನಿಂದ ಮಹಾದೇವನನ್ನು ಉದ್ದೇಶಿಸಿ ಮಾಡಬೇಕು. ಹೀಗೆ ಮಾಡಿದವನು ನೂರು ವರ್ಷಗಳವರಿಗೂ ಸುಖಿಯಾಗಿ ಜೀವಿಸುತ್ತಾನೆ. ದೀರ್ಘವಾದ ಆಯುಸ್ಸು ಹೊಂದಿ ಬದುಕಬೇಕೆಂಬ ಇಚ್ಛೆಯುಳ್ಳವನು ತಚ್ಚಕ್ಷುಃ ಎಂಬ ಋಕ್ಕಿನಿಂದ ಸ್ನಾನಮಾಡಿ ಉದಯಹೊಂದುತ್ತಿರುವ ಮತ್ತು ಮಧ್ಯಕಾಲದಲ್ಲಿರುವ ಸೂರ್ಯನನ್ನು ಪೂಜಿಸಬೇಕು.

೯೩-೯೪. ಯಾವನು ಪ್ರಾತಃಕಾಲದಲ್ಲಿ ಶುಚಿಯಾಗಿದ್ದು ವೃಷಾ ಎಂಬ ಋಕ್ಕಿನಿಂದ ಸೂರ್ಯನನ್ನು ಸ್ತುತಿಸುತ್ತಾನೆಯೋ ಅವನು ಹಿರಣ್ಯವೇ ಮೊದಲಾದ ನಾನಾ ರೂಪವಾದ ಧನವನ್ನು ಹೊಂದುತ್ತಾನೆ. ಬಂಧದಲ್ಲಿ ಸಿಕ್ಕಿರುವವನು ಸಂಧ್ಯಾ ಕಾಲದಲ್ಲಿ ಭೂಮಿಯ ಮೇಲೆ ಕುಳಿತು ಧ್ರುವಸೂಕ್ತವನ್ನು ಜಪಿಸಿದಲ್ಲಿ ಬಂಧ ವಿಮೋಚನೆ ಹೊಂದುತ್ತಾನೆ. ಇದಮಾಪಃ ಪ್ರವಹತ ಎಂಬ ಋಕ್ಕನ್ನು ಜಪಿಸುವವನು ಅಲ್ಪಸ್ವಲ್ಪವಾದ ಪಾಪವನ್ನೂ ಸಹ ನಾಶಪಡಿಸಿಕೊಳ್ಳುತ್ತಾನೆ.

೯೫-೯೬. ನೀರಿನಲ್ಲಿ ಪ್ರವೇಶಿಸಿ ಈ ಸೂಕ್ತವನ್ನು ಜಪಿಸುವವನು ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಕೊನೆಯಲ್ಲಿರುವ ಈ ಎರಡು ಸೂಕ್ತ ಗಳಿಂದ ಹೋಮಮಾಡಿದಲ್ಲಿ ಹೆಚ್ಚಾದ ಐಶ್ವರ್ಯವನ್ನು ಹೊಂದುತ್ತಾನೆ. ಈ ತಿಸ್ರಃ

ಸೂಕ್ತಾಭ್ಯಾಂ ತಿಸ್ರ ಏತಾಭ್ಯಾಂ ಅಸ್ಯದಲ್ಪೋದಕಸ್ಥಿತಃ ।
ಉಪತಿಷ್ಠನ್ ರವಿಂ ದೇವಂ ಪಂಚರಾತ್ರೇ ಗತೇ ನರಃ ॥ ೯೬ ॥

ಅನಶ್ನನ್ ಭಾರ್ಗವಶ್ರೇಷ್ಠ ಮಹದ್ಧರ್ಷಮವಾಪ್ನುಯಾತ್ ।
ಇಂದಾಸೋಮೇತಿ ಸೂಕ್ತಂ ತು ಕಥಿತಂ ಶತ್ರುನಾಶನಂ ॥ ೯೭ ॥

ಯಸ್ಯ ಲುಪ್ಯೇದ್ವ್ರತಂ ಮೋಹಾದ್ವ್ರಾತ್ಯೈರ್ವಾ ಸಂಸೃಜೇತ್ಸಹ ।
ಉಪೋಷ್ಯಾಜ್ಯಸ್ಯ ಜುಹುಯಾತ್ತ್ವಮಗ್ನೆವ್ರತಪಾ ಇತಿ ॥ ೯೮ ॥

ಆದಿತ್ಯದೃಕ್ಪ್ರಮಾದ್ರಾಜಂ ಜಪ್ತ್ವಾ ವಾದೀ ಜಯೀ ಭವೇತ್ ।
ಸಮಗ್ನಿರಗ್ನಿಭಿಶ್ಚೇತಿ ಪ್ರಪದ್ಯೇದ್ವಾಯುಭಾಸ್ಕರೌ ॥ ೯೯ ॥

ಅಗ್ನಿಂ ಪ್ರಥಮತಃ ಸ್ತುತ್ವಾ ಮಹತ್ಕಷ್ಟಾತ್ಪ್ರಮುಚ್ಯತೇ ।
ನಹೀತಿ ಚ ಚತುಷ್ಕೇಣ ಮುಚ್ಯತೇ ಮಹತೋ ಭಯಾತ್ ॥ ೧೦೦ ॥

---

ಎಂಬ ಎರಡು ಸೂಕ್ತಗಳಿಂದ ಸ್ವಲ್ಪವಾಗಿ ನೀರಿರುವ ಜಲಪ್ರದೇಶದಲ್ಲಿ ಕುಳಿತು ಪ್ರಭುವಾದ ಸೂರ್ಯನನ್ನು ಸ್ತೋತ್ರಮಾಡಿದುದೇ ಆದರೆ ಉಪವಾಸವ್ರತದಿಂದ ಐದುರಾತ್ರಿ ಸೇವಿಸಿದುದೇ ಆದರೆ ಅಂತಹವನು ಹೆಚ್ಚಾದ ಸಂತೋಷಕ್ಕೆ ಭಾಗಿಯಾಗುತ್ತಾನೆ.

೯೭-೯೮. ಇಂದ್ರಾಸೋಮಾ ಎಂಬ ಸೂಕ್ತವು ಶತ್ರುನಾಶಕವೆಂದು ಹೇಳಲ್ಪಟ್ಟಿದೆ. ಯಾವನು ಅಜ್ಞಾನದಿಂದಲಾಗಲಿ ವ್ರಾತ್ಯರ ಸಂಸರ್ಗದಿಂದಾಗಲಿ ವ್ರತಲೋಪವನ್ನು ಹೊಂದುತ್ತಾನೆಯೋ ಅವನು ಉಪವಾಸಮಾಡಿ ತ್ವಮಗ್ನೇ ವ್ರತಪಾ ಎಂಬ ಋಕ್ಕಿನಿಂದ ಆಜ್ಯಹೋಮವನ್ನು ಮಾಡಬೇಕು. ಸೂರ್ಯನ ಎದುರಿಗೆ ನಿಂತು ಅವನನ್ನೇ ದೃಷ್ಟಿಸುತ್ತಾ ಪ್ರಮಾದ್ರಾಜವೆಂಬ ಸೂಕ್ತವನ್ನು ಜಪಿಸಿದಲ್ಲಿ ವಾದಿಯು ವಾದದಲ್ಲಿ ಜಯಶೀಲನಾಗುತ್ತಾನೆ.

೯೯-೧೦೦. ಸಮಗ್ನಿರಗ್ನಿಭಿಶ್ಚ ಎಂಬ ಋಕ್ಕುಗಳಿಂದ ವಾಯುವನ್ನೂ ಸೂರ್ಯನನ್ನೂ ಸ್ತುತಿಸಿ ಶರಣಾಗತನಾಗಬೇಕು. ಹೀಗೆ ಮಾಡುವವನು ಮೊದಲು ಅಗ್ನಿಯನ್ನು ಸ್ತೋತ್ರಮಾಡಿದಲ್ಲಿ ಮಹಾಕಷ್ಟದಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ನಹೀತಿ ನಾಲ್ಕು ಸೂಕ್ತಗಳಿಂದ ಮಹಾಭಯ ಹೊಂದಿದ್ದವನೂ ಸಹ ಆ ಭಯದಿಂದ ಬಿಡುಗಡೆ ಹೊಂದುತ್ತಾನೆ. ಯ ಇತಿ ಎಂಬ ಋಕ್ಕನ್ನು ಜಪಿಸುವವನು ಸಕಲ ಮನೋರಥಗಳನ್ನೂ ಹೊಂದುತ್ತಾನೆ.

ಋಚಂ ಜಪ್ತ್ವಾ ಯ ಇತ್ಯೇತಾಂ ಸರ್ವಾನ್ ಕಾಮಾನವಾಪ್ನುಯಾತ್ ।
ಪ್ರಾಗ್ಭೋಜನಮಿದಂ ಬ್ರಹ್ಮ ಮಾನವಾನಾಂ ಮಹರ್ಷಿಣಾಂ ॥ ೧೦೧ ॥

ಪೂರ್ವಾಹ್ಣೇ ಜಪತೋ ನಿತ್ಯಂ ತ್ವರ್ಥಸಿದ್ಧಿಃ ಪರಾಭವೇತ್ ।
ಅಗ್ನಿನೇತ್ಯಾಶ್ವಿನಂ ಸೂಕ್ತಂ ಮೃಜಾಕರಮುದಾಹೃತಂ ॥ ೧೦೨ ॥

ಸಮಿಧೇತಿ ಜುಹೋತ್ಯಗ್ನೌ ಪ್ರಾಪ್ನುಯಾತ್ಕೀರ್ತಿಮುತ್ತಮಾಂ ।
ದ್ವಿಚತ್ವಾರಿಂಶಕಂ ಚೈಂದ್ರಂ ಜಪ್ತ್ವಾ ನಾಶಯತೇ ರಿಪೂನ್ ॥ ೧೦೩ ॥

ನಾಶಂ ಮಹೀತಿ ಜಪ್ತ್ವಾ ಚ ಪ್ರಾಪ್ನೋತ್ಯಾರೋಗ್ಯಮೇವ ಚ ।
ದುಃಸ್ವಪ್ನಘ್ನಾಃ ಪರಾ ಜಪ್ಯಾ ನರಃ ಪಾಪೈಃ ಪ್ರಮುಚ್ಯತೇ ॥ ೧೦೪ ॥

ಶನ್ನೋ ಭವೇತಿ ದ್ವಾಭ್ಯಾಂ ತು ಭುಕ್ತ್ವಾನ್ನಂ ಪ್ರಯತಃ ಶುಚಿಃ ।
ಹೃದಯಂ ಪಾಣಿನಾ ಸ್ಪೃಷ್ಟ್ವಾ ವ್ಯಾಧಿಭಿರ್ನಾಭಿಭೂಯತೇ ॥ ೧೦೫ ॥

---

೧೦೧–೧೦೨. ಬ್ರಹ್ಮಮಾನವಾನಾಂ ಮಹರ್ಷಿಣಾಂ ಎಂಬ ಈ ಸೂಕ್ತವನ್ನು ಊಟಮಾಡುವುದಕ್ಕೆ ಮೊದಲು ಪೂರ್ವಾಹ್ಣದಲ್ಲಿ ನಿತ್ಯವೂ ಜಪಿಸುವವನಿಗೆ ಹೆಚ್ಚಾದ ಅರ್ಥಸಮೃದ್ಧಿಯುಂಟಾಗುತ್ತದೆ ಅಗ್ನಿನಾ ಎಂಬ ಆಶ್ವಿನ ಸೂಕ್ತವು ಶುದ್ಧಿಪ್ರದವೆಂದು ಹೇಳಲ್ಪಟ್ಟಿದೆ. ಸಮಿಧಾ ಎಂಬ ಋಕ್ಕಿನಿಂದ ಅಗ್ನಿಯಲ್ಲಿ ಹೋಮ ಮಾಡುವವನು ಒಳ್ಳೆಯ ಕೀರ್ತಿವಂತನಾಗಿ ಬದಕುತ್ತಾನೆ.

೧೦೩–೧೦೫. ನಲವತ್ತೆರಡನೆಯ ಐಂದ್ರ ಸೂಕ್ತವನ್ನು ಜಪಿಸುವವನು ಶತ್ರುಗಳನ್ನು ನಾಶಪಡಿಸುತ್ತಾನೆ. ನಾಶಂ ಮಹೀಂ ಎಂಬ ಸೂಕ್ತವನ್ನು ಜಪಿಸುವವನು ಆರೋಗ್ಯವನ್ನು ಹೊಂದುತ್ತಾನೆ. ದುಃಸ್ವಪ್ನನಾಶಕಗಳಾದ ಪರಾ ಎಂಬ ಋಕ್ಕುಗಳು ಯಾವಾಗಲೂ ಜಪಿಸಲು ಅರ್ಹಗಳಾಗುತ್ತವೆ. ಇವುಗಳಿಂದ ಮನುಷ್ಯನಿಗೆ ಸಕಲ ಪಾಪಗಳೂ ನಾಶವಾಗುತ್ತವೆ. ಶನ್ನೋಭವ ಎಂಬ ಎರಡು ಋಕ್ಕುಗಳಿಂದ ಶುಚಿಯಾಗಿದ್ದು ಭೋಜನ ಮಾಡಿ ಹೃದಯವನ್ನು ಕೈಯಿನಿಂದ ಸ್ಪರ್ಶಮಾಡಿದಲ್ಲಿ ಅವನು ವ್ಯಾಧಿಗಳಿಗೆ ಅಧೀನನಾಗುವುದಿಲ್ಲ.

**ಅಹೋರಾತ್ರೋಷಿತಃ ಸ್ನಾತ್ವಾ ಶಕ್ರಂ ಸಂಪೂಜ್ಯ ಮಾನವಃ ।**
**ಇತ ಇತ್ಯಾಜ್ಯಮುತ್ಪೂಯ ಜುಹುಯಾದಿಂದ್ರಮರ್ಚಯೇತ್ ॥ ೧೦೬ ॥**

**ಘೃತಂ ತಿಲಂ ವಾ ಧರ್ಮಜ್ಞ ಭಯೇಭ್ಯೋ ವಿಪ್ರಮುಚ್ಯತೇ ।**
**ತತ್ತ್ವಾಮಂದಮಿತಿ ಸ್ನಾತೋ ಹುತ್ವಾ ಶತ್ರೂನ್ ಪ್ರಮಾಪಯೇತ್ ॥**

**ತಾನ್ವಿದ್ಯಾದಿತ್ಯದೈವತ್ಯಂ ಜಪ್ತ್ವಾ ಮುಚ್ಯೇತ ಬಂಧನಾತ್ ।**
**ಯದ್ಯಾವ ಇತಿ ಜಪ್ತ್ವಾ ಚ ಸರ್ವಾನ್ ಕಾಮಾನ್ ಸಮಶ್ನುತೇ ॥ ೧೦೮ ॥**

**ಪವಿತ್ರಾಣಾಂ ಪವಿತ್ರಂ ತು ಪಾವಮಾನಋಚಃ ಸ್ಮೃತಾಃ ।**
**ವೈಖಾನಸ ಋಚಸ್ತ್ರಿಂಶತ್ಪವಿತ್ರಾಃ ಪರಮಾಃ ಸ್ಮೃತಾಃ ॥ ೧೦೯ ॥**

**ಋಚಾಂ ದ್ವಿಷಷ್ಟಿಃ ಪ್ರೋಕ್ತಂ ಚೋಪವಸೇದೃಷಿಸತ್ತಮೈಃ ।**
**ಸರ್ವಕಲ್ಮಷನಾಶಾಯ ಪಾವನಾಯ ಶಿವಾಯ ಚ ॥ ೧೧೦ ॥**

---

೧೦೬–೧೦೭. ಹಗಲಿನಲ್ಲಿಯೂ, ರಾತ್ರಿಯಲ್ಲಿಯೂ ಉಪವಾಸವಿದ್ದು ಸ್ನಾನಮಾಡಿ ಇಂದ್ರನನ್ನು ಪೂಜಿಸಿ ಇತಃ ಎಂಬ ಋಕ್ಕಿನಿಂದ ಆಜ್ಯವನ್ನು ತೆಗೆದು ಕೊಂಡು ಹೋಮಮಾಡಬೇಕು. ಇಂದ್ರನನ್ನೂ ಪೂಜಿಸಬೇಕು. ಆಜ್ಯವನ್ನಾಗಲಿ ಎಳ್ಳನ್ನಾಗಲಿ ಈ ಮಂತ್ರದಿಂದ ಹೋಮ ಮಾಡಿದವನು ಭಯದಿಂದ ಮುಕ್ತನಾಗು ತ್ತಾನೆ. ತತ್ತ್ವಾಮಂದಂ ಎಂಬ ಋಕ್ಕಿನಿಂದ ಸ್ನಾನ ಮಾಡಿ ಹೋಮ ಮಾಡಿದಲ್ಲಿ ಅವನು ತನ್ನ ಶತ್ರುಗಳನ್ನು ನಾಶಮಾಡುತ್ತಾನೆ.

೧೦೮–೧೦೯. ತಾನ್ವಿದ್ಯಾದಿತ್ಯದೈವತ್ಯಂ ಎಂಬ ಋಕ್ಕನ್ನು ಜಪಿಸುವವನು ಬಂಧನದಿಂದ ಬಿಡುಗಡೆ ಹೊಂದುತ್ತಾನೆ. ಯದ್ಯಾವ ಎಂಬ ಋಕ್ಕನ್ನು ಜಪಿಸು ವವನು ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ. ಪವಮಾನ ಋಕ್ಕುಗಳು ಪವಿತ್ರಗಳಾದ ಎಲ್ಲಾ ಋಕ್ಕುಗಳಿಗಿಂತಲೂ ಬಹಳ ಪವಿತ್ರಕರಗಳೆಂದು ಹೇಳಲ್ಪ ಟ್ಟಿವೆ. ವೈಖಾನಸಗಳೆಂಬ ಮೂವತ್ತು ಋಕ್ಕುಗಳೂ ಸಹ ಬಹಳ ಪವಿತ್ರಕರ ಗಳೆಂದು ಹೇಳಲ್ಪಟ್ಟಿವೆ.

೧೧೦–೧೧೧. ಇವೂ ಸೇರಿ ಅರವತ್ತೆರಡು ಋಕ್ಕುಗಳಾಗುತ್ತವೆಂದು ಹೇಳಲಾಗಿದೆ. ಋಷಿವರ್ಯರಿಂದ ಹೇಳಲ್ಪಟ್ಟಿರುವ ನಿಯಮದಂತೆ ಸರ್ವಪಾಪ ನಾಶವನ್ನೂ, ಪವಿತ್ರತೆಯನ್ನೂ, ಮಂಗಳವನ್ನೂ ಅಪೇಕ್ಷಿಸುವವನು ಈ ಋಕ್ಕು

ಸ್ವಾದಿಷ್ಠಯೇತಿ ಸೂಕ್ತಾನಾಂ ಸಪ್ತಷಷ್ಟಿರುದಾಹೃತಾಃ ।
ದಶೋತ್ತರಾ ಋಚಶ್ಚೈತಾಃ ಪಾವಮಾನ್ಯಃ ಶತಾನಿ ಷಟ್ ॥ ೧೧೧ ॥

ಏತಜ್ಜುಹ್ವನ್ ಜಪಂಶ್ಚೈವ ಘೋರಂ ಮೃತ್ಯುಭಯಂ ಜಯೇತ್ ।
ಆಧ್ಯಾತ್ಮಿಕಂ ಪವಿತ್ರಂ ಚ ಸೂಕ್ತಂ ಜಪ್ತ್ವಾಽಲ್ಪತಃ ಕ್ವಚಿತ್ ॥ ೧೧೨ ॥

ಗತಿಮಿಷ್ಟಾಮವಾಪ್ನೋತಿ ವಿಂದತೇ ಮಹತೀಂ ಶ್ರಿಯಂ ।
ಆಪೋಹಿಷ್ಠೇತಿ ಮಹತಃ ಪ್ರಯುಂಜೀತೋದಕಸ್ಥಿತಃ ॥ ೧೧೩ ॥

ಸರ್ವಪಾಪವಿನಿರ್ಮುಕ್ತಸ್ತ್ವಶೇಷಫಲಮಶ್ನುತೇ ।
ಉಪತಿಷ್ಠೇತ ರಾಜಾನಂ ಯಮಸೂಕ್ತೇನ ವೈ ದ್ವಿಜ ॥ ೧೧೪ ॥

ಚತುರ್ದಶ್ಯಾಂ ತು ಕುರ್ವೀತ ಸ್ಥಾಲೀಪಾಕಂ ಯಥಾವಿಧಿ ।
ಪರೇಯವಾಂಸಮಿತ್ಯೇತತ್ಸೂಕ್ತಮತ್ರ ಪ್ರಯೋಜಯೇತ್ ॥ ೧೧೫ ॥

---

ಗಳನ್ನು ಉಪವಾಸದಿಂದಿದ್ದು ಜಪಿಸಬೇಕು. ಸ್ವಾದಿಷ್ಠಯಾ ಎಂಬ ಸೂಕ್ತವು ಅರವತ್ತೇಳು ಋಕ್ಕುಗಳುಳ್ಳದ್ದು ಇದೂ ಸೇರಿ ಆರನೂರ ಹತ್ತು ಋಕ್ಕುಗಳ ಪವಮಾನಗಳೆಂದು ಹೇಳಲ್ಪಡುತ್ತವೆ.

೧೧೨-೧೧೩. ಈ ಋಕ್ಕುಗಳಿಂದ ಹೋಮ ಮಾಡುವವನೂ ಇವುಗಳನ್ನು ಜಪಿಸುವವನೂ ಸಹ ಘೋರವಾದ ಮೃತ್ಯುಭಯದಿಂದಲೂ ಪಾರಾಗುತ್ತಾನೆ. ಆತ್ಮ ತತ್ವಬೋಧಕವಾಗಿಯೂ, ಪವಿತ್ರವಾಗಿಯೂ ಇರುವ ಈ ಸೂಕ್ತವನ್ನು ಸ್ವಲ್ಪಕಾಲ ಸ್ವಲ್ಪಭಾಗವನ್ನು ಜಪಿಸಿದರೂ ಸಹ ಅವನು ತನಗೆ ಇಷ್ಟವಾದ ಆಮುಷ್ಮಿಕಗತಿಯನ್ನೂ ಹೆಚ್ಚಾದ ಸಂಪತ್ತನ್ನೂ ಸಹ ಹೊಂದುತ್ತಾನೆ. ಆಪೋಹಿಷ್ಠಾ ಎಂಬ ಮಹಾ ಮಂತ್ರವನ್ನು ನೀರಿನಲ್ಲಿ ನಿಂತು ಜಪಿಸಬೇಕು.

೧೧೪-೧೧೫. ಜಲದಲ್ಲಿ ನಿಂತು ಈ ಮಂತ್ರವನ್ನು ಯಥಾವಿಧಿಯಾಗಿ ಪ್ರಯೋಗಿಸುವವನು ಸಕಲ ಪಾಪಗಳಿಂದಲೂ ಮುಕ್ತಿಹೊಂದಿ ಎಲ್ಲಾ ಫಲಗಳನ್ನೂ ಹೊಂದುತ್ತಾನೆ. ಯಮಸೂಕ್ತದಿಂದ ದೊರೆಯನ್ನು ಸ್ತೋತ್ರಮಾಡಬೇಕು. ಚತುರ್ದಶೀ ತಿಥಿಯಲ್ಲಿ ಯಥಾವಿಧಿಯಾಗಿ ಸ್ಥಾಲೀಪಾಕವನ್ನು ಮಾಡಬೇಕು. ಪರೇಯವಾಂಸಂ ಎಂಬ ಸೂಕ್ತವನ್ನು ಈ ಕರ್ಮದಲ್ಲಿ ಉಪಯೋಗಿಸಬೇಕು.

ಪರಾಯುಷಃ ಪ್ರಮ್ರೀಯೇತ ನ ಸ ಜಾತು ಕಥಂಚನ ।
ಮೃತ್ಯುಮೇವ ಪ್ರಪದ್ಯೇತ ಪರಂ ಮೃತ್ಯೋರಿವ ದ್ವಿಜ ॥ ೧೧೬ ॥

ವೈಶಾಖ್ಯಾಂ ಪೌರ್ಣಮಾಸ್ಯಾಂ ತು ನಕ್ತಭೋಜೀ ಸದಾ ನರಃ ।
ಪರಾಯುಷಃ ಪ್ರಮ್ರಿಯೇತ ನ ಸ ಜಾತು ಕಥಂಚನ ॥ ೧೧೭ ॥

ಫಲಾಹಾರೋ ಜಯೇನ್ಮೃತ್ಯುಂ ತ್ರಿಭಿರ್ವರ್ಷೈಸ್ಸದಾ ನರಃ ।
ದಶಾಕ್ಷರಂ ತು ಶಾಂತ್ಯರ್ಥಂ ಭದ್ರಂ ನ ಇತಿ ಸಂಸ್ಮರನ್ ॥ ೧೧೮ ॥

ಫಲಾಹಾರೋ ಭವೇನ್ಮಾಸಂ ಮಾಸಾನ್ಮಾಸಂ ಪಯಃ ಪಿಬೇತ್ ।
ವಾಯುಭಕ್ಷ್ಯೋ ಭವೇನ್ಮಾಸಂ ಜಪನ್ನೇತತ್ಸಹಸ್ರಶಃ ॥ ೧೧೯ ॥

ಅಂತರ್ಧಾನಮವಾಪ್ನೋತಿ ಸಿದ್ಧಾನ್ಪಶ್ಯತಿ ಚಾರಣಾನ್ ।
ಪ್ರದೇವತೇತಿ ನಿಯತೋ ಜಪೇತ ಮರುಧನ್ವಸು ॥ ೧೨೦ ॥

---

೧೬-೧೧೭. ಅಂತಹವನು ಯಾವಾಗಲೂ ತನ್ನ ಪೂರ್ಣಾಯುಸ್ಸಿಗೆ ಮುಂಚಿತವಾಗಿ ಸಾಯುವುದಿಲ್ಲ. ಮೃತ್ಯುವಿನಂತೆ ಅವನೂ ಸಹ ಆಯುಸ್ಸು ಮುಗಿದ ಮೇಲೆಯೇ ಮೃತ್ಯುವನ್ನು ಹೊಂದುತ್ತಾನೆ. ವೈಶಾಖ ಶುದ್ಧ ಪೂರ್ಣಿಮೆಯ ದಿನ ಯಾವಾಗಲೂ ರಾತ್ರಿಯಲ್ಲಿ ಮಾತ್ರ ಭೋಜನ ಮಾಡುವವನೂ ಸಹ ತನ್ನ ಪೂರ್ಣಾಯುಸ್ಸಿಗೆ ಮುಂಚಿತವಾಗಿ ಸಾಯುವುದೇ ಇಲ್ಲ.

೧೧೮-೧೧೯. ಮೂರುವರ್ಷ ಪರ್ಯಂತ ಫಲಾಹಾರಿಯಾಗಿದ್ದು ಶಾಂತಿಗಾಗಿ ಭದ್ರಂನಃ ಎಂಬ ಹತ್ತು ಅಕ್ಷರದ ಮಂತ್ರವನ್ನು ಯಾವಾಗಲೂ ಸ್ಮರಿಸುತ್ತಿದ್ದಲ್ಲಿ ಅವನು ಮೃತ್ಯುವನ್ನೂ ಜಯಿಸುತ್ತಾನೆ. ಈ ಮಂತ್ರವನ್ನೇ ಒಂದು ಸಾವಿರ ಬಾರಿ ಜಪಿಸುತ್ತಾ ಮೊದಲನೆಯ ಒಂದು ತಿಂಗಳಿನಲ್ಲಿ ಫಲಾಹಾರಿಯಾಗಿಯೂ, ಎರಡನೆಯ ತಿಂಗಳಿನಲ್ಲಿ ಕ್ಷೀರಪಾನ ಮಾಡುತ್ತಲೂ ಮೂರನೆಯ ತಿಂಗಳಿನಲ್ಲಿ ವಾಯುಭಕ್ಷಕನಾಗಿಯೂ ಆಗಿರಬೇಕು.

೧೨೦-೧೨೧. ಹೀಗೆ ವ್ರತವನ್ನಾಚರಿಸಿದವನು ಅಂತರ್ಧಾನ ವಿದ್ಯೆಯನ್ನು ಹೊಂದುತ್ತಾನೆ. ಸಿದ್ಧರನ್ನೂ ಚಾರಣರನ್ನೂ ಸಹ ಕಣ್ಣಿನಿಂದ ನೋಡುತ್ತಾನೆ.

ಪ್ರಾಣಾಂತಿಕೇ ಭಯೇ ಪ್ರಾಪ್ತೇ ಕ್ಷಿಪ್ರಮಾಯುಸ್ತು ವಿದಂತಿ ।
ವೈಭೀತಕಾಂಸ್ತು ತ್ರೀನಕ್ಷಾನ್ ಗಂಧೈಃ ಸಮಧಿವಾಸಯೇತ್ ॥ ೧೨೧ ॥

ಪುಷ್ಪೈರವಕಿರೇಚ್ಚೈವ ಸ್ಥಾಪಯಿತ್ವಾ ವಿಹಾಯಸಿ ।
ಸಂಹೃತ್ಯ ಪಾದೌ ತೌ ತತ್ರ ತಿಷ್ಠೇದ್ದಕ್ಷಸ್ತುತಿಂ ಜಪೇತ್ ॥ ೧೨೨ ॥

ಪ್ರಾವೇಮಾಸೇತ್ಯೃಚಾಮೇಕಾಂ ಜಪೇಚ್ಚ ಮನಸಾ ನಿಶಿ ।
ವ್ಯುಷ್ಟಾಯಾಮುದಿತೇ ಸೂರ್ಯೇ ದ್ಯೂತೇ ಜಯಮವಾಪ್ನುಯಾತ್ ॥

ಅಬ್ರಧ್ನಮುಷಸಾನಕ್ತೇತ್ಯೇತತ್ ಸ್ವಸ್ತ್ಯಯನಂ ಜಪೇತ್ ।
ನಮೋ ಮಿತ್ರಸ್ಯ ವರುಣಸ್ಯ ಚಕ್ಷುಷೇತಿ ಚ ನಿತ್ಯಶಃ ॥ ೧೨೪ ॥

ತಥಾಜ್ಯಂ ಜುಹುಯಾನ್ನಿತ್ಯಂ ಭೀತಿಭ್ಯೋ ವಿಪ್ರಮುಚ್ಯತೇ ।
ದೇವಸ್ಯರೀತಿನಿತ್ಯಂತು ಜಪೇದ್ದೇವಂ ಸಮಶ್ನುತೇ ॥ ೧೨೫ ॥

---

ಪ್ರಾಣಾಂತಕವಾದ ಮಹಾಭಯವುಂಟಾದ ಕಾಲದಲ್ಲಿ ಪ್ರದೇವತಾ ಎಂಬ ಋಕ್ಕನ್ನು ಶುಚಿಯಾಗಿದ್ದು ಮರುಭೂಮಿಯಲ್ಲಿ ಜಪಿಸುವವರು ಜಾಗ್ರತೆಯಾಗಿ ಆಯುಸ್ಸನ್ನು ಹೊಂದುತ್ತಾನೆ.

೧೨೨-೧೨೩. ಮೂರು ತಾರೇಬೀಜಗಳನ್ನು ಗಂಧದಿಂದ ಲೇಪಿಸಬೇಕು. ಅವುಗಳನ್ನು ಹೂವುಗಳಿಂದ ಎರಚಿ ಪೂಜಿಸಿ ಆಕಾಶ ಸ್ಥಾನದಲ್ಲಿ (ಅಂದರೆ ಅಟ್ಟಣೆ ಮೊದಲಾದ ಎತ್ತರವಾದ ಸ್ಥಳದಲ್ಲಿ) ಸ್ಥಾಪಿಸಬೇಕು ಅಲ್ಲಿ ತಾನೂ ಕಾಲುಗಳನ್ನು ಮಡಚಿಕೊಂಡು ಕುಳಿತು ದಕ್ಷಸ್ತುತಿಯನ್ನು ಜಪಿಸಬೇಕು. ರಾತ್ರಿಯಲ್ಲಿಯೂ ಅಲ್ಲಿ ಕುಳಿತು ಪ್ರಾವೇಮಾಸೇ ಎಂಬ ಋಕ್ಕನ್ನೂ ಸಹ ಮನಸ್ಸಿನಿಂದಲೇ ಅನುಸಂಧಾನ ರೂಪದಿಂದ ಜಪಮಾಡಬೇಕು. ಬೆಳಗಾದ ನಂತರ ಅವನು ಜೂಜಿನಲ್ಲಿ ತೊಡಗಿದ್ದೇ ಆದರೆ ಜಯಶಾಲಿಯೇ ಆಗುತ್ತಾನೆ.

೧೨೪-೧೨೫. ಅಬ್ರಧ್ನಮುಷಸಾ ಎಂಬ ಸ್ವಸ್ತ್ಯಯನ ಸೂಕ್ತವನ್ನೂ ನಮೋ ಮಿತ್ರಸ್ಯ ವರುಣಸ್ಯ ಚಕ್ಷುಷಾ ಎಂಬ ಸೂಕ್ತವನ್ನೂ ಸಹ ನಿತ್ಯವೂ ಜಪಿಸಬೇಕು. ಆಜ್ಯದಿಂದಲೂ ಸಹ ನಿತ್ಯವೂ ಹೋಮಮಾಡಬೇಕು. ಹೀಗೆ ಮಾಡುವವನು ಭಯಗಳಿಂದ ಬಿಡುಗಡೆ ಹೊಂದುತ್ತಾನೆ. ದೇವಸ್ಯ ರೀತಿ ಎಂಬುದನ್ನು ನಿತ್ಯವೂ ಜಪಿಸುವವನು ಆ ದೇವತೆಯನ್ನೇ ಹೊಂದುತ್ತಾನೆ.

ಮಾಪ್ರಗಾಮೇತಿ ಮೂಢಸ್ತು ಪಂಥಾನಂ ಪಥಿ ವಿಂದತಿ ।
ಕ್ಷೀಣಾಯುರಿತಿ ಮನ್ಯೇತ ಯಂ ಕಂಚಿತ್ಸುಹೃದಂ ಪ್ರಿಯಂ ॥ ೧೨೬ ॥

ಯತ್ತೇಯಮಿತಿ ತು ಸ್ನಾತಸ್ತಸ್ಯ ಮೂರ್ಧಾನಮಾಲಭೇತ್ ।
ಸಹಸ್ರಕೃತ್ವಾ ಪಂಚಾಹಂ ತೇನಾಯುರ್ವಿಂದತೇ ಪುನಃ ॥ ೧೨೭ ॥

ಸ್ರುಕ್ಸ್ರುವೇ ದಶಮೇನೈವ ಇಧ್ಮಮೌದುಂಬರಂ ಭವೇತ್ ।
ಇದಮಿಧ್ಮೇತಿ ಜುಹುಯಾತ್ ಘೃತಂ ಪ್ರಾಜ್ಞಃ ಸಹಸ್ರಶಃ ॥ ೧೨೮ ॥

ಪಶುಕಾಮೋ ಗವಾಂ ಗೋಷ್ಠೇ ಅನ್ನಕಾಮಶ್ಚತುಷ್ಪಥೇ ।
ಪಾರಾವತಃ ಸ್ವಸ್ತ್ಯಯನಂ ಸ್ನಾತಕಸ್ಯ ವಿಧೀಯತೇ ॥ ೧೨೯ ॥

ಬೃಹಸ್ಪತೇ ಪ್ರಥಮಮಿತಿ ಜ್ಞಾನಕಾಮಸ್ಯ ಭಾರ್ಗವ ।
ವಯಃ ಸುಪರ್ಣಮಿತ್ಯೇತಾಂ ಜಪನ್ ವೈ ವಿಂದತೇ ಶ್ರಿಯಂ ॥ ೧೩೦ ॥

---

೧೨೬-೧೨೭. ಮಾರ್ಗವನ್ನು ತಿಳಿಯದ ಮೂಢನಾದ ಹಾದಿಕಾರನು ಮಾಪ್ರಗಾಮೇ ಎಂಬ ಸೂಕ್ತದಿಂದ ತನ್ನ ಮಾರ್ಗವನ್ನು ಹೊಂದುತ್ತಾನೆ. ತನಗೆ ಇಷ್ಟನಾದ ಸ್ನೇಹಿತನಿಗೆ ಆಯುಸ್ಸು ಕ್ಷೀಣವಾಗುತ್ತಾ ಬಂದಿದೆ ಎಂದು ತಿಳಿದಲ್ಲಿ ಅವನು ಯತ್ತೇಯಂ ಎಂಬ ಋಕ್ಕಿನಿಂದ ಸ್ನಾನಮಾಡಿ ಆ ಸ್ನೇಹಿತನ ತಲೆಯನ್ನು ಸಾವಿರ ಬಾರಿ ಸ್ಪರ್ಶಮಾಡಬೇಕು.

೧೨೮-೧೨೯. ದಶಮೇನೈವ ಎಂಬ ಋಕ್ಕಿನಿಂದ ಸ್ರುಕ್‌ಸ್ರುವಗಳನ್ನು ಗ್ರಹಿಸಿ ಅತ್ತಿಯ ಸಮಿತ್ತುಗಳನ್ನು ಉಪಯೋಗಿಸಬೇಕು. ಇದಮಿಧ್ಮಾ ಎಂಬ ಮಂತ್ರದಿಂದ ಪ್ರಾಜ್ಞನಾದ ಪಂಡಿತನು ಸಾವಿರ ಹೋಮಗಳನ್ನು ಆಜ್ಯದಿಂದ ಮಾಡಬೇಕು. ಪಶುಗಳ ಸಮೃದ್ಧಿಯನ್ನು ಅಪೇಕ್ಷಿಸುವವನು ಹಸುವಿನ ಕೊಟ್ಟಿಗೆಯಲ್ಲಿಯೂ ಅನ್ನಸಮೃದ್ಧಿಯನ್ನು ಅಪೇಕ್ಷಿಸುವವನು ನಾಲ್ಕು ದಾರಿಗಳ ಮಧ್ಯದಲ್ಲಿಯೂ ಈ ಹೋಮವನ್ನು ಮಾಡಬೇಕು. ಸ್ನಾತಕನಾದವನಿಗೆ ಪಾರಾವತಃ ಎಂಬ ಋಕ್ಕೇ ಸ್ವಸ್ತ್ಯಯನರೂಪವೆಂದು ವಿಧಿಸಲ್ಪಟ್ಟಿದೆ.

೧೩೦-೧೩೧. ಜ್ಞಾನವನ್ನು ಅಪೇಕ್ಷಿಸುವವನು ಬೃಹಸ್ಪತೇ ಪ್ರಥಮಂ ಎಂಬ ಋಕ್ಕನ್ನು ಜಪಿಸಬೇಕು. ವಯಃ ಸುವರ್ಣಂ ಎಂಬ ಋಕ್ಕನ್ನು ಜಪಿಸುವವನು

ಯಸ್ತ್ವೇಮನ್ಯೋ ಇತಿ ಸದಾಮಯತ್ವಘ್ನಂ ವಿಧೀಯತೇ ।
ಹವಿಷ್ಮತೀಯಮಭ್ಯಸ್ಯ ಸರ್ವಪಾಪೈಃ ಪ್ರಮುಚ್ಯತೇ ॥ ೧೩೧ ॥

ಯಾ ಓಷಧೀಃ ಸ್ವಸ್ತ್ಯಯನಂ ಸರ್ವಪಾಪವಿನಾಶನಂ ।
ತಸ್ಯ ಮಾಯಾ ವಿನಶ್ಯೇತ ಕಾಯಾಗ್ನಿರ್ವರ್ಧತೇ ತಥಾ ॥ ೧೩೨ ॥

ಬೃಹಸ್ಪತಿಃ ಪ್ರತೀತ್ಯೇತತ್ ವೃಷ್ಟಿಕಾಮಃ ಪ್ರಯೋಜಯೇತ್ ।
ಸರ್ವತ್ರ ತು ಪರಾ ಶಕ್ತಿಃ ಜ್ಞೇಯಾ ಪ್ರತಿರಥಾ ತಥಾ ॥ ೧೩೩ ॥

ಭೂತಾಂಶಂ ಕಾಶ್ಯಪಂ ನಿತ್ಯಂ ಪ್ರಜಾಕಾಮಸ್ಯ ಕೀರ್ತಿತಂ ।
ಅಹಂ ರುದ್ರೇಭಿರಿತ್ಯೇತದ್ವಾಗ್ಮೀ ಭವತಿ ಮಾನವಃ ॥ ೧೩೪ ॥

ನ ಯೋನೌ ಜಾಯತೇ ವಿದ್ವಾನ್ ಜಪನ್ನತ್ರೀತಿ ರಾತ್ರಿಷು ।
ರಾತ್ರಿಸೂಕ್ತಂ ಜಪನ್ ರಾತ್ರೌ ರಾತ್ರಿಕ್ಷೇಮೀ ಭವೇನ್ನರಃ ॥ ೧೩೫ ॥

---

ಸಂಪತ್ತನ್ನು ಹೊಂದುತ್ತಾನೆ. ಯಸ್ತ್ವೇಮನ್ಯೋ ಎಂಬ ಋಕ್ಕು ಯಾವಾಗಲೂ ವ್ಯಾಧಿನಾಶಕವೆಂದು ಹೇಳಲ್ಪಟ್ಟಿದೆ. ಹವಿಷ್ಮತೀಯವನ್ನು ಅಭ್ಯಾಸಮಾಡಿದವನು ಸಕಲಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.

೧೩೨–೧೩೩. ಯಾ ಓಷಧೀಃ ಎಂಬ ಸ್ವಸ್ತ್ಯಯನದ ಋಕ್ಕು ಸರ್ವಪಾಪಗಳಿಗೂ ನಾಶಕವಾಗುತ್ತದೆ. ಇದನ್ನು ಜಪಿಸಿದವನು ಅಜ್ಞಾನನಾಶವನ್ನು ಹೊಂದುತ್ತಾನೆ. ಜಠರಾಗ್ನಿಯ ವೃದ್ಧಿಯಿಂದ ಆರೋಗ್ಯವನ್ನೂ ಸಹ ಹೊಂದುತ್ತಾನೆ. ಮಳೆಯಲ್ಲಿ ಆಶೆಯುಳ್ಳವನು ಬೃಹಸ್ಪತಿಃ ಪ್ರತಿ ಎಂಬ ಋಕ್ಕನ್ನು ಪ್ರಯೋಗಿಸಬೇಕು. ಪ್ರತಿರಥಾ ಎಂಬ ಋಕ್ಕು ಎಲ್ಲಾ ವಿಧವಾದ ಫಲಗಳಿಗೂ ಸಾಧಕವಾದ ಉತ್ತಮ ಶಕ್ತಿರೂಪವೇ ಆಗಿದೆ.

೧೩೪-೧೩೫. ಭೂತಾಂಶಕಾಶ್ಯಪಸೂಕ್ತವನ್ನು ಪ್ರಜಾಪೇಕ್ಷಿಯಾದವನು ನಿತ್ಯವೂ ಜಪಿಸಬೇಕು. ಅಹಂ ರುದ್ರೇಭಿಃ ಎಂಬುವ ಋಕ್ಕನ್ನು ಜಪಿಸುವವನು ವಾಗ್ಮಿಯಾಗುತ್ತಾನೆ. ಅತ್ರಿ ಎಂಬ ಋಕ್ಕನ್ನು ರಾತ್ರಿಕಾಲದಲ್ಲಿ ನಿತ್ಯವೂ ಜಪಿಸುವವನು ಪುನಃ ಜನ್ಮವನ್ನು ಹೊಂದುವುದೇ ಇಲ್ಲ. ರಾತ್ರಿ ಸೂಕ್ತವನ್ನು ರಾತ್ರಿಯಲ್ಲಿ ಜಪಿಸಿದಲ್ಲಿ ಆ ಮನುಷ್ಯನು ರಾತ್ರಿಯಲ್ಲಿ ಕ್ಷೇಮದಿಂದಿರುತ್ತಾನೆ.

ಯಾ ಕಲ್ಪಯತೀತಿ ಜಪೇನ್ನಿತ್ಯಂ ಕೃತ್ವಾ ವಿನಾಶನಂ ।
ಆಯುಷ್ಯಂ ಚೈವ ವರ್ಚಸ್ಯಂ ಸೂಕ್ತಂ ದಾಕ್ಷಾಯಣಂ ಮಹತ್ ॥ ೧೩೬ ॥

ಉತದೇವಾ ಇತಿ ಜಪೇದಾಮಯಘ್ನಂ ಧೃತವ್ರತಃ ।
ಅಗ್ನೇ ಅಗ್ನಾವ ಇತ್ಯೇತದ್ಧನಕಾಮಃ ಪ್ರಯೋಜಯೇತ್ ॥ ೧೩೭ ॥

ವೈಭೀತಕೇಬ್ಧ್ಮಂ ಹುತ್ವಾಗ್ನಿಂ ದ್ವಿಷದ್ದ್ವೇಷಂ ತತೋ ಜಪೇತ್ ।
ದ್ವಿಷಂತು ಧನ್ವಿನಂ ಹುತ್ವಾ ದ್ವಿಷತೋ ವಿಂದತೇ ಧನಂ ॥ ೧೩೮ ॥

ಅಯಮಗ್ನೇ ಜನಿತೇತಿ ಜಪೇದಗ್ನಿಂ ಭಯೇ ಸತಿ ।
ದ್ವಿವಾರ್ಜನ್ನೀತಿ ಪಾಠಂ ತು ಜಪನ್ನುತ್ಥಾಪಯೇದ್ದ್ವಿಜಃ ॥ ೧೩೯ ॥

ಪ್ರಾತಶ್ಚ ಪಾಠಯೇದೇನಂ ಸಂಸದಿ ಬ್ರಹ್ಮಚಾರಿಣಾಂ ।
ಇಮಾಮಿತಿ ಚ ಸೂಕ್ತೇನ ಶತಕೃತ್ವೋಽಭಿಮಂತ್ರಿತಂ ॥ ೧೪೦ ॥

---

೧೩೬–೧೩೭. ಯಾ ಕಲ್ಪಯತಿ ಎಂಬ ಸೂಕ್ತವನ್ನು ನಿತ್ಯಕರ್ಮವನ್ನೂ ಮಾಡಿದನಂತರ ಅನಶನವ್ರತದಿಂದಿದ್ದು ಜಪಿಸಬೇಕು. ಮಹಾಮಹಿಮೆಯುಳ್ಳ ಈ ದಾಕ್ಷಾಯಣ ಸೂಕ್ತವು ಆಯಸ್ಸನ್ನೂ ತೇಜಸ್ಸನ್ನೂ ಸಹ ಉಂಟುಮಾಡುತ್ತದೆ. ಉತದೇವಾ ಎಂಬ ವ್ಯಾಧಿನಾಶಕವಾದ ಋಕ್ಕನ್ನು ವ್ರತನಿಯಮದಿಂದಿದ್ದು ಜಪಿಸಬೇಕು. ಧನಾಪೇಕ್ಷೆಯುಳ್ಳವನು ಅಗ್ನೇ ಅಗ್ನಾವ ಎಂಬ ಋಕ್ಕನ್ನು ಪ್ರಯೋಗಿಸಬೇಕು.

೧೩೮–೧೩೯. ತಾರೇ ಗಿಡದ ಕೆಳಗೆ ಒಂದು ವರ್ಷದವರಿಗೂ ಅಗ್ನಿಯನ್ನು ಪ್ರತಿಷ್ಠಿಸಿ ಹೋಮಮಾಡಿ ಅನಂತರ ದ್ವಿಷದ್ದ್ವೇಷಂ ಎಂಬ ಸೂಕ್ತವನ್ನು ಜಪಿಸಬೇಕು. ದ್ವಿಷಂತು ಧನ್ವಿನಂ ಎಂಬ ಋಕ್ಕಿನಿಂದ ಹೋಮಮಾಡಬೇಕು. ಹೀಗೆ ಆಚರಿಸಿದವನು ಶತ್ರುವಿನಿಂದ ಧನವನ್ನು ಹೊಂದುತ್ತಾನೆ. ಸಪತ್ನಿಗಳಿಂದ ಭಯವುಂಟಾದ ಕಾಲದಲ್ಲಿ ಅಯಮಗ್ನೇ ಜನಿತಾ ಎಂಬ ಋಕ್ಕನ್ನು ಜಪಿಸಬೇಕು. ದ್ವಿವಾರ್ಜನ್ನಿತಿ ಎಂಬ ಋಕ್ಕನ್ನು ಪಠಿಸುತ್ತಾ ದ್ವಿಜನಾದವನು ಆ ಅಗ್ನಿಯನ್ನು ಉದ್ವಾಸನ ಮಾಡಬೇಕು.

೧೪೦–೧೪೧. ಪ್ರಾತಃಕಾಲದಲ್ಲಿ ಈ ಸೂಕ್ತವನ್ನು ಬ್ರಹ್ಮಚಾರಿಗಳ ಗೋಷ್ಠಿಯಲ್ಲಿ ಪಾಠಮಾಡಬೇಕು. ಇಮಾಂ ಎಂಬ ಸೂಕ್ತದಿಂದ ನೂರು ಸಲ ಅಭಿಮಂತ್ರಿ

ಘೃತೇನ ಪೀತ್ವಾ ತಂ ಪ್ರಾತಃ ಸಪತ್ನೀಭಿರ್ವಿಮುಚ್ಯತೇ ।
ಆರಣ್ಯಾನೀತ್ಯರಣ್ಯೇಷು ಜಪೇತ್ತದ್ಭಯನಾಶನಂ ॥ ೧೪೧ ॥

ಶ್ರದ್ಧಾಸೂಕ್ತಂ ಜಪೇನ್ನಿತ್ಯಂ ಶ್ರದ್ಧಾಕಾಮವಿವರ್ಧನಂ ।
ಬ್ರಾಹ್ಮೀ ಯದ್ಯಸ್ಯ ಸೂಕ್ತೇ ದ್ವೇ ಜಪೇತ ನಿಯತಃ ಸದಾ ॥ ೧೪೨ ॥

ಶಂಖಪುಷ್ಪೀಂ ತು ಪಯಸಾ ಬ್ರಾಹ್ಮೀ ಪುಷ್ಪಾಣಿ ಸರ್ಪಿಷಾ ।
ಶತಾವರೀಂ ತು ಪಯಸಾ ವಚಾಮದ್ಭಿಃ ಘೃತೇನ ವಾ ॥ ೧೪೩ ॥

ಸೂಕ್ತಾಭ್ಯಾಂ ಮನುಮಂತ್ರಾಭ್ಯಾಂ ಚೈಕೈಕಂ ತು ತ್ರ್ಯಹಂ ಪಿಬೇತ್ ।
ಶ್ರದ್ಧಾಂ ಮೇಧಾಂ ಸ್ಮೃತಿಂ ಪುಷ್ಟಿಂ ವರ್ಣಂ ಲಕ್ಷ್ಮೀಂ ಚ ವಿಂದತಿ ॥೧೪೪॥

ಶಾಸನ್ನರ್ಥಾನ್ ಜಪನ್ನಿತ್ಯಂ ಸಂಗ್ರಾಮೇ ವಿಜಿಗೀಷಿತಃ ।
ಗೃಹೀತ ದಕ್ಷಿಣಾನ್ ದರ್ಭಾನ್ ಗೃಹೀತ್ವಾ ಸಂಸ್ಪೃಶೇಜ್ಜಪೇತ್ ॥ ೧೪೫ ॥

---

ತವಾದ ಆಜ್ಯವನ್ನು ಪ್ರಾತಃಕಾಲದಲ್ಲಿ ಪಾನಮಾಡಿದವನು ಸವತಿಯರ ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಅರಣ್ಯಾನಿ ಎಂಬ ಸೂಕ್ತವನ್ನು ಅರಣ್ಯದಿಂದ ಭಯವುಂಟಾದ ಕಾಲದಲ್ಲಿ ಅರಣ್ಯದಲ್ಲಿಯೇ ಜಪಿಸಬೇಕು.

೧೪೨-೧೪೪. ಶ್ರದ್ಧೆ ಮತ್ತು ಇಷ್ಟಾರ್ಥಗಳನ್ನು ಅಭಿವೃದ್ಧಿಪಡಿಸುವ ಶ್ರದ್ಧಾ ಸೂಕ್ತವನ್ನು ನಿತ್ಯವೂ ಜಪಿಸಬೇಕು. ಇದರಲ್ಲಿರುವ ಬ್ರಾಹ್ಮೀಯದ್ಯಸ್ಯ ಎಂಬ ಎರಡು ಸೂಕ್ತಗಳನ್ನು ನಿಯಮದಿಂದ ನಿತ್ಯವೂ ಜಪಿಸಬೇಕು. ಶಂಖಪುಷ್ಪೀ ಓಷಧಿಯನ್ನು ಹಾಲಿನೊಡನೆಯೂ ಹೊನಗೊನ್ನೆ ಹೂವುಗಳನ್ನು ತುಪ್ಪದೊಡನೆಯೂ ನಾರಾಯಣೀ ಮೂಲಿಕೆಯನ್ನು ಹಾಲಿನೊಡನೆಯೂ, ಬಜೆಯನ್ನು ನೀರು ಅಥವಾ ತುಪ್ಪದೊಡನೆಯೂ ಸೇರಿಸಿ ಮೇಲೆ ಹೇಳಿರುವ ಬ್ರಾಹ್ಮೀ ಎಂಬ ಸೂಕ್ತ ರೂಪಗಳಾದ ಮಹಾಮಂತ್ರದಿಂದ ಒಂದೊಂದನ್ನೂ ಮೂರು ದಿವಸಗಳು ಪಾನಮಾಡಬೇಕು. ಹೀಗೆ ಮಾಡಿದವನು ಶ್ರದ್ಧೆಯನ್ನೂ, ಬುದ್ಧಿಶಕ್ತಿಯನ್ನೂ, ಜ್ಞಾಪಕ ಶಕ್ತಿಯನ್ನೂ, ಪುಷ್ಟಿಯನ್ನೂ, ವರ್ಣವನ್ನೂ, ಸಂಪತ್ತನ್ನೂ ಸಹ ಹೊಂದುತ್ತಾನೆ.

೧೪೫-೧೪೬. ಯುದ್ಧದಲ್ಲಿ ಜಯವನ್ನು ಅಪೇಕ್ಷಿಸುವವನು ಶಾಸನ್ನರ್ಥ ಎಂಬ ಸೂಕ್ತವನ್ನು ನಿತ್ಯವೂ ಜಪಿಸುತ್ತಾ ದಕ್ಷಿಣ ದಿಕ್ಕಿಗೆ ಅಭಿಮುಖವಾಗಿರುವ ದರ್ಭೆಗಳನ್ನು ಸ್ಪರ್ಶಮಾಡುತ್ತಾ ಈ ಸೂಕ್ತವನ್ನು ಜಪಿಸಬೇಕು. ಮುಂಚಾಮಿ

ಮುಂಚಾಮಿತ್ವಾಹವಿಷೇತಿ ಯಕ್ಷ್ಮಾಣಮುಪಕರ್ಷತಿ ।
ಬ್ರಹ್ಮಣಾಗ್ನಿಃ ಸಂವಿದಾನಂ ಗರ್ಭಮೃತ್ಯುವಿನಾಶನಂ ॥ ೧೪೬ ॥

ಅಪೇಹೀತಿ ಜಪೇತ್ಸೂಕ್ತಂ ಶುಚಿರ್ದುಃಸ್ವಪ್ನನಾಶನಂ ।
ದೇವಾಃ ಕಪೋತ ಇತಿ ತು ಕಪೋತಸ್ಯೋಪವೇಶನೇ ॥ ೧೪೭ ॥

ಕೌಶಿಕಸ್ಯ ಜಪೇತ್ಸೂಕ್ತಂ ಘೃತೇನ ಜುಹುಯಾತ್ತಥಾ ।
ಸಪತ್ನಘ್ನಂ ಪ್ರಯುಂಜೀತ ಋಷಭಂ ಜಪಹೋಮಯೋಃ ॥ ೧೪೮ ॥

ಯೇನೇದಮಿತಿ ಜಪ್ತ್ವಾ ವೈ ಸಮಾಧಿಂ ವಿಂದತೇ ಪರಾಂ ।
ಮಯೋಭೂರ್ವಾತ ಇತಿ ತು ಗವಾಂ ಸ್ವಸ್ತ್ಯಯನಂ ಪರಂ ॥ ೧೪೯ ॥

ಯವಾನಾಂ ಚ ಘೃತಾಕ್ತಾನಾಂ ಗೋಮಯಾಗ್ನೌ ಸಮಾಹಿತಃ ।
ಜುಹುಯಾದ್ಗೋಷ್ಠಮಧ್ಯೇ ತು ದಧಿಮಧ್ವಾಜ್ಯಸಂಸ್ಕೃತಂ ॥ ೧೫೦ ॥

---

ತ್ವಾಹ ವಿಷಾ ಎಂಬ ಋಕ್ಕು ಕ್ಷಯರೋಗವನ್ನು ನಾಶಪಡಿಸುತ್ತದೆ. ಬ್ರಹ್ಮಣಾಗ್ನಿಃ ಸಂವಿಧಾನಂ ಎಂಬ ಋಕ್ಕು ಗರ್ಭದಲ್ಲಿ ಶಿಶುವಿಗೆ ಉಂಟಾಗುವ ಅಪಮೃತ್ಯುವಿಗೆ ನಾಶಕವಾಗುತ್ತದೆ.

೧೪೭-೧೪೮. ದುಃಸ್ವಪ್ನನಾಶಕ್ಕಾಗಿ ಅಪೇಹಿ ಎಂಬ ಸೂಕ್ತವನ್ನು ಜಪಿಸಬೇಕು. ದೇವಾಃ ಕಪೋತ ಎಂಬ ಸೂಕ್ತವನ್ನು ಕಪೋತ ಪಕ್ಷಿಯನ್ನು ಇಳಿಸಲು ಪ್ರಯೋಗಿಸಬೇಕು. ಕೌಶಿಕ ಸೂಕ್ತವನ್ನು ಜಪಮಾಡಬೇಕು. ಅದೇ ಸೂಕ್ತದಿಂದ ಆಜ್ಯ ಹೋಮವನ್ನೂ ಮಾಡಬೇಕು. ಶತ್ರುನಾಶಕವಾದ ಋಷಭ ಸೂಕ್ತವನ್ನು ಜಪದಲ್ಲಿಯೂ, ಹೋಮದಲ್ಲಿಯೂ ಉಪಯೋಗಿಸಬೇಕು.

೧೪೯-೧೫೦. ಯೇನೇದಂ ಎಂಬ ಸೂಕ್ತವನ್ನು ಜಪಿಸುವವನು ಹೆಚ್ಚಾದ ಶಕ್ತಿಯನ್ನು ಹೊಂದುತ್ತಾನೆ ಮಯೋಭೂರ್ವಾತಃ ಎಂಬ ಸೂಕ್ತವು ಹಸುಗಳಿಗೆ ಬಹಳ ಮಟ್ಟಿಗೂ ಕ್ಷೇಮಕರವಾದ ಸ್ವಸ್ತ್ಯಯನ. ಆಜ್ಯದಿಂದ ನೆನಸಿದ ಯವ ಧಾನ್ಯವನ್ನು ಹಸುವಿನ ಕೊಟ್ಟಿಗೆಯ ಮಧ್ಯದಲ್ಲಿ ಬೆರಣಿಗಳಿಂದಲೇ ಅಗ್ನಿಯನ್ನು ಅಭಿವೃದ್ಧಿಗೊಳಿಸಿ ಈ ಸೂಕ್ತದಿಂದ ಮೊಸರು. ಜೇನು, ಆಜ್ಯ, ಇವುಗಳಿಂದ ಸಂಸ್ಕರಿಸಲ್ಪಟ್ಟ ಆಯವಗಳನ್ನು ಹೋಮಮಾಡಬೇಕು.

ಪತಂತಮಿತಿ ನಿತ್ಯಂ ತು ಜಪೇತ ವಿಜನೇ ವನೇ ।
ಶಾಂಬರೀಮಿಂದ್ರಜಾಲಾಂ ವಾ ಮಾಲಾಮೇತೇನ ಧಾರಯೇತ್ ॥ ೧೫೧ ॥

ಅದೃಶ್ಯಾನಾಂ ಚ ಸತ್ತ್ವಾನಾಂ ಮಾಯಾಮೇತೇನ ಬಾಧತೇ ।
ನ ಪ್ರತಿಷ್ಠೇತಿ ಸ್ವಸ್ತ್ಯಯನಂ ನಾರೀಗರ್ಭವಿವರ್ಧನಂ ॥ ೧೫೨ ॥

ವಿಷ್ಣುಣ್ಯಾರ್ನಮಿತೀಮಂ ಚ ತಥೈವಾಪರಮುಚ್ಯತೇ ।
ಮಹಿತ್ಯ್ರಾಣಾಂ ಮವೋಽಸ್ತಿತಿ ಪರಿಸ್ವಸ್ತ್ಯಯನಂ ಜಪೇತ್ ॥ ೧೫೩ ॥

ಪ್ರಾಪಯೇದ್ವಿದ್ವಿಷದ್ದ್ವೇಷಂ ಜಪೇಚ್ಚ ರಿಪುನಾಶನಂ ।
ಅಯಂ ಗೌಃ ಸಪ್ತರಾಜ್ಞಸ್ತು ಸರ್ವಾನೇತೈಃ ಪ್ರಸಾದಯೇತ್ ॥ ೧೫೪ ॥

ಸಂಸಮಿದ್ಯುವಸೇಚ್ಚೈತತ್ಸೌಭ್ರಾತೃಕರಣಂ ಮಹತ್ ।
ತಚ್ಛಂಯೋರಾವೃಣೀಮಹೇ ಜಪೇತ್ಸ್ವಸ್ತ್ಯಯನಂ ಸದಾ ॥ ೧೫೫ ॥

---

೧೫೧-೧೫೨. ಪತಂತಂ ಎಂಬ ಸೂಕ್ತವನ್ನು ಯಾವಾಗಲೂ ನಿರ್ಜನವಾದ ಕಾಡಿನಲ್ಲಿ ಜಪಿಸಬೇಕು. ಇಂದ್ರಜಾಲಕ್ಕಾಗಲಿ ಕಣ್ಣುಕಟ್ಟುವಿಕೆಗಾಗಲಿ, ಉಪಯೋಗಿಸಬಹುದಾದ ಮೂಲಿಕೆಯನ್ನು ಈ ಸೂಕ್ತದಿಂದ ಧರಿಸಬೇಕು. ಕಣ್ಣಿಗೆ ಕಾಣದೆ ಬಾಧಿಸುತ್ತಿರುವ ಪ್ರಾಣಿಗಳಿಂದ ಉಂಟಾಗಬಹುದಾದ ತೊಂದರೆಯನ್ನು ಈ ಸೂಕ್ತದಿಂದ ಪರಿಹರಿಸಿಕೊಳ್ಳಬಹುದು. ನ ಪ್ರತಿಷ್ಠಾ ಎಂಬ ಸ್ವಸ್ತ್ಯಯನ ಮಂತ್ರವು ಸ್ತ್ರೀಯರ ಗರ್ಭವೃದ್ಧಿಗೆ ಸಾಧಕವಾಗುತ್ತದೆ.

೧೫೩-೧೫೪. ವಿಷ್ಣುಣ್ಯಾರ್ನಂ ಎಂಬ ಋಕ್ಕನ್ನೂ ಹಾಗೆಯೇ ಮಹಿತ್ರ್ಯಾಂಣಾಂ ಮವೋಸ್ತು ಎಂಬ ಋಕ್ಕನ್ನೂ ಸಹ ಮಂಗಳಕ್ಕಾಗಿ ಸ್ವಸ್ತ್ಯಯನರೂಪದಿಂದ ಜಪಿಸಬೇಕು. ಇದು ಶತ್ರುಗಳಲ್ಲಿ ದ್ವೇಷವನ್ನೂ ಉಂಟುಮಾಡಿ ಶತ್ರುನಾಶಕವಾಗಿಯೂ ಆಗುತ್ತದೆಯಾಗಿ ಇದನ್ನ ಇದಕ್ಕಾಗಿ ಜಪಿಸಬೇಕು. ಅಯಂಗೌಃ ಎಂಬ ಏಳು ಋಕ್ಕುಗಳನ್ನು ರಾಜನಾದವನ ಮತ್ತು ಸರ್ಪಗಳ ಪ್ರಸನ್ನತೆಗಾಗಿ ಅಥವಾ ಅವರುಗಳ ವಶೀಕರಣಕ್ಕಾಗಿ ಜಪಿಸಬೇಕು.

೧೫೫-೧೫೬. ಸಂಸಮಿದ್ಯುವಸೇತ್ ಎಂಬ ಸೂಕ್ತವು ಭ್ರಾತೃಗಳ ಸೌಹಾರ್ದಕ್ಕೆ ಕಾರಣವಾದ ಮಹಾ ಮಂತ್ರ. ತಂಚ್ಛಂ ಯೋರಾವೃಣೀಮಹೇ ಎಂಬುದನ್ನು

ಪಿತೄಣಾಂ ಸಂಹಿತಾಂ ವಿದ್ವಾತ್ಪಿತೄನ್ ಪ್ರಿಣಾತಿ ವೈ ತಥಾ ।
ವಾಸ್ತೋಷ್ಪತೇನ ಮಂತ್ರೇಣ ಯಜೇತ ಗೃಹದೇವತಾಂ ॥ ೧೫೬ ॥

ತಲ್ಲಿಂಗೈರ್ದೇವತಾಮಂತ್ರ್ಯೈಃ ದೇವಾರಾಧನಮುಚ್ಯತೇ ।
ಜಪಸ್ಯೈಷ ವಿಧಿಃ ಪ್ರೋಕ್ತೋ ಹುತೇ ಯಜ್ಞೇ ವಿಶೇಷತಃ ॥ ೧೫೭ ॥

ಹೋಮಾಂತೇ ದಕ್ಷಿಣಾ ದೇಯಂ ಯಥಾಶಕ್ತ್ಯಾ ಚ ಭಾರ್ಗವ ।
ಹುತೇನ ಶಮ್ಯತೇ ಪಾಪಂ ಹುತಮನ್ನೇನ ಶಮ್ಯತೇ ॥ ೧೫೮ ॥

ಅನ್ನಂ ಹಿರಣ್ಯದಾನೇನ ಅಮೋಘಾ ಬ್ರಾಹ್ಮಣಾಶಿಷಃ ।
ಸಿದ್ಧಾರ್ಥಕಾ ಯವಾ ಧಾನ್ಯಂ ಪಯೋ ದಧಿ ಘೃತಂ ತಥಾ ॥ ೧೫೯ ॥

ಕ್ಷೀರವೃಕ್ಷಾಸ್ತಥೇಧ್ಮಾಶ್ಚ ಸರ್ವಕಾಮಪ್ರದಾಃ ಸ್ಮೃತಾಃ ।
ಸಮಿಧಃ ಕಂಟಕಿನ್ಯಶ್ಚ ರಾಜಿಕಾ ರುಧಿರಂ ವಿಷಂ ॥ ೧೬೦ ॥

---

ಸ್ವಸ್ತ್ಯಯನ ಮಂತ್ರವನ್ನಾಗಿ ಯಾವಾಗಲೂ ಜಪಿಸುತ್ತಿರಬೇಕು. ಪಿತೃ ಸಂಹಿತೆಯನ್ನು ಅಧಿಕರಿಸಿದವನು ಪಿತೃಗಳನ್ನು ಪ್ರೀತಿಗೊಳಿಸುತ್ತಾನೆ. ವಾಸ್ತೋಷ್ಪತೇ ಎಂಬ ಮಂತ್ರದಿಂದ ಗೃಹದೇವತೆಯನ್ನು ಪೂಜಿಸಬೇಕು.

೧೫೭-೧೫೮. ಅದೇ ವಿಧವಾದ ವಾಸ್ತೋಷ್ಪತಿ ಲಿಂಗಗಳಿಂದ ಕೂಡಿದ ಮಂತ್ರಗಳಿಂದ ದೇವತಾರ್ಚನೆಯು ಹೇಳಲ್ಪಟ್ಟಿದೆ. ಈ ಜಪದ ವಿಧಿಗಳೆಲ್ಲವೂ ಯಜ್ಞದಲ್ಲಿ ನಡೆಸುವ ಹೋಮಗಳಿಂದ ಉತ್ಕೃಷ್ಟವಾಗುತ್ತದೆ. ಹೋಮಮಾಡಿದ ನಂತರ ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು. ಏತಕ್ಕೆಂದರೆ ಹೋಮ ಮಾಡೋಣದರಿಂದ ಪಾಪವು ನಾಶಹೊಂದುತ್ತದೆ. ಆ ಹೋಮದಲ್ಲಿ ಉಂಟಾಗ ಬಹುದಾದ ದೋಷಗಳು ಅನ್ನದಾನದಿಂದ ಶಾಂತವಾಗುತ್ತವೆ ಆ ಅನ್ನದ ದೋಷಗಳೂ ಸಹ ದ್ರವ್ಯದಾನದಿಂದ ಶಾಂತವಾಗುತ್ತವೆ. ಅಮೋಘವಾದ ಬ್ರಾಹ್ಮಣರ ಆಶೀರ್ವಾದಗಳು ಆ ಹಿರಣ್ಯದಾನದಿಂದ ಲಭಿಸುತ್ತವೆ. ಆದುದರಿಂದ ಇದೆಲ್ಲವೂ ಜಪವಿಧಿಯಲ್ಲಿ ಅತ್ಯವಶ್ಯಕವಾದದ್ದು.

೧೫೯-೧೬೧. ಬಿಳಿಯಸಾಸವೆ, ಯವಧಾನ್ಯ, ಹಾಲು, ಮೊಸರು, ತುಪ್ಪ ಮತ್ತು ಹಾಲಿನಿಂದ ಕೂಡಿರುವ ಮರಗಳ ಸಮಿತ್ತುಗಳು ಇವು ಸಕಲ ವಿಧವಾದ ಇಷ್ಟಾರ್ಥಪ್ರದಗಳೆಂದು ಹೇಳಲ್ಪಟ್ಟಿವೆ. ಮುಳ್ಳಿರುವ ಮರಗಳ ಸಮಿತ್ತುಗಳು

**ತೈಲಂ ಚ ಭೃಗುಶಾರ್ದೂಲ ವಿಜ್ಞೇಯಮಭಿಚಾರಕಂ ।**
**ಸಕ್ತವಃ ಫಲಮೂಲಾನಿ ಶಾಕಾನಿ ವಿವಿಧಾನಿ ಚ　　　　॥ ೧೬೧ ॥**

**ಪಯೋ ದಧಿ ಸುವರ್ಣಂ ಚ ಭೈಕ್ಷ್ಯಂ ನಾಶನಮುಚ್ಯತೇ ।**
**ಹವಿಃ ಸ್ನಾನಂ ಚ ಕರ್ತವ್ಯಂ ಸರ್ವತ್ರ ಭೃಗುಸತ್ತಮ　　　　॥ ೧೬೨ ॥**

**ಋಚಾಂ ವಿಧಾನಂ ಕಥಿತಂ ತವೈತ**
**ತ್ಸಮಾಸತಃ ಕರ್ಮಕರಂ ದ್ವಿಜಾನಾಂ ।**
**ತತೋ ವಿಧಾನಂ ಯಜುಷಾಂ ನಿಬೋಧ**
**ಸಮಾಸತೋ ಧರ್ಮಭೃತಾಂ ವರಿಷ್ಠ　　　　॥ ೧೬೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಋಗ್ವಿಧಾನಂ ನಾಮ ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ**

---

ಕರಿಯ ಸಾಸವೆ, ರಕ್ತ, ವಿಷ, ತೈಲ ಇವುಗಳೆಲ್ಲವೂ ಆಭಿಚಾರಕ ವ್ಯಾಪಾರಕ್ಕೆ ಉಪಯೋಗಿಸತಕ್ಕವುಗಳೆಂದು ತಿಳಿಯಬೇಕು. ಹುರಿಟ್ಟು, ಫಲಗಳು, ಗೆಡ್ಡೆ ಗೆಣಸುಗಳು, ಕಾಯಿಪಲ್ಯಗಳು, ಹಾಲು, ಮೊಸರು, ಚಿನ್ನ, ಭಿಕ್ಷಾಟನ ಇವುಗಳ ವ್ಯವಹಾರವು ಭೈಕ್ಷವೆನಿಸುತ್ತದೆ. ಇದು ಅಶನವಾಗುವುದಿಲ್ಲ.

೧೬೨-೧೬೩. ಎಲೈ ಭೃಗುಕುಲೋತ್ತಮನೇ ಎಲ್ಲಾ ಕರ್ಮಗಳಲ್ಲಿಯೂ ಹವಿಸ್ಸಿನ ಸ್ನಾನವನ್ನು ಮಾಡಬೇಕು. ಈ ರೀತಿ ಋಗ್ವಿಧಾನವನ್ನು ನಿನಗೆ ಸಂಕ್ಷೇಪವಾಗಿ ಹೇಳಿದ್ದಾಯಿತು. ಇದು ದ್ವಿಜರಾದವರಿಗೆ ಬಹುಮಟ್ಟಿಗೂ ಫಲಪ್ರದವಾಗಿ ಪರಿಣಮಿಸುತ್ತದೆ. ಇನ್ನು ಮುಂದೆ ಯಜುರ್ವಿಧಾನವನ್ನು ಹೇಳುತ್ತೇನೆ. ಅವನ್ನೂ ನನ್ನಿಂದ ಸಂಗ್ರಹವಾಗಿ ತಿಳಿದುಕೋ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಋಗ್ವಿಧಾನವೆಂಬ ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.

---

## ನೂರ ಇಪ್ಪತ್ತನಾಲ್ಕನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಋಗ್ವೇದದ ಅನೇಕ ಮಂತ್ರಗಳಿಗೆ ಶಾಂತಿಕ ಹಾಗೂ ಪೌಷ್ಟಿಕಗಳಾದ ಅನೇಕ ಕರ್ಮಗಳಲ್ಲಿ ವಿನಿಯೋಗವನ್ನು ಹೇಳಲಾಗಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ : —

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಪಂಚವಿಂಶತ್ಯುತ್ತರಶತತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಓಂಕಾರಪೂರ್ವಿಕಾನಾಮ ಮಹಾವ್ಯಾಹೃತಯಃ ಸ್ಮೃತಾಃ |**
**ಸರ್ವಕಲ್ಮಷನಾಶಿನ್ಯಃ ಸರ್ವಕರ್ಮಪ್ರದಾಸ್ತಥಾ || ೧ ||**

**ಆಜ್ಯಾಹುತಿಸಹಸ್ರೇಣ ದೇವಮಾರಾಧಯೇದ್ದ್ವಿಜ |**
**ಮನಸಃ ಕಾಂಕ್ಷಿತಂ ರಾಮ ಮನಸೇಪ್ಸಿತಕಾಮದಂ || ೨ ||**

**ಶಾಂತಿಕಾಮೋ ಯವೈಃ ಕುರ್ಯಾತ್ತಿಲೈಃ ಪಾಪಾಪನುತ್ತಯೇ |**
**ಧಾನ್ಯೈಃ ಸಿದ್ಧಾರ್ಥಕೈಶ್ಚೈವ ಸರ್ವಕಾಮಕರಂ ತಥಾ || ೩ ||**

---

### ನೂರ ಇಪ್ಪತ್ತೈದನೆಯ ಅಧ್ಯಾಯ.

೧-೨. ಪುಷ್ಕರನು ಹೇಳುತ್ತಾನೆ. ವ್ಯಾಹೃತಿಗಳು ಓಂಕಾರ ಪೂರ್ವಕಗಳಾದಲ್ಲಿ ಇವಕ್ಕೆ ಮಹಾವ್ಯಾಹೃತಿಗಳೆಂದು ಶಾಸ್ತ್ರವ್ಯವಹಾರವಿದೆ. ಇವು ಸರ್ವಪಾಪ ನಾಶಕಗಳೆಂದೂ ಸರ್ವಕರ್ಮ ಫಲಪ್ರದಗಳೆಂದೂ ಹೇಳಲ್ಪಟ್ಟಿವೆ. ಸಾವಿರಸಲದ ಆಜ್ಯಾಹುತಿಯಿಂದ ದೇವರನ್ನು ಪೂಜಿಸಿದುದೇ ಆದರೆ ಮನಸ್ಸಿಗೆ ಅಭಿಮತವಾ ಎಲ್ಲಾ ಇಷ್ಟಾರ್ಥವನ್ನೂ ಸಹ ಇದು ಉಂಟುಮಾಡುತ್ತದೆ.

೩-೪. ಶಾಂತಿಯನ್ನು ಅಪೇಕ್ಷಿಸುವವನು ಈ ಮಹಾ ವ್ಯಾಹೃತಿಗಳಿಂದ ಯವಗಳಿಂದ ಹೋಮ ಮಾಡಬೇಕು. ಪಾಪನಾಶವನ್ನು ಅಪೇಕ್ಷಿಸುವವನು ಎಳ್ಳುಗಳಿಂದ ಹೋಮ ಮಾಡಬೇಕು. ಧಾನ್ಯಗಳಿಂದಲೂ ಬಿಳಿಯ ಸಾಸವೆಯಿಂದಲೂ ಕಾಮ್ಯ

ಔದುಂಬರೀಭಿರಿಧ್ಮಾಭಿಃ ಪಶುಕಾಮಸ್ಯ ಶಸ್ಯತೇ ।
ದಧ್ನಾ ಚೈವಾನ್ನಕಾಮಸ್ಯ ಪಯಸಾ ಶಾಂತಿಮಿಚ್ಛತಃ ॥ ४ ॥

ಅಪಾಮಾರ್ಗಸಮಿದ್ಭಿಶ್ಚ ಕಾಮಯನ್ ಕನಕಂ ಬಹು ।
ಕನ್ಯಾಕಾಮೋ ಘೃತಾಕ್ತಾನಿ ಯುಗ್ಮಶೋಗ್ರಥಿತಾನಿ ಚ ॥ ೫ ॥

ಜಾತೀಪುಷ್ಪಾಣಿ ಜುಹುಯಾದ್ಗ್ರಾಮಾರ್ಥೀ ತಿಲತಂಡುಲಂ ।
ವಶೀಕರ್ಮಣಿ ಶಾಖೋಟವಾಶಾಪಾಮಾರ್ಗಮೇವ ಚ ॥ ೬ ॥

ವಸಾಸೃಙ್ಮಿಶ್ರಸಮಿಧೋ ವ್ಯಾಧಿಘಾತಸ್ಯ ಭಾರ್ಗವ ।
ಕ್ರುದ್ಧಸ್ತು ಜುಹುಯಾತ್ಸಮ್ಯಕ್ ಶತ್ರೂಣಾಂ ವಧಕಾಮ್ಯಯಾ ॥ ೭ ॥

ಸರ್ವವ್ರೀಹಿಮಯೀಂ ಕೃತ್ವಾ ರಾಜ್ಞಃ ಪ್ರತಿಕೃತಿಂ ದ್ವಿಜಃ ।
ಸಹಸ್ರಶಸ್ತು ಜುಹುಯಾತ್ಪ್ರಜಾವಶಗತೋ ಭವೇತ್ ॥ ೮ ॥

---

ಫಲಗಳನ್ನು ಅಪೇಕ್ಷಿಸುವವನು ಹೋಮಿಸಬೇಕು. ಪಶುಗಳ ಪ್ರಾಪ್ತಿಗಾಗಿ ಹೋಮ ಮಾಡುವವರಿಗೆ ಅತ್ತಿಯ ಸಮಿತ್ತುಗಳು ಪ್ರಶಸ್ತ. ಅನ್ನವನ್ನು ಅಪೇಕ್ಷಿಸುವವನು ಮೊಸರಿನಿಂದಲೂ, ಶಾಂತಿಕಾಮನು ಹಾಲಿನಿಂದಲೂ ಹೋಮ ಮಾಡಬೇಕು.

೫-೬. ಹೆಚ್ಚಾಗಿ ಚಿನ್ನವನ್ನು ಅಪೇಕ್ಷಿಸುವವನು ಉತ್ತರಣೆ ಸಮಿತ್ತುಗಳಿಂದಲೂ, ಕನ್ಯೆಯಲ್ಲಿ ಆಸೆಯುಳ್ಳವನು ಎರಡೆರಡಾಗಿ ಕಟ್ಟಿ ತುಪ್ಪದಲ್ಲಿ ನೆನೆಸಿದ ಜಾಜೀ ಹೂವುಗಳನ್ನೂ, ಗ್ರಾಮಾಪೇಕ್ಷೆಯುಳ್ಳವನು ಎಳ್ಳಿನಿಂದ ಬೆರೆಸಿದ ಅಕ್ಕಿಯನ್ನೂ, ವಶೀಕರಣವಿದ್ಯೆಯಲ್ಲಿ ಆಶೆಯುಳ್ಳವನು ಶಾಖೋಟವೆಂಬ ಮುಳ್ಳುಗಿಡ, ಮತ್ತು ಆಡುಸೋಗೆ ಮತ್ತು ಉತ್ತರಣೆ ಇವುಗಳಿಂದಲೂ ಹೋಮಮಾಡಬೇಕು.

೭-೮. ವ್ಯಾಧಿಗ್ರಸ್ತನಾದವನು ವಸಾ, ರಕ್ತ ಇವುಗಳಿಂದ ಕೂಡಿದ ಸಮಿತ್ತನ್ನು ಹೋಮ ಮಾಡಬೇಕು. ಶತ್ರುನಾಶವನ್ನು ಅಪೇಕ್ಷಿಸುವವನು ಕೋಪದಿಂದ ಕೂಡಿ ಸರಿಯಾಗಿ ಹೋಮ ಮಾಡಬೇಕು. ಧೊರೆಯಾದವನು ಪ್ರಜೆಗಳಿಗೆ ಅಧೀನನಾಗ ಬೇಕಾದರೆ ದ್ವಿಜನಾದವನು ಎಲ್ಲಾ ವಿಧವಾದ ಭತ್ತಗಳಿಂದ ರಾಜನ ಪ್ರತಿಕೃತಿಯನ್ನು ಮಾಡಿ ಅದನ್ನು ಒಂದು ಸಾವಿರ ಬಾರಿ ಹೋಮ ಮಾಡಬೇಕು.

ವಸ್ತ್ರಕಾಮಸ್ಯ ಪುಷ್ಪಾಣಿ ದೂರ್ವಾ ವ್ಯಾಧಿವಿನಾಶಿನೀ ।
ಬ್ರಹ್ಮಚರ್ಯಸಕಾಮಸ್ಯ ಪಾಮಾಗ್ರಂ ಚ ವಿಧೀಯತೇ ॥ ೯ ॥

ಪ್ರತ್ಯಂಗಿರೇಪ್ಸುರ್ಜುಹುಯಾತ್ತುಷಕಂಟಕಭಸ್ಮಭಿಃ ।
ವಿದ್ವೇಷಣೇ ಚ ಪಕ್ಷಾಣಿ ಕಾಕಕೌಶಿಕಯೋಸ್ತಥಾ ॥ ೧೦ ॥

ಕಾಪಿಲಂ ತು ಘೃತಂ ಹುತ್ವಾ ತಥಾ ಚಂದ್ರಗ್ರಹೇ ದ್ವಿಜ ।
ವಚಾಚೂರ್ಣೇನ ಸಂಪೀತಾಂಸ್ತಾನಾನೀಯ ಚ ತಾಂ ವಚಾಂ ॥ ೧೧ ॥

ಸಹಸ್ರಮಂತ್ರಿತಾಂ ಭುಕ್ತ್ವಾ ಮೇಧಾವೀ ಜಾಯತೇ ನರಃ ।
ಸೂರ್ಯೋದಯೇಽರ್ಕಾಭಿಮುಖಂ ಪುತ್ರಕಾಮೋ ಜಪೇನ್ನರಃ ॥ ೧೨ ॥

ಏಕಾದಶ್ಯಾಂ ಗುಗ್ಗುಲಂ ಲೌಹಂ ಬೈಲ್ವಂ ಖಾದಿರಮೇವ ವಾ ।
ದ್ವಿಷಂತಸ್ತ್ವವಧಾನೀತಿ ನಿಖನೇದ್ರಿಪುವೇಶ್ಮನಿ ॥ ೧೩ ॥

೯-೧೦. ವಸ್ತ್ರಗಳನ್ನು ಅಪೇಕ್ಷಿಸುವವನು ಪುಷ್ಪಗಳಿಂದಲೂ, ವ್ಯಾಧಿನಾಶವನ್ನು ಅಪೇಕ್ಷಿಸುವವನು ಗರಿಕೆಯ ಹುಲ್ಲುಗಳಿಂದಲೂ, ಬ್ರಹ್ಮಚರ್ಯ ಕಾಮನಾದವನು ಪಾಮಾಗ್ರವೆಂಬ ಓಷಧಿ ವಿಶೇಷವನ್ನೂ ಹೋಮ ಮಾಡಬೇಕೆಂದು ಶಾಸ್ತ್ರಗಳಿಂದ ವಿಧಿಸಲ್ಪಟ್ಟಿದೆ. ಪ್ರತ್ಯಂಗಿರಾ ಎಂಬ ಅಥರ್ವಣ ವಿದ್ಯೆಯನ್ನು ಅಪೇಕ್ಷಿಸುವವನು ಹೊಟ್ಟು ಮುಳ್ಳು ಬೂದಿ ಇವುಗಳಿಂದ ಹೋಮಮಾಡಬೇಕು. ದ್ವೇಷಕ್ಕೆ ಪ್ರತೀಕಾರವನ್ನು ಅಪೇಕ್ಷಿಸುವವನು ಕಾಗೆ ಗೂಬೆ ಇವುಗಳ ಗರಿಗಳಿಂದ ಹೋಮ ಮಾಡಬೇಕು.

೧೧-೧೨. ಕರಿಯ ಹಸುವಿನ ತುಪ್ಪದಿಂದ ಕೂಡಿದ ಬಜೆಯ ಚೂರ್ಣವನ್ನು ಚಂದ್ರಗ್ರಹಣಕಾಲದಲ್ಲಿ ಅಗ್ನಿಯಲ್ಲಿ ಹೋಮ ಮಾಡಬೇಕು ಹಾಗೆ ಅಗ್ನಿಯಲ್ಲಿ ಹೋಮದಿಂದ ಪಕ್ವವಾದ ಆ ಬಜೆಯ ಚೂರ್ಣವನ್ನು ಸಾವಿರಬಾರಿ ಅಭಿಮಂತ್ರಿಸಿ ಸೇವಿಸಿದುದೇ ಆದರೆ ಅವನು ಬುದ್ಧಿಶಾಲಿಯಾಗುತ್ತಾನೆ ಪುತ್ರಾರ್ಥಿಯಾದವನು ಸೂರ್ಯೋದಯಕಾಲದಲ್ಲಿ ಸೂರ್ಯನಿಗೆ ಎದುರಾಗಿ ಈ ಮಂತ್ರವನ್ನು ಜಪಿಸಬೇಕು.

೧೩-೧೪. ಏಕಾದಶೀತಿಥಿಯಲ್ಲಿ ಗುಗ್ಗಳ ಅಥವಾ ಲೋಹ, ಅಥವಾ ಬಿಲ್ವ ಕಗ್ಗಲಿ ಇವುಗಳ ಬೇರು ಇವುಗಳಾವುದನ್ನಾದರೂ ದ್ವಿಷಂತನ್ತ್ವವಧಾನಿ ಎಂಬ

ಉಚ್ಚಾಟನಮಿದಂ ಕರ್ಮ ಶತ್ರೂಣಾಂ ಕಥಿತಂ ತವ ।
ತಕ್ರಂ ಧ್ರುವಂ ಭೂಪತಯೋ ಮಹಾವ್ಯಾಹೃತಿಭಿರ್ಭವೇತ್ ॥ ೧೪ ॥

ಸೂರ್ಯಸ್ತ್ವೇತಿ ತಥಾ ಮಂತ್ರಂ ಜ್ಞೇಯಾ ಪ್ರತ್ಯಂಗಿರಾ ಪರಾ ।
ಏತೇನೌದುಂಬರೈರಿಧ್ಮೈರ್ದೇವಂ ವರ್ಷಾಪಯೇದ್ಧ್ರುವಂ ॥ ೧೫ ॥

ಅಹೋರಾತ್ರಂ ಜಲೇ ಜಪ್ತ್ವಾ ಚಕ್ಷುಷ್ಮಾನಿತ್ಯಯಂ ದ್ವಿಜ ।
ಪ್ರಣಷ್ಟಚಕ್ಷುರ್ಧರ್ಮಜ್ಞ ಯೋಗಮಾಪ್ನೋತಿ ಚಕ್ಷುಷಃ ॥ ೧೬ ॥

ಉಪಪ್ರಯಂತಮಿತ್ಯೇತತ್ ಹುತ್ವಾ ವಿಪ್ರೋ ಮಹಾನಸೇ ।
ಅನುವಾಕಂ ಮಹಾಭಾಗ ನಿತ್ಯಮನ್ನೇನ ಯುಜ್ಯತೇ ॥ ೧೭ ॥

ತನೂಪಾಗ್ನೇಽಸಿ ಇತಿ ಚ ದೂರ್ವಾ ಹುತ್ವಾ ರುಜಾನ್ವಿತಃ ।
ವ್ಯಾಧಿಮೋಕ್ಷಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೧೮ ॥

---

ಮಂತ್ರದಿಂದ ಶತ್ರುವಿನ ಮನೆಯಲ್ಲಿ ಹೂಳಬೇಕು. ಈ ಕರ್ಮವು ಶತ್ರುಗಳ ಉಚ್ಚಾಟನೆಗೇ ಕಾರಣವಾಗುತ್ತದೆ ಯಾದುದರಿಂದ ಇದನ್ನು ನಿನಗೆ ಹೇಳಿರುವೆನು.

೧೫-೧೬. ಹಾಗೆಯೇ ಸೂರ್ಯಸ್ತ್ವಾ ಎಂಬ ಮಂತ್ರವನ್ನು ಪ್ರತ್ಯಂಗಿರಾ ಎಂದು ತಿಳಿಯಬೇಕು. ಈ ಮಂತ್ರದಿಂದ ಅತ್ತಿಯ ಸಮಿತ್ತುಗಳನ್ನು ಹೋಮಿಸಿದಲ್ಲಿ ಮಳೆಯು ಆಗಿಯೇ ಆಗುತ್ತದೆ. ಚಕ್ಷುಷ್ಮಾನೆಂಬ ಮಂತ್ರವನ್ನು ಹಗಲಿನಲ್ಲಿಯೂ, ರಾತ್ರಿಯಲ್ಲಿಯೂ ಸಹ ಜಲದಲ್ಲಿ ನಿಂತು ಜಪಿಸಿದಲ್ಲಿ ಕಣ್ಣುಹೋಗಿದ್ದವನೂ ಸಹ ಕಣ್ಣಿನ ಉಪಯೋಗವನ್ನು ಹೊಂದುತ್ತಾನೆ.

೧೭ ೧೮. ಬ್ರಾಹ್ಮಣನಾದವನು ಉಪಪ್ರಯಂತಂ ಎಂಬ ಅನುವಾಕವನ್ನು ಜಪಿಸಿ ಅಡಿಗೆಯ ಮನೆಯಲ್ಲಿ ಹೋಮಮಾಡಿದಲ್ಲಿ ಅವನು ಯಾವಾಗಲೂ ಅನ್ನವನ್ನು ಹೊಂದಿಯೇ ಇರುತ್ತಾನೆ. ರೋಗಿಯಾಗಿ ನರಳುತ್ತಿರುವವನು ತನೂಪಾಗ್ನೇಽಸಿ ಎಂಬ ಋಕ್ಕಿನಿಂದ ಗರಿಕೆಯನ್ನು ಹೋಮಮಾಡಿದಲ್ಲಿ ಅವನು ವ್ಯಾಧಿಯಿಂದ ನಿವೃತ್ತಿ ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

ಇಹೈವ ತೇಭ್ಯಃ ಪತಿತಂ ಗೃಹೀತ್ವಾ ಗೋಮಯಂ ದ್ವಿಜ ।
ಘೃತಾಜ್ಯಮಧುಸಂಯುಕ್ತಂ ಹುತ್ವಾ ಧೇನುಂ ತು ತಾಂ ಲಭೇತ್ । ೧೯ ॥

ಏಷ ತೇ ರುದ್ರಭಾಗೇತಿ ಹುತ್ವಾ ರಾಮ ಗವೇಧುಕಾಃ ।
ಅರ್ಧರ್ಚೇನ ತಥಾಪ್ನೋತಿ ಧನಂ ನಾಸ್ತ್ಯತ್ರ ಸಂಶಯಃ ॥ ೨೦ ॥

ಅರ್ಧರ್ಚೇನ ದ್ವಿತೀಯೇನ ಕ್ಷೇತ್ರಮಧ್ಯೇ ಬಲಿಂ ಹರೇತ್ ।
ಮೂಷಿಕಾ ಶಲಭೋತ್ಪಾತೇ ಸುರಾಮಾಂಸಾಸವಾಧಿಭಿಃ ॥ ೨೧ ॥

ಭೈಷಜ್ಯಮಿತಿ ಮಂತ್ರೇಣ ದಧ್ಯಾಜ್ಯಮಧುಹೋಮಕಃ ।
ಚತುಷ್ಪದಾನಾಂ ಸರ್ವೇಷಾಮುಪಸರ್ಗಂ ವಿನಾಶಯೇತ್ ॥ ೨೨ ॥

ತ್ರ್ಯಂಬಕಂ ಯಜಾಮಹೇತಿ ಹೋಮಃ ಸರ್ವಾರ್ಥಸಾಧಕಃ ।
ಕನ್ಯಾನಾಮ ಗೃಹೀತ್ವಾ ಚ ಕನ್ಯಾಲಾಭಕರಃ ಪರಃ ॥ ೨೩ ॥

---

೧೯–೨೦. ಯಾವ ಹಸುವನ್ನು ತಾನು ಹೊಂದಬೇಕೆಂದಿರುವನೋ ಅಂತಹ (ಹಸುವಿನ ಕೆಳಗೆ ಬಿದ್ದಿರುವ) ಸಗಣಿಯನ್ನು ತೆಗೆದುಕೊಂಡು ಅದನ್ನು ಆಜ್ಯ ಮಧುಗಳೊಡನೆ ಇಹೈವ ತೇಭ್ಯಃ ಎಂಬ ಮಂತ್ರದಿಂದ ಹೋಮಮಾಡಿದುದೇ ಆದರೆ ಅದೇ ಹಸುವನ್ನು ಅವನು ಹೊಂದುತ್ತಾನೆ. ಏಷತೆ ರುದ್ರಭಾಗಃ ಎಂಬ ಋಕ್ಕಿನ ಅರ್ಧದಿಂದ ಕಾಡುಗೋಧಿಯನ್ನು ಹೋಮಮಾಡಿದವನು ಧನವನ್ನು ಹೊಂದುತ್ತಾನೆ.

೨೧–೨೨. ಏಷ ತೇ ಎಂಬ ಮಂತ್ರದ ಉತ್ತರಾರ್ಧ ಭಾಗದಿಂದ ಬೆಳೆಯುವ ಜಮೀನಿನ ಮಧ್ಯದಲ್ಲಿ ಬಲಿಹರಣಮಾಡಬೇಕು. ಕ್ಷೇತ್ರದ ಫಲಕ್ಕೆ ಇಲಿ, ಮಿಡತೆ ಮುಂತಾದುವುಗಳಿಂದ ಬಾಧೆಯು ಸಂಭವಿಸುವ ಸಂದರ್ಭದಲ್ಲಿ ಮದ್ಯ, ಮಾಂಸ, ಸಾರಾಯಿ ಮುಂತಾದುವುಗಳಿಂದ ಬಲಿಹರಣಮಾಡಬೇಕು. ಭೈಷಜ್ಯಂ ಎಂಬ ಮಂತ್ರದಿಂದ ಮೊಸರು, ಅಜ್ಯ, ಜೇನು ಇವುಗಳಿಂದ ಹೋಮಮಾಡಿದಲ್ಲಿ ಚತುಷ್ಪಾದಗಳಾದ ದನ, ಕರು, ಆಡು, ಕುರಿ ಮುಂತಾದುವುಗಳಿಗೆ ಉಂಟಾಗುವ ಪೀಡೆಯು ಪರಿಹೃತವಾಗುತ್ತದೆ.

೨೩–೨೪ ತ್ರ್ಯಂಬಕಂ ಯಜಾಮಹೇ ಎಂಬ ಮಂತ್ರದಿಂದ ಮಾಡುವ ಹೋಮವು ಸಕಲ ವಿಧವಾದ ಇಷ್ಟಸಿದ್ಧಿಗೂ ಸಾಧಕವಾಗುತ್ತದೆ. ಕನ್ಯೆಯ ಲಾಭವನ್ನು ಅಪೇಕ್ಷಿಸುವವನು ಆ ಕನ್ಯೆಯ ಹೆಸರನ್ನು ನಿರ್ದೇಶಿಸಿ ಈ ಮಂತ್ರದಿಂದ

ಭಯೇಷು ಚ ಜಪೇನ್ನಿತ್ಯಂ ಭಯೇಭ್ಯೋ ವಿಪ್ರಮುಚ್ಯತೇ ।
ಧತ್ತೂರಪುಷ್ಪಂ ಸಘೃತಂ ತಥಾಹೃತ್ವಾ ಚತುಷ್ಪಥೇ ॥ ೨೪ ॥

ಶೂನ್ಯೇ ಶಿವಾಲಯೇ ವಾಪಿ ಶಿವಾತ್ಕಾಮಾನವಾಪ್ನುಯಾತ್ ।
ಹುತ್ವಾ ಚ ಗುಗ್ಗುಲಂ ರಾಮ ಸ್ವಯಂ ಪಶ್ಯತಿ ಶಂಕರಂ ॥ ೨೫ ॥

ಆಕೂತ್ಯಾ ಇತಿ ಚೈವಾಷ್ಟೌ ಋಚೋ ಹುತ್ವಾ ಘೃತಾದಿಭಿಃ ।
ಅನ್ವಹಂತ್ವಾಪದಾಂ ನಾಶಂ ಸ್ವಕುಲೇ ಕುರುತೇ ಧ್ರುವಂ ॥ ೨೬ ॥

ಭವತ್ಯುತ್ತರವಾದೀ ಚ ಜಪ್ತ್ವಾ ಚ ವಿದಸೀತ್ಯೃಚಂ ।
ಅಗ್ನೇಸ್ತ್ವನೋರಿತಿ ತಥಾ ಹುತ್ವಾ ಚ ತಿಲತಂಡುಲೈಃ ॥ ೨೭ ॥

ಸಹಸ್ರಶಸ್ತು ಧರ್ಮಜ್ಞ ಭವೇತ್ಸರ್ವಾತಿಥಿರ್ನರಃ ।
ಯುಂಜತೇ ಮನ ಇತ್ಯೇತದನುವಾಕಂ ತು ವೈಷ್ಣವಂ ॥ ೨೮ ॥

---

ಹೋಮಮಾಡಿದಲ್ಲಿ ಉತ್ಕೃಷ್ಟವಾದ ಅಂತಹ ಕನ್ಯಾಲಾಭವೂ ಉಂಟಾಗುತ್ತದೆ. ಭಯವು ಉಂಟಾದ ಸಮಯದಲ್ಲಿ ನಿತ್ಯವೂ ಈ ಮಂತ್ರವನ್ನು ಜಪಿಸಿದಲ್ಲಿ ಅಂತಹ ಭಯಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.

೨೫–೨೬. ದತ್ತೂರಿಯ ಹೂವನ್ನು ಆಜ್ಯದೊಡನೆ ನಾಲ್ಕು ಬೀದಿಗಳು ಸೇರುವ ಸ್ಥಳದಲ್ಲಾಗಲಿ, ಶೂನ್ಯವಾಗಿರುವ ಶಿವಾಲಯದಲ್ಲಾಗಲಿ ಹೋಮಮಾಡಿದಲ್ಲಿ ಶಂಕರನಿಂದ ಹೊಂದಬಹುದಾದ ಎಲ್ಲಾ ಇಷ್ಟಗಳನ್ನೂ ಹೊಂದುತ್ತಾನೆ. ಆಕೂತ್ಯಾ ಎಂಬ ಎಂಟು ಋಕ್ಕುಗಳಿಂದ ಆಜ್ಯಹೋಮವನ್ನು ನಿತ್ಯವೂ ಮಾಡುವವನು ತನ್ನ ವಂಶಕ್ಕೇ ಉಂಟಾಗುವ ವಿಪತ್ತುಗಳನ್ನು ನಿಯತವಾಗಿಯೂ ನಾಶಪಡಿಸಿ ಕೊಳ್ಳುತ್ತಾನೆ.

೨೭–೨೮. ವಿದಸೀ ಎಂಬ ಋಕ್ಕನ್ನು ಜಪಿಸಿದವನು ವಿವಾದಗಳಲ್ಲಿ ಬಹಳ ಮಟ್ಟಿಗೂ ಉತ್ತರ ಹೇಳಲು ಸಮರ್ಥನಾಗುತ್ತಾನೆ. ಹಾಗೆಯೇ ಅಗ್ನೇಸ್ತ್ವನೋಃ ಎಂಬ ಋಕ್ಕಿನಿಂದ ಸಾವಿರ ಸಲ ಎಳ್ಳು ಮತ್ತು ಅಕ್ಕಿ ಇವನ್ನು ಹೋಮಮಾಡಿದಲ್ಲಿ ಅಂತಹ ಮನುಷ್ಯನು ಎಲ್ಲರಿಂದಲೂ ಅತಿಥಿಯಂತೆ ಭಾವಿಸಲ್ಪಡುತ್ತಾನೆ. ಯುಂಜತೇ ಮನಃ ಎಂಬ ವೈಷ್ಣವಾನುವಾಕವನ್ನು ಸಾಯಂಕಾಲದಲ್ಲಿಯೂ, ಪ್ರಾತಃಕಾಲದ ಲ್ಲಿಯೂ ಸಹ ಜಪಿಸುವವನು ದೀರ್ಘವಾದ ಆಯುಸ್ಸನ್ನು ಹೊಂದುತ್ತಾನೆ.

**ಸಾಯಂಪ್ರಾತಃ ಸಮಾಸೀತ ದೀರ್ಘಮಾಯುರವಾಪ್ನುಯಾತ್ ।**
**ದಿವೋವಾ ವಿಷ್ಣ ಇತ್ಯಸ್ಯ ಕರ್ಮ ವ್ಯಾಹೃತಿವದ್ಭವೇತ್ ॥ ೨೯ ॥**

**ವಿಷ್ಣೋರರಾಟಮಿತ್ಯೇತತ್ಸರ್ವಬಾಧಾ ವಿನಾಶನಂ ।**
**ರಕ್ಷೋಘ್ನಂ ಚ ಯಶಸ್ಯಂ ಚ ತಥೈವ ವಿವರಪ್ರದಂ ॥ ೩೦ ॥**

**ಅಯನ್ನೋ ಯಜ್ಞ ಇತ್ಯೇತತ್ಸಂಗ್ರಾಮೇ ವಿಜಯಪ್ರದಂ ।**
**ಇದಮಾಪಃ ಪ್ರವಹತ ಸ್ನಾನೇ ಪಾಪಾಪನೋದನಂ ॥ ೩೧ ॥**

**ದೈವಾಂಶ ಇತಿ ದೈವೇ ತದಭಿಚಾರೇಷು ಯೋಜಯೇತ್ ।**
**ವ್ಯಾಧಿಘಾತಃ ಸಮಿದ್ಭಿಸ್ತು ರಾಜಿಕಾಸೃಗ್ವಿಷೈಸ್ತಥಾ ॥ ೩೨ ॥**

**ಯಕ್ಷ್ಮಾಹೀತಿ ತಥಾ ಹುತ್ವಾ ಬಹಿರ್ನಿರ್ಗಮ್ಯ ಮಾನವಃ ।**
**ಉಪಶ್ರುತಿಂ ತು ಗೃಹ್ಣೀಯಾತ್ಸಾ ತಸ್ಯಾವಿತಥಾ ಭವೇತ್ ॥ ೩೩ ॥**

---

೨೯-೩೧. ದಿವೋವಾ ವಿಷ್ಣ ಎಂಬ ಮಂತ್ರದ ವಿನಿಯೋಗ ಕ್ರಮವು ಮಹಾವ್ಯಾಹೃತಿಯಂತೆಯೇ ಆಗುತ್ತದೆ. ವಿಷ್ಣೋರರಾಟ ಎಂಬ ಮಂತ್ರವು ಸಕಲ ಬಾಧೆಗಳನ್ನೂ ನಾಶಪಡಿಸುತ್ತದೆ. ಮತ್ತು ಕರ್ಮಗಳಲ್ಲಿ ರಾಕ್ಷಸ ಬಾಧೆಗೆ ನಾಶಕವಾಗಿಯೂ, ಯಶಸ್ಕರವಾಗಿಯೂ, ಆಯಾಯ ಕಾರ್ಯಗಳಲ್ಲಿ ಅವಕಾಶಪ್ರದವೂ ಆಗುತ್ತದೆ. ಅಯನ್ನೋಯಜ್ಞಃ ಎಂಬ ಮಂತ್ರವು ಯುದ್ಧದಲ್ಲಿ ವಿಜಯಕ್ಕೆ ಸಾಧಕವಾಗುತ್ತದೆ. "ಇದಮಾಪಃ ಪ್ರವಹತ " ಎಂಬ ಮಂತ್ರವು ಸ್ನಾನದಿಂದ ಪಾಪನಾಶಕವಾಗುತ್ತದೆ.

೩೨-೩೩. ದೈವಾಂಶಃ ಎಂಬ ಋಕ್ಕನ್ನು ಅಭಿಚಾರವ್ಯಾಪಾರಗಳಲ್ಲಿ ಆ ದೇವತೆಯಲ್ಲಿಯೇ ಉಪಯೋಗಿಸಬೇಕು ಸಮಿತ್ತು, ಕರಿಯಸಾಸವೆ, ರಕ್ತ, ವಿಷ ಇತ್ಯಾದಿಗಳಿಂದ ಮಾಡುವ ಆ ಕರ್ಮವು ವ್ಯಾಧಿನಾಶಕವಾಗುತ್ತದೆ. ಯಕ್ಷ್ಮಾಹಿ ಎಂಬ ಮಂತ್ರದಿಂದ ಹೋಮಮಾಡಿ ಹೊರಗೆ ಬಂದು ಉಪಶ್ರುತಿಯನ್ನು ಗ್ರಹಿಸಿದೊಡನೆಯೇ ಆ ಉಪಶ್ರುತಿಯೇ ಇವನಿಗೆ ಸಾರ್ಥಕವಾಗಿ ಪರಿಣಮಿಸುತ್ತದೆ. (ಇಷ್ಟವಾದ ಫಲಕ್ಕೆ ಸೂಚಕವಾಗುತ್ತದೆ ಎಂದು ತಾತ್ಪರ್ಯ.)

೩೪-೩೫. ಅಗ್ನೇ ಪವಸ್ವ ಎಂಬ ಮಂತ್ರದಿಂದ ಹೋಮಮಾಡಿದಲ್ಲಿ ಅದು ಬ್ರಹ್ಮತೇಜಸ್ಸಿನ ಅಭಿವೃದ್ಧಿಗೆ ಕಾರಣವಾಗುತ್ತದೆ ಉದುತ್ಯಂ ಚಿತ್ರಂ ಎಂಬ ಋಕ್ಕಿನ ಪ್ರಯೋಗವು ವ್ಯಾಹೃತಿಯಂತೆಯೇ ನಡೆಸತಕ್ಕದ್ದಾಗಿದೆ. ಯಾವ

ಅಗ್ನೇ ಪವಸ್ವೇತಿ ಹುತಂ ಬ್ರಹ್ಮವರ್ಚಸಕಾರಕಂ ।
ಉದುತ್ಯಂ ಚಿತ್ರಮಿತ್ಯಸ್ಯ ಕರ್ಮ ವ್ಯಾಹೃತಿವದ್ಭವೇತ್ ॥ ೩೪ ॥

ಯಸ್ಮಾನ್ನರಾದಭ್ಯಧಿಕೋ ನರೋ ಭವಿತುಮಿಚ್ಛತಿ ।
ಸ್ವಸ್ತಿನೇಂದ್ರೇತಿ ತು ಜಪೇತ್ತಸ್ಯ ನಾಮಾಂತಸಂಯುತಂ ॥ ೩೫ ॥

ಭವತ್ಯಭ್ಯಧಿಕಸ್ತಸ್ಮಾದ್ವಿದ್ಯಯಾ ಯಶಸಾ ಶ್ರಿಯಾ ।
ತಥಾ ಹೋಮಾದನೇನೈವ ದಾಸಲಾಭಮವಾಪ್ನುಯಾತ್ ॥ ೩೬ ॥

ವಿಶ್ವಕರ್ಮಹವಿಷ್ಯಂ ಚ ಸೂಚೀಂ ಲೌಹೀಂ ದಶಾಂಗುಲೀಂ ।
ಕನ್ಯಾಗ್ರೇ ನಿಖನೇದ್ದ್ವಾರಿ ತತಸ್ತಸ್ಮೈ ಪ್ರದೀಯತೇ ॥ ೩೭ ॥

ದೇವಸ್ಯೇತಿ ತರೀತೇನ ಹುತೇನೈವಾನ್ನವಾನ್ ಭವೇತ್ ।
ವಾಜಸ್ಯಸತಿ ಚೈತೇನ ಹುತ್ವಾಜ್ಯಂ ಸಪ್ತಭಿಃ ದ್ವಿಜಃ ॥ ೩೮ ॥

---

ಮನುಷ್ಯನು ಮತ್ತೊಬ್ಬ ಮನುಷ್ಯನಿಗಿಂತ ಅಧಿಕನಾಗಬೇಕೆಂದು ಬಯಸುತ್ತಾನೆಯೋ ಅವನು ಸ್ವಸ್ತಿನೇಂದ್ರ ಎಂಬ ಮಂತ್ರವನ್ನು ಮತ್ತೊಬ್ಬನ ಹೆಸರಿನ ಕೊನೆಯ ಅಕ್ಷರದಿಂದ ಕೂಡಿಸಿ ಜಪಿಸಬೇಕು.

೩೬–೩೭. ಹೀಗೆ ಜಪಿಸಿದಲ್ಲಿ ವಿದ್ಯೆ, ಯಶಸ್ಸು, ಸಂಪತ್ತು ಇವುಗಳಿಂದ ಅವನಿಗಿಂತಲೂ ಅಧಿಕನಾಗಿ ಆಗುತ್ತಾನೆ. ಹಾಗೆಯೇ ಆ ಮಂತ್ರದಿಂದ ಹೋಮ ಮಾಡಿದಲ್ಲಿ ಸರಿಯಾದ ದಾಸನನ್ನೂ ಹೊಂದುತ್ತಾನೆ. ಶಿಲ್ಪಿಯಿಂದ ಮಾಡಲ್ಪಟ್ಟ ಹವಿಸ್ಸನ್ನೂ ಲೋಹದಿಂದ ಮಾಡಲಾದ ಹತ್ತು ಅಂಗುಲ ಉದ್ದವುಳ್ಳ ಸೂಜಿಯನ್ನೂ ಸಹ ಕನ್ಯೆಯ ಎದುರಿಗೆ ಮನೆಯ ಬಾಗಿಲಿನಲ್ಲಿ ಹೂಳಬೇಕು. ಹೀಗೆ ಮಾಡುವುದರಿಂದ ಆ ಕನ್ಯೆಯು ಅವನಿಗೇ ಕೊಡಲ್ಪಡುತ್ತಾಳೆ.

೩೮–೩೯. ದೇವಸ್ಯೇತಿ ತರೀತೇನ ಎಂಬ ಋಕ್ಕಿನಿಂದ ಹೋಮಮಾಡಿದವನು ಅನ್ನವನ್ನು ಹೊಂದುತ್ತಾನೆ. ವಾಜಸ್ಯಸತಿ ಎಂಬ ಏಳು ಮಂತ್ರಗಳಿಂದ ಆಜ್ಯ ಹೋಮವನ್ನು ಮಾಡಿ ಯಾವ ಧಾನ್ಯವನ್ನು ಹೋಮಮಾಡುತ್ತಾನೆಯೋ ಅವನು

ಯುದೇವಜುಹುಯಾತ್ಸಶ್ವಾತ್ತದೇವಾಕ್ಷಯಮಾಪ್ನುಯಾತ್
ಅಗ್ನೇಅಚ್ಛೇತಿ ಜುಹುಯಾದ್ಧನಕಾಮೋ ದ್ವಿಜೋತ್ತಮಃ || ೩೯ ||

ತಿಲೈರ್ಯವೈಶ್ಚ ಧರ್ಮಜ್ಞ ಸ್ತಥಾಪಾಮಾರ್ಗತಂಡುಲೈಃ |
ಸಹಸ್ರಮಂತ್ರಿತಾಂ ಕೃತ್ವಾ ತಥಾ ಗೋರೋಚನಾಂ ದ್ವಿಜಃ || ೪೦ ||

ತಿಲಕಂ ಚ ತಥಾ ಕೃತ್ವಾ ಜನಸ್ಯ ಪ್ರಿಯತಾಂ ವ್ರಜೇತ್ |
ಪೌರ್ಣಮಾಸ್ಯಾಂ ತಥಾ ಹುತ್ವಾ ಮೇಘಂ ರಾಜಾನಮಿತ್ಯಪಿ || ೪೧ ||

ಉಪಸ್ಥಾನಂ ತಥಾ ಕೃತ್ವಾ ದತ್ವಾಚಾನ್ನಂ ದ್ವಿಜನ್ಮನೇ |
ಸೋಮಯಾಜೀ ಭವೇದ್ರಾಮ ನಾತ್ರ ಕಾರ್ಯಾ ವಿಚಾರಣಾ || ೪೨ ||

ಏಷ ತೇ ನಿರ್ಋತೇ ತ್ಯಾಭಿರಭಿಚಾರಕಕರ್ಮಣಾ |
ಗೃಹಾನ್ನೈರ್ಋತ್ಯಕೇ ಭಾಗೇ ಹುತ್ವಾ ಸ್ನಾತ್ವಾ ನದೀಜಲೇ || ೪೩ ||

---

ಅನಂತರ ಅಕ್ಷಯವಾದ ಆ ಧಾನ್ಯವನ್ನೇ ಹೊಂದುತ್ತಾನೆ. ಧನಾಕಾಂಕ್ಷಿಯಾದ ದ್ವಿಜನು ಅಗ್ನೆ ಅಚ್ಛ ಎಂಬ ಮಂತ್ರದಿಂದ ಹೋಮಮಾಡಬೇಕು. ಆ ಹೋಮವನ್ನೂ ಸಹ ಎಳ್ಳು ಮತ್ತು ಯವಧಾನ್ಯ ಮತ್ತು ಉತ್ತರಣಿಯ ಅಕ್ಕಿ ಇವುಗಳಿಂದ ಮಾಡಬೇಕು.

೪೦-೪೨. ಹಾಗೆಯೇ ಈ ಮಂತ್ರದಿಂದ ಗೋರೋಚನವನ್ನು ಸಾವಿರಬಾರಿ ಅಭಿಮಂತ್ರಿಸಿ ಅದರಿಂದ ತಿಲಕವನ್ನು ಧರಿಸಿದಲ್ಲಿ ಅವನು ಜನರ ಪ್ರೀತಿಗೆ ಪಾತ್ರನಾಗುತ್ತಾನೆ. ಪೌರ್ಣಮಾಸ್ಯೆಯಲ್ಲಿ ಮೇಘಂ ರಾಜಾನಂ ಎಂಬ ಮಂತ್ರದಿಂದ ಹೋಮಮಾಡಿ ಅಗ್ನಿಯ ಉಪಸ್ಥಾನವನ್ನೂ ಮಾಡಿ ಬ್ರಾಹ್ಮಣರಿಗೆ ಅನ್ನದಾನವನ್ನೂ ಮಾಡಿದ್ದೇ ಆದರೆ ಅವನು ಸೋಮಯಾಜಿಯಾಗಿಯೇ ಆಗುತ್ತಾನೆ. ಈ ವಿಷಯದಲ್ಲಿ ವಿಚಾರ ಮಾಡಬೇಕಾದುದಿಲ್ಲ.

೪೩-೪೪. ಏಷತೆ ನಿರ್ಋತೆ ಎಂಬ ಮಂತ್ರಗಳಿಂದ ಅಭಿಚಾರಕಕರ್ಮಗಳನ್ನು ಆರಂಭಿಸಿ ಮನೆಯ ನೈಋತ್ಯದಿಕ್ಕಿನಲ್ಲಿ ಆ ಅಭಿಚಾರವಿಧಿಯಿಂದ ಹೋಮಮಾಡಿ

ಕಾಪಿಲಾದ್ಗೋಮಯಾನ್ನಿತ್ಯಂ ಪಂಚಗವ್ಯಾಭಿಷೇಚಿತಂ ।
ಕೃತ್ವಾ ರುದ್ರಾಂಸ್ತಥಾ ಜಪ್ತ್ವಾ ಮೈತ್ರಮಾಪ್ನೋತಿ ಗುಹ್ಯಕೈಃ ॥ ೪೪ ॥

ರುದ್ರಾಣಾಂ ಚ ತಥಾ ಜಪ್ಯಂ ಸರ್ವಾಘವಿನಿಷೂದನಂ ।
ಸರ್ವಕರ್ಮಕರಂ ಹೋಮಂ ತಥಾ ಸರ್ವತ್ರ ಶಾಂತಿದಂ ॥ ೪೫ ॥

ಅಜಾವಿಕಾನಾಮಶ್ವಾನಾಂ ಕುಂಜರಾಣಾಂ ತಥಾ ಗವಾಂ ।
ಮನುಷ್ಯಾಣಾಂ ನರೇಂದ್ರಾಣಾಂ ಬಾಲಾನಾಂ ಯೋಷಿತಾಮಪಿ ॥ ೪೬ ॥

ಗ್ರಾಮಾಣಾಂ ನಗರಾಣಾಂ ಚ ದೇಶಾನಾಮಪಿ ಭಾರ್ಗವ ।
ಅನಿದ್ರುತಾನಾಂ ಧರ್ಮಜ್ಞ ವ್ಯಾಧಿತಾನಾಂ ತಥೈವ ಚ ॥ ೪೭ ॥

ಮರಣೇ ಸಮನುಪ್ರಾಪ್ತೇ ರಿಪುಜೇ ಚ ತಥಾ ಭಯೇ ।
ರುದ್ರಹೋಮಃ ಪರಾ ಶಾಂತಿಃ ಪಾಯಸೇನ ಘೃತೇನ ಚ ॥ ೪೮ ॥

---

ನದೀಜಲದಲ್ಲಿ ಸ್ನಾನಮಾಡಬೇಕು. ಅನಂತರ ಕಪಿಲಗೋವಿನ ಗೋಮಯದಿಂದ ಪಂಚಗವ್ಯವನ್ನು ಮಾಡಿ ಅದರಿಂದ ತಾನು ಅಭಿಷೇಕ ಹೊಂದಿ ರುದ್ರಸೂಕ್ತಗಳನ್ನು ಜಪಮಾಡಿದಲ್ಲಿ ಗುಹ್ಯಕರೊಡನೆ ಮೈತ್ರಿಯನ್ನು ಹೊಂದುತ್ತಾನೆ.

೪೫–೪೮. ರುದ್ರಸೂಕ್ತಗಳ ಜಪವು ಎಲ್ಲಾ ಪಾಪಗಳಿಗೂ ನಾಶಕವಾಗುತ್ತದೆ. ಆ ಸೂಕ್ತಗಳ ಹೋಮವೂ ಸಹ ಎಲ್ಲಾ ಕರ್ಮಗಳಿಗೂ ಸಾಧಕ ಮತ್ತು ಶಾಂತಿಪ್ರದ ಆಡು, ಕುರಿ, ಕುದುರೆ, ಆನೆ, ವನಕರುಗಳು, ಮನುಷ್ಯರು, ರಾಜರುಗಳು, ಬಾಲಕರು, ಸ್ತ್ರೀಯರು ಮತ್ತು ಗ್ರಾಮಗಳು, ನಗರಗಳು, ದೇಶಗಳು ಇವುಗಳು ಕಷ್ಟದಲ್ಲಿ ಸಿಕ್ಕಿಯಾಗಲಿ, ವ್ಯಾಧಿಗ್ರಸ್ತಗಳಾಗಲಿ ಆಗಿದ್ದಲ್ಲಿ ಅಥವಾ ಮರಣೋನ್ಮುಖವಾಗಿಯಾಗಲಿ, ಶತ್ರುಭಯಕ್ಕೆ ಗುರಿಯಾಗಿ ಆಗಲಿ ಆಗಿದ್ದಲ್ಲಿ ಇದಕ್ಕೆಲ್ಲವೂ ರುದ್ರಹೋಮವೇ ಉತ್ತಮವಾದ ಶಾಂತಿಯಾಗುತ್ತದೆ. ಅದನ್ನು ಪಾಯಸದಿಂದಾಗಲಿ, ಆಜ್ಯದಿಂದಾಗಲಿ ಮಾಡಬೇಕು.

ಕೂಶ್ಮಾಂಡೈರ್ಘೃತಹೋಮೇನ ಸರ್ವಾನ್ಪಾಪಾನಪೋಹತಿ ।
ಸಕ್ತುಯಾವಕಭೈಕ್ಷಾಶೀ ನಕ್ತಂ ಮನುಜಸತ್ತಮ ॥ ೪೯ ॥

ಬಹಿಃಸ್ನಾನರತೋ ಮಾಸಾನ್ಮುಚ್ಯತೇ ಬ್ರಹ್ಮಹತ್ಯಯಾ ।
ಮಧುವಾತೇತಿ ಮಂತ್ರೇಣ ಹುತ್ವೈವಾಜ್ಯಮತಂದ್ರಿತಃ ॥ ೫೦ ॥

ಸಹಸ್ರಶಸ್ತು ಧರ್ಮಜ್ಞ ದೀರ್ಘಮಾಪ್ನೋತಿ ಜೀವಿತಂ ।
ಹುತ್ವಾ ದಧ್ನಾ ತಥಾ ಪುತ್ರಾನಾಪ್ನೋತಿ ಮನಸೇಪ್ಸಿತಾನ್ ॥ ೫೧ ॥

ಗುಗ್ಗುಲೋಃ ಕಣಿಕಾಭಿಸ್ತು ಸೌಭಾಗ್ಯಂ ವಿಂದತೇ ಧ್ರುವಂ ।
ಕೃತ್ವಾಷ್ಟಪತ್ರಂ ಕಮಲಂ ತನ್ಮಧ್ಯೇ ಶಶಿನಂ ಲಿಖೇತ್ ॥ ೫೨ ॥

ಲವಣೇನ ತತಸ್ತಸ್ಯ ಪೂಜಾಂ ಕೃತ್ವಾ ಯಥಾವಿಧಿ ।
ಸೌಭಾಗ್ಯಂ ಮಹದಾಪ್ನೋತಿ ಮಧುವಾತೇತಿ ವೈ ಜಪನ್ ॥ ೫೩ ॥

---

೪೯–೫೦. ಕೂಶ್ಮಾಂಡ ಮಂತ್ರಗಳಿಂದ ಮಾಡುವ ಹೋಮವು ಸರ್ವ ಪಾಪಗಳಿಗೂ ನಾಶಕವಾಗುತ್ತದೆ. ಹುರಿಟ್ಟು, ಮರದ ಹಾಲು, ಭಿಕ್ಷಾಶನ ಇವುಗಳನ್ನು ರಾತ್ರಿಯ ಹೊತ್ತು ಮಾತ್ರ ಅಶನಮಾಡಿಕೊಂಡು ನಿತ್ಯವೂ ಹೊರಗಿರುವ ನದೀತಟಾಕಾದಿ ಜಲಾಶಯಗಳಲ್ಲಿಯೇ ಸ್ನಾನಮಾಡುತ್ತಾ ಒಂದು ತಿಂಗಳು ಈ ನಿಯಮದಲ್ಲಿದ್ದಲ್ಲಿ ಅವನು ಬ್ರಹ್ಮಹತ್ಯೆಯಿಂದ ಮುಕ್ತನಾಗುತ್ತಾನೆ. ಮಧುವಾತಾ ಎಂಬ ಮಂತ್ರದಿಂದ ಬಹಳ ಜಾಗರೂಕತೆಯಿಂದ ಸಾವಿರಬಾರಿ ಆಜ್ಯಾಹುತಿಯನ್ನು ಮಾಡಿದಲ್ಲಿ ಅವನು ದೀರ್ಘವಾದ ಆಯುಸ್ಸನ್ನು ಹೊಂದುತ್ತಾನೆ.

೫೧–೫೩. ಇದೇ ಮಂತ್ರದಿಂದ ಮೊಸರಿನಿಂದ ಹೋಮಮಾಡಿದಲ್ಲಿ ಅಂತಹವನು ತನ್ನ ಮನಸ್ಸಿಗೆ ಇಷ್ಟರಾದ ಮಕ್ಕಳನ್ನು ಹೊಂದುತ್ತಾನೆ. ಗುಗ್ಗುಲುವಿನ ಪುಡಿಯಿಂದ ಈ ಮಂತ್ರದಿಂದ ಹೋಮಮಾಡಿದವನು ಬಹಳ ಸೌಭಾಗ್ಯಶಾಲಿಯಾಗುತ್ತಾನೆ. ಎಂಟು ಪತ್ರಗಳುಳ್ಳ ಕಮಲವನ್ನು ನಿರ್ಮಿಸಿ ಅದರ ಮಧ್ಯದಲ್ಲಿ ಚಂದ್ರನನ್ನು ಬರೆಯಬೇಕು. ಆ ಪದ್ಮಕ್ಕೆ ಉಪ್ಪಿನಿಂದ ಯಥಾವಿಧಿಯಾಗಿ ಪೂಜೆಮಾಡಿ ಮಧುವಾತಾ ಎಂಬ ಈ ಮಂತ್ರವನ್ನು ಜಪಿಸಿದಲ್ಲಿ ಅವನು ಹೆಚ್ಚಾದ ಸೌಭಾಗ್ಯವನ್ನು ಹೊಂದುತ್ತಾನೆ.

ಜಪ್ತ್ವಾ ಪುಷ್ಪವತೀತ್ಯೇವಂ ಮಂತ್ರಂ ರಾಮ ಸಹಸ್ರಶಃ ।
ದೇವತಾಯೈ ನಿವೇದ್ಯೈವ ಕುಸುಮಾನಿ ಶಿವಂ ಭವೇತ್ ॥ ೫೪ ॥

ಜೀಮೂತಸ್ಯೈವ ಭವತಿ ಮಂತ್ರಂ ಜಯಕರಂ ದ್ವಿಜ ।
ಪಯಸ್ವತೀತಿ ಪಯಸಾ ತಥಾ ಹುತ್ವಾ ಸಹಸ್ರಶಃ ॥ ೫೫ ॥

ಬ್ರಹ್ಮವರ್ಚಸಮಾಪ್ನೋತಿ ದಧ್ನಾವಾ ಭೃಗುನಂದನ ।
ದಧಿಕ್ರಾವ್ಣೇತಿ ಹುತ್ವಾ ತು ಪುತ್ರಾನ್ ಪ್ರಾಪ್ನೋತ್ಯಸಂಶಯಂ ॥ ೫೬ ॥

ತಥಾ ಘೃತವತೀತ್ಯೇತದಾಯುಷ್ಯಂ ಸ್ಯಾತ್ ಘೃತೇನ ತು ।
ಬೋಧಶ್ಚ ಮೇತಿ ಕಥಿತಂ ತಥಾಸ್ವಸ್ತ್ಯಯನಂ ಪರಂ ॥ ೫೭ ॥

ಸ್ವಸ್ತಿನ ಇಂದ್ರೇತ್ಯೇತಂ ಚ ಸರ್ವಬಾಧಾವಿನಾಶನಂ ।
ಇಹ ಗಾವಃ ಪ್ರಜಾಯಧ್ವಮಿತಿ ಪುಷ್ಟಿವಿವರ್ಧನಂ ॥ ೫೮ ॥

ಸ್ರುವೇಣ ದೇವಸ್ಯತ್ವೇತಿ ಹುತ್ವಾಪಾಮಾರ್ಗತಂಡುಲಂ ।
ಮುಚ್ಯತೇ ವಿಕೃತಾಚ್ಛೇಷ್ರುಮಭಿಚಾರಾನ್ನ ಸಂಶಯಃ ॥ ೫೯ ॥

---

೫೪–೫೬. ಪುಷ್ಪವತೀ ಎಂಬ ಮಂತ್ರವನ್ನು ಸಾವಿರಸಲ ಜಪಿಸಿ ಪುಷ್ಪಗಳನ್ನು ದೇವತೆಗೆ ನಿವೇದಿಸಿದಲ್ಲಿ ಮಂಗಳ ಉಂಟಾಗುತ್ತದೆ. ಜೀಮೂತಸ್ಯೈವ ಎಂಬ ಮಂತ್ರವು ಜಯಪ್ರದವಾಗಿ ಪರಿಣಮಿಸುತ್ತದೆ. ಪಯಸ್ವತೀ ಎಂಬ ಮಂತ್ರದಿಂದ ಸಾವಿರಬಾರಿ ಹೋಮಮಾಡಿದವನು ಬ್ರಹ್ಮವರ್ಚಸ್ಸನ್ನು ಹೊಂದುತ್ತಾನೆ. ದಧಿಕ್ರಾವ್ಣಾ ಎಂಬ ಮಂತ್ರದಿಂದ ಮೊಸರನ್ನು ಹೋಮಮಾಡಿದವನು ನಿಸ್ಸಂಶಯವಾಗಿಯೂ ಪುತ್ರರನ್ನು ಹೊಂದುತ್ತಾನೆ.

೫೭–೫೮. ಹಾಗೆಯೇ ಘೃತವತೀ ಎಂಬ ಮಂತ್ರದಿಂದ ಮಾಡಿದ ಆಜ್ಯಾಹುತಿಯು ಆಯುಷ್ಯದಾಯಕವಾಗುತ್ತದೆ. ಬೋಧಶ್ಚಮೇ ಎಂಬ ಮಂತ್ರವು ಬಹಳ ಮಟ್ಟಿಗೂ ಮಂಗಳಪ್ರದವಾದುದು. ಸ್ವಸ್ತಿನ ಇಂದ್ರೋ ಎಂಬ ಮಂತ್ರವು ಸಕಲ ಪೀಡಾಪರಿಹಾರಕವಾದುದು. ಇಹಗಾವಃ ಪ್ರಜಾಧ್ವಂ ಎಂಬ ಮಂತ್ರವು ಬಹಳ ಮಟ್ಟಿಗೂ ಪುಷ್ಟಿವರ್ಧಕವಾಗುತ್ತದೆ.

೫೯–೬೦. ದೇವಸ್ಯತ್ವಾ ಎಂಬ ಮಂತ್ರದಿಂದ ಉತ್ತರಣಿಯ ಅಕ್ಕಿಯನ್ನು ಸ್ರುವದಿಂದ ಹೋಮಮಾಡಿದಲ್ಲಿ ಅವನು ಇತರರು ಮಾಡಿರುವ ಅಭಿಚಾರದಿಂದ ಉಂಟಾದ ಅಂಗವೈಕಲ್ಯದಿಂದ ಮುಕ್ತನಾಗುತ್ತಾನೆ. ಬಹಿತ್ವದನ್ಯತ್ ಎಂಬ

ಬಹಿತ್ವದನ್ಯದಿತ್ಯೇತತ್ಕರ್ಮ ವ್ಯಾಹೃತಿವದ್ಭವೇತ್ ।
ಭದ್ರಯಂತೇ ಪಲಾಶಸ್ಯ ಸಮಿದ್ಭಿಃ ಕನಕಂ ಲಭೇತ್ ॥ ೬೦ ॥

ಹಂಸಶ್ಶುಚಿಷದಿತ್ಯೇತಜ್ಜಪಂಸ್ತೋಯೇಽಘನಾಶನಂ ।
ಚತ್ವಾರಿಶೃಂಗೇತ್ಯೇತಚ್ಚ ಸರ್ವಪಾಪಹರಂ ಜಲೇ ॥ ೬೧ ॥

ದೇವಯಜ್ಞೇತಿ ಜಪ್ತ್ವಾ ತು ಬ್ರಹ್ಮಲೋಕೇ ಮಹೀಯತೇ ।
ಜಪ್ತ್ವಾ ಪಿತೃಭ್ಯ ಇತ್ಯೇತತ್ತತ್ತೃಪ್ತಿಂ ಪ್ರಾಪ್ನುಯಾನ್ನರಃ ॥ ೬೨ ॥

ವಸಂತೇತಿ ಚ ಹುತ್ವಾಜ್ಯಮಾದಿತ್ಯಾದ್ಧನಮಾಪ್ನುಯಾತ್ ।
ಶಿವೋಭವಸ್ವಾಗ್ನ್ಯಿತ್ಯೇತೇ ವ್ರೀಹಿಭಿರ್ಜುಹುಯಾನ್ನರಃ ॥ ೬೩ ॥

ಯಾವ್ಯೇನ ಇತಿ ಚೈತಚ್ಚ ತಸ್ಕರೇಭ್ಯೋ ಭಯಾವಹಂ[1] ।
ದಂಷ್ಟ್ರಾಭ್ಯಾಮಿತಿ ಚೈತಚ್ಚ ವ್ರೀಹಿಭಿರ್ಜುಹುಯಾನ್ನರಃ ॥ ೬೪ ॥

---

ಮಂತ್ರದ ಪ್ರಯೋಗಕ್ರಮವು ವ್ಯಾಹೃತಿಯಂತೆಯೇ ಆಗುತ್ತದೆ. ಭದ್ರಯಂತೆ ಎಂಬ ಮಂತ್ರದಿಂದ ಮುತ್ತುಗದ ಸಮಿತ್ತುಗಳನ್ನು ಹೋಮಮಾಡಿದಲ್ಲಿ ಅವನು ಸುವರ್ಣವನ್ನು ಹೊಂದುತ್ತಾನೆ.

೬೧-೬೨. ಹಂಸಶ್ಶುಚಿಷತ್ ಎಂಬ ಅಘನಾಶಕವಾದ ಮಂತ್ರವನ್ನೂ ಸಹ ನೀರಿನಲ್ಲಿಯೇ ನಿಂತು ಜಪಿಸಬೇಕು. ದೇವಯಜ್ಞ ಎಂಬ ಮಂತ್ರವನ್ನು ನಿಯಮದಿಂದ ಜಪಿಸಿದವನು ಬ್ರಹ್ಮಲೋಕವನ್ನು ಹೊಂದಿ ಅಲ್ಲಿಯೂ ಪೂಜ್ಯನಾಗುತ್ತಾನೆ. ಪಿತೃಭ್ಯಃ ಎಂಬ ಮಂತ್ರವನ್ನು ಜಪಿಸಿದವನು ಪಿತೃಗಳಿಗೆ ಉಂಟಾಗುವ ತೃಪ್ತಿಯನ್ನೇ ಹೊಂದುತ್ತಾನೆ.

೬೩-೬೪. ವಸಂತ ಎಂಬ ಮಂತ್ರದಿಂದ ಆಜ್ಯಹೋಮ ಮಾಡಿದಲ್ಲಿ ಅವನು ಸೂರ್ಯನಿಂದ ಧನವನ್ನು ಹೊಂದುತ್ತಾನೆ. ಯಾವ್ಯೇನ ಎಂಬ ಮಂತ್ರವು ಕಳ್ಳರಿಂದ ಉಂಟಾಗುವ ಭಯಕ್ಕೆ ನಾಶಕವಾಗುತ್ತದೆ ದಂಷ್ಟ್ರಾಭ್ಯಾಂ ಎಂಬ ಮಂತ್ರದಿಂದ ಹೋಮಮಾಡುವವನು ಭತ್ತದಿಂದ ಆ ಹೋಮವನ್ನು ನಡೆಸಬೇಕು.

1 ಇಲ್ಲಿ ಭಯಾಪಹಂ ಎಂದು ಪಾಠವಿರಬೇಕೆಂದು ತೋರುತ್ತದೆ.

ಯೋ ಅಸ್ಮಭ್ಯಮರಾತೀಯಾನ್ ಹುತ್ವಾ ಕೃಷ್ಣತಿಲೈರ್ನರಃ ।
ಸಹಸ್ರಶೋಽಭಿಚಾರಾತ್ತು ಮುಚ್ಯತೇ ವಿಕೃತಿಂ ದ್ವಿಜಃ ॥ ೬೫ ॥

ಅನ್ನೇನಾನ್ನಪತೇತ್ಯೇತದ್ಧುತ್ವಾ ಚಾನ್ನಮವಾಪ್ನುಯಾತ್ ।
ಸುಪರ್ಣೋಸೀತಿದ್ಯೈತಸ್ಯ ಕರ್ಮ ವ್ಯಾಹೃತಿವದ್ಭವೇತ್ ॥ ೬೬ ॥

ಮನಃಸ್ವಸ್ತೀತಿ ಜಪ್ತ್ವಾ ಚ ಬಂಧನಾನ್ಮೋಕ್ಷಮಾಪ್ನುಯಾತ್ ।
ರೋಪಯೇತ ವಚಾಂ ರಾಜಾ ಚಂದ್ರೇಗ್ರಸ್ತೇ ಜಲಾಶಯೇ ॥ ೬೭ ॥

ಯಾ ಓಷಧಯ ಇತ್ಯೇತಜ್ಜಪಂಸ್ತಾಮುದ್ಧರೇತ್ಪುನಃ ।
ತ್ರಿರಾತ್ರೋಪೋಷಿತಃ ಕೂರ್ಚಾಂ ಕೃತ್ವಾ ತಾಂ ತಾಮ್ರಭಾಜನೇ ॥ ೬೮ ॥

ತೇನೈವ ಮಂತ್ರಿತಾಂ ಚಂದ್ರಂ ದೃಷ್ಟ್ವಾ ಮಾಸಂ ಸದಾ ಜಪೇತ್ ।
ಸಕಾಪಿಲಘೃತಕ್ಷೀರೇ ಪೀತ್ವಾ ಶ್ರುತಿಧರೋ ಭವೇತ್ ॥ ೬೯ ॥

---

೬೫-೬೬. ಯೋ ಅಸ್ಮಭ್ಯಮರಾತೀಯಾ೯ ಎಂಬ ಮಂತ್ರದಿಂದ ಕರಿಯ ಎಳ್ಳನ್ನು ಸಾವಿರಸಲ ಹೋಮಮಾಡಿದಲ್ಲಿ ಅವನು ಅಭಿಚಾರದಿಂದ ಉಂಟಾಗಿರುವ ಅಂಗವಿಕಾರವನ್ನು ಕಳೆದು ಕೊಳ್ಳುತ್ತಾನೆ. ಅನ್ನಪತೇ ಎಂಬ ಮಂತ್ರದಿಂದ ಅನ್ನವನ್ನು ಹೋಮಮಾಡಿದವನು ಅನ್ನ ಸಮೃಧಿಯನ್ನು ಹೊಂದುತ್ತಾನೆ. ಸುಪರ್ಣೋಸೀತಿದ್ಯೈತಸ್ಯ ಎಂಬ ಮಂತ್ರದ ಪ್ರಯೋಗವು ವ್ಯಾಹೃತಿಯಂತೆಯೇ ನಡೆಯತಕ್ಕದ್ದಾಗಿದೆ.

೬೭-೬೯. ಮನಸ್ವಸ್ತಿ ಎಂಬ ಮಂತ್ರವನ್ನು ಜಪಿಸುವವನು ಬಂಧನದಿಂದ ಬಿಡುಗಡೆ ಹೊಂದುತ್ತಾನೆ. ರಾಜನಾದವನು ಚಂದ್ರಗ್ರಹಣ ಕಾಲದಲ್ಲಿ ಜಲಾಶಯದಲ್ಲಿ ಬಜೆಯನ್ನು ನೆಡಬೇಕು. ಗ್ರಹಣವಾದ ಮೇಲೆ ಯಾಓಷಧಯಃ ಎಂಬ ಮಂತ್ರದಿಂದ ಆ ಬಜೆಯನ್ನು ಪುನಃ ಹೊರಗೆ ತೆಗೆಯಬೇಕು. ಅನಂತರ ಮೂರು ರಾತ್ರಿ ಉಪವಾಸವಿದ್ದು ಆ ಬಜೆಯನ್ನು ಕೂರ್ಚದೊಡನೆ ತಾಮ್ರದ ಪಾತ್ರೆಯಲ್ಲಿ ಹಾಕಿ ಆ ಪಾತ್ರೆಯೊಡನೆ ಆ ಬಜೆಯನ್ನು ಒಂದು ತಿಂಗಳವರಿಗೂ ಚಂದ್ರನನ್ನು ನೋಡುತ್ತಾ ಅದೇ ಮಂತ್ರದಿಂದ ಯಾವಾಗಲೂ ಜಪಿಸುತ್ತಿರಬೇಕು. ಒಂದು ತಿಂಗಳು ಕಳೆದ ಮೇಲೆ ಆ ಬಜೆಯನ್ನು ಕರಿಯ ಹಸುವಿನ ಹಾಲು, ತುಪ್ಪ ಇವುಗಳೊಡನೆ ಸೇವಿಸಿದಲ್ಲಿ ಆ ರಾಜನು ಯಾವ ವಿಷಯವನ್ನಾದರೂ ಕೇಳಿದೊಡನೆಯೇ ಧರಿಸುವ ಸಾಮರ್ಥ್ಯವನ್ನು ಹೊಂದುತ್ತಾನೆ.

ಏತನ್ಮೌಷಧೀಪಾನೇ ಸದಾ ಮಂತ್ರಂ ಜಪೇದ್ದ್ವಿಜ ।
ಸಿದ್ಧಾಭವಂತ್ಯೋಷಧಯೋ ಮಂತ್ರೇಣಾನೇನ ಮಂತ್ರಿತಾಃ ॥ ೭೦ ॥

ದ್ರುಪದಾ ನಾಮ ಸಾ ದೇಯಜುರ್ವೇದೇ ಪ್ರತಿಷ್ಠಿತಾ ।
ಅಂತರ್ಜಲೇ ತ್ರಿರಾವೃತ್ಯ ಮುಚ್ಯತೇ ಸರ್ವಕಿಲ್ಬಿಷೈಃ ॥ ೭೧ ॥

ಇಹ ಗಾವಃ ಪ್ರಜಾಯಧ್ವಂ ಮಂತ್ರೋಯಂ ಪುಷ್ಟಿವರ್ಧನಃ ।
ಹುತಸ್ತು ಸರ್ಪಿಷಾ ದಧ್ನಾ ಪಯಸಾ ಪಾಯಸೇನ ವಾ ॥ ೭೨ ॥

ಶತಂ ವ ಇತಿ ಚೈತೇನ ಹುತ್ವಾ ಪರ್ಣಫಲಾನಿ ವೈ ।
ಆರೋಗ್ಯಂ ಚಿರಮಾಪ್ನೋತಿ ದೀರ್ಘಮಾಪ್ನೋತಿ ಜೀವಿತಂ ॥ ೭೩ ॥

ಓಷಧೀಃ ಪ್ರತಿಮೋದಧ್ವಂ ಜಪೇತ್ಕರ್ಮಕವತ್ಸದಾ ।
ಲವನೇ ಬೀಜವಾಪೇ ವಾ ವಿಶೇಷಾತ್ಸಿದ್ಧಿಮಾಪ್ನುಯಾತ್ ॥ ೭೪ ॥

---

೭೦-೭೧. ಇತರ ಓಷಧಿಗಳ ಪಾನಕಾಲದಲ್ಲಿಯೂ ಸಹ ಈ ಮಂತ್ರವನ್ನೇ ಯಾವಾಗಲೂ ಜಪಿಸಬೇಕು. ಇದರಿಂದ ಮಂತ್ರಿಸಲ್ಪಟ್ಟ ಎಲ್ಲಾ ಓಷಧಿಗಳೂ ಸಹ ಸಿದ್ಧೌಷಧಿಗಳಾಗಿ ಆಗುತ್ತವೆ ಯಜುರ್ವೇದದಲ್ಲಿ ದ್ರುಪದಾ ಎಂಬ ಗಾಯತ್ರೀ ದೇವಿಯು ಪ್ರಸಿದ್ಧಿ ಹೊಂದಿರುವಳು. ಆ ಗಾಯತ್ರಿಯನ್ನು ನೀರಿನ ಮಧ್ಯದಲ್ಲಿ ನಿಂತು ಮೂರುಸಲ ಆವರ್ತಿಮಾಡಿದಲ್ಲಿ ಸಕಲ ಪಾಪಗಳಿಂದಲೂ ಜಪಿಸಿದವನು ಮುಕ್ತ ನಾಗುತ್ತಾನೆ.

೭೨-೭೩. ಇಹಗಾವಃ ಪ್ರಜಾಯಧ್ವಂ ಎಂಬ ಮಂತ್ರವು ಪುಷ್ಟಿವರ್ಧಕವಾಗಿ ಆಗುತ್ತದೆ. ಅಂತಹ ಪುಷ್ಟಿಯನ್ನು ಅಪೇಕ್ಷಿಸುವವನು ಈ ಮಂತ್ರದಿಂದ ಆಜ್ಯ ವನ್ನಾಗಲಿ, ಮೊಸರನ್ನಾಗಲಿ, ಹಾಲನ್ನಾಗಲಿ, ಪಾಯಸವನ್ನಾಗಲಿ, ಹೋಮ ಮಾಡಬೇಕು. ಶತಂವಃ ಎಂಬ ಮಂತ್ರದಿಂದ ಎಲೆಗಳನ್ನೂ, ಫಲಗಳನ್ನೂ ಹೋಮ ಮಾಡುವವನು ಆರೋಗ್ಯವನ್ನು ಹೊಂದುತ್ತಾನೆ. ಹಾಗೂ ದೀರ್ಘದೀರ್ಘವಾದ ಆಯಸ್ಸನ್ನೂ ಸಹ ಹೊಂದುತ್ತಾನೆ.

೭೪-೭೫. ಓಷಧೀಃ ಪ್ರತಿಮೋದಧ್ವಂ ಎಂಬ ಮಂತ್ರವನ್ನು ಸಸ್ಯವನ್ನು ಕುಯ್ಯುವ ಕಾಲದಲ್ಲಿಯೂ ಬೀಜಗಳನ್ನು ಹಾಕುವಾಗಲೂ ಸಹ ವ್ಯವಸಾಯಗಾರ ನಾದ ತಾನೂ ಜಪಿಸಬೇಕು. ಈ ವಿಧಾನದಿಂದ ಬಹುಮುಟ್ಟಿಗೂ ಪ್ರಯೋಜನವನ್ನು

ಸರ್ವೌಷಧೀಃ ಸಮಾನೀಯ ಸರ್ವವ್ರೀಹಿಯುತಾಸ್ತಥಾ ।
ಕ್ಷೇತ್ರಮಧ್ಯೇ ದ್ವಿಜೋ ಹುತ್ವಾ ಕೃಷಿಮಾಪ್ನೋತಿ ಪುಷ್ಕಲಾಂ ॥ ೭೫ ॥

ಅಪಾಮಾರ್ಗಂ ಯವಂ ಧಾನ್ಯಂ ಓಷಧೀರಿತಿ ಮಾತರಃ ।
ಗೋಕಾಮಶ್ಚಾಶ್ವಕಾಮೋ ವಾ ತಂ ಕಾಮಂ ಶೀಘ್ರಮಾಪ್ನುಯಾತ್ ॥

ಓಷಧೀಃ ಸಮುಜಂತೇತಿ ಹುತ್ವಾ ಚಾಜ್ಯೇನ ಮಾನವಃ ।
ಭಯಮಾಪ್ನೋತಿ ನೈವೇಹ ಯಾತುಧಾನಭವಂ ಕ್ವಚಿತ್ ॥ ೭೭ ॥

ಗ್ರಂಥಾವತೀತಿ ಚೈತೇನ ಪಾಯಸಂ ಜುಹುಯಾದ್ದ್ವಿಜ ।
ಸರ್ವತ್ರ ಶಾಂತಿಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೭೮ ॥

ಸೀರಾಂ ಯುಂಜತಿ ಇತ್ಯೇತದ್ಧುತ್ವಾ ಕೃಷಿಮವಾಪ್ನುಯಾತ್ ।
ಉಚ್ಛ್ರಯಸ್ವೇತಿ ಚೈತೇನ ಬಂಧನಸ್ಥೋ ವಿಮುಚ್ಯತೇ ॥ ೭೯ ॥

ಹೊಂದುತ್ತಾನೆ. ಎಲ್ಲಾ ವಿಧವಾದ ಓಷಧಿ ವಿಶೇಷಗಳನ್ನೂ ತಂದು ಎಲ್ಲಾ ವಿಧವಾದ ಭತ್ತಗಳೊಡನೆ ಸೇರಿಸಿ ಹೊಲದ ಮಧ್ಯದಲ್ಲಿ ಹೋಮಮಾಡುವ ದ್ವಿಜನು ಹೆಚ್ಚಾದ ಕೃಷಿಫಲವನ್ನು ಹೊಂದುತ್ತಾನೆ.

೭೬–೭೭. ಉತ್ತರಣೆ, ಯವ, ಧಾನ್ಯ, ಓಷಧಿಗಳು ಇವುಗಳು ತಾಯಿಯಂತೆ ಇಷ್ಟಸಿದ್ಧಿಗೆ ಕಾರಣಗಳಾಗುತ್ತವೆ. ಗೋವುಗಳನ್ನು ಅಪೇಕ್ಷಿಸುವವನಾಗಲಿ, ಕುದುರೆಗಳನ್ನು ಅಪೇಕ್ಷಿಸುವವನಾಗಲಿ ಇವುಗಳ ಉಪಯೋಗದಿಂದ ತನ್ನ ಇಷ್ಟವನ್ನು ಜಾಗ್ರತೆಯಾಗಿ ಹೊಂದುತ್ತಾನೆ. ಓಷಧೀಃ ಸಮುಜಂತ ಎಂಬ ಮಂತ್ರದಿಂದ ಆಜ್ಯ ಹೋಮವನ್ನು ಮಾಡಿದವನಿಗೆ ರಾಕ್ಷಸರಿಂದ ಉಂಟಾಗಬಹುದಾದ ಯಾವ ಭಯವೂ ಇಲ್ಲಿ ಉಂಟಾಗುವುದಿಲ್ಲ.

೭೮–೭೯. ಗ್ರಂಥಾವತೀ ಎಂಬ ಮಂತ್ರದಿಂದ ಪಾಯಸವನ್ನು ಹೋಮಿಸಬೇಕು. ಇದು ಎಲ್ಲಾ ಕೆಲಸಗಳಲ್ಲಿಯೂ ಶಾಂತಿಪ್ರದವಾಗುತ್ತದೆ. ಈ ವಿಷಯವನ್ನು ವಿಚಾರಿಸಬೇಕಾದ್ದಿಲ್ಲ. ಸೀರಾಂ ಯುಂಜತಿ ಎಂಬ ಮಂತ್ರದಿಂದ ಹೋಮ ಮಾಡಿದವನು ಸರಿಯಾದ ಕೃಷಿಯನ್ನು ಹೊಂದುತ್ತಾನೆ.

ಯುವಾ ಸುವಾಸಾ ಏತೇನ ವಾಸಾಂಸ್ಯಾಪ್ನೋತ್ಯಸಂಶಯಂ ।
ಯಸ್ಮಿಂಶ್ಚಾಷಃ ಸ್ಥಿತಃ ಕಾಷ್ಠೇ ತದ್ಗೃಹೀತ್ವಾ ವಿಚಕ್ಷಣಃ ॥ ೮೦ ॥

ಸಾಯಂ ಯಕ್ಷ್ಮೇತಿ ಮಂತ್ರೇಣ ಶತ್ರೋಸ್ತು ನಿಖನೇತ್ಪದೇ ।
ಕುಷ್ಠೀಭವತಿ ಚಾಷಸ್ಯ ಪಕ್ಷಂ ಗೃಧ್ರಸ್ಯ ವಾ ಪುನಃ ॥ ೮೧ ॥

ಸಹಸ್ರಮಂತ್ರಿತಂ ಕೃತ್ವಾ ಶತ್ರೋಃ ಪ್ರತಿಕೃತಿಂ ತತಃ ।
ತೇನ ಬದ್ಧ್ವಾ ತತೋ ಮೃತ್ಯುಂ ಶತ್ರುಃ ಪ್ರಾಪ್ನೋತ್ಯಸಂಶಯಂ ॥ ೮೨ ॥

ಶತ್ರುಂ ತು ನಾಶಯತ್ಯಾಶು ಸರ್ವಾತಂಕವಿನಾಶನಂ ।
ಪ್ರಪತಂತೀತಿ ಚ ಋಚಾ ಜುಹುಯಾದೋಷಧೀರ್ದ್ವಿಜ ॥ ೮೩ ॥

ಮಿಷ್ಟಾನ್ನಭೋಗೀ ಭವತಿ ಭಾಂಡಾನಾಂ ಚೈವ ರಕ್ಷಿತಾ ।
ಮಾಮಾಹಿಂಸೀತಿ ಚಾಜ್ಯೇನ ಹುತಂ ರಿಪುವಿನಾಶನಂ ॥ ೮೪ ॥

---

೮೦-೮೧. ಯುವಾ ಸುವಾಸಾಃ ಎಂಬ ಮಂತ್ರದಿಂದ ಬೇಕಾದಷ್ಟು ವಸ್ತ್ರಗಳನ್ನು ಹೊಂದುತ್ತಾನೆ. ಯಾವ ಮರದ ಕಡ್ಡಿಯ ಮೇಲೆ ಚಾಷಪಕ್ಷಿಯು (ಹಂಗನಹಕ್ಕಿ) ಕುಳಿತಿದ್ದಿತೋ ಅಂತಹ ಕಡ್ಡಿಯನ್ನು ಬುದ್ಧಿವಂತನಾದವನು ಸಂಪಾದಿಸಬೇಕು. ಆ ಕಡ್ಡಿಯನ್ನು ಯಕ್ಷ್ಮಾ ಎಂಬ ಮಂತ್ರದಿಂದ ಜಪಿಸಿ ಸಾಯಂಕಾಲದಲ್ಲಿ ಶತ್ರುವಿನ ವಾಸಸ್ಥಾನದಲ್ಲಿ ಹೂಳಬೇಕು. ಇದರಿಂದ ಆ ಶತ್ರುವು ಕುಷ್ಠರೋಗದಿಂದ ಆಕ್ರಾಂತನಾಗುತ್ತಾನೆ.

೮೨-೮೩. ಚಾಷಪಕ್ಷಿಯ ಅಥವಾ ಹದ್ದಿನ ಗರಿಯನ್ನು ಮೇಲೆ ಹೇಳಿರುವ ಮಂತ್ರದಿಂದ ಸಾವಿರ ಸಲ ಮಂತ್ರಿಸಿ ಶತ್ರುವಿನ ಪ್ರತಿಕೃತಿಯನ್ನು ಮಾಡಿ ಆ ಗರಿಯಿಂದ ಕಟ್ಟಿದಲ್ಲಿ ಆ ಶತ್ರುವು ಮರಣ ಹೊಂದುತ್ತಾನೆ ಈ ಪ್ರಯೋಗವು ಯಾವ ಆತಂಕವೂ ಇಲ್ಲದೆ ಶತ್ರುವನ್ನು ನಾಶಮಾಡುತ್ತವೆ. ಪ್ರಪತಂತೀ ಎಂಬ ಋಕ್ಕಿನಿಂದ ಓಷಧಿಗಳನ್ನು ಹೋಮಮಾಡಬೇಕು.

೮೪-೮೫. ಹೀಗೆ ಮಾಡಿದವನು ಮೃಷ್ಟಾನ್ನ ಭೋಗಿಯಾಗಿಯೂ ಅನೇಕ ಪಾತ್ರೆಗಳಿಗೆ ರಕ್ಷಕನಾಗಿಯೂ ಆಗುತ್ತಾನೆ. ಮಾಮಾಹಿಂಸೀಃ ಎಂಬ ಮಂತ್ರದಿಂದ ಆಜ್ಯ ಹೋಮಮಾಡಿದಲ್ಲಿ ಶತ್ರುನಾಶ ಉಂಟಾಗುತ್ತದೆ. ಪುರುಷನಿಗಾಗಲಿ

ಕಾಂತಾರಮಧ್ವರಸ್യೇತಿ ಮಧುಸ್ಸೈಂಧವಸಂಯುತಾಂ ।
ಸೌಭಾಗ್ಯಕಾಮೋ ಜುಹುಯಾತ್ಸ್ತ್ರಿಯೋವಾ ಪುರುಷಸ್ಯ ವಾ ॥ ೮೫ ॥

ಹೋಮೋ ದ್ರಪ್ಸಶ್ಚಸ್ಕಂದೇತಿ ವಶ್ಯಕಾಮಸ್ಯ ಶಸ್ಯತೇ ।
ನಮೋಽಸ್ತು ಸರ್ಪೇಭ್ಯ ಇತಿ ಪಾಯಸಂ ಸಘೃತಂ ನರಃ ॥ ೮೬ ॥

ನಾಗಸ್ಥಾನೇ ಜುಹುಯಾತ್ಸುವರ್ಣಂ ಪ್ರಾಪ್ನುಯಾದ್ಬಹು ।
ಕೃಣುಷ್ವಪಾಜ ಇತ್ಯೇತದಭಿಚಾರವಿನಾಶನಂ ॥ ೮೭ ॥

ಅಗ್ನೇ ತಿಷ್ಠೇತಿ ಜುಹುಯಾದ್ದ್ರವ್ಯಾಃ ಖಲ್ವಭಿಚಾರಕಾಃ ।
ಶತ್ರೋರ್ನಾಮ ಗೃಹೀತ್ವಾ ತು ಶತ್ರುಂ ಕುರ್ಯಾತ್ತದಾ ವಶೇ ॥ ೮೮ ॥

ದೂರ್ವಾಕಾಂಡಾಯುತಂ ಹುತ್ವಾ ಕಾಂಡಾತ್ಕಾಂಡೇತಿ ಮಂತ್ರತಃ ।
ಗ್ರಾಮೇ ಜನಪದೇ ವಾಪಿ ಮಾರಕಂ ತು ಶಮಂ ನಯೇತ್ ॥ ೮೯ ॥

---

ಸ್ತ್ರೀಗಾಗಲಿ ಸೌಭಾಗ್ಯವನ್ನು ಬಯಸುವವನು ಕಾಂತಾರಮಧ್ವರಸ್ಯ ಎಂಬ ಮಂತ್ರ ದಿಂದ ಜೇನು ಮತ್ತು ಉಪ್ಪು ಇವುಗಳಿಂದ ಕೂಡಿದ ಆಹುತಿಯನ್ನು ಹೋಮ ಮಾಡಬೇಕು.

೮೯-೮೭. ವಶೀಕರಣ ಸಾಮರ್ಥ್ಯವನ್ನು ಹೊಂದಲು ಇಚ್ಛೆಯುಳ್ಳವನಿಗೆ ದ್ರವ್ಯಶ್ಚಸ್ಕಂದ ಎಂಬ ಮಂತ್ರದ ಹೋಮವು ಬಹಳ ಪ್ರಶಸ್ತವಾದದ್ದು. ನಮೋಸ್ತು ಸರ್ಪೇಭ್ಯಃ ಎಂಬ ಮಂತ್ರದಿಂದ ಆಜ್ಯಸಹಿತವಾದ ಪಾಯಸವನ್ನು ಸರ್ಪವಿರುವ ಸ್ಥಾನದಲ್ಲಿ ಹೋಮ ಮಾಡಿದವನು ಬಹಳ ಸುವರ್ಣವನ್ನು ಹೊಂದುತ್ತಾನೆ. ಕೃಣುಷ್ವಪಾಜಃ ಎಂಬ ಮಂತ್ರವು ಅಭಿಚಾರನಾಶಕವಾಗುತ್ತದೆ.

೮೮-೮೯. ಅಗ್ನೇ ತಿಷ್ಠ ಎಂಬ ಮಂತ್ರದಿಂದ ಅಭಿಚಾರಪದಾರ್ಥಗಳನ್ನು ಹೋಮಮಾಡಬೇಕು. ಯಾವ ಶತ್ರುವಿನ ಹೆಸರನ್ನು ಈ ಮಂತ್ರದಲ್ಲಿ ಸೇರಿಸಿ ಹೋಮಮಾಡುತ್ತಾನೆಯೋ ಆ ಶತ್ರುವು ಈ ವಿಧಾನದಿಂದ ವಶನಾಗುತ್ತಾನೆ. ಕಾಂಡಾತ್ಕಾಂಡಾ ಎಂಬ ಮಂತ್ರದಿಂದ ಹತ್ತುಸಾವಿರ ಗರಿಕೆಯ ದಂಟನ್ನು ಹೋಮ ಮಾಡಿದಲ್ಲಿ ಗ್ರಾಮದಲ್ಲಿಯಾಗಲಿ ದೇಶದಲ್ಲಿಯಾಗಲಿ ಅವನಿಗೆ ಮಾರಕನಾಗಿರುವವನು ಶಾಂತನಾಗುತ್ತಾನೆ.

**ರೋಗಾರ್ತೋ ಮುಚ್ಯತೇ ರೋಗಾತ್ತಥಾ ದುಃಖಾತ್ತು ದುಃಖಿತಃ ।**
**ಔದುಂಬರ್ಯಸ್ತು ಸಮಿಧೋ ಮಧುಮಾನ್ನೋ ವನಸ್ಪತಿಃ　　॥ ೯೦ ॥**

**ಹುತ್ವಾ ಸಹಸ್ರಶೋ ರಾಮ ಧನಮಾಪ್ನೋತಿ ಮಾನವಃ ।**
**ಸೌಭಾಗ್ಯಂ ಮಹದಾಪ್ನೋತಿ ವ್ಯವಹಾರೇ ತಥಾ ಜಯಂ　　॥ ೯೧ ॥**

**ಯೋಗಾದಿತಿ ತಥಾ ಹುತ್ವಾ ದೇವಂ ವರ್ಷಾಪಯೇದ್ಧ್ರುವಂ ।**
**ಅಪಃಪಿಬನ್ನಿತಿ ತಥಾ ಹುತ್ವಾ ದಧಿ ಘೃತಂ ಮಧು　　॥ ೯೨ ॥**

**ಪ್ರವರ್ತಯತಿ ಧರ್ಮಜ್ಞ ಮಹಾವೃಷ್ಟಿಮನಂತರಂ ।**
**ಅಗ್ನಿರ್ದೇವತೇತಿ ತಥಾ ಯವಮುಷ್ಟ್ಯಯುತಂ ದ್ವಿಜ　　॥ ೯೩ ॥**

**ಹುತ್ವಾ ಶ್ರದ್ಧೇಯವಾಕ್ಯಸ್ತು ಸರ್ವತ್ರೈವಾಭಿಜಾಯತೇ ।**
**ಅಯಂ ಪುರೇತಿ ಜುಹುಯಾದನುವಾಕೇನ ಮಾನವಃ　　॥ ೯೪ ॥**

---

೯೦–೯೧. ಈ ಪ್ರಯೋಗದಿಂದ ರೋಗದಿಂದ ನರಳುತ್ತಿರುವವನು ರೋಗದಿಂದಲೂ ಇತರ ದುಃಖದಿಂದ ಕೂಡಿದವನು ಆ ದುಃಖದಿಂದಲೂ ಮುಕ್ತನಾಗುತ್ತಾನೆ. ಮಧುಮಾನ್ನೋವನಸ್ಪತಿಃ ಎಂಬ ಮಂತ್ರದಿಂದ ಅತ್ತಿಯ ಸಮಿತ್ತುಗಳನ್ನು ಒಂದು ಸಾವಿರ ಸಂಖ್ಯೆಯಿಂದ ಹೋಮಮಾಡಿದವನು ಧನವನ್ನು ಹೊಂದುತ್ತಾನೆ. ಸೌಭಾಗ್ಯ ಶಾಲಿಯಾಗಿಯೂ ಆಗುತ್ತಾನೆ. ವ್ಯವಹಾರಗಳಲ್ಲಿ ವಿಜಯವನ್ನೂ ಹೊಂದುತ್ತಾನೆ.

೯೨–೯೩. ಯೋಗಾತ್ ಎಂಬ ಮಂತ್ರದಿಂದ ಹೋಮಮಾಡಿ ಧ್ರುವನಾದ ದೇವನನ್ನು ಸಂತೋಷಪಡಿಸಬೇಕು. ಅಪಃ ಪಿಬನ್ ಎಂಬ ಮಂತ್ರದಿಂದ ಮೊಸರು ಆಜ್ಯ, ಜೇನು ಇವನ್ನು ಹೋಮಮಾಡಿದಲ್ಲಿ ಅವನು ಉತ್ತಮವಾದ ವೃಷ್ಟಿಗೆ ಪ್ರವರ್ತಕನಾಗುತ್ತಾನೆ. ಅಗ್ನಿರ್ದೇವತಾ ಎಂಬ ಮಂತ್ರದಿಂದ ಹತ್ತು ಸಾವಿರ ಯವ ಮುಷ್ಟಿಯನ್ನು ಹೋಮಮಾಡಿದವನು ಎಲ್ಲರಿಂದಲೂ ನಂಬಲು ಅರ್ಹವಾದ ಮಾತುಳ್ಳವನಾಗುತ್ತಾನೆ.

೯೪–೯೫. ಅಯಂ ಪುರಾ ಎಂಬ ಅನುವಾಕದಿಂದ ಆಜ್ಯದಿಂದ ಪೂರ್ಣವಾದ ಸಹಸ್ರ ಕಮಲಗಳನ್ನು ಯಾವನು ಹೋಮ ಮಾಡುತ್ತಾನೆಯೋ ಅವನು ತಾನು

ಘೃತಪೂರ್ಣಾನಿ ಪದ್ಮಾನಿ ಸಹಸ್ರಂ ಭೃಗುನಂದನ ।
ಕನ್ಯಾಂ ತಾಂ ಸಮವಾಪ್ನೋತಿ ಯಾಮಸೌ ಮನಸೇಪ್ಸತಿ ॥ ೯೫ ॥

ಶ್ರಿಯಮಾಪ್ನೋತಿ ಚ ತಥಾ ಧನಮಾಪ್ನೋತ್ಯನುತ್ತಮಂ ।
ನಮಸ್ತೇ ರುದ್ರ ಇತ್ಯೇತತ್ಸರ್ವೋಪದ್ರವನಾಶನಂ ॥ ೯೬ ॥

ಸರ್ವಶಾಂತಿಕರಂ ಪ್ರೋಕ್ತಂ ಮಹಾಪಾತಕನಾಶನಂ ।
ರಕ್ಷೋಘ್ನಂ ಚ ಯಶಸ್ಯಂ ಚ ಶ್ರೀರಾಯುಃ ಪುಷ್ಟಿವರ್ಧನಂ ॥ ೯೭ ॥

ಅಭ್ಯವೋಚದಿತ್ಯನೇನ ರಕ್ಷಾಸ್ಯಾದ್ವ್ಯಾಧಿತಸ್ಯ ತು ।
ಸಿದ್ಧಾರ್ಥಕಾನಾಂ ಕ್ಷೇಪೇಣ ಪಥಿ ಚೈತತ್ಸದಾ ಪಠೇತ್ ॥ ೯೮ ॥

ಕ್ಷೇಮೇಣ ಸ್ವಗೃಹಾನೇತಿ ಸರ್ವಬಾಧಾವಿವರ್ಜಿತಃ ।
ಅಸೌಯಸ್ತಾಮ್ರ ಇತ್ಯೇತತ್ಪಠೇನ್ನಿತ್ಯಂ ದಿವಾಕರಂ ॥ ೯೯ ॥

---

ಮನಸ್ಸಿನಿಂದ ಇಚ್ಛಿಪಟ್ಟ ಕನ್ಯೆಯನ್ನು ಹೊಂದುತ್ತಾನೆ. ಮತ್ತು ನಾನಾವಿಧವಾದ ಸಂಪತ್ತನ್ನೂ ಹೆಚ್ಚಾದ ಧನವನ್ನೂ ಸಹ ಹೊಂದುತ್ತಾನೆ.

೯೬-೯೮ ನಮಸ್ತೇರುದ್ರ ಎಂಬ ಮಂತ್ರವು ಎಲ್ಲಾ ವಿಧವಾದ ಪೀಡೆಗಳಿಗೂ ಪರಿಹಾರಕವಾದದ್ದು. ಎಲ್ಲಾ ವಿಧವಾದ ಶಾಂತಿಗೂ ಕಾರಣವಾದದ್ದು, ಮತ್ತು ಮಹಾಪಾತಕಗಳಿಗೂ ನಾಶಕವಾಗಿಯೂ, ರಾಕ್ಷಸಬಾಧಾನಾಶಕವಾಗಿಯೂ, ಯಶಸ್ಕರವಾಗಿಯೂ, ಆಯಸ್ಸು, ಸಂಪತ್ತು, ಪುಷ್ಟಿ ಮೊದಲಾದುವುಗಳಿಗೆ ಅಭಿವೃದ್ಧಿ ದಾಯಕವಾಗಿಯೂ ಇರುತ್ತದೆ. ಅಭ್ಯವೋಚತ್ ಎಂಬ ಮಂತ್ರವು ವ್ಯಾಧಿಗ್ರಸ್ತ ನಾದವನ ರಕ್ಷಣೆಗೆ ಸಾಧಕವಾಗುತ್ತದೆ. ಮಾರ್ಗದಲ್ಲಿರುವಾಗ ಬಿಳಿಯ ಸಾಸವೆಯನ್ನು ಎರಚುತ್ತಾ ಈ ಮಂತ್ರವನ್ನು ಯಾವಾಗಲೂ ಪಠನಮಾಡುತ್ತಿರಬೇಕು.

೯೯-೧೦೦. ಈ ವಿಧಾನವನ್ನನುಸರಿಸಿದವನು ದಾರಿಯಲ್ಲಿ ಯಾವ ಬಾಧೆಯೂ ಇಲ್ಲದೆ ಕ್ಷೇಮದಿಂದ ತನ್ನ ಮನೆಗೆ ಹಿಂತಿರುಗಿ ಬಂದು ಸೇರುತ್ತಾನೆ. ಅಸೌಯಸ್ತಾಮ್ರಃ ಎಂಬ ಮಂತ್ರವನ್ನು ನಿತ್ಯವೂ ಪಠಿಸುತ್ತಾ ಸಾಯಂಕಾಲದಲ್ಲಿಯೂ, ಪ್ರಾತಃ

ಉಪತಿಷ್ಠೇತ ಧರ್ಮಜ್ಞ ಸಾಯಂಪ್ರಾತರತಂದ್ರಿತಃ ।
ಅನ್ನಮಕ್ಷಯ್ಯಮಾಪ್ನೋತಿ ದೀರ್ಘಮಾಯುಶ್ಚ ವಿಂದತಿ　　॥ ೧೦೦ ॥

ಪ್ರಮುಂಚಂತೋ ನ ಇತ್ಯೇತತ್ ಷಡ್ಭಿರಾಯುಧಮಂತ್ರಣಂ ।
ರಿಪೂಣಾಂ ಭಂಗದಂ ಯುದ್ಧೇ ನಾತ್ರ ಕಾರ್ಯಾ ವಿಚಾರಣಾ　　॥ ೧೦೧ ॥

ಮಾನೋಮಹಾಂತ ಇತ್ಯೇತದ್ಬಾಲಾನಾಂ ಶಾಂತಿಕಾರಕಂ ।
ನಮೋಹಿರಣ್ಯಬಾಹವೇ ಇತ್ಯನುವಾಕ್ ಹರ್ಷಕಾರಕಂ ।
ರಾಜಿಕಾಂ ತಿಲತೈಲಾಕ್ತಾಂ ಜುಹುಯಾಚ್ಛತ್ರುನಾಶನಂ　　॥ ೧೦೨ ॥

ನಮೋ ವಃ ಕಿರಿಕೇಭ್ಯಶ್ಚ ಪದ್ಮಲಕ್ಷೇ ಹುತೇ ನರಃ ।
ರಾಜಲಕ್ಷ್ಮೀಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಬಿಲ್ವಾನಾಂ ಚ ತಥಾ ಹುತ್ವಾ ಕನಕಂ ಬಹು ವಿಂದತಿ　　॥ ೧೦೩ ॥

ಕಾಲದಲ್ಲಿಯೂ ಸಹ ಜಾಗರೂಕತೆಯಿಂದ ಸೂರ್ಯನನ್ನು ಪೂಜಿಸಬೇಕು. ಹೀಗೆ ಮಾಡುವವನು ಅಕ್ಷಯವಾದ ಅನ್ನಸಂಪತ್ತನ್ನು ಹೊಂದುತ್ತಾನೆ. ದೀರ್ಘವಾದ ಆಯುಸ್ಸನ್ನೂ ಸಹ ಹೊಂದುತ್ತಾನೆ.

೧೦೧. ಪ್ರಮುಂಚಂತೋನ ಎಂಬ ಆರು ಮಂತ್ರಗಳಿಂದ ಆಯುಧವನ್ನು ಅಭಿಮಂತ್ರಿಸಬೇಕು. ಹೀಗೆ ಮಾಡಿದಲ್ಲಿ ಯುದ್ಧದಲ್ಲಿ ಶತ್ರುಗಳಿಗೆ ಸೋಲುಂಟಾಗುತ್ತದೆ. ಇದರಲ್ಲಿ ವಿಚಾರಮಾಡಬೇಕಾದುದಿಲ್ಲ. ಮಾನೋಮಹಾಂತಃ ಎಂಬ ಮಂತ್ರವು ಮಕ್ಕಳಿಗೆ ಶಾಂತಿಪ್ರದವಾಗುತ್ತದೆ. ನಮೋ ಹಿರಣ್ಯಬಾಹವೇ ಎಂಬ ಅನುವಾಕವು ಹರ್ಷಕರವಾದುದು.

೧೦೨-೧೦೩. ಕರಿಯ ಸಾಸವೆಯನ್ನು ಎಳ್ಳಿನ ಎಣ್ಣೆಯಿಂದ ನೆನೆಸಿ ಹೋಮ ಮಾಡಿದಲ್ಲಿ ಅದು ಶತ್ರುನಾಶಕವಾಗುತ್ತದೆ. ನಮೋ ವಃ ಕಿರಿಕೇಭ್ಯಶ್ಚ ಎಂಬ ಮಂತ್ರದಿಂದ ಲಕ್ಷ ಪದ್ಮಗಳನ್ನು ಹೋಮಿಸಿದುದೇ ಆದರೆ ಅವನು ರಾಜಲಕ್ಷ್ಮಿಯನ್ನು ಹೊಂದುತ್ತಾನೆ. ಇದರಲ್ಲಿ ವಿಚಾರಮಾಡಬೇಕಾದುದಿಲ್ಲ. ಅದೇ ಮಂತ್ರದಿಂದಲೇ ಲಕ್ಷ ಬಿಲ್ವಗಳನ್ನು ಹೋಮಮಾಡಿದವನು ಹೆಚ್ಚಾಗಿ ಸುವರ್ಣವನ್ನು ಹೊಂದುತ್ತಾನೆ.

ಇಮಾರುದ್ರಾಯೇತಿ ತಿಲೈಃ ಕೃತ್ವಾ ಹೋಮಂ ವಿಚಕ್ಷಣಃ ।
ಶೀಘ್ರಮೇವ ಮಹಾಭಾಗ ಧನಮಾಪ್ನೋತಿ ಚಿಂತಿತಂ ॥ ೧೦೪ ॥

ಅನೇನೈವ ತು ಮಂತ್ರೇಣ ದೂರ್ವಾಹೋಮೇನ ಮಾನವಃ ।
ಸರ್ವವ್ಯಾಧಿವಿನಿರ್ಮುಕ್ತೋ ಭಯಾನ್ ಸರ್ವಾನ್ವ್ಯಪೋಹತಿ ॥ ೧೦೫ ॥

ವರಾರೋಹೇಣ ಇಧ್ಮಾನಾಂ ಯಾತೆ ರುದ್ರ ಶಿವಾ ತನೂಃ ।
ಹುತ್ವಾಯುತಂ ತು ಧರ್ಮಜ್ಞ ಪುತ್ರಮಾಪ್ನೋತ್ಯಭೀಪ್ಸಿತಂ ॥ ೧೦೬ ॥

ಅಸಂಖ್ಯಾತಾಃ ಸಹಸ್ರಾಣಿ ಮಂತ್ರೈಸ್ತದಭಿಚಾರಕಂ ।
ನಮೋಽಸ್ತು ರುದ್ರೇಭ್ಯ ಇತಿ ಪ್ರೋಕ್ತಾ ಪ್ರತ್ಯಂಗಿರಾ ಪರಾ ॥ ೧೦೭ ॥

ರಕ್ತೋಷ್ಣೀಷೋ ರಕ್ತವಾಸಾಃ ರಕ್ತಮಾಲ್ಯಾನುಲೇಪನಃ ।
ಅನೇನೈವ ಶ್ಮಶಾನೇ ತು ಲೋಹಶಂಕುಂ ನರೋತ್ತಮ ॥ ೧೦೮ ॥

---

೧೦೪–೧೦೫. ಇಮಾ ರುದ್ರಾಯ ಎಂಬ ಮಂತ್ರದಿಂದ ತಿಲಹೋಮವನ್ನು ಮಾಡಿದ ಬುದ್ಧಿಶಾಲಿಯು ಜಾಗ್ರತೆಯಾಗಿಯೇ ತನ್ನ ಅಪೇಕ್ಷೆಗೆ ತಕ್ಕ ಧನವನ್ನು ಹೊಂದುತ್ತಾನೆ. ಇದೇ ಮಂತ್ರದಿಂದ ಗರಿಕೆಯ ಹೋಮವನ್ನು ಮಾಡಿದವನು ಎಲ್ಲಾ ವ್ಯಾಧಿಗಳಿಂದಲೂ ಮುಕ್ತನಾಗಿ ಎಲ್ಲಾ ಭಯವನ್ನೂ ಹೋಗಲಾಡಿಸಿ ಕೊಳ್ಳುತ್ತಾನೆ.

೧೦೬–೧೦೭. ವರಾರೋಹೇಣ ಎಂಬ ಮತ್ತು ಯಾತೆ ರುದ್ರ ಶಿವಾತನೂಃ ಎಂಬ ಮಂತ್ರದಿಂದಲೂ ಸಹ ಹತ್ತುಸಾವಿರ ಸಮಿತ್ತುಗಳನ್ನು ಹೋಮಿಸಿದಲ್ಲಿ ಅವನು ತನಗೆ ಅಭಿಮತನಾದ ಪುತ್ರನನ್ನು ಹೊಂದುತ್ತಾನೆ. ಆಯಾಯ ಅಭಿಚಾರ ಮಂತ್ರ ಗಳೂ ಆ ಸಂಖ್ಯೆಯಿಂದ ಕೂಡಿ ಸಾವಿರಾರು ಇವೆ. ನಮೋಽಸ್ತು ರುದ್ರೇಭ್ಯಃ ಎಂಬ ಮಂತ್ರವೇ ಅವುಗಳಲ್ಲಿ ಪ್ರತ್ಯಂಗಿರಾ ಎಂದು ಹೇಳಲ್ಪಟ್ಟಿದೆ.

೧೦೮–೧೦೯. ಈ ಮಂತ್ರದಿಂದ ಶ್ಮಶಾನದಲ್ಲಿ ಅಭಿಚಾರಕವಾದ ವಿಧಿಯನ್ನು ಮಾಡಬೇಕು. ಕೆಂಪಾದ ರುಮಾಲು ಮತ್ತು ವಸ್ತ್ರಗಳನ್ನು ಧರಿಸಿ ಕೆಂಪಾದ ಹೂವು ಗಂಧಗಳನ್ನೂ ಧರಿಸಿ ಶ್ಮಶಾನದಲ್ಲಿ ಒಂದು ಚೋಟು ಉದ್ದವುಳ್ಳ ಲೋಹದ ಮೊಳೆ

ಪ್ರಾದೇಶಮಾತ್ರಂ ಜುಹುಯಾತ್ಸಹಸ್ರಂ ಭೃಗುನಂದನ ।
ಕೃತ್ಯಾಮುತ್ಥಾಪಯೇಜ್ಜಾತಾಂ ರಕ್ತಕುಂಭೇನ ಪೂಜಯೇತ್ ॥ ೧೦೯ ॥

ಪೂರ್ಣಪಾತ್ರೇಣ ಚ ತಥಾ ಸರ್ವಕರ್ಮಕರೋ ಭವೇತ್ ।
ಆಶುಃ ಶಿಶಾನ ಇತ್ಯೇತದಾಯುಧಾನಾಂ ಚ ರಕ್ಷಣಂ ॥ ೧೧೦ ॥

ಸಂಗ್ರಾಮೇ ಕಥಿತಂ ರಾಮ ಸರ್ವಶತ್ರುವಿನಾಶನಂ ।
ಇಮಂ ಸೋಮಮಿತ್ಯೇತನ್ನದೀಂ ಗತ್ವಾ ಸಮುದ್ರಗಾಂ ॥ ೧೧೧ ॥

ಸ್ನಾತಸ್ತ್ವೋಯೋಽಯುತಂ ಜಪ್ತ್ವಾ ಹುತ್ವಾ ದಶಶತಂ ತತಃ ।
ಸಾಷ್ಟಂ ಮನುಜಶಾರ್ದೂಲ ಗ್ರಾಮಮಾಪ್ನೋತ್ಯಭೀಪ್ಸಿತಂ ॥ ೧೧೨ ॥

ವಾಜಶ್ಚಮೇತಿ ಜುಹುಯಾತ್ಸಹಸ್ರಂ ಪಂಚಭಿರ್ದ್ವಿಜ ।
ಆಜ್ಯಾಹುತೀನಾಂ ಧರ್ಮಜ್ಞ ಚಕ್ಷೂರೋಗಾದ್ವಿಮುಚ್ಯತೇ ॥ ೧೧೩ ॥

ಮನೋ ಭವಸ್ವೇತಿ ಗೃಹೇ ತಥಾ ಹುತ್ವಾ ವಿಚಕ್ಷಣಃ ।
ವಾಸ್ತುದೋಷಾಂಸ್ತತಃ ಸರ್ವಾನ್ ಕ್ಷಿಪ್ರಮೇವ ವ್ಯಪೋಹತಿ ॥ ೧೧೪ ॥

---

ಯನ್ನು ಈ ಮಂತ್ರದಿಂದ ಸಾವಿರ ಬಾರಿ ಹೋಮಮಾಡಬೇಕು. ಅಲ್ಲಿ ಹುಟ್ಟಿದ ಮಾಟದ ಬೊಂಬೆಯನ್ನು ಮೇಲಕ್ಕೆತ್ತಿ ರಕ್ತದಿಂದ ತುಂಬಿದ ಗಡಿಗೆಯಿಂದ ಅದನ್ನು ಪೂಜಿಸಬೇಕು.

೧೧೦-೧೧೨ ಪೂರ್ಣಪಾತ್ರದಿಂದ ಇತರ ಎಲ್ಲಾ ಕಾರ್ಯಗಳನ್ನೂ ನಡೆಸಬೇಕು. ಆಶುಃ ಶಿಶಾನ ಎಂಬ ಮಂತ್ರವು ಆಯುಧಗಳಿಗೆ ರಕ್ಷಕವಾಗುತ್ತದೆ. ಇದು ಯುದ್ಧದಲ್ಲಿ ಸರ್ವ ಶತ್ರುನಾಶಕವಾಗುತ್ತದೆ. ಸಮುದ್ರಕ್ಕೆ ಹೋಗಿ ಸ್ನಾನಮಾಡಿ ಇಮಂ ಸೋಮಂ ಎಂಬ ಮಂತ್ರವನ್ನು ಹತ್ತು ಸಾವಿರ ಸಂಖ್ಯೆಯಿಂದ ಜಪಮಾಡಿ ಮತ್ತು ಸಾವಿರದ ಎಂಟು ಹೋಮಗಳನ್ನು ಮಾಡಿದಲ್ಲಿ ಅವನು ತನಗೆ ಇಷ್ಟವಾದ ಗ್ರಾಮವನ್ನು ಹೊಂದುತ್ತಾನೆ.

೧೧೩-೧೧೪. ವಾಜಶ್ಚಮೇ ಎಂಬ ಐದು ಮಂತ್ರಗಳಿಂದ ಸಹಸ್ರ ಆಜ್ಯಾಹುತಿಗಳನ್ನು ಮಾಡಿದವನು ನೇತ್ರರೋಗದಿಂದ ಮುಕ್ತನಾಗುತ್ತಾನೆ ಮನೋಭವಸ್ವ ಎಂಬ ಮಂತ್ರದಿಂದ ಮನೆಯಲ್ಲಿ ಹೋಮಮಾಡಿದಲ್ಲಿ ಎಲ್ಲಾ ವಿಧವಾದ ವಾಸ್ತು ದೋಷಗಳೂ ಶೀಘ್ರದಲ್ಲಿಯೇ ನಾಶಹೊಂದುವುವು.

ಅಗ್ನ ಆಯೂಂಷಿ ಚೈತೇನ ಹುತ್ವೈವಾಜ್ಯಮತಂದ್ರಿತಃ ।
ಸಹಸ್ರಶಸ್ತು ಧರ್ಮಜ್ಞ ವಶಂ ನಾಪ್ನೋತಿ ಕೇನಚಿತ್ ॥ ೧೧೫ ॥

ಅಪಾಂಫೇನೇತಿ ಲಾಜಾಭಿರ್ಹುತಾಭಿರ್ಜಯಮಾಪ್ನುಯಾತ್ ।
ಭದ್ರಾ ಇತೀಂದ್ರಿಯೈರ್ಹೀನೋ ಜಪನ್ ಸ್ಯಾತ್ಸಕಲೇಂದ್ರಿಯಃ ॥ ೧೧೬ ॥

ಅಗ್ನಿಶ್ಚ ಪೃಥಿವೀಚೇತಿ ವಶೀಕರಣಮುತ್ತಮಂ ।
ಅಧ್ವನೀತಿ ಜಪನ್ ಮಂತ್ರಂ ವ್ಯವಹಾರೇ ಜಯೀ ಭವೇತ್ ॥ ೧೧೭ ॥

ಬ್ರಹ್ಮರಾಜಭ್ಯಾಮಿತಿ ಚ ಕರ್ಮಾರಂಭೇಷು ವೈ ಜಪೇತ್ ।
ಸರ್ವೇಷು ಸರ್ವಧರ್ಮಜ್ಞ ತೇಷಾಂ ಸಿದ್ಧಿಮುಪಾಶ್ನುತೇ ॥ ೧೧೮ ॥

ನೂನಪಾದೋಸುರ ಇತಿ ನ್ಯಗ್ರೋಧೇ ದ್ವಿಜಸತ್ತಮ ।
ಅಶೋಕಪುಷ್ಪಾನ್ ಸಘೃತಾನ್ ಜುಹುಯಾಲ್ಲಕ್ಷಸಂಮಿತಾನ್ ॥ ೧೧೯ ॥

---

೧೧೫–೧೧೭. ಅಗ್ನ ಆಯೂಂಷಿ ಎಂಬ ಮಂತ್ರದಿಂದ ಸಾವಿರ ಸಲ ಆಜ್ಯ ಹೋಮವನ್ನು ಜಾಗರೂಕತೆಯಿಂದ ಮಾಡಿದವನು ಯಾರಿಗೂ ಯಾವ ವಿಧದಿಂದಲೂ ಅಧೀನನಾಗುವುದಿಲ್ಲ. ಅಪಾಂಫೇನ ಎಂಬ ಮಂತ್ರದಿಂದ ಅರಳುಗಳನ್ನು ಹೋಮಮಾಡಿದಲ್ಲಿ ಅವನು ಜಯಶಾಲಿಯಾಗುತ್ತಾನೆ. ಇಂದ್ರಿಯ ವೈಕಲ್ಯ ಹೊಂದಿರುವವನು ಭದ್ರಾ ಎಂ ಮಂತ್ರವನ್ನು ಜಪಿಸಿದಲ್ಲಿ ಎಲ್ಲಾ ಇಂದ್ರಿಯಗಳನ್ನೂ ಹೊಂದುತ್ತಾನೆ. ಅಗ್ನಿಶ್ಚ ಪೃಥಿವೀ ಚ ಎಂಬ ಮಂತ್ರವು ಬಹಳವುಟ್ಟಿಗೂ ವಶೀಕರಣಕ್ಕೆ ಸಾಧಕವಾಗುತ್ತದೆ. ಅಧ್ವನೀ ಎಂಬ ಮಂತ್ರವನ್ನು ಜಪಿಸುವವನು ವ್ಯವಹಾರದಲ್ಲಿ ಜಯಶಾಲಿಯಾಗುತ್ತಾನೆ.

೧೧೭–೧೧೯. ಬ್ರಹ್ಮರಾಜಭ್ಯಾಂ ಎಂಬ ಮಂತ್ರವನ್ನು ಕರ್ಮಗಳನ್ನು ಮಾಡುವಾಗ ಮೊದಲು ಜಪಿಸಬೇಕು. ಹೀಗೆ ಮಾಡುವವನು ಎಲ್ಲಾ ಆ ಕರ್ಮಗಳ ಸ್ಥಿತಿಯನ್ನೂ ಹೊಂದುತ್ತಾನೆ. ನೂನಪಾದೋಸುರಃ ಎಂಬ ಮಂತ್ರದಿಂದ ಆಲದ ಮರದ ಕೆಳಗೆ ಆಜ್ಯದಿಂದ ಕೂಡಿರುವ ಒಂದು ಲಕ್ಷ ಸಂಖ್ಯೆಯುಳ್ಳ ಅಶೋಕದ ಹೂವುಗಳನ್ನು ಹೋಮಮಾಡಬೇಕು.

ತತೋ ದಾನವಕನ್ಯಾಂ ತು ಸ್ವಯಮೇವೇಹ ಪಶ್ಯತಿ ।
ಅನುವಾಕಸ್ಯ ಶೇಷೇಣ ತಸ್ಯಾನ್ನಂ ವಿನಿವೇದಯೇತ್ ॥ ೧೨೦ ॥

ದದಾತಿ ಸ ತತೋ ರುಕ್ಮಂ ತೂಷ್ಣೀಂ ತತ್ರೇಚ್ಛಯಾ ಭವೇತ್ ।
ಅನುಗಚ್ಛೇತ್ತತಸ್ತೂಷ್ಣೀಂ ಪಾಣೌ ಸಂಗೃಹ್ಯ ಸಾ ನರಂ ॥ ೧೨೧ ॥

ಬಿಲಂ ಪ್ರವೇಶಯೇದ್ರಾವು ನಾತ್ರ ಕಾರ್ಯಾ ವಿಚಾರಣಾ ।
ಶೂನ್ಯಾಯತನಮಾಸಾದ್ಯ ಮಾಷಮಿಶ್ರಮಥೌದನಂ ॥ ೧೨೨ ॥

ಕಯಾನಶ್ಚಿತ್ರ ಇತ್ಯೇತಜ್ಜಪಂಸ್ತು ಜುಹುಯಾನ್ನರಃ ।
ಹುತೇ ಶತಸಹಸ್ರೇ ತು ತಸ್ಯ ವಿದ್ಯಾಧರಃ ಸ್ವಕಾಂ ॥ ೧೨೩ ॥

ಸುವರ್ಣರಾಶಿಂ ಧರ್ಮಜ್ಞ ಶೀಘ್ರಮೇವ ಪ್ರಯಚ್ಛತಿ ।
ಸಂವತ್ಸರೋಽಸೀತ್ಯನಯಾ ಘೃತಂ ಹುತ್ವಾ ವಿಚಕ್ಷಣಃ ॥ ೧೨೪ ॥

---

೧೨೦-೧೨೧. ಅನಂತರ ದಾನವ ಕನ್ಯೆಯನ್ನು ಅಲ್ಲಿ ನೋಡುತ್ತಾನೆ. ಅನಂತರ ಆ ಅನುವಾಕದ ಉಳಿದ ಭಾಗವನ್ನುಚ್ಚರಿಸಿ ಅವಳಿಗೆ ಅನ್ನವನ್ನು ನಿವೇದಿಸಬೇಕು. ಅನಂತರ ಆ ಕನ್ಯಾರತ್ನವು ಸುವರ್ಣವನ್ನು ಕೊಡುತ್ತದೆ. ಈ ವ್ಯವಹಾರವೆಲ್ಲವೂ ಆ ಕನ್ಯೆಯ ಇಚ್ಛೆಯಿಂದಲೇ ಆದಾಗ್ಯೂ ಮೌನದಿಂದಲೇ ಆ ಕನ್ಯಾರತ್ನವನ್ನು ಅನುಸರಿಸಿ ಹೋಗಬೇಕು. ಆ ಮೇಲೆ ಕನ್ಯೆಯು ಹೀಗೆ ಪ್ರಯೋಗ ನಡೆಸಿದ ಆ ಮನುಷ್ಯನನ್ನು ಕೈಯಿಂದ ಹಿಡಿದುಕೊಂಡು ತನ್ನ ವಾಸಸ್ಥಾನವಾದ ಬಿಲಕ್ಕೆ ಪ್ರವೇಶಿಸುತ್ತಾಳೆ. ಈ ವಿಧಾನದಿಂದ ಕನ್ಯಾಲಾಭ ಉಂಟಾಗುವುದರಲ್ಲಿ ವಿಚಾರಮಾಡಬೇಕಾದುದಿಲ್ಲ.

೧೨೨-೧೨೪. ಯಾರೂ ವಾಸವಿಲ್ಲದಿರುವ ಪಾಳುಮನೆಯನ್ನು ಹೊಂದಿ ಅಲ್ಲಿ ಕಯಾನಶ್ಚಿತ್ರ ಎಂಬ ಮಂತ್ರದಿಂದ ಜಪಪೂರ್ವಕವಾಗಿ ಉದ್ದಿನೊಡನೆ ಮಿಶ್ರವಾಗಿರುವ ಅನ್ನವನ್ನು ಹೋಮಮಾಡಬೇಕು. ಈ ರೀತಿ ಲಕ್ಷ ಹೋಮಮಾಡಿದ ನಂತರ ವಿದ್ಯಾಧರನು ತನ್ನ ಸುವರ್ಣರಾಶಿಯನ್ನು ಜಾಗ್ರತೆಯಾಗಿ ಕೊಡುತ್ತಾನೆ. ಸಂವತ್ಸರೋಽಸಿ ಎಂಬ ಮಂತ್ರದಿಂದ ಆಜ್ಯವನ್ನು ಹೋಮಮಾಡಿದ ಪಂಡಿತನು ತಾನು ಬದುಕಿರುವವರಿಗೂ ಆರೋಗ್ಯಯಾಗಿರುತ್ತಾನೆ. ಒಂದು ಲಕ್ಷ ಹೋಮವನ್ನು ಮಾಡಿದುದೇ ಆದರೆ ಅವನು ಒಳ್ಳೆಯ ಪಂಡಿತನೇ ಆಗುತ್ತಾನೆ.

ಯಾವಜ್ಜೀವಮರೋಗೀಸ್ಯಾಲ್ಲಕ್ಷಹೋಮೇನ ಪಂಡಿತಃ ।
ಕೇತುಂ ಕೃಣ್ವನ್ನಿತ್ಯೇತತ್ಸಂಗ್ರಾಮೇ ಜಯವರ್ಧನಂ ॥ ೧೨೫ ॥

ಐಂದ್ರಾಗ್ನಂ ವರ್ಮ ಇತ್ಯೇತದ್ರಣೇ ಸನ್ನಾಹಬಂಧನಂ ।
ಧನನಾಗೇತಿ ಮಂತ್ರಶ್ಚ ಧನುರ್ಗ್ರಹಣಿಕಃ ಪರಃ ॥ ೧೨೬ ॥

ವಕ್ಷ್ಯಂತೀತಿ ತಥಾ ಮಂತ್ರೋ ವಿಜ್ಞೇಯೋ ಜ್ಯಾಭಿಮಂತ್ರಣೇ ।
ಮಂತ್ರಶ್ಚಾಹಿರಿವೇತ್ಯೇತತ್ತ್ರಾಣಮಂತ್ರಃ ಪ್ರಕೀರ್ತಿತಃ ॥ ೧೨೭ ॥

ಯುಂಜತೀತಿ ತಥಾಶ್ವಾನಾಂ ಯೋಜನೇ ಮಂತ್ರ ಉಚ್ಯತೇ ।
ಆಶುಃ ಶಿಶಾನ ಇತ್ಯೇತದ್ನಾತ್ರಾಲಂಭನಮುಚ್ಯತೇ ॥ ೧೨೮ ॥

ವಿಷ್ಣೋಃ ಕ್ರಮೇಣ ಮಂತ್ರಶ್ಚ ರಥಾರೋಹಣಿಕಃ ಪರಃ ।
ಆಜಂಘಂತೀತಿ ಚಾಶ್ವಾನಾಂ ತಾಡನೀಯ ಉದಾಹೃತಃ ॥ ೧೨೯ ॥

---

೧೨೫-೧೨೬ ಕೇತುಂ ಕೃಣ್ವನ್ ಎಂಬ ಮಂತ್ರವು ಯುದ್ಧದಲ್ಲಿ ಜಯಪ್ರದವಾಗುತ್ತದೆ, ಐಂದ್ರಾಗ್ನಂ ವರ್ಮ ಎಂಬ ಮಂತ್ರವು ಯುದ್ಧದಲ್ಲಿ ಸರಿಯಾದ ಸನ್ನಾಹಕ್ಕೆ ಸಾಧಕವಾಗುತ್ತದೆ. ಧನನಾಗ ಎಂಬ ಮಂತ್ರವು ಧನುಸ್ಸನ್ನು ಸ್ವೀಕರಿಸಲು ಉತ್ತಮವಾದ ಸಾಧನ. ವಕ್ಷ್ಯಂತಿ ಎಂಬ ಮಂತ್ರವು ಧನುಸ್ಸಿನ ಮೌರ್ವಿ (ಹಗ್ಗ) ಯ ಅಭಿಮಂತ್ರಣಕ್ಕೆ ಸಾಧನವಾಗುತ್ತದೆ.

೧೨೭-೧೨೯. ಮಂತ್ರಶ್ಚಾಹಿರಿವ ಎಂಬ ಮಂತ್ರದಿಂದ ಬತ್ತಳಿಕೆಯನ್ನು ಅಭಿಮಂತ್ರಿಸಬೇಕು ಯುಂಜತೀ ಎಂಬ ಮಂತ್ರವು ಕುದುರೆಗಳನ್ನು ಕಟ್ಟುವಾಗ ಉಪಯೋಗಿಸಲ್ಪಡತಕ್ಕದ್ದು. ಆಶುಃ ಶಿಶಾನ ಎಂಬ ಮಂತ್ರವನ್ನು ಕವಚ ಆಭರಣ ಮುಂತಾದುವನ್ನು ದೇಹದಲ್ಲಿ ಧರಿಸುವಾಗ ಉಪಯೋಗಿಸಬೇಕು. ವಿಷ್ಣೋಃ ಕ್ರಮೇಣ ಎಂಬ ಮಂತ್ರವು ರಥವನ್ನು ಆರೋಹಣಮಾಡುವಾಗ ಉಪಯೋಗಿಸತಕ್ಕದ್ದಾಗಿದೆ. ಆಜಂಘಂತಿ ಎಂಬ ಮಂತ್ರವನ್ನು ಕುದುರೆಯ ಚಾವಟಿಯನ್ನು ಮಂತ್ರಿಸಲು ಉಪಯೋಗಿಸಬೇಕು.

**ಯಃ ಸೇನಾ ಅಭಿತ್ವರೀತಿ ಪರಸೈನ್ಯಮುಖೋ ಜಪೇತ್ ।**
**ಡುಂಡುಭ ಇತಿ ವಾಪ್ಯೇತತ್ ಡುಂಡುಭೀತಾಡನೆ ಭವೇತ್ ॥ ೧೩೦ ॥**

**ಏತ್ತೈಃ ಪೂರ್ವಹುತೈರ್ಮಂತ್ರೈಃ ಕೃತ್ವೈವಂ ವಿಜಯೋ ಭವೇತ್ ।**
**ಯಮೇನ ದತ್ತಮಿತ್ತ್ಯಸ್ಯ ಕೋಟಿಹೋಮಾದ್ವಿಚಕ್ಷಣಃ ॥ ೧೩೧ ॥**

**ರಥಮುತ್ಪಾದಯೇಚ್ಛೀಘ್ರಂ ಸಂಗ್ರಾಮೇ ವಿಜಯಪ್ರದಂ ।**
**ಆಕೃಷ್ಣೇತಿ ತಥೈತಸ್ಯ ಕರ್ಮ ವ್ಯಾಹೃತಿವದ್ಭವೇತ್ ॥ ೧೩೨ ॥**

**ಯುವಂ ಚ್ಯವಾನಮೇತಚ್ಚ ಭಯೇಷು ಭಯನಾಶನಂ ।**
**ಘೃತಾಹುತಿಸಹಸ್ರೇಣ ನಾತ್ರ ಕಾರ್ಯಾ ವಿಚಾರಣಾ ॥ ೧೩೩ ॥**

**ಮಿತ್ರಂ ಹುವೇತ ಇತ್ಯೇತನ್ಮೇಧಾಕಾಮಸ್ಯ ಶಸ್ಯತೇ ।**
**ಸರಾಜಇತಿ ಚೈತೇನ ದೇವತಾರಾಧನಂ ನರಃ ॥ ೧೩೪ ॥**

---

೧೩೦-೧೩೧. ಯಃ ಸೇನಾ ಅಭಿತ್ವರೀ ಎಂಬ ಮಂತ್ರವನ್ನು ಶತ್ರುಸೈನ್ಯಕ್ಕೆ ಎದುರಾಗಿ ಜಪಿಸಬೇಕು. ಡುಂಘುಭ ಎಂಬ ಮಂತ್ರವನ್ನು ದುಂದುಭಿಯ ತಾಡನದಲ್ಲಿ ಜಪಿಸಬೇಕು. ಈ ಮಂತ್ರಗಳಿಂದ ಹೋಮಮಾಡಿ ಆಯುಧಾದಿಗಳನ್ನು ಗ್ರಹಿಸುವವನಿಗೆ ಯುದ್ಧದಲ್ಲಿ ವಿಜಯವು ಉಂಟಾಗಿಯೇ ಆಗುತ್ತದೆ. ಯಮೇನ ದತ್ತಂ ಎಂಬ ಮಂತ್ರದಿಂದ ಕಾರ್ಯಜ್ಞನಾದವನು ಕೋಟಿ ಹೋಮವನ್ನು ಮಾಡಬೇಕು.

೧೩೨-೧೩೩. ಹೀಗೆ ಮಾಡಿದಲ್ಲಿ ಅವನಿಗೆ ಯುದ್ಧದಲ್ಲಿ ವಿಜಯವನ್ನು ಗಳಿಸಲು ಸಮರ್ಥವಾದ ರಥವೇ ಉಂಟಾಗುತ್ತದೆ. ಆ ಕೃಷ್ಣಾ ಎಂಬ ಮಂತ್ರದ ಪ್ರಯೋಗಕ್ರಮವು ವ್ಯಾಹೃತಿಯಂತೆಯೇ ಆಗುತ್ತದೆ. ಇತರರಿಂದ ಭಯವುಂಟಾದ ಸಮಯದಲ್ಲಿ ಯುವಂಚ್ಯವಾನಂ ಎಂಬ ಮಂತ್ರವು ಭಯನಿವಾರಕವಾಗುತ್ತದೆ. ಈ ಮಂತ್ರದಿಂದ ಫಲವನ್ನು ಅಪೇಕ್ಷಿಸುವವನು ಇದರಿಂದ ಸಹಸ್ರಸಂಖ್ಯೆಯ ಆಜ್ಯಾಹುತಿಯನ್ನು ಮಾಡಬೇಕು. ಹಾಗೆ ಮಾಡಿದರಲ್ಲಿ ಇದರ ಫಲದಲ್ಲಿ ಸಂದೇಹವಿಲ್ಲ.

೧೩೪-೧೩೫. ಮಿತ್ರಂ ಹುವೇತ ಎಂಬ ಮಂತ್ರವು ಮೇಧಾ ಶಕ್ತಿಯನ್ನು ಅಪೇಕ್ಷಿಸುವವನಿಗೆ ಬಹಳ ಪ್ರಶಸ್ತವಾದುದು. ಸರಾಜ ಎಂಬ ಮಂತ್ರದಿಂದ ಎಲ್ಲಾ

ಕುರ್ಯಾದ್ಭಾರ್ಗವ ಸರ್ವತ್ರ ಹೋಮಜಪ್ಯೈರ್ಯಥೇಪ್ಸಿತಂ ।
ಶಿವಸಂಕಲ್ಪಜಪ್ಯೇನ ಸಮಾಧಿಂ ಮನಸೋ ಲಭೇತ್ ॥ ೧೩೫ ॥

ಪಂಚನದ್ಯ ಇತ್ಯನೇನ ಪದ್ಮಲಕ್ಷಂ ಘೃತಾಪ್ಲುತಂ ।
ಹುತ್ವಾ ಶೀಘ್ರಮವಾಪ್ನೋತಿ ಶ್ರಿಯಂ ವೈ ಪದ್ಮಮಾಲಿನೀಂ ॥ ೧೩೬ ॥

ಉಭಾವಪೀತ ಇತ್ಯೇತದ್ರೂಪಕಾಮಸ್ಯ ಶಸ್ಯತೇ ।
ಯದಾಬಧ್ನನ್ದಾಕ್ಷಾಯಣಾ ಮಂತ್ರೇಣಾನೇನ ಮಂತ್ರಿತಂ ॥ ೧೩೭ ॥

ಸಹಸ್ರಕೃತ್ವಃ ಕನಕಂ ಧಾರಯೇದ್ರಿಪುನಾಶನಂ ।
ಗುಹ್ಯಕಾನಾಂ ಚ ಸರ್ವೇಷಾಂ ತಥಾ ನಿರ್ವಹಣಂ ಪರಂ ॥ ೧೩೮ ॥

ಇಮಂ ಜೀವೇಭ್ಯ ಇತಿ ಚ ಸೀತಾಲೋಷ್ಟಂ ಚತುರ್ದಿಶಂ ।
ಕ್ಷಿಪೇದ್ಗೃಹೇ ತದಾ ತಸ್ಯ ನ ಸ್ಯಾಚ್ಚೋರಭಯಂ ನಿಶಿ ॥ ೧೩೯ ॥

---

ಸಂದರ್ಭಗಳಲ್ಲೂ ತನಗೆ ಅಭಿಮತವಾದ ಹೋಮ, ಜಪ ಇತ್ಯಾದಿಗಳಿಂದ ದೇವತಾ ಪೂಜೆಯನ್ನು ನಡೆಸಬೇಕು. ಶಿವಸಂಕಲ್ಪದ ಜಪದಿಂದ ಯೋಗಸಾಧನೆಗೆ ಬೇಕಾದ ಮನೋದಾರ್ಢ್ಯವನ್ನು ಹೊಂದುತ್ತಾನೆ.

೧೩೬-೧೩೭. ಪಂಚನದ್ಯಃ ಎಂಬ ಮಂತ್ರದಿಂದ ಆಜ್ಯದಲ್ಲಿ ನೆನೆಸಿದ ಒಂದು ಲಕ್ಷ ಪದ್ಮವನ್ನು ಹೋಮಮಾಡಿದವನು ಪದ್ಮಮಾಲಿಕೆಯುಳ್ಳ ಲಕ್ಷ್ಮಿಯನ್ನು ಜಾಗ್ರತೆಯಾಗಿ ಹೊಂದುತ್ತಾನೆ. ಉಭಾವಪೀತಾ ಎಂಬ ಮಂತ್ರವು ಸುರೂಪವನ್ನು ಅಪೇಕ್ಷಿಸುವವನಿಗೆ ಪ್ರಶಸ್ತವಾದುದು. ಯದಾಬಧ್ನರ್ ದಾಕ್ಷಾಯಣಾ ಎಂಬ ಈ ಮಂತ್ರದಿಂದ ಸಾವಿರಸಲ ಮಂತ್ರಿಸಲ್ಪಟ್ಟ,

೧೩೮-೧೩೯. ಚಿನ್ನವನ್ನು ಧರಿಸಿದಲ್ಲಿ ಅದು ಸರ್ವಶತ್ರುನಾಶಕವಾಗುತ್ತದೆ. ಇದು ಎಲ್ಲಾ ಗುಹ್ಯಕರ ಉತ್ತಮ ವ್ಯವಹಾರವೇ ಆಗಿದೆ. ಇಮಂಜೀವೇಭ್ಯಃ ಎಂಬ ಮಂತ್ರದಿಂದ ನೇಗಿಲಿನಿಂದ ಎದ್ದ ಮಣ್ಣಿನ ಹೆಂಟೆಯನ್ನು ನಾಲ್ಕು ದಿಕ್ಕುಗಳಿಗೂ ಎಸೆಯಬೇಕು. ಹೀಗೆ ಮಾಡಿದಲ್ಲಿ ಆಗ ಮನೆಯಲ್ಲಿ ರಾತ್ರಿಯಕಾಲದಲ್ಲಿ ಕಳ್ಳರ ಭಯವಿರುವುದಿಲ್ಲ.

**ಪರೀಮೆಗಾಮನೇಷತೇತಿ ವಶೀಕರಣಮುತ್ತಮಂ ।**
**ಹರ್ತುರ್ಮುಸ್ಯಾಗತಸ್ತಸ್ಯ ವಶೀಭವತಿ ಮಾನವಃ ॥ ೧೪೦ ॥**

**ಭಕ್ಷ್ಯತಾಂಬೂಲಪುಷ್ಪಾದ್ಯಂ ಮಂತ್ರಿತಂ ತು ಪ್ರಯಚ್ಛತಿ ।**
**ಯಸ್ಯ ಧರ್ಮಸ್ಯ ವಶಗಃ ಸೋಽಸ್ಯ ಶೀಘ್ರಂ ಭವಿಷ್ಯತಿ ॥ ೧೪೧ ॥**

**ಶನ್ನೋಮಿತಿ ತ ಇತ್ಯೇತತ್ಸದಾ ಸರ್ವತ್ರ ಶಾಂತಿದಂ ।**
**ಮನಸಃ ಕಾಮಮಾಕೂತಿಃ ಪುಷ್ಟಿಕಾಮಸ್ಯ ಶಸ್ಯತೇ ॥ ೧೪೨ ॥**

**ಚಮಷಟ್ಕಂ ಚ ಧರ್ಮಜ್ಞ ಸರ್ವಕಾಮಕರಂ ಸ್ಮೃತಂ ।**
**ಷಟ್ಕೇನ ಚ ತಥಾ ಹೋಮಃ ಸರ್ವದೇವಪ್ರಸಾದನಃ ॥ ೧೪೩ ॥**

**ಔದಾರ್ಯೇಣೋದಕಂ ಸ್ಪೃಷ್ಟ್ವಾ ತದ್ದೋಷಾದ್ವಿಪ್ರಮುಚ್ಯತೇ ।**
**ವಿವೃತಂ ಚೈತದಾಜ್ಯೇನ ಹುತಂ ಶೂಲಾಸಹಂ ಭವೇತ್ ॥ ೧೪೪ ॥**

---

೧೪೦–೧೪೨. ಪರೀಮೆಗಾಮನೇಷತ ಎಂಬ ಮಂತ್ರವು ಉತ್ತಮವಾದ ವಶೀಕರಣ ಸಾಧನ. ಕಳವು ಮಾಡಲು ಬಂದವನೂ ಸಹ ಈ ಮಂತ್ರದಿಂದ ವಶನಾಗುತ್ತಾನೆ. ಯಾವ ಯಾವ ಧರ್ಮಗಳಲ್ಲಿ ಅವನು ವಶನಾಗಬೇಕೋ ಆ ಸಮಯದಲ್ಲಿ ಭಕ್ಷ್ಯಗಳು ತಾಂಬೂಲ, ಪುಷ್ಪಗಳು ಇವನ್ನು ಅಭಿಮಂತ್ರಿಸಿ ಕೊಟ್ಟಲ್ಲಿ ಅವನುಜಾಗ್ರತೆಯಾಗಿ ವಶನಾಗುತ್ತಾನೆ. ಶನ್ನೋಮಿತಿ ಎಂಬ ಮಂತ್ರವು ಎಲ್ಲಾ ಸಂದರ್ಭದಲ್ಲಿಯೂ ಶಾಂತಿಪ್ರದವಾಗಿರುತ್ತದೆ. ಮನಸಃ ಕಾಮಮಾಕೂತಿಃ ಎಂಬ ಮಂತ್ರವು ಪುಷ್ಟಿಯನ್ನು ಅಪೇಕ್ಷಿಸುವವನಿಗೆ ಪ್ರಶಸ್ತವಾದುದು.

೧೪೩–೧೪೪. ಚಮೆ ಎಂಬ ಆರು ಮಂತ್ರಗಳು ಎಲ್ಲಾ ಮನೋರಥ ಸಿದ್ಧಿಗೂ ಸಾಧನವಾಗುತ್ತವೆ. ಎಂದು ಹೇಳಲಾಗಿದೆ. ಅದರ ಮಂತ್ರಗಳಿಂದ ಹೋಮಮಾಡಿದಲ್ಲಿ ಎಲ್ಲಾ ದೇವತೆಗಳ ಅನುಗ್ರಹವೂ ಉಂಟಾಗುತ್ತದೆ. ಔದಾರ್ಯೇಣ ಎಂಬ ಮಂತ್ರದಿಂದ ಜಲವನ್ನು ಸ್ಪರ್ಶಮಾಡಿದಲ್ಲಿ ಜಲದ ದೋಷದಿಂದ ಮುಕ್ತನಾಗುತ್ತಾನೆ. ವಿವೃತಂಚ ಎಂಬ ಮಂತ್ರದಿಂದ ಮಾಡಿದ ಹೋಮವು ಉದರ ಬಾಧೆಗೆ ನಾಶಕವಾಗುತ್ತದೆ.

ಗಣಾನಾಂ ತ್ವಾ ಗಣಪತಿಂ ಹೋಮಂ ಕೃತ್ವಾ ಚತುಷ್ಪಥೇ ।
ವಶೀಕುರ್ಯಾಜ್ಜಗತ್ಸರ್ವಂ ಸರ್ವಧಾನ್ಯೈರಸಂಶಯಂ ॥ ೧೪೫ ॥

ವೈಕಂಕತೇಧ್ಮಹೋಮೇ ಚ ಸಮಾಸ್ತ್ವಾಗ್ನ ಇತೀತ್ಯಪಿ ।
ಯಶಸಾ ಯೋಗಮಾಪ್ನೋತಿ ವಿಪುಲಂ ನಾತ್ರ ಸಂಶಯಃ ॥ ೧೪೬ ॥

ಅಗ್ನಿರ್ಮೂರ್ಧೇತಿ ಮಂತ್ರೇಣ ಹುತ್ವೈವಾಜ್ಯಂ ಹುತಾಶನೇ ।
ತತ್ಪ್ರಸಾದಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೧೪೭ ॥

ಏವಂ ಹಿ ದೇವತಾಲಿಂಗೈಸ್ತಥಾ ರಾಮ ಯಥಾ ಸ್ವಕೈಃ ।
ಹುತೈಃ ಪ್ರಸಾದಯೇದಿಷ್ಟಾಂ ದೇವತಾಂ ನಾತ್ರ ಸಂಶಯಃ ॥ ೧೪೮ ॥

ಹಿರಣ್ಯವರ್ಣಾಃ ಶುಚಯೋ ಮಂತ್ರೋಯಮಭಿಷೇಚನೇ ।
ಶನ್ನಆಪಶ್ಚ ಧನ್ವನ್ಯಾಃ ಸರ್ವಪಾಪಹರಾಃ ಸ್ಮೃತಾಃ ॥ ೧೪೯ ॥

---

೧೪೫-೧೪೬. ಗಣಾನಾಂ ತ್ವಾ ಗಣಪತಿಂ ಎಂಬ ಮಂತ್ರದಿಂದ ನಾಲ್ಕು ಬೀದಿಯ ಮಧ್ಯದಲ್ಲಿ ಹೋಮಮಾಡಿದಲ್ಲಿ ಅವನು ಎಲ್ಲಾ ಧಾನ್ಯಗಳಿಂದಲೂ ಎಲ್ಲಾ ಜಗತ್ತನ್ನೂ ವಶಪಡಿಸಿಕೊಳ್ಳುತ್ತಾನೆ. ಇದರಲ್ಲಿ ಸಂದೇಹವಿಲ್ಲ. ವಾಪ್ರುಪಾತ್ (ಹುಳಿಬೇಲ) ಎಂಬ ಮರದ ಸಮಿತ್ತುಗಳಿಂದ ಸಮಾಸ್ತ್ವಾಗ್ನೇ ಎಂಬ ಮಂತ್ರದಿಂದ ಹೋಮಮಾಡಿದವನು ಅಪರಿಮಿತವಾದ ಯಶಸ್ಸಿಗೆ ಭಾಗಿಯಾಗುತ್ತಾನೆ. ಇದರಲ್ಲಿ ಸಂದೇಹವಿಲ್ಲ.

೧೪೭-೧೪೮. ಅಗ್ನಿರ್ಮೂರ್ಧಾ ಎಂಬ ಮಂತ್ರದಿಂದ ಅಗ್ನಿಯಲ್ಲಿ ಆಜ್ಯ ಹೋಮ ಮಾಡಿದವನು ಆ ಅಗ್ನಿಯ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಹೀಗೆಯೇ ಆಯಾಯ ದೇವತೆಗಳ ಲಿಂಗವಿರುವ ಮಂತ್ರಗಳಿಂದ ಆಯಾಯ ಇಷ್ಟದೇವತೆಗಳನ್ನು ಪೂಜಿಸಿ ದಲ್ಲಿ ಅಂತಹ ದೇವತೆಗಳ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಎಂಬುದರಲ್ಲಿ ಸಂದೇಹವಿಲ್ಲ.

೧೪೯-೧೫೦. ಹಿರಣ್ಯವರ್ಣಾಃ ಶುಚಯಃ ಎಂಬ ಮಂತ್ರವನ್ನು ಅಭಿಷೇಕದಲ್ಲಿ ಉಪಯೋಗಿಸಬೇಕು. ಶನ್ನ ಆಪಶ್ಚ ಧನ್ವನ್ಯಾಃ ಎಂಬ ಮಂತ್ರಗಳು ಸಮಸ್ತ ಪಾಪಗಳಿಗೂ ನಾಶಕಗಳೆಂದು ಹೇಳಲಾಗಿದೆ. ಶನ್ನೋದೇವೀರಭಿಷ್ಟಯೇ ಎಂಬ

ಶನ್ನೋದೇವೀರಭಿಷ್ಟಯೇ ಚೇತಿಶಾಂತಿಕರಃ ಪರಃ ।
ಏಕಚಕ್ರೇತಿ ಮಂತ್ರೇಣ ಹುತೇನಾಜ್ಯೇನ ಭಾರ್ಗವ || ೧೫೦ ||

ಗ್ರಹೇಭ್ಯಃ ಶೀಘ್ರಮಾಪ್ನೋತಿ ಪ್ರಸಾದಂ ನಾತ್ರ ಸಂಶಯಃ ।
ಯಾಜ್ಯಾನುವಾಕೌ ವೃಕ್ಷಾಣಾಂ ಸಮಾಗ್ರೇವರ್ಚ ಇತ್ಯಪಿ || ೧೫೧ ||

ತತ್ಪ್ರಸಾದಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಗಾವೋಭಗ ಇತಿ ದ್ವಾಭ್ಯಾಂ ಹುತ್ವೈವಾಜ್ಯಂ ಸಹಸ್ರಶಃ || ೧೫೨ ||

ಗಾಃ ಸಮಾಪ್ನೋತಿ ಧರ್ಮಜ್ಞ ನಾತ್ರ ಕಾರ್ಯಾ ವಿಚಾರಣಾ ।
ಉದುತ್ತಮಂ ವರುಣ ಇತಿ ಜುಹುಯಾದ್ಭೃಗುನಂದನ || ೧೫೩ ||

ನದೀವಾಹತಟಾಕೇಷು ಸುಕೃತೇಷು ದ್ವಿಜೋತ್ತಮ ।
ಸಂವದತ್ವಾಂ ಹಿರಣ್ಯಕೋಶಂ ರೂಪಂ ಕೃತ್ವಾ ತಥೈವ ಚ || ೧೫೪ ||

---

ಮಂತ್ರವು ಶಾಂತಿಪ್ರದವೆಂದು ಹೇಳಲ್ಪಟ್ಟಿದೆ. ಏಕಚಕ್ರ ಎಂಬ ಮಂತ್ರದಿಂದ ಆಜ್ಯ ಹೋಮವನ್ನು ಮಾಡಿದಲ್ಲಿ ಅವನು ಗ್ರಹಗಳ ಅನುಗ್ರಹವನ್ನು ಜಾಗ್ರತೆಯಾಗಿ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

೧೫೧-೧೫೩. ಯಾಜ್ಯಾನುವಾಕಗಳೂ ಆಗಿರುವ ಸಮಾಗ್ನೇ ವರ್ಚಃ ಎಂಬ ಮಂತ್ರವನ್ನು ಮರಗಳ ವಿಷಯದಲ್ಲಿ ಪ್ರಯೋಗಿಸಿದವನು ಅವುಗಳ ಅನುಗ್ರಹವನ್ನು ಹೊಂದುತ್ತಾನೆ. ಗಾವೋಭಗಃ ಎಂಬ ಎರಡು ಮಂತ್ರಗಳಿಂದಲೂ ಸಾವಿರ ಸಲ ಆಜ್ಯಹೋಮ ಮಾಡಿದವನು ಗೋವುಗಳನ್ನು ಹೊಂದುತ್ತಾನೆ ಈ ವಿಷಯ ದಲ್ಲಿಯೂ ವಿಚಾರಮಾಡಬೇಕಾದುದಿಲ್ಲ. ಉದುತ್ತಮಂ ವರುಣಃ ಎಂಬ ಮಂತ್ರದಿಂದ ನದಿಗಳು ಹೋಗಿ ಸೇರುವ ಅಥವಾ ನದಿಗಳನ್ನು ಉತ್ಪತ್ತಿಮಾಡುವ ಪುಣ್ಯಕರವಾದ ಮಹಾತಟಾಕಗಳಲ್ಲಿ ಹೋಮಮಾಡಬೇಕು.

೧೫೪-೧೫೫. ಸಂವದತ್ವಾಂ, ಹಿರಣ್ಯಕೋಶಂ, ರೂಪಂ ಕೃತ್ವಾ ಪ್ರವಾದಸಾಂಸಾ ಎಂಬ ಮಂತ್ರಗಳು ಮನೆಯಲ್ಲಿ ಮಾಡತಕ್ಕ ಯಜ್ಞಗಳಲ್ಲಿ ವಿಧಿಸಲಾಗಿವೆ. ದೇವೇಭ್ಯೋ ವನಸ್ಪತಯಃ ಎಂಬ ಮಂತ್ರವು ಬ್ರಹ್ಮಯಜ್ಞಯಲ್ಲಿ ವಿಧಿಸಲ್ಪಟ್ಟಿವೆ.

ಪ್ರವಾದಸಾಂ ಸೇತಿ ಚೈವಗೃಹೇ ಯಜ್ಞೋ ವಿಧೀಯತೇ ।
ದೇವೇಭ್ಯೋ ವನಸ್ಪತ ಇತಿ ಬ್ರಹ್ಮಯಜ್ಞೋವಿಧೀಯತೇ ॥ ೧೫೫ ॥

ರಾತ್ರೀಯಖ್ಯ ಇತಿ ದ್ವಾಭ್ಯಾಂ ರಾತ್ರಿಯಜ್ಞಾಃ ಪ್ರಕೀರ್ತಿತಾಃ ।
ಶಮೀ ಶಮೀಕಂ ಶಮ್ಯಾಕಾಮಶ್ವತ್ಥಂ ಪ್ಲಕ್ಷಮೇವ ಚ ॥ ೧೫೬ ॥

ಉದುಂಬರಂ ಚ ನ್ಯಗ್ರೋಧಮಪಾಮಾರ್ಗಂ ಚ ಗೋಮಯಂ ।
ಯಾಂ ಕುರ್ಯಾದ್ದರ್ಭಪಿಂಜೂಲಾಂ ದೂರ್ವಾಂ ಪ್ರಾಚೀನಗಾಮಿನೀಂ ॥

ಸೀತಾಂ ಲೋಷ್ಟಂ ಸುವರ್ಣಂ ಚ ತಥಾ ವಲ್ಮೀಕಮೃತ್ತಿಕಾಂ ।
ಸಂ ವಃ ಸೃಜಾಮೀತಿ ದ್ವಾಭ್ಯಾಂ ಬೀಜಾನ್ಯಪ್ಸು ವಿನಿಕ್ಷಿಪೇತ್ ॥ ೧೫೮ ॥

ಯಾ ಓಷಧಯ ಇತ್ಯೇತದನುವಾಕಂ ತತೋ ಜಪೇತ್ ।
ಅಪಾಮಿವೋದ್ವಿತಿ ತತಃ ಪ್ರೋಕ್ಷಣಂ ತು ವಿಧೀಯತೇ ॥ ೧೫೯ ॥

ಇನ್ದ್ರೋ ಭಯಮಿತೀತ್ಯೇತಚ್ಚಾಷ್ಟರ್ಚಂ ಜುಹುಯಾದ್ದ್ವಿಜಃ ।
ಯದ್ದೇವಾದೇವಹೇಡನಮೃಚಸ್ತಿಸ್ರಃ ತಥೈವ ಚ ॥ ೧೬೦ ॥

---

ರಾತ್ರೀಯಖ್ಯ ಎಂಬ ಎರಡು ಮಂತ್ರಗಳಿಂದ ರಾತ್ರಿಯಲ್ಲಿ ನಡೆಸಲ್ಪಡುವ ಯಜ್ಞಗಳು ಹೇಳಲ್ಪಟ್ಟಿವೆ.

೧೫೬-೧೫೮. ಶಮೀ ಶಮೀಕಂ ಎಂಬ ಮಂತ್ರದಿಂದ ರಾಜವೃಕ್ಷ, ಅಶ್ವತ್ಥ, ಫಣಿಯಾಲ, ಅತ್ತಿ, ಆಲ, ಉತ್ತರಣಿ ಮತ್ತು ಗೋಮಯ ಇವುಗಳನ್ನೂ ಯಾಂ ಕುರ್ಯಾದ್ದರ್ಭಪಿಂಜೂಲಾಂ ಎಂಬ ಮಂತ್ರದಿಂದ ಗರಿಕೆ, ಅಗಳುಶುಂಠಿ ನೇಗಿಲಿನಿಂದ ಉತ್ತ ಮಣ್ಣುಹೆಂಟೆ, ಸುವರ್ಣ, ಹುತ್ತದ ಮಣ್ಣು ಇವನ್ನು ತೆಗೆದುಕೊಂಡು ಸಂ ವಃ ಸೃಜಾಮಿ ಎಂಬ ಎರಡು ಮಂತ್ರಗಳಿಂದ ಈ ಬೀಜಗಳನ್ನು ನೀರಿನಲ್ಲಿ ಹಾಕಬೇಕು.

೧೫೯-೧೬೦. ಯಾ ಓಷಧಯಃ ಎಂಬ ಅನುವಾಕವನ್ನು ಅನಂತರ ಜಪಿಸಬೇಕು. ಅಪಾಮಿವೋದ್ವಿ ಎಂಬ ಮಂತ್ರದಿಂದ ಪ್ರೋಕ್ಷಣಮಾಡಬೇಕು. ಇನ್ದ್ರೋ ಭಯಂ ಎಂಬ ಎಂಟು ಋಕ್ಕುಗಳಿಂದ ದ್ವಿಜನಾದವನು ಹೋಮಮಾಡಬೇಕು. ಯದ್ದೇವಾದೇವಹೇಡನಂ ಎಂಬ ಮೂರು ಋಕ್ಕುಗಳಿಂದಲೂ ಹೋಮಮಾಡಿ ಸಂಪ್ರೋಕ್ಷಣವನ್ನು ಮಾಡಬೇಕು.

ಹುತ್ವಾ ಸಂಪ್ರೋಕ್ಷಣಂ ಕುರ್ಯಾದ್ಭೂಯಃ ಸರ್ವತ್ರ ಮಾನವಃ ।
ಸರ್ವೋತ್ಪಾತಪ್ರಶಮನಂ ಕರ್ಮೈತತ್ಪರಿಕೀರ್ತಿತಂ ॥ ೧೬೧ ॥

ಗಾಯತ್ರೀ ವೈಷ್ಣವೀ ಜ್ಞೇಯಾ ತದ್ವಿಷ್ಣೋಃ ಪರಮಂಪದಂ ।
ಸರ್ವಪಾಪಪ್ರಶಮನೀ ಸರ್ವಕರ್ಮಕರೀ ತಥಾ ॥ ೧೬೨ ॥

ಏತಾವದುಕ್ತಂ ಯಜುಷಾಂ ವಿಧಾನಂ
ಮಯಾಹಿ ಕಿಂಚಿತ್ತವ ಧರ್ಮನಿಷ್ಠ ।
ಅತಃಪರಂ ವಚ್ಮಿ ನೃವೀರ ಸಾಮ್ನಾಂ
ತನ್ಮೇ ಶೃಣುಷ್ವಾಯತಲೋಹಿತಾಕ್ಷ ॥ ೧೬೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ತಂತ್ರವಿಧಾನಂ ನಾಮ
ಪಂಚವಿಂಶತ್ಯುತ್ತರಶತತಮೋಽಧ್ಯಾಯಃ

೧೬೧-೧೬೩. ಈ ಕರ್ಮವು ಸಮಸ್ತ ಉತ್ಪಾತಗಳಿಗೂ (ಅಶುಭಶಕುನ) ಪ್ರತೀಕಾರರೂಪವಾಗುತ್ತದೆ. ವೈಷ್ಣವ ಗಾಯತ್ರಿಯು ವಿಷ್ಣುವಿನ ಸಾಕ್ಷಾತ್ಪರಮ ಪದವೇ ಆಗಿದೆ ಅದಕ್ಕೆ ಸಾಧನವೆಂದು ತಾತ್ಪರ್ಯ. ಇದು ಎಲ್ಲಾ ಪಾಪಗಳಿಗೂ ನಾಶಕವಾಗಿಯೂ ಎಲ್ಲಾ ಕರ್ಮಗಳಿಗೂ ಸಾದ್ಗುಣ್ಯಪ್ರದವೂ ಆಗಿರುತ್ತದೆ. ಎಲೈ ಧರ್ಮನಿರತನೇ ಯಜುರ್ವೇದದ ಮಂತ್ರಗಳ ವಿಧಾನವನ್ನು ಸ್ವಲ್ಪಮಟ್ಟಿಗೆ ಇದುವರಿಗೆ ನಿನಗೆ ಹೇಳಿರುವೆನು. ಇನ್ನು ಮುಂದೆ ಸಾಮವೇದದ ವಿಧಾನವನ್ನು ನಿನಗೆ ಹೇಳುತ್ತೇನೆ, ಅದನ್ನೂ ಕೇಳು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ತಂತ್ರವಿಧಾನವೆಂಬ ನೂರ ಇಪ್ಪತ್ತೈದನೆಯ
ಅಧ್ಯಾಯವು ಮುಗಿದಿದೆ.



## ನೂರ ಇಪ್ಪತ್ತೈದನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿಯೂ ಕ್ರಮಪ್ರಾಪ್ತವಾದ ಯಜುರ್ವೇದದ ಮಂತ್ರಗಳಿಗೆ ಆಯಾಯ ಅಭಿಮತ ಕಾರ್ಯಗಳಲ್ಲಿ ವಿನಿಯೋಗ ಕ್ರಮವನ್ನು ವಿಸ್ತಾರವಾಗಿ ನಿರೂಪಿಸಿರುವರು.

